# ವಿಶ್ವಗುಣಾದರ್ಶ.

ಮಹಾಕವಿ ಶ್ರೀ ವೇಂಕಟಾಧ್ವರಿ

ಎಂಬವರಿಂದ ರಚಿಸಲ್ಪಟ್ಟ

ಈ ಗ್ರಂಥವು

( ಭಾವದರ್ಪಣ ಎಂಬ ಟೀಕೆಯ ಸಹಿತ )

ಕನ್ನಡದಲ್ಲಿ ಭಾಷಾಂತರಿಸಲ್ಪಟ್ಟು

ಮುಂಬಯಿಯಲ್ಲಿ

**ಕರ್ನಾಟಕ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟಿತು.**

ಶಕ ೧೮೧೦.        ಇಸವಿ ೧೮೮೮.

ಂಬಂಧಿ ದ್ಧ

ಕ್ರಯ ರೂ. ೨|| .    ಯುವರ ದೂಷ    ಟ. ಖರ್ಚು ೬ ಆಣೆ.

ಈ ಗ್ರಂಥವಲ್ಲಿ ತೆಂಗಲ ಪ್ರ
ಷಗಳು ಕೂಡಾ ಬಯಲಿಗೆ ತರಲ್ಪಟ್ಟವೆ.
ಶೇಷವಾಗಿ ಎದುರಿಗೆ ತರಲ್ಪಟ್ಟಿದ್ದಾವೆಂಬುವದು ... ಜನರಲ್ಲಿ
ಗಳು ಇದ್ದು ಒಂದು ಜ್ಯಾತಿಯುವರು ಮತ್ತೊ ... ಯುವರ ಊನಗ
ಂದೆ ಮತ್ತು ದ್ವೇಷಮಾಡುವದು ಸಾಧಾರಣವಾಗಿದೆ. ಇದು ಹೊರತು ಗುರು

# ಸೂಚನೆ.

ವಿಶ್ವಗುಣಾದರ್ಶವೆಂಬ ಗ್ರಂಥದ ಈ ಆವೃತ್ತಿಯನ್ನು ಮುಂಬಯಿಯಲ್ಲಿ ಶಾಲಿವಾಹನ ಶಕದ ೧೭೪೪ನೇ ಮತ್ತು ೧೮೦೪ನೇ ವರ್ಷಗಳಲ್ಲಿ ದೇವನಾಗರಿ ಲಿಪಿಯಲ್ಲಿ ಮುದ್ರಿಸೋಣಾದ ಮೂಲ ಗ್ರಂಥದ ಪ್ರತಿಗಳ ಆಧಾರದಿಂದಲೂ, ಚನ್ನಪಟ್ಟಣದಲ್ಲಿ ಇಸವಿ ಸನ ೧೮೭೯ನೇ ವರ್ಷದಲ್ಲಿ ಆಂಧ್ರ ಲಿಪಿಯಲ್ಲಿ ಆಸೂರಿಸರಸ್ವತಿ ತಿರುವೇಂಕಟಾಚಾರ್ಯರಿಂದ ಪ್ರಕಾಶಿಸಲ್ಪಟ್ಟ ಸವ್ಯಾಖ್ಯಾನ ಗ್ರಂಥದ ಆವೃತ್ತಿಯ ಒಂದು ಪ್ರತಿಯ ಆಧಾರದಿಂದಲೂ ಮುದ್ರಿಸಿದ್ಧೇವೆ.

ಈ ಗ್ರಂಥವು ವೇಂಕಟಾಧ್ವರಿ ಎಂಬ ಹೆಸರಿನಿಂದ ಪ್ರಖ್ಯಾತಿಗೊಂಡ ಕವಿಯಿಂದ ರಚಿಸಲ್ಪಟ್ಟದ್ದು. ಈ ಕವಿಯು ಕಾಂಚೀ ಪಟ್ಟಣದ ಅರಶಾಣಿಪಾಲ ಎಂಬ ಅಗ್ರಹಾರದಲ್ಲಿ ವಾಸವಾಗಿದ್ದ ಅಪ್ಪಯ್ಯದೀಕ್ಷಿತರ ಪುತ್ರ ರಘುನಾಥದೀಕ್ಷಿತರ ಮಗನಾಗಿದ್ದನೆಂತಲೂ, ತರ್ಕವೇದಾಂತ ಮೊದಲಾದ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನೆಂತಲೂ, ರಾಮಾನುಜೀಯ ಸಮಯದ ವಡಘಲೆ ಎಂಬ ವರ್ಗಕ್ಕೆ ಶೇರಿದವನಾಗಿದ್ದನೆಂತಲೂ ತಿಳಿದು ಬರುತ್ತೆ.

ಈ ಕಾವ್ಯ ಹಿಂದುಸ್ಥಾನದಲ್ಲಿ ಸಾಧಾರಣವಾಗಿ ಸರ್ವತ್ರ ಮತ್ತು ವಿಶೇಷವಾಗಿ ದ್ರಾವಿಡ, ಆಂಧ್ರ, ಮಹಾರಾಷ್ಟ್ರ, ಗುರ್ಜರ ದೇಶಗಳಲ್ಲಿ ಪ್ರಸಿದ್ಧಿಯನ್ನು ಹೊಂದಿದೆ. ಇದರಲ್ಲಿ ಆ ಆ ನಾಡಿನ ಜನರ ನಡೆನುಡಿಗಳನ್ನು ಚಿತ್ರಿಸಿರುವದರಿಂದ ಇದಕ್ಕೆ "ವಿಶ್ವಗುಣಾದರ್ಶ" ಅಂದರೆ "ಲೋಕದ ಮೇಲುಕೀಲುಗಳನ್ನು ತೋರಿಸುವ ಕನ್ನಡಿ" ಎಂಬ ಹೆಸರಿಡೋಣಾಗಿದೆ.

ಇದರಲ್ಲಿ ಕಥಾರಂಭವೆಂತೆಂದಡೆ: ಕೃಶಾನು ಮತ್ತು ವಿಶ್ವಾವಸು ಎಂಬ ಹೆಸರುಳ್ಳ ಇಬ್ಬರು ಗಂಧರ್ವರು ವಿಶ್ವವನ್ನು ನೋಡುವ ಇಚ್ಛೆಯಿಂದ ವಿಮಾನವನ್ನೇರಿ, ಆಕಾಶ ಮಾರ್ಗದಲ್ಲಿ ಸಂಚರಿಸಲಿಕ್ಕೆ ಹೊರಡುವಂಥವರಾಗಿ, ಅವರಲ್ಲಿ ಕೃಶಾನುವು ಲೋಕದಲ್ಲಿರುವ ದೋಷಗಳನ್ನು ನೋಡುವಂಥವನಾದನು; ಮತ್ತು ವಿಶ್ವಾವಸುವು ಲೋಕದಲ್ಲಿರುವ ಗುಣಗಳನ್ನು ಲಕ್ಷಿಸುವಂಥಾವನಾದನೆಂಬ ಪರಿಯಿಂದ ಕವಿಯು ಬೇರೆ ಬೇರೆ ಸ್ಥಳಗಳ, ತೀರ್ಥಗಳ, ಮತ್ತು ಜನರ ಆಚಾರ ವಿಚಾರಗಳನ್ನು ವಿವರಿಸಿ ಶ್ಲೇಷಾದಿ ಅಲಂಕಾರಗಳಿಂದ ಯುಕ್ತವಾದ ಈ ಚಂಪು ಕಾವ್ಯವನ್ನು ರಚಿಸಿದ್ಧಾನೆ.

ಶ್ರೀ ರಾಮಾನುಜೀಯ ಸಮಯದ ವಡಘಲೆ ಮತ್ತು ತೆಂಗಲೆ ಎಂಬ ಎರಡು ಪಕ್ಷಗಳಲ್ಲಿ ಪರಸ್ಪರವಾಗಿ ಧರ್ಮಸಂಬಂಧಿ ದ್ವೇಷ ಇರುವದರಿಂದ, ವಡಘಲೆ ಪಕ್ಷಕ್ಕೆ ಶೇರಿದವನಾದ ವೇಂಕಟಾಧ್ವರಿಯು ತೆಂಗಲೆಯವರ ದೂಷಣೆಮಾಡುವ ಹೇತುವಿನಿಂದ ಈ ಕಾವ್ಯ ರಚಿಸಿದನೆಂತ ಐತಿಹ್ಯ ಉಂಟು. ಆದರೆ ಈ ಗ್ರಂಥದಲ್ಲಿ ತೆಂಗಲೆ ವೈಷ್ಣವರ ದೋಷಗಳು ಮಾತ್ರ ಅಲ್ಲ ಬೇರೆ ವರ್ಗದವರ ದೋಷಗಳು ಕೂಡಾ ಬಯಲಿಗೆ ತರಲ್ಪಟ್ಟವೆ. ಆದರೆ ತೆಂಗಲೆ ವೈಷ್ಣವರ ಕೊರತೆಗಳು ಸ್ವಲ್ಪ ವಿಶೇಷವಾಗಿ ಎದುರಿಗೆ ತರಲ್ಪಟ್ಟಿದ್ಧಾವೆಂಬುವದು ನಿಜವು. ಹಿಂದುಸ್ಥಾನದ ಜನರಲ್ಲಿ ಅನೇಕ ಜ್ಯಾತಿಗಳು ಇದ್ದು ಒಂದು ಜ್ಯಾತಿಯವರು ಮತ್ತೊಂದು ಜ್ಯಾತಿಯವರ ಊನಗಳನ್ನುಚ್ಚರಿಸಿ ನಿಂದೆ ಮತ್ತು ದ್ವೇಷಮಾಡುವದು ಸಾಧಾರಣವಾಗಿಧೆ. ಇದು ಹೊರತು ಗುರು

ರೋಹಿತ ಭಟ್ಟ ಮೊದಲಾದವರಿಗೆ ವಶವಾಗಿ, ಅವರಲ್ಲಿ ವಂಚಕರಾದ ಅನೇಕರು ಬೀಸುವ ಕ್ಕುತನದ ತಂತ್ರೋಪಾಯುಗಳ ಬಲೆಯಲ್ಲಿ ಹೊರಳ್ಯಾಡುವ ಅಜ್ಞಾನಿಗಳ ಸಂಖ್ಯೆಯು ಹೇರ ವಾಗಿರುತ್ತಧೆ. ಆದದರಿಂದ ಒಂದು ಜ್ಯಾತಿಯು ಜನರಲ್ಲಿ ಒಂದು ದೋಷವಿದ್ದರೆ ಇನ್ನೊಂದು ಗುಣ ಉಂಟು. ಮತ್ತೊಂದು ಜ್ಯಾತಿಯು ಜನರಲ್ಲಿ ಒಂದು ಗುಣವಿದ್ದರೆ ಇನ್ನೊಂದು ದೋಷ ಉಂಟು ಎಂಬ ನ್ಯಾಯುವನ್ನು ತೋರಿಸಿ ಜ್ಯಾತಿ ದ್ವೇಷ ತಗ್ಗಿಸುವ ಹೇತುವಿನಿಂದಲೂ, ಧರ್ಮೋಪದೇಶ ಕತನವೇ ಮೊದಲಾದ ಪಾರಮಾರ್ಥಿಕ ವೇಷಹಾಕಿ ಕೊಂಡು ಮೇದಿನಿಯು ಮೇಲೆ ವಿಷಯುಕ್ಕಾಗಿ ತಿರುಗಿ ಅರಿಯುದವರಲ್ಲಿ ಅಜ್ಞಾನ ಬೆಳಿಸಿ, ಅವರ ಚಿತ್ತವಿತ್ತ ಹರಣಮಾಡುವವಗ ಪ್ರಾಬಲ್ಯದ ಪ್ರವಾಹಕ್ಕೆ ಕಟ್ಟುಹಾಕುವ ಹೇತುವಿನಿಂದಲೂ, ಕವಿಯು ಈ ಕಾವ್ಯ ರಚಿಸಿದನೆಂದು ನಾವು ತಿಳಿಯುತ್ತೇವೆ. ಇಂಥ ಲೋಕೋಪಕಾರಕವಾದ ಕಾವ್ಯದೊಳಗಿನ ವಿಚಾರಗಳ ತಿಳುಹು ಸಂಸ್ಕೃತವನ್ನರಿಯುದವರಿಗೂ ಸ್ವಲ್ಪ ಮಟ್ಟಿಗೆ ಆಗಲಿ ಎಂಬ ಕೋರಿಕೆಯಿಂದ ಈ ಆವೃತ್ತಿಯಲ್ಲಿ ಮೂಲ ಗ್ರಂಥದ ಅರ್ಥವನ್ನು ಕನ್ನಡ ಭಾಷೆಯಲ್ಲಿ ಶೇರಿಸಿದ್ಧೇವೆ.

ವೇಂಕಟಾಧ್ವರಿ ಕವಿಯು ೨೫೦ ವರುಷಗಳ ಆಚೆಗೆ ಹುಟ್ಟಿದವನೆಂತ ತಿಳಿದು ಬರುತ್ತೆ. ಈ ಕಾವ್ಯ ರಚಿಸಿ ಎಷ್ಟು ವರುಷಾಯಿತು ಎಂತ ಖಂಡಿತವಾಗಿ ತಿಳಿಯುವದಿಲ್ಲ. ಆದರೆ ಈ ಕಾವ್ಯದಲ್ಲಿರುವ ತಿರುವಲ್ಲಿಕ್ಕೇಣಿ ಪಾರ್ಥಸಾರಥಿ ದೇವರ ಕ್ಷೇತ್ರದ ವರ್ಣನೆಯಲ್ಲಿ ಅವಕ್ಕೆ ಸಮೀಪವಾಗಿರುವ ಚನ್ನಪಟ್ಟಣ ( ಮದ್ರಾಸ ) ದೊಳಗಿನ ಇಂಗ್ಲಿಷ ಜನರ ಆಖ್ಯಾನ ಉಂಟು. ಚನ್ನಪಟ್ಟಣದಲ್ಲಿ ಇಂಗ್ಲಿಷ ಜನರು ೧೬೩೯ ನೇ ವರುಷದಲ್ಲಿ ನೆಲೆಗೊಂಡರು. ಆದ್ದರಿಂದ ಈ ಕಾವ್ಯವು ೨೪೮ ವರುಷಗಳ ಈಚಿನದ್ದೆಂತ ಸಿದ್ಧವಾಗುತ್ತದೆ.

ಅನೇಕ ಕಾರಣಗಳಿಂದ ಈ ಆವೃತ್ತಿಯಲ್ಲಿ ಬಹಳ ಕೊರತೆಗಳೂ ತಪ್ಪುಗಳೂ ಶೇರಿರುತ್ತವೆ. ಅವುಗಳಿಗಾಗಿ ಓದುವವರ ಕ್ಷಮೆ ಬೇಡುತ್ತೇವೆ. ಮುಂದಿನ ಆವೃತ್ತಿಯಲ್ಲಿ ಅವುಗಳನ್ನು ತಿದ್ದುವೆವು.

---

# ಅನುಕ್ರಮಣಿಕೆ.

• ಅನುಕ್ರಮಣಿಕೆ.

# ಶ್ರೀರಸ್ತು.

## ವಿಶ್ವಗುಣಾದರ್ಶಂ ಸವ್ಯಾಖ್ಯಾನಂ.

ಮೂ॥ ಶ್ಲೋ॥ ಶ್ರೀರಾಜೀವಾಕ್ಷ ವಕ್ಷಸ್ಸ್ಥಲನಿಲಯರಮಾಹ
ಸ್ತವಾಸ್ತವ್ಯ ಲೋಲಲ್ಲೀಲಾಬ್ಜಾನ್ನಿಷ್ಪತಂತೀ * ಮಧುರಮಧು
ಝುರೀ ನಾಭಿಪದ್ಮೇ ಮುರಾರೇಃ। ಅಸ್ತೋಕಂ ಲೋಕಮಾತ್ರಾ
ದ್ವಿಯುಗಮುಖ ಶಿಶೋರಾನನೇಷ್ವರ್ಪ್ಯಮಾಣಂ ಶಂಖಪ್ರಾಂತೇನ
ದಿವ್ಯಂ ಪಯ ಇತಿ ವಿಬುಧೈಶ್ಶಂಕ್ಯಮಾನಾ ಪುನಾತು ॥ ೧ ॥

ಶ್ಲೋಕ ॥ ಶ್ರೀಕೃಷ್ಣಂ ಸಚ್ಚಿದಾನಂದರೂಪಂ ಧ್ಯಾಯನ್ ಸತಾಂ ಮುದೇ।
ಕುರ್ವೇ ವಿಶ್ವಗುಣಾದರ್ಶವ್ಯಾಖ್ಯಾಂ ಸಂಗ್ರಹತೋಽಧುನಾ ॥

ಟೀಕಾ॥ ಅಥಖಲು ವೇಂಕಟಾಧ್ವರೀನಾಮಕವಿಃ ವಿಶ್ವಗುಣಾದರ್ಶಂನಾಮಕಾವ್ಯಂಚಿಕೀರ್ಷುಃ– ಆದೌ ಪ್ರಬಂಧಮುಖಲಕ್ಷಣಮಾಶಿಷಂ ಚಿಕೀರ್ಷಿತಸ್ಯ ಗ್ರಂಥಸ್ಯ ಪ್ರತ್ಯೂಹ ಪ್ರಶಮನಾಯ ಪ್ರಸ್ತೌತಿ॥ ಶ್ರೀರಾಜೀವೇತಿ॥ ಶ್ರೀಯುಕ್ತಸ್ಯ ರಾಜೀವಾಕ್ಷಸ್ಯ ವಿಷ್ಣೋಃ– ವಕ್ಷಸ್ಸ್ಥಲನಿಲಯಾಯಾಃ ರಮಾಯಾಃ ಹಸ್ತೇ ವಾಸ್ತವ್ಯಾತ್ ವರ್ತಮಾನಾತ್ ಲೋಲತ ಇತಿ ಮಧುಝುರೀ ನಿಷ್ಪತನಸೌಕುಮಾರ್ಯಾಯ– ಲೀಲಾರ್ಥಂ ಅಬ್ಜಾತ್ ಪುಂಡರೀಕಾತ್ ಮುರಾರೇರ್ನಾಭಿಪದ್ಮೇ ನಿಷ್ಪತಂತೀ– ಅತಏವ– ದ್ವೇಯುಗೇ ಚತ್ವಾರಿಮುಖಾನಿಯಸ್ಯ ಸಃ ತಸ್ಯ ಶಿಶೋಃ ಬ್ರಹ್ಮಣಃ– ಆನನೇಷು ಲೋಕಮಾತ್ರಾಲಕ್ಷ್ಮ್ಯಾ–ಶಂಖಪ್ರಾಂತೇನ ಅರ್ಪ್ಯಮಾಣಾಂ ಅಸ್ತೋಕಂ ಅನಲ್ಪಂ– ದಿವ್ಯಂಪಯಃ ಇತಿ– ವಿಬುಧೈಃ ದೇವೈಃ– ಶಂಕ್ಯಮಾನಾ ಉತ್ಪ್ರೇಕ್ಷ್ಯಮಾಣಾ–ಮಧುರಾ ಮಧುನಃ ಮಕರಂದಸ್ಯ ಝುರೀಧಾರಾ– ಅಸ್ಮಾನ್– ಪುನಾತು– ಪವಿತ್ರೀಕರೋತು– ಅತ್ರೋತ್ಪ್ರೇಕ್ಷಾಲಂಕಾರಃ– ಸ್ರಗ್ಧರಾ ವೃತ್ತಮೇತತ್–ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿಯತಿಯುತಾ ಸ್ರಗ್ಧರಾ ಕೀರ್ತಿತೇಯಮಿತಿ ಲಕ್ಷಣಾತ್ ॥

ಅರ್ಥ॥ ಶ್ರೀ ಅಂದರೆ ಐಶ್ವರ್ಯಯುಕ್ತನಾದ ತಾವರೆ ಹಾಗಿನ ಕಣ್ಣುಗಳುಳ್ಳ ವಿಷ್ಣುವಿನ ಎದೆಯೇ ಮನೆಯಾಗಿ ಮಾಡಿಕೊಂಡಿರುವ ಲಕ್ಷ್ಮೀದೇವಿಯ ಕೈಯ್ಯಲ್ಲಿ ಇಂಬುಗೊಂಡ ಆಟದ ಕಮಲದಿಂದ ವಿಷ್ಣುವಿನ ಹೊಕ್ಕಳೆಂಬ ಕಮಲದಲ್ಲಿ ಬೀಳುತ್ತಿರುವ ಕಮಲರಸದ ಧಾರೆಯು ನಮ್ಮನ್ನು ಕಾಯಲಿ; (ಆ ಕಮಲರಸದ ಧಾರೆಯು ಹ್ಯಾಗಿರುವದೆಂದರೆ) ನಾಲುಗು ಮುಖಗಳುಳ್ಳ ಶಿಶುವಿನ (ಬ್ರಹ್ಮನ) ಬಾಯಿಯೊಳಗೆ ಲೋಕಮಾತಾಯಿಯಾದ

---

* ನಿಸ್ಸರಂತೀತಿ ಪಾಠಾಂತರಂ.

ಲಕ್ಷ್ಮೀದೇವಿಯು ಶಂಖದ ಮೊನೆಯಿಂದ ಬಿಡುವ ಅಮೃತವು ಎಂಬದಾಗಿ ದೇವತೆಗಳಿಂದ ಊಹಿಸಲ್ಪಡುವಂಥಾದ್ದು.

(ಇದು ಮಂಗಲಾಚರಣವೆಂದರೆ- ಗ್ರಂಥವು ನಿರ್ವಿಘ್ನವಾಗಿ ಕೊನೆಗಾಣ ಬೇಕೆಂದು ಕವಿಯು ವಿಷ್ಣುವನ್ನು ಉದ್ದೇಶಿಸಿ ಮಾಡಿದ ಪ್ರಾರ್ಥನೆಯು.)

ಮೂ। ಶ್ಲೋ। ಕಾಂಚೀ ಮಂಡಲ ಮಂಡನಸ್ಯಮಖಿನಃ ಕರ್ಣಾಟಭೂಭೃದ್ಗುರೋಸ್ತಾತಾರ್ಯಸ್ಯದಿಗಂತಕಾಂತಯಶಸೋಽಯಂ ಭಾಗಿನೇಯಂವಿದುಃ। ಅಸ್ತೋಕಾಧ್ವರಕರ್ತುರಪ್ಪಯ ಗುರೋರಸ್ಯೈಷವಿದ್ವನ್ಮಣೇಃಪುತ್ರಃ ಶ್ರೀ ರಘುನಾಥ ದೀಕ್ಷಿತ ಕವಿಃ ಪೂರ್ಣೋಗುಣೈರೇಧತೇ ॥ ೨ ॥

ಟೀಕಾ ॥ ಇದಾನೀಂ ಕವಿಃ ಸ್ವಕೀರ್ತ್ಯನುವೃತ್ತಯೇ ಸ್ವಾಭಿಜನಪ್ರಶಂಸಾಪೂರ್ವಕಂ ಸ್ವಸ್ಯಗ್ರಂಥಸ್ಯಚ ನಾಮನೀಪ್ರಸ್ತೌತಿ ॥ ಕಾಂಚೇತಿ ॥ ಕಾಂಚೇತಿ ನಾಮ್ನಃಮಂಡಲಸ್ಯರಾಷ್ಟ್ರಸ್ಯ ಮಂಡನಸ್ಯ ಭೂಷಣಸ್ಯ— ಮಖಿನಃಪ್ರಶಸ್ತಯಾಗಕರ್ತುಃ ಕರ್ಣಾಟಭೂಭೃತಃ ಕೃಷ್ಣರಾಯಸ್ಯ ಗುರೋಃ ಪಂಚಸಂಸ್ಕಾರಕರ್ತುಃ ದಿಗಂತೇಷು ಕಾಂತಯಶಸಃ— ತಾತಾಚಾರ್ಯಸ್ಯ ಯಂ ಅಪ್ಪಯಗುರುಂ—ಭಾಗಿನೇಯಂ ಸ್ವಸೃಪುತ್ರಂ—ವಿದುಃ ಜನಾ ಇತಿಶೇಷಃ— ಅಸ್ತೋಕಾನಾಮಧ್ವರಾಣಾಂ ವಾಜಪೇಯಪೌಂಡರೀಕಾದೀನಾಂ ಕರ್ತುಃ—ವಿದ್ವನ್ಮಣೇಃ ಅಸ್ಯ ಅಪ್ಪಯಸ್ಯ ನಾಮಗುರೋಃ ಪುತ್ರಃ— ಶ್ರೀರಘುನಾಥ ದೀಕ್ಷಿತೋನಾಮ ಕವಿಃ— ಗುಣೈಃ ಪೂರ್ಣಸ್ಸನ್— ಏಧತೇ ವರ್ಧತೇ— ಶಾರ್ದೂಲವಿಕ್ರೀಡಿತಂವೃತ್ತಂ ॥ ಸೂರ್ಯಾಶ್ವೈರ್ಮಸಜಾಸ್ತತಾಸ್ಸಗುರವ ಶಾರ್ದೂಲ ವಿಕ್ರೀಡಿತಮಿತಿ ಲಕ್ಷಣಾತ್ ॥

ಅರ್ಥ। (ಈಗ ಕವಿಯು ತನ್ನ ಜನ್ಮದ ಮತ್ತು ಈ ಗ್ರಂಥದ ಹೊಗಳಿಕೆ ಮಾಡುತ್ತಾನೆ.) ತಾತಾರ್ಯ ಎಂಬವರು ಕಾಂಚೆ ಎಂಬ ನಾಡಿಗೆ ಭೂಷಣರಾಗಿಯೂ, ಯಾಗ ಮಾಡಿದವರುಗಳಾಗಿಯೂ, ಕರ್ಣಾಟಪಡೆಯ ಕೃಷ್ಣರಾಯರ ಗುರುಗಳಾಗಿಯೂ ನಾಲ್ಕುದಿಕ್ಕುಗಳಲ್ಲಿ ಕೀರ್ತಿಯಿಂದ ಒಪ್ಪಿದವರು. ಅವರ ಸೋದರಳಿಯರೆಂದು ಲೋಕದಲ್ಲಿ ಹೆಸರುಪಟ್ಟ, ಅನೇಕ ಯಜ್ಞಗಳನ್ನು ಮಾಡಿದ, ವಿದ್ವಾಂಸರಲ್ಲಿ ಶ್ರೇಷ್ಠರಾದ, ಅಪ್ಪಯಗುರುಗಳ ಮಕ್ಕಳು ಶ್ರೀ ರಘುನಾಥ ದೀಕ್ಷಿತ ಎಂಬವರು ಕವಿಗಳಾಗಿಯೂ ಗುಣಗಳಿಂದಭರಿತರಾಗಿಯೂ ಪ್ರಸಿದ್ಧರು.

ಮೂ। ಶ್ಲೋ। ತತ್ಸೂತಸ್ತರ್ಕ ವೇದಾಂತ ತಂತ್ರವ್ಯಾಕೃತಿ ಚಿಂತಕಃ। ವ್ಯಕ್ತಂ ವಿಶ್ವ ಗುಣಾದರ್ಶಂ ವಿಧತ್ತೇವೇಂಕಟಾಧ್ವರೀ ॥ ೩ ॥

ಟೀಕಾ ॥ ತದಿತಿ ॥ ತಸ್ಯರಘುನಾಥಸ್ಯಸುತಃ—ತರ್ಕಃ ವೇದಾಂತಃ— ತಂತ್ರಂ ಮೀಮಾಂಸಾ— ವ್ಯಾಕೃತಿರ್ವ್ಯಾಕರಣಂತೇಷಾಂಚಿಂತಕಃ ಅಧ್ಯೇತಾ— ವೇಂಕಟಾಧ್ವರೀನಾಮಕವಿಃ— ವಿಶ್ವಸ್ಯಪ್ರಪಂಚಸ್ಯ ಗುಣಾನಾಮಾದರ್ಶಮಿವ ಆದರ್ಶಂ ತತ್ಪ್ರತಿಪಾದಕಂತನ್ನಾಮಕಂ ಪ್ರಬಂಧಂ ವ್ಯಕ್ತಂ—

ವಿಧತ್ತೇಕರೋತಿ– ಶ್ಲೋಕ ವೃತ್ತಂ–ಪಂಚಮಂ ಲಘುಸರ್ವೇಷು ಸಪ್ತಮಂದ್ವಿಚತುರ್ಥಯೋಃ । ಷಷ್ಠಂ ಗುರುಚಸರ್ವೇಷಾಮೇತತ್ ಶ್ಲೋಕಸ್ಯ ಲಕ್ಷಣಂ ॥

ಅರ್ಥ ॥ ಆ ರಘುನಾಥ ದೀಕ್ಷಿತರ ಮಗನಾದ ಮತ್ತು ನ್ಯಾಯ ವೇದಾಂತ ವ್ಯಾಕರಣ ಶಾಸ್ತ್ರಗಳನ್ನು ಕಲಿತವನಾದ ವೇಂಕಟಾಧ್ವರೀ ಎಂಬವನು ಪ್ರಪಂಚದ ಗುಣಗಳನ್ನು ಸ್ಪಷ್ಟವಾಗಿ ತೋರಿಸುವ ಕನ್ನಡಿಯಂತೆ (ಈ ಕಾವ್ಯವನ್ನು) ಮಾಡುತ್ತಾನೆ.

ಮೂ। ಶ್ಲೋ। ಪದ್ಯಂ ಯದ್ಯಪಿವಿದ್ಯತೇ ಬಹುಸತಾಂ ಹೃದ್ಯಂ ವಿಗ
ದ್ಯಂ ನತದ್ಗದ್ಯಂಚ ಪ್ರತಿಪದ್ಯತೇ ನವಿಜಹತ್ಪದ್ಯಂಬುಧಾಸ್ವಾದ್ಯ
ತಾಂ। ಆಧತ್ತೇ ಹಿತಯೋಃ ಪ್ರಯೋಗ ಉಭಯೋರಾಮೋದ
ಭೂಮೋದಯಂ ಸಂಗಃ ಕಸ್ಯಹಿ ನಸ್ವದೇತ ಮನಸೇಮಾಧ್ವೀಕ
ಮೃದ್ವೀಕಯೋಃ ॥ ೪ ॥

ಟೀಕಾ ॥ ಪದ್ಯಮಿತಿ ॥ ಯದ್ಯಪಿಲೋಕೇ ಬಹು ಪದ್ಯಂ ಶ್ಲೋಕ ಕಾವ್ಯಂ ವಿದ್ಯತೇ– ತಥಾಪಿವಿಗದ್ಯಂ ಚೂರ್ಣಿಕಾರಹಿತಂ ತತ್ಪದ್ಯಂ ಸತಾಂನಹೃದ್ಯಂನಮನೋಜ್ಞಂ– ವಿಜಹತ್ಪದ್ಯಂಗದ್ಯಂ ಕಾವ್ಯಂ– ಚಕಾರೋಪ್ಯರ್ಥಃ– ಬುಧಾನಾಂ ಸಾಹಿತೀಕುಶಲಾನಾಂ ಆಸ್ವಾದ್ಯತಾಂ ರುಚ್ಯತ್ವಂ ನಪ್ರತಿಪದ್ಯತೇ– ತಯೋರುಭಯೋರ್ಗದ್ಯಪದ್ಯಯೋಃ ಪ್ರಕರ್ಷೇಣಯೋಗೋತ್ರೇತಿ ಪ್ರಯೋಗಃ ಚಂಪೂಪ್ರಬಂಧಃ– ಅರ್ಶಾದಿತ್ವಾದಚ್– ಆಮೋದಭೂಮ್ನಃ ಸಂತೋಷಾತಿಶಯಸ್ಯ– ಉದಯಂಉತ್ಪತ್ತಿಂ– ಆಧತ್ತೇಕರೋತಿ– ಸತಾಮಿತಿಯೋಜ್ಯಂ– ಮಾಧ್ವೀಕಮೃದ್ವೀಕಯೋಃ ಮಾಕ್ಷಿಕದ್ರಾಕ್ಷಯೋಃ ಸಂಗಃ ವಸ್ತುವಿಶೇಷಃ– ಪೂರ್ವವದಜಂತಃ ಕಸ್ಯಮನಸೇನಸ್ವದೇತ ನರುಚ್ಯೇತ– ಸರ್ವಸ್ಮಾ ಅಪಿರುಚ್ಯೇತ್ರೈವೇತ್ಯರ್ಥಃ– ದೃಷ್ಟಾಂತಾಲಂಕಾರಃ– ಚೇದ್ಬಿಂಬ ಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿರಿತಿಲಕ್ಷಣಾತ್– ಶಾರ್ದೂಲವಿಕ್ರೀಡಿತಂ ವೃತ್ತಂ ॥

ಅರ್ಥ॥ ಪದ್ಯ ಕಾವ್ಯಗಳು ಲೋಕದಲ್ಲಿ ಬಹಳ ಅವೆ. ಆದಾಗ್ಯೂ ಗದ್ಯ ಕೂಡಿ ಇಲ್ಲದ ಪದ್ಯವು ರಸಿಕರಿಗೆ ಮನೋಹರವಲ್ಲವು. ಪದ್ಯದಿಂದ ಅಗಲಿರುವ ಗದ್ಯವು ಜಾಣರಿಗೆ ಸವಿಯಾಗುವದಿಲ್ಲವು. ಅವೆರಡರ ಕೂಡಿಕೆಯು ಮಿಗಿಲಾದ ಆನಂದ ಹುಟ್ಟಿಸುತ್ತೆ. ಜೇನು ತುಪ್ಪ ಮತ್ತು ದ್ರಾಕ್ಷಾರಸ ಇವೆರಡರ ಯೋಗವು ಯಾರಿಗೆ ಸವಿಕೊಡಲಿಕ್ಕಿಲ್ಲ? (ಸಕಲರಿಗೂ ಸವಿಕೊಡುವದು ಎಂಬ ಭಾವವು.)

ಮೂ। ಶ್ಲೋ। ವಿಶ್ವಾವಲೋಕಸ್ಪೃಹಯಾಕದಾಚಿದ್ವಿಮಾನ
ಮಾರುಹ್ಯ ಸಮಾನವೇಷಂ * । ಕೃಶಾನುವಿಶ್ವಾವಸುನಾಮಧೇ
ಯಂ ಗಂಧರ್ವಯುಗ್ಮಂ ಗಗನೇ ಚಚಾರ ॥ ೫ ॥

* ಸಮಾನರೂಪಮಿತಿಪಾಠಾಂತರಂ ।

ಟೀಕಾ ॥ ಸ್ವಕಾವ್ಯಾಭಿಧೇಯ ಪ್ರಯೋಜಕಂ ವಸ್ತುನಿಕ್ಷಿಪತಿ ॥ ವಿಶ್ವೇತಿ । ಸಮಾನವೇಷಂ ಸದೃಶ ವೇಷಂ ಕೃಶಾನುವಿಶ್ವಾವಸುನಾಮಧೇಯಂ ಗಂಧರ್ವಯೋರ್ಯುಗ್ಮಂ ಕದಾಚಿದ್ವಿಶ್ವಸ್ಯ ಚರಾಚರಾತ್ಮಕಸ್ಯ ಅವಲೋಕಸ್ಸ್ಪೃಹಯಾ ದಿದೃಕ್ಷಯಾ ವಿಮಾನಂ ದೇವಯಾನಮಾರುಹ್ಯ ಗಗನೇ ಚಚಾರ, ಇಂದ್ರೋಪೇಂದ್ರ ವಜ್ರಾ ಲಕ್ಷಣತ್ವಾದುಪಜಾತಿವೃತ್ತಂ । ಸ್ಯಾದಿಂದ್ರವಜ್ರಾತತಜಾಸ್ತತೋಗೌ– ಉಪೇಂದ್ರವಜ್ರಾಜತಜಾಸ್ತತೋಗಾವಿತಿದ್ವಯೋರ್ಲಕ್ಷಣಂ ॥

ಅರ್ಥ॥ ಕೃಶಾನು ಮತ್ತು ವಿಶ್ವಾವಸು ಎಂಬ ಹೆಸರುಗಳುಳ್ಳ ಇಬ್ಬರು ಗಂಧರ್ವರು ಒಂದೇ ತರದ ಉಡಿಗೆ ತೊಡಿಗೆ ತೊಟ್ಟುಕೊಂಡಂಥವರಾಗಿ ಒಂದಾನೊಂದು ಸಮಯದಲ್ಲಿ ಸಮಸ್ತ ಸ್ಥಿರಚರರೂಪವಾದ ಜಗತ್ತನ್ನು ನೋಡುವ ಇಚ್ಛೆಯಿಂದ ವಿಮಾನ (ಆಕಾಶ ಮಾರ್ಗದಿಂದ ಹೋಗುವ ವಾಹನ) ವನ್ನೇರಿ ಅಂತರಿಕ್ಷದಲ್ಲಿ ತಿರುಗಾಡುವಂಥವರಾದರು.

ಮೂ। ತತ್ರ। ಶ್ಲೋ। ಕೃಶಾನುರಕೃಶಾಸೂಯಃ ಪುರೋಭಾಗಿ
ಪದಂ ಗತಃ। ವಿಶ್ವಾವಸುರಭೂದ್ವಿಶ್ವಗುಣಗ್ರಹಣಕೌತುಕೀ ॥ ೬ ॥

ಟೀಕಾ ॥ ತತ್ರೇತ್ಯುತ್ತ ರೇಣಾನ್ವಯಃ। ಕೃಶಾನುರಿತಿ। ಅಕೃಶಾ ಅನಲ್ಪಾ ಅಸೂಯಾ ಗುಣೇಷು ದೋಷಾರೋಪಣಂ ಯಸ್ಯ ಸಃ, ಅತಏವ ಕೃಶಾನುಃ ಗಂಧರ್ವಃ, ಪುರೋಭಾಗಿನಃ ದೋಷೈಕ ದೃಶಃ ಪದಂ ಸ್ಥಾನಂ ಗತೋಭೂತ್। ದೋಷೈಕ ದೃಕ್ಪುರೋಭಾಗೀತ್ಯಮರಃ। ವಿಶ್ವವಿಷಯ ಇತಿಶೇಷಃ, ವಿಶ್ವಾವಸುಸ್ತುವಿಶ್ವಸ್ಯ ಗುಣಾನಾಂ ಗ್ರಹಣೆ ಜ್ಞಾನೆ ವಿಷಯೆ ಕೌತುಕೀ ಅಭೂತ್ ॥

ಅರ್ಥ॥ ಅವರೊಳಗೆ ಕೃಶಾನು ಎಂಬವನು ಬಹಳ ಮತ್ಸರಿಯಾದದರಿಂದ ಲೋಕದಲ್ಲಿರುವ ಊನಗಳನ್ನು ಅಂದರೆ ಕೊರತೆಗಳನ್ನು ಮಾತ್ರ ನೋಡುವಂಥಾತನಾದನು. ವಿಶ್ವಾವಸುವು ಲೋಕದ ಒಳ್ಳೇ ಗುಣಗಳನ್ನೇ ಆರಿಸಿಕೊಳ್ಳುವದರಲ್ಲಿ ಜಿಜ್ಞಾಸಾ ಅಂದರೆ ಕುತೂಹಲ ಉಳ್ಳವನಾದನು.

## ಸೂರ್ಯ ವರ್ಣನೆ ॥

### ವಿಶ್ವಾವಸುಃ ॥

ಮೂ। ಅಥಪುರತಃ ಸಮಾಪತಂತಮರವಿಂದ ಬಾಂಧವಮವ
ಲೋಕಯನ್ನವಂದತಾಗಮ*ಸಾರಪಾರದೃಶ್ವಾವಿಶ್ವಾವಸುಃ ॥ ೭ ॥

ಟೀಕಾ ॥ ಅಥೇತಿ ॥ ಅಥ ದ್ವಯೋರುಕ್ತಾವಸ್ಥಾ ಪ್ರಾಪ್ತ್ಯನಂತರಂ, ಆಗಮಾನಾಂ ವೇದಾನಾಂ ಸಾರಸ್ಯ ಪಾರಮಂತಂ ಪಶ್ಯತೀತಿ, ದೃಶೇಃ ಕನಿಪ್– ಅವಂದತ ನಮಸ್ಕೃತವಾನ್ ॥

---

* ಅವಂದತ ವಿನಮಾಗಮ ಸಾಗರ ಪಾರದೃಶ್ವಾ ಇತಿಪಾಠಾಂತರಂ ॥

ಅರ್ಥ॥ ಬಳಿಕ ವೇದಗಳ ತತ್ವ ತುದಿ ಮಟ್ಟಿಗೂ ನೋಡಿದವನಾದ ವಿಶ್ವಾವಸುವು ಎದುರಿಗೆಬರುವಂಥ ಅಂದರೆ ಮೂಡುವಂಥ ತಾವರೆಗೆಳೆಯನಾದ ಸೂರ್ಯನನ್ನು ಕಂಡು ನಮಸ್ಕಾರ ಮಾಡುವಂಥವನಾದನು.

ಮೂ। ಶ್ಲೋ। ಬ್ರಹ್ಮಚರ್ಯ ವ್ರತೋತ್ಸರ್ಗ ಗುರವೆ ಕೋಕಸಂತತೇಃ ॥ ಛಾಯಾಬಿಬ್ಬೋಕಲೋಲಾಯ ಛಾಂದಸಜ್ಯೋತಿಷೇನಮಃ ॥ ೪ ॥

ಟೀಕಾ ॥ ನಮಸ್ಕಾರ ಪ್ರಕಾರಮಾಹ— ಬ್ರಹ್ಮೇತಿ। ಕೋಕ ಸಂತತೇಶ್ಚಕ್ರವಾಕಬೃಂದಸ್ಯ— ಬ್ರಹ್ಮಚರ್ಯ ವ್ರತಸ್ಯ ಸುರತರಾಹಿತ್ಯನಿಯಮಸ್ಯ ಉತ್ಸರ್ಗೇ ತ್ಯಾಗಕರ್ಮಣಿ ಗುರವೆ ಆಚಾರ್ಯಾಯ ಸಂಭೋಗಾವಸರಪ್ರದಾಯಿನ ಇತಿಯಾವತ್, ಛಾಯಾ ಸೂರ್ಯ ಪತ್ನೀ, ತಸ್ಯಾಃ ಬಿಬ್ಬೋಕೇಷು ವಿಲಾಸೇಷು, ಲೋಲಾಯ ಸತೃಷ್ಣಾಯ, ಲೋಲಶ್ಚಲಸತೃಷ್ಣಯೋ ರಿತ್ಯಮರಃ, ಛಾಂದಸಾಯ ವೇದಮಯಾಯ ಜ್ಯೋತಿಷೆ ತೇಜಸೇನಮಃ ಕರೋಮೀತಿಯೋಜ್ಯಂ ॥ ಶ್ರು ॥ ಆದಿತ್ಯೋವಾ ಏಷ ಏತನ್ಮಂಡಲಂತಪತಿ ತತ್ರತಾಋುಚ ಇತಿಶ್ರುತೇರಿತಿಭಾವಃ ॥

ಅರ್ಥ॥ ಚಕ್ರವಾಕ ಪಕ್ಷಿಗಳು ಬ್ರಹ್ಮಚರ್ಯ ವ್ರತವನ್ನು ಬಿಟ್ಟು ಬಿಡುವದರಲ್ಲಿ ಆಚಾರ್ಯನಾದಂಥ, ಛಾಯೆಯ ಕ್ರೀಡೆಗಳಲ್ಲಿ ಆತುರ ಉಳ್ಳವನಾದಂಥ, ವೇದಮಯವಾದಂಥ, ಮತ್ತು ಪ್ರಕಾಶ ರೂಪವಾದಂಥ ಸೂರ್ಯನನ್ನು ಕುರಿತು ನಮಸ್ಕಾರ ಮಾಡುತ್ತೇನೆ. (ಚಕ್ರವಾಕವೆಂದರೆ ಒಂದು ಜಾತಿಯ ಕೆಂಪು ಹಂಸಪಕ್ಷಿ. ಸೂರ್ಯೋದಯವಾದ ಮೇಲೆ ಚಕ್ರವಾಕ ಪಕ್ಷಿಗಳಿಗೆ ಸಂಭೋಗದ ಕಾಲವಂತೆ. „ ಛಾಯಾ ” ಅಂದರೆ ನೆರಳು- ಸೂರ್ಯನ ಹೆಂಡತಿ ಎಂತ ಕವಿಗಳ ಕಲ್ಪನೆ.)

ಕೃಶಾನುಃ ॥

ಮೂ। * ಅರೆ ಸಕಲ ಭುವನ ಸಂಶೋಷಣಕಾರಿಣಂ ತಪನಮಪಿ ಕಿಂ ನಮನ ಕರ್ಮೀಕರೋಷಿ॥ ೯ ॥

ಟೀಕಾ ॥ ಅರೇಇತಿ ॥ ಸಕಲಸ್ಯ ಭುವನಸ್ಯ ಜಲಸ್ಯಚ ಸಂಶೋಷಣ ಕಾರಿಣಂ ತಪತೀತಿ ತಪನಂ ಸೂರ್ಯಮಪಿ ನಮನೇನ ನಮಸ್ಕಾರ ಕ್ರಿಯಯಾ ಕರ್ಮೀಕರೋಷಿ ದ್ವಿತೀಯಾಂತಾರ್ಥೀ ಕರೋಷಿ, ಅಭೂತತದ್ಭಾವೇಚ್ವಿಃ ಅಪಿಗರ್ಹಾಯಾಂ ॥

ಅರ್ಥ॥ ಏನೆಲಾ ! ಇಡೀ ಪೃಥ್ವಿ ಮತ್ತು ಅದರೊಳಗಿನ ನೀರನ್ನು ಬತ್ತಿ ಹೋಗ ಮಾಡುವಂಥವನಾದ ಸೂರ್ಯನನ್ನು ಕೂಡ ನಮಸ್ಕಾರ ಮಾಡುತ್ತಿಯಾ ?

* ಸಖೆ ಕಥಂ ಸಕಲ ಭುವನ ಶೋಷಕಾರಿಣಂ ಇತಿಪಾಠಾಂತರಂ।

ಮೂ। ಪಶ್ಯ—

ಶ್ಲೋ। ಪಾಂಥಾನ್ ದೀನಾನಹಹವಸುಮಾನಾ ತಪೇನಾಂಧಾನ್ವಿ ಧತ್ತೇ ಶುಷ್ಕಾಂ ಪೃಥ್ವೀಂ ರಚಯತಿತರಾಂ ಶೋಷ ಯತ್ಯೋಷ ಧೀಶ್ಚ। ಕಾಸಾರಾಣಾಂ ಹರತಿ ವಿಭವಂ ಕ್ಲಾಂತಿಶಾಂತಿ ಪ್ರದಾ ನಾಂ * ಕ್ರೂರಸ್ಯೈವಂ ಗುಣಲವಕಥಾ ಕಾಸ್ವತೋಭಾಸ್ವ ತೋಽ ಸ್ಯ॥ ೧೦ ॥

ಟೀಕಾ ॥ ಪಾಂಥಾನಿತಿ ॥ ವಸುಮಾನ್ ತೇಜಸ್ವೀ ಸೂರ್ಯಃ ಧನವಾಂಶ್ಚ, ರಶ್ಮೌವಸೂರತ್ನೇ ಧನೇ ವಸ್ವಿತ್ಯಮರಃ, ದೀನಾನಧ್ವಗತಿಖಿನ್ನಾನ್ ದರಿದ್ರಾಂಶ್ಚ, ನಿಸ್ವಸ್ತು ದುರ್ವಿಧೋದೀನೋ ದರಿದ್ರ ಇತ್ಯಮ ರಃ, ಪಾಂಥಾನ್ ಪಥಿಕಾನ್ ಯಾಚಕಾಂಶ್ಚ, ಆತಪೇನ ಆಸಮಂತಾತ್ತಾಪಾನಿ ಗರ್ವವಾಕ್ಯಾನಿತ್ಯೈಶ್ಚ ಅಂ ಧಾನ್ ವಿಹ್ವಲಾನ್, ವಿಧತ್ತೇ ಕರೋತಿ, ಪೃಥ್ವೀಂ ಶುಷ್ಕಾಂ ನಿರ್ಜಲಾಂ ಶೂನ್ಯಾಂಚರಚಯತಿತರಾಂ ಪ್ರಕರ್ಷೇಣ ಕರೋತಿ, ಓಷಧೀಃ ಸಸ್ಯಾನಿಚ ಶೋಷಯತಿ ಕ್ಲಾಂತೇಃ ಶ್ರಮಸ್ಯಶಾಂತಿ ಪ್ರದಾನಾಂ ನಿವಾರಕಾಣಾಂ ಕಾಸಾರಾಣಾಂ ಸರಸಾಂ ವಿಭವಂ ಸಮೃದ್ಧಿಂ ಹರತಿ, ಏವಮುಕ್ತ ಪ್ರಕಾರಾತ್ ಸ್ವತಃ ಸ್ವಭಾವಾತ್ ಕ್ರೂರಸ್ಯಾಸ್ಯಗುಣಾನಾಂ ಲವಸ್ಯಾಪಿ ಕಥಾವಾರ್ತಾ ಕಾ ಕೀದೃಶೀ— ನಾಸ್ತ್ಯೇವೇತ್ಯರ್ಥಃ, ಅತಃಕಿಂನಮನ ಕರ್ಣೇ ಕರೋಷೀತಿ ಪೂರ್ವೇಣ ಸಂಬಂಧಃ ಏವಮಗ್ರೇಪಿ। ಮಂದಾಕ್ರಾಂತಾ ವೃತ್ತಂ, ಮಂದಾಕ್ರಾಂತಾ ಜಲಧಿ ಷಡಗೈರ್ಮ್ಭೌ ನತೌ ತಾದ್ಗುರೂ ಚೇದಿತಿ ಲಕ್ಷಣಾತ್ ॥

ಈ ಶ್ಲೋಕಕ್ಕೆ ಎರಡು ಅರ್ಥಗಳು.

೧. ಸೂರ್ಯಪರವಾದದ್ದು—ಅಯ್ಯೋ! ಸೂರ್ಯನು ಬಳಲಿದ ದಾರಿಕಾರರನ್ನು ಬಿಸಲಿನಿಂದ ಕುರುಡರಾಗಿ ಮಾಡುತ್ತಾನೆ, ಭೂಮಿಯನ್ನು ಕಾನೆ ಅರಿ ಹೋಗ ಮಾಡು ತ್ತಾನೆ, ಗಿಡಮೂಲಿಕೆಗಳನ್ನು ಒಣಗಿಸುತ್ತಾನೆ, ಬಳಲಿಕೆಗೆ ತಂಪು ಕೊಡುವ ಕೆರೆಗಳ ನೀರನ್ನು ಎಳಕೊಳ್ಳುತ್ತಾನೆ, ಈ ಪ್ರಕಾರವಾಗಿ ಸ್ವತಹಾ ಕ್ರೂರನಾದ ಈ ಸೂರ್ಯನ ಗುಣಗಳಲ್ಲಿ ಬಣ್ಣಿಸಲಿಕ್ಕೆ ಯೋಗ್ಯವಾದದ್ದು ರವಷ್ಟಾದರೂ ಇಲ್ಲವು.

೨. ಹಣಕಾರನನ್ನು ಉದ್ದೇಶಿಸಿ—ವಸುಮಾನ್ ಅಂದರೆ ಹಣಕಾರನು ಬಡವರಾದ ಪಾಂಥರ್ ಅಂದರೆ ಭಿಕ್ಷೆಗಾರರನ್ನು ತಾಪ ಅಂದರೆ ಉರಿ ಹುಟ್ಟಿಸುವಂಥ ಹಮ್ಮಿಕೇ ನುಡಿಗಳಿಂದ ಆಯಾಸ ಪಡುವಂಥಾವರಾಗಿ ಮಾಡುತ್ತಾನೆ.

ವಿಶ್ವಾವಸುಃ ॥

ಮೂ। ಕಿಮರೆ ಭಗವಂತ ಮರವಿಂದ ಬಾಂಧವ ಮುಪಿವಿನಿಂದಸಿ। ಶೃಣುಪುರೋಭಾಗಿನ್ ॥ ೧೧ ॥

* ಕ್ಲಾಂತಶಾಂತಿ ಪ್ರದಾನಾಮಿತಿ ಪಾಠಾಂತರಂ।

ಟೀಕಾ। ಕಿಮಿತಿ। ಅರೆ, ಹೀನಸಂಬೋಧನೇತ್ವರೆ ಇತ್ಯಮರಃ ॥ ಭಗವಂತಂ ॥

ಶ್ಲೋಕ। ಉತ್ಪತ್ತಿಂಚವಿನಾಶಂಚ ಭೂತಾನಾಮಾಗತಿಂಗತಿಂ। ವೇತ್ತಿವಿದ್ಯಾಮ ವಿದ್ಯಾಂಚ ಸ ವಾಚ್ಯೋ ಭಗವಾನಿತ್ಯನೇನ ವಚನೇನ ಭಗವಚ್ಛಬ್ದಾರ್ಥೋನಿರೂಪಿತಃ ॥

ಅರ್ಥ। ಏನೆಲೆ, ನೈದಿಲೆ ಪ್ರಿಯನಾದ ಭಗವಂತನನ್ನೂ (ಸೂರ್ಯನನ್ನು)ಕೂಡ ನಿಂದಿಸುತ್ತೀಯೆ? ನಿಂದಕನೇ ಕೇಳು!

ಮೂ। ಶ್ಲೋ। ವೃಷ್ಟಿಂ ಘೃಷ್ಟಿಭಿರಾರಚಯ್ಯ ಜಗತಸ್ತುಷ್ಟಿಂ ಪರೀಸೃಷ್ಟಿಯಃ। ಪುಷ್ಟಿಂದ್ರಾಗ್ವಿಶಿನಷ್ಟಿ ದೃಷ್ಟಿಷು ನೃಣಾಂ ಧ್ವಾಂತಂಪಿನಷ್ಟಿ ಸ್ಥಿರಂ। ಪ್ರಾಜ್ಞಾನಾಮಪವರ್ಗಮಾರ್ಗದಮಮುಂ ಪದ್ಮಾಗೃಹೋಲ್ಲಾಸಿನಂ। ಕೋನಸ್ತೌತಿ ಸಮಸ್ತಲೋಕ ಸುಹೃದಂ ದ್ಯೋಭೂಷಣಂ ಪೂಷಣಂ ॥ ೧೨ ॥

ಟೀಕಾ। ವೃಷ್ಟಿಮಿತಿ ॥ ಯಸ್ಸೂರ್ಯಃ ಘೃಷ್ಟಿಭಿಃ ಕಿರಣೈಃ ವೃಷ್ಟಿಂ ವರ್ಷಂ ಆರಚಯ್ಯ ಜನಯಿತ್ವಾ (ಯಾಭಿರಾದಿತ್ಯಸ್ತಪತಿ ರಶ್ಮಿಭಿಸ್ತಾಭಿಃ ಪರ್ಜನ್ಯೋವರ್ಷತೀತಿ ಶ್ರುತೇಃ) ಜಗತಃ ತುಷ್ಟಿಂ ಸಂತೋಷಂ ಪರೀಸೃಷ್ಟಿ ಜನಯತಿ, ಸೃಜತೇರ್ಯಙ್ಲುಕಿಲಟಿರೂಪಂ ಯಃ ನೃಣಾಂ ದೃಷ್ಟಿಷು ನೇತ್ರೇಷು ಪುಷ್ಟಿಂ ವಿಷಯದರ್ಶನಸಾಮರ್ಥ್ಯಂ ವಿಶಿನಷ್ಟಿ ಪೋಷಯತಿ, ಸ್ಥಿರಂ, ಧ್ವಾಂತಂತಮಃ ಪಿನಷ್ಟಿ ನಾಶಯತಿ, ಪ್ರಾಜ್ಞಾನಾಂ ಜ್ಞಾನಿನಾಂ, ಅಪವರ್ಗ ಮೋಕ್ಷಮಾರ್ಗಂ ಮಂಡಲಾಂತರತಃ ದದಾತೀತಿತದ್ವಂ ॥ ಶ್ಲೋ॥ ದ್ವಾವಿಮೌಪುರುಷೌ ಲೋಕೇ ಸೂರ್ಯಮಂಡಲಭೇದಿನೌ। ಯೋಗನಿರ್ಭಿನ್ನಮೂರ್ಧ್ನ್ಯಕೋಪರಾವೃತ್ಯಮೃತಃ ಪರ ಇತ್ಯಾಗಮಾದಿತಿ ಭಾವಃ ॥ ಪದ್ಮಾಯಾಃ ಲಕ್ಷ್ಮ್ಯಾಃ ಗೃಹಸ್ಯ ಉಲ್ಲಾಸಿನಂ, ಪದ್ಮವಿಕಾಸಕಮಿತಿಯಾವತ್, ಅತಏವ ಸಮಸ್ತ ಲೋಕ ಸುಹೃದಂ ದ್ಯೋಭೂಷಣಂ ಆಕಾಶಾಲಂಕಾರಂ, ಅಮುಂ ಪೂಷಣಂ ಸೂರ್ಯಂ ಕೋನಸ್ತೌತಿ? ಸರ್ವೋಪಿಸ್ತೌತ್ಯೇವೇತ್ಯರ್ಥಃ। ಶಾರ್ದೂಲವಿಕ್ರೀಡಿತಂ ವೃತ್ತಂ ॥

ಅರ್ಥ ॥ ಯಾವಾತನು ಕಿರಣಗಳಿಂದ ಮಳೆಯನ್ನು ಹುಟ್ಟಿಸಿ ಜಗತ್ತಿಗೆ ಸಂತೋಷವನ್ನುಂಟು ಮಾಡುತ್ತಾನೋ; ಮನುಷ್ಯರ ಕಣ್ಣುಗಳಲ್ಲಿ ಬಲ ಅಂದರೆ ಪದಾರ್ಥಗಳನ್ನು ನೋಡುವ ಶಕ್ತಿಯನ್ನು ಬೇಗನೆ ಕಾಪಾಡಿಸುತ್ತಾನೋ; ತಿಳಿದವರಿಗೆ ಮೋಕ್ಷದ ದಾರಿ ತೋರಿಸುತ್ತಾನೋ, ಲಕ್ಷ್ಮಿಯ ಮನೆಗೆ ಆನಂದ ಕೊಡುತ್ತಾನೋ; ಇದೀ ಲೋಕಕ್ಕೆ ಅಂದರೆ ಎಲ್ಲ ಪ್ರಾಣಿಗಳಿಗೆ ಸುಖ ಕೊಡುತ್ತಾನೋ, ಆಕಾಶಕ್ಕೆ ಅಲಂಕಾರ ಕೊಡುತ್ತಾನೋ, ಅಂಥ ಸೂರ್ಯನನ್ನು ಯಾರು ಹೊಗಳರು? (ಎಲ್ಲರು ಹೊಗಳುವರೆಂಬ ತಾತ್ಪರ್ಯವು.)

ಮೂ। ಶ್ಲೋ। ಯದಾನಪಶ್ಯಂತಿ ತಮೋವಿಮರ್ದಿನಂ ರವಿಂ ಜನಾಸ್ತರ್ಹಿ ಕಥಯಂತಿ ದುರ್ದಿನಂ। ಧನೋತ್ಯಸೌದೇಹಭೃತಾಂ ಸರೋಗತಾಂ ಧಿನೋತಿಚಾಂ ಭೋಜತತಿಂ ಸರೋಗತಾಂ ॥ ೧೩ ॥

ಟೀಕಾ। ಯದೇತಿ। ಯದಾ ಯಸ್ಮಿನ್‌ದಿನೆ, ಜನಾಃ ತಮೋವಿಮರ್ದಿನಂ ರವಿಂ ಸೂರ್ಯಂ ನಪಶ್ಯಂತಿ, ತತ್‌ದಿನಂ ದುರ್ದಿನಂ ಕಥಯಂತಿ, ಮೇಘಚ್ಛನ್ನೇಹ್ನಿ ದುರ್ದಿನಮಿತ್ಯಮರಃ ಅಸೌರವಿಃ, ಸರಸಿಗತಾಂ ಸ್ಥಿತಾಂ, ಅಂಭೋಜಾನಾಂತತಿಂ ಸಮೂಹಂ ಧಿನೋತಿ ಪ್ರೀಣಯತಿ, ದೇಹಭೃತಾಂ ಮನುಷ್ಯಾಣಾಂ ರೋಗೇಣಸಹಿತಾಸ್ಸರೋಗಾಃ ತೇಷಾಂಭಾವಸ್ತತ್ತಾತಾಂ, ರೋಗಮಿತ್ಯರ್ಥಃ, ಧುನೋತಿ ವಾರಯತಿ॥ ಶ್ಲೋ। ಆರೋಗ್ಯಂ ಭಾಸ್ಕರಾದಿಚ್ಛೇತ್ ಇತ್ಯಾಗಮಾದಿತಿಭಾವಃ। ವಂಶಸ್ಥವೃತ್ತಂ ಜತೌತುವಂಶಸ್ಥ ಮುದೀರಿತಂಜರಾವಿತಿಲಕ್ಷಣಾತ್॥

ಅರ್ಥ॥ ಯಾವ ದಿವಸ ಜನರುಗಳು ಕತ್ತಲೆಯನ್ನು ಕೊಲ್ಲುವಂಥವನಾದ ಸೂರ್ಯನನ್ನು ನೋಡುವದಿಲ್ಲವೋ ಆ ದಿವಸಕ್ಕೆ ದುರ್ದಿನವೆನ್ನುತ್ತಾರೆ. ಅವನು (ಅಂದರೆ ಆ ಸೂರ್ಯನು) ಸರೋವರದೊಳಗಿನ ತಾವರೆಗಳ ಸಮೂಹಕ್ಕೆ ಸಂತೋಷ ಪಡಿಸುತ್ತಾನೆ. ಮತ್ತು ದೇಹಧಾರಿಗಳಾದ ಮನುಷ್ಯರ ರೋಗವನ್ನು ದೂರ ಪಡಿಸುತ್ತಾನೆ.

ಮೂ। ಅಪಿಚ। ಶ್ಲೋ। ಆಶಾಪಾಲೇಷು ಪಾಶಾಯುಧ ಯಮವಲ ಭಿನ್ಮಾರು ತೇಶಾದಿ ಕೇಷುಪ್ರಾಯೋ ಭೂಯಸ್ಸು ಜಾಗ್ರತ್ಸ್ವಪಿ ಚಶುಚಿತಯಾ ಭಾಸುರಾಭೂಸುರಾದ್ಯಾಃ॥ ಯಸ್ಯೈಕಾಲತ್ರಯೇ ಪಿ ಪ್ರತಿದಿವಸಮಮೀ ಕುರ್ವತೇ ಘ್ಯರ್ಪ್ರದಾನಂ ಸೈಷಾ ತ್ರಯ್ಯೇವ ವಿದ್ಯಾ ತಪತಿ ರವಿಮಯೀ ಸರ್ವಲೋಕಾನ್ ಪುನಾನಾ॥ ೧೪॥

ಟೀಕಾ। ಆಶೇತಿ। ಶುಚಿತಯಾ ಚಿತ್ತ ಶುಧ್ಯಾ ಭಾಸುರಾಃ, ಅಮೀಭೂಸುರಾದ್ಯಾಃ ವಿಪ್ರಕ್ಷತ್ರಿಯವೈಶ್ಯಾಃ ಪಾಶಾಯುಧಯಮವಲಭಿನ್ಮಾರುತೇ ಶಾದಿಕೇಷು, ವರುಣಯಮೇಂದ್ರವಾಯ್ವೀಶಾನಾದಿಷು ಭೂಯಸ್ಸು ಆಶಾಪಾಲೇಷು ದಿಕ್ಪಾಲೇಷು ಜಾಗ್ರತ್ಸುವರ್ತಮಾನೇಷು ಸತ್ಸ್ವಪಿಯಸ್ಯೈಸೂರ್ಯದೇವತಾಯೈ ಏವ ಕಾಲ ತ್ರಯೇಪಿ ಅರ್ಘ್ಯಪ್ರದಾನಂ ಕುರ್ವತೇ ಸೈಷಾರವಿಮಯೀ ತ್ರಯೀವಿದ್ಯೈವ॥ ಶ್ಲೋ। ಇತಿವೇದಾಸ್ತ್ರಯಸ್ತ್ರಯೀತ್ಯಮರಃ। ಸರ್ವಲೋಕಾನ್ ಪುನಾನಾ ಪವಿತ್ರಯಂತೀ ಸತೀ, ತಪತಿ ಪ್ರಕಾಶತೆ, ಸ್ರಗ್ಧರಾ ವೃತ್ತಂ॥

ಅರ್ಥ॥ ವರುಣ, ಯಮ, ಇಂದ್ರ, ವಾಯು, ಈಶಾನ ಮೊದಲಾದ ಬಹಳ ದಿಕ್ಪಾಲಕರು ಜಾಗರೂಕರಾಗಿದ್ದಾಗ್ಯೂ (ವಿಪ್ರರಿಂದ) ತ್ರಿಕಾಲದಲ್ಲಿಯೂ ಅಂದರೆ ಪ್ರಾತಃಕಾಲ, ಮಧ್ಯಾಹ್ನಕಾಲ ಮತ್ತು ಸಾಯಂಕಾಲ ಅರ್ಘ್ಯಪ್ರದಾನ ಮಾಡಲ್ಪಡುವ ಈ ಸೂರ್ಯ ರೂಪವಾದ ವೇದವಿದ್ಯೆಯು ಎಲ್ಲಾ ಲೋಕಗಳನ್ನೂ ಪಾವನ ಮಾಡುವಂಥಾದ್ದಾಗಿ ಉರಿಯುತ್ತದೆ.

ಮೂ। ಜನಾನುದ್ದಿಶ್ಯ। ಶ್ಲೋ। ಕೃತ ತ್ರಿದಶಪ್ರೋಷಣಂ ಕೃಶ

ರಥಾಂಗ ಸಂತೋಷಣಂ ಪಿಶಾಚಕುಲ ಭೀಷಣಂ ಪೃಥುತಮ ಶ್ಛಟಾಪೇಷಣಂ ॥ ವಿನಮ್ರ ಗದಶೋಷಣಂ ವಿಹಿತವಾರಿ ಜೋನ್ಮೇಷಣಂ ನಮಸ್ಕುರುತ ಪೂಷಣಂ ನನುನಭ ಸ್ಸ್ಥಲೀಭೂಷಣಂ ॥ ೧೫ ॥

ಟೀಕಾ । ಕೃತೇತಿ । ಕೃತತ್ರಿದಶಪೋಷಣಂ ವಸಂತಾದಿ ಕಾಲವಿಧಾನದ್ವಾರಾ ಯಾಗ ಪ್ರಯೋಜಕತ್ವಾದಿತಿಭಾವಃ– ಕೃತರಥಾಂಗ ಸಂತೋಷಣಂ– ಖಿನ್ನ ಚಕ್ರವಾಕ ಸಂತೋಷಕರಂ– ಪಿಶಾಚಕುಲಭೀಷಣಂ– ತಸ್ಯಾಹ್ನಿ ಸಂಚಾರಾಭಾವಾದಿತಿಭಾವಃ–ಪೃಥುತಮಶ್ಛಟಾಯಾಃ ಬಹುಳತಿಮಿರ ಸಂಘಸ್ಯ ಪೇಷಣಂ ನಾಶಕಂ– ವಿನಮ್ರಾಣಾಂ ನಮಸ್ಯತಾಂ ಗದಶೋಷಣಂ ರೋಗನಿವಾರಕಂ– ವಿಹಿತಂ ಕೃತಂ ವಾರಿಜಾನಾಮುನ್ಮೇಷಣಂ ವಿಕಾಸಃ ಯೇನತಂ–ನಭಃಸ್ಥಲೀಭೂಷಣಂ ಪೂಷಣಂ ಸೂರ್ಯಂ–ನನುಜನಾ ಯೂಯಂ ನಮಸ್ಕುರುತ– ಪೃಥ್ವೀವೃತ್ತಂ ॥

ಅರ್ಥ ॥ ತ್ರಿದಶರ ಅಂದರೆ ದೇವತೆಗಳನ್ನು ಪಾಲಿಸುವವನಾದ, (ದೇವತೆಗಳಿಗೆ ತೃಪ್ತಿ ಪಡಿಸುವ ಯಜ್ಞಯಾಗಾದಿಗಳನ್ನು ಮಾಡುವ ಕಾಲಗಳೆಲ್ಲಾ ಸೂರ್ಯನಿಂದ ಗೊತ್ತಾಗುವದರಿಂದ ಸೂರ್ಯನಿಗೆ ತ್ರಿದಶ ಪೋಷಣತ್ವ ಎಂಬೋ ತಾತ್ಪರ್ಯವು,) ಚಕ್ರವಾಕ ಪಕ್ಷಿಗಳಿಗೆ ಆನಂದ ಕೊಡುವಂಥವನಾದ, ಪಿಶಾಚವರ್ಗಕ್ಕೆ ಭಯವನ್ನುಂಟುಪಡಿಸುವಂಥವನಾದ (ಪಿಶಾಚಗಳು ಹಗಲು ಹೊತ್ತು ಸಂಚರಿಸದೆ ಇರುವದು ಸೂರ್ಯನ ಅಂಜಿಕೆಯಿಂದ ಎಂಬೋ ತಾತ್ಪರ್ಯ), ದಟ್ಟವಾದ ಕತ್ತಲೆಯನ್ನು ನಾಶ ಮಾಡುವಂಥವನಾದ, ತನ್ನನ್ನು ವಂದನೆ ಮಾಡುವವರ ರೋಗಗಳನ್ನು ಪರಿಹರಿಸುವಂಥವನಾದ, ನೀರಲ್ಲಿ ಹುಟ್ಟುವ ತಾವರೆಗಳನ್ನು ಅರಳಿಸುವಂಥವನಾದ, ಆಕಾಶಕ್ಕೆ ಅಲಂಕಾರನಾದ ಸೂರ್ಯನನ್ನು (ಜನರುಗಳಿರಾ ನೀವು) ನಮಸ್ಕಾರ ಮಾಡಿರಿ.

ಮೂ । ಇತ್ಥಂ ವಿಶ್ವಾವಸುರ್ವಿಭಾವಸುಮಭಿಷ್ಟುವನ್ ಪ್ರಾಂಜಲಿಃ ಕೃಶಾನುನಾಸಹ ದ್ವಾದಶಾತ್ಮಾನಂ ಸಮಯಾಗಮಯಾಮಾಸ ವಿಮಾನಮನಮಚ್ಚ ತದ್ಬಿಂಬಮಧ್ಯಧಾಮಾನಮತಿಮಾನಮಹಿಮಾನಂ ಪರಮಾತ್ಮಾನಂ ॥ ೧೬ ॥

ಟೀಕಾ ॥ ಇತ್ಥಮಿತಿ । ಇತ್ಥಮುಕ್ತಪ್ರಕಾರೇಣ ವಿಶ್ವಾವಸುಃ ವಿಭಾವಸುಂ ಸೂರ್ಯಂ ಅಭಿಷ್ಟುವನ್ ಸ್ತೋತ್ರಂ ಕುರ್ವನ್ ಸಃ ದ್ವಾದಶಾತ್ಮಾನಂ ಸಮಯಾ ಸೂರ್ಯಸ್ಯ ಸಮೀಪಂ—ಅಭಿತಃ ಪರಿತ ಇತ್ಯಾದಿನಾದ್ವಿತೀಯಾ ಗಮಯಾಮಾಸ ಪ್ರಾಪಿತವಾನ್– ತಸ್ಯ ಸೂರ್ಯಸ್ಯಬಿಂಬ ಮಧ್ಯೇ ಧಾಮ ಯಸ್ಯತಂ ಅತಿಮಾನಃ ಪ್ರಮಾಣಾತೀತಃ ಮಹಿಮಾಯಸ್ಯತಂ– ಪರಮಃ ಸರ್ವೋತ್ಕೃಷ್ಟಃ ಆತ್ಮಾ ಸ್ವರೂಪಂಯಸ್ಯತಂ– ಅನಮತ್ ನಮಸ್ಕೃತವಾನ್ ॥

ಅರ್ಥ ॥ ಈ ಪ್ರಕಾರವಾಗಿ ವಿಶ್ವಾವಸುನು ಬೊಗಸೆ ಜೋಡಿಸಿ, ಸೂರ್ಯನನ್ನು

ಸ್ತೋತ್ರಮಾಡಿ, ಕೃಶಾನುವಿನಿಂದ ಒಡಗೂಡಿ ವಿಮಾನವನ್ನು ಸೂರ್ಯನ ಬಳಿಗೆ ತೆಗದುಕೊಂಡು ಹೋಗಿ, ಆ ಸೂರ್ಯಬಿಂಬದ ಮಧ್ಯದಲ್ಲಿ ನೆಲೆಗೊಂಡಿರುವ, ಅಪಾರ ಮಹಿಮೆಯುಳ್ಳ ಪರಮಾತ್ಮನನ್ನು- ನಮಸ್ಕಾರ ಮಾಡುವಂಥವನಾದನು.

ಮೂ। ಶ್ಲೋ। ಪ್ರಶಸ್ತಗುಣಸಿಂಧವೇ ಪ್ರಪದನಸ್ಪೃಶಾಂಬಂ
ಧವೇ ಸ್ವತೋಽಪಹತ ಪಾಪ್ಮನೇ ಸಕಲ ದೇಹಿನಾಮಾತ್ಮನೇ।
ನಮಃ ಕಮಲವಾಸಿನೀ ನಯನ ಸೌಖ್ಯ ಸಂಧಾಯಿನೆ ತಮಶ್ಶಮ
ವಿಧಾಯಿನೆ ತರಣಿ ಮಂಡಲಸ್ಥಾಯಿನೇ ॥ ೧೨ ॥

ಟೀಕಾ ॥ ಪ್ರಶಸ್ತೇತಿ। ಪ್ರಶಸ್ತಾಃ ಪ್ರಸಿದ್ಧಾಃ ಗುಣಾಃ ಭಕ್ತಪಾಲನಾದಯಃ ತೇಷಾಂ ಸಿಂಧವೆ ಸಮುದ್ರಾಯ ತತ್ಪರಿಪೂರ್ಣಾಯೇತಿಯಾವತ್- ಏವಮಗ್ರೇಪಿ ಪ್ರಪದನಂ ರಕ್ಷಣಾರ್ಥಂ ಆತ್ಮಾರ್ಪಣಂ ಸ್ಪೃಶಂತಿ ಕುರ್ವಂತೀತಿ ತತ್‌ಸ್ಪೃಶಾಂ ಶರಣಾಗತಾನಾಂ ಬಂಧವೆ ಸಂರಕ್ಷಕಾಯ- ಸ್ವತಃ ಸ್ವಭಾವಾದೇವ ಅಪಹತಪಾಪ್ಮನೆ ನಿರ್ದೋಷಾಯ- ಸಕಲಾನಾಂ ದೇಹಿನಾಂ ಶರೀರ ಧಾರಿಣಾಂ ಆತ್ಮನೇ ಜೀವಸ್ವರೂಪಾಯ- ಅನೇನಜೀವೇನಾತ್ಮನಾನುಪ್ರವಿಶ್ಯೇತ್ಯಾದಿ ಶ್ರುತೇಃ— ಕಮಲವಾಸಿನ್ಯಾಃ ಲಕ್ಷ್ಮ್ಯಾಃ ನಯನಸೌಖ್ಯಸ್ಯ ಸಂಧಾಯಿನೆಘಟಯಿತ್ರೆ- ತಮಸಃ ಅಜ್ಞಾನಸ್ಯಶಮಂನಾಶಂ ವಿಧತ್ತ ಇತಿ ವಿಧಾಯಿನೆ ತಮಃ ತಿಮಿರಂವಾ- ಯದಾದಿತ್ಯಗತಂತೇಜೋ ಜಗದ್ಭಾಸ ಯತೇಽಖಿಲಮಿತ್ಯಾಗಮಾದಿತಿಭಾವಃ- ತರಣೇಃ ಸೂರ್ಯಸ್ಯಮಂಡಲ ಸ್ಥಾಯನೇ ಭಗವತೆ ನಮಃ। ಧ್ಯೇಯಸ್ಸದಾಸವಿತೃಮಂಡಲಮಧ್ಯವರ್ತೀ ನಾರಾಯಣ ಇತ್ಯಾಗಮಾದಿತಿಭಾವಃ। ಪೃಥ್ವೀ ವೃತ್ತಂ ॥

ಅರ್ಥ ॥ ( ಹೇ ಸೂರ್ಯನೇ ) ನಿನ್ನನ್ನು ಕುರಿತು ನಮಸ್ಕಾರ. ನೀನು ಎಂಥವ ನೆಂದರೆ- ಪ್ರಸಿದ್ಧವಾದ ಗುಣಗಳ ಸಮುದ್ರನು; ಸಂರಕ್ಷಣಾರ್ಥವಾಗಿ ನಿನ್ನನ್ನು ಮುಟ್ಟು ವವರ ಅಂದರೆ ನಿನ್ನ ಮರೆಹೊಕ್ಕವರ ಬಂಧುವು ಅಂದರೆ ಪಾಲಕನು; ಸ್ವಭಾವಿಕವಾಗಿ ದೋಷರಹಿತನು, ಎಲ್ಲ ಶರೀರಧಾರಿಗಳಿಗೆ ಜೀವರೂಪನಾದವನು; ಕಮಲವಾಸಿನಿಯಾದ ಲಕ್ಷ್ಮೀಯ ಕಣ್ಣುಗಳಿಗೆ ಸುಖ ಉಂಟುಪಡಿಸುವವನು; ಕತ್ತಲೆಯ ಶಮ ಅಂದರೆ ನಾಶ ಮಾಡುವವನು; ತರಣಿಯ ಅಂದರೆ ಸೂರ್ಯಮಂಡಲದಲ್ಲಿ ನೆಲೆಗೊಂಡಿರುವವನು.

ಮೂ। ಪುನಸ್ಸಭಕ್ತ್ಯುನ್ಮೇಷಂ।
ಶ್ಲೋ। ಭಾನು ಭಾನು ದಳದಬ್ಜಲೋಚನಂ। ಭಕ್ತಲೋಕಭವ
ಪಾಶಮೋಚನಂ। ಧಾಮತಾಮರಸವಾಸಿನೀ ಸಖಂ ಹೇಮವರ್ಣ
ಮಿಹ ಸೌತಿಮೆ ಸುಖಂ ॥ ೧೮ ॥

ಟೀಕಾ ॥ ಭಕ್ತಿಃ ಪೂಜ್ಯೇಷ್ವನುರಾಗಃ ತಸ್ಯಾ ಉನ್ಮೇಷೇಣ ವಿಕಾಸೇನ ಸಹಿತಂ ಯಥಾತಥಾ ಪ್ರಾಕ್ತೇತಿಯೋಜ್ಯಂ। ಏವಮಗ್ರೇಪಿ ॥ ಭಾನ್ವಿತಿ ॥ ಭಾನುಭಾನುಭಿಃ ಸೂರ್ಯಕಿರಣೈಃ ದಳಿತೇವಿಕಸತೀ

ಅಬ್ಜೇ ಇವ ಲೋಚನೇ ಯಸ್ಯತತ್ ಭಕ್ತಸ್ಯಲೋಕಸ್ಯಜನಸ್ಯಯೋಭವಪಾಶಃ ಸಂಸಾರಬಂಧಃ ತಸ್ಯಮೋಚನಂ ನಿವಾರಕಂ— ಹೇಮವರ್ಣಂ ಸ್ವರ್ಣಚ್ಛಾಯಂ— ತಾಮರಸವಾಸಿನೀಸಖಂ ಲಕ್ಷ್ಮೀ ಸಹಾಯಂ— ಧಾಮವೈಷ್ಣವಂ— ಇಹಇದಾನೀಂ ಅತ್ರ ಸೂರ್ಯ ಬಿಂಬ ಇತಿವಾ—ಮೇಸುಖವಾನಂದಂ— ಸಾತಿ ಜನಯತಿ। ರಥೋದ್ಧತಾವೃತ್ತಂ। ರಾನ್ನರಾವಿಹರಥೋದ್ಧತಾಲಗಾವಿತಿ ಲಕ್ಷಣಾತ್ ॥

ಅರ್ಥ ॥ ಪುನಹ ಅರಳ್ದ ಭಕ್ತಿಯಿಂದ ( ವಿಶ್ವಾವಸು ಹೇಳುತ್ತಾನೆ ): ಸೂರ್ಯಕಿರಣ ಗಳಿಂದ ಅರಳಿದ ಕಮಲಗಳ ಓಪಾದಿ ಕಣ್ಣುಳ್ಳಂಥಾ, ಭಕ್ತಜನರುಗಳ ಸಂಸಾರ ಬಲೆ ಬಿಡಿಸುವಂಥಾ, ಭಂಗಾರ ಬಣ್ಣ ಉಳ್ಳಂಥಾ, ತಾಮರಸವಾಸಿನಿಸಖಂ ಅಂದರೆ ಲಕ್ಷ್ಮಿಯು ಕೂಡ ಸಖ್ಯತ್ವ ಉಳ್ಳಂಥಾ ವಿಷ್ಣುತತ್ವವು ಈಗ ನನಗೆ ಸುಖವನ್ನು ಹುಟ್ಟಿಸುತ್ತೆ.

ಕೃಶಾನುಃ॥

ಮೂ। ಕಿಮರೆ ಕೇವಲಂ ನಿರ್ಘೃಣೋಪಿ ನಾರಾಯಣೋಭವತಾ
ವಿವೇಕಲೋಭವತಾ ಸ್ತವಭಾಜನೀಕ್ರಿಯತೆ॥ ೧೯ ॥

ಟೀಕಾ ॥ ಕಿಮಿತಿ। ಕೇವಲಂ ಅತ್ಯಂತಂ, ನಿರ್ಘೃಣಃ ನಿರ್ದಯಃ ಸ್ತವಸ್ಯ ಭಾಜನೀ ಕ್ರಿಯತೆ ಪಾತ್ರೀ ಕ್ರಿಯತೆ ॥

ಅರ್ಥವು । ಎಲೆಲೆ! ಶಾನೆ ನಿರ್ದಯೆಯುಳ್ಳವನಾದ ನಾರಾಯಣನು ಕೂಡ ಅವಿವೇಕಿ ಮತ್ತು ಲೋಭಿಯಾದ ನಿನ್ನಿಂದ ಹೊಗಳಿಕೆಗೆ ಪಾತ್ರನಾಗಿ ಮಾಡಲ್ಪಡುತ್ತಾನೆ?

ಮೂ। ತಥಾಹಿ ॥ ಶ್ಲೋ। ಸ್ವೇನಾದೌ*ನಿಖಿಲಂ ಜಗದ್ವಿರಚಿತಂ
ಸ್ವೇನೈವ ಸಂರಕ್ಷಿತಂ। ಭಿಂದನ್ ಹಂತಮುಕುಂದ ಏಷವಿಧೃತಾ
ನಂದೋಹಿ ನಿಂದೋಚಿತಃ। ಉತ್ಪಾದ್ಯ ಸ್ವಯಮುತ್ತಮಾನ್
ಫಲತರೂನುಲ್ಲಾಸ್ಯ ಚಾರೂದಕೈರುನ್ಮತ್ತೋಪಿ ಕಿಮುಚ್ಛಿನತ್ತಿ
ಜಗತಿ ಛಿತ್ವಾಪಿ ಕಿಂನಂದತಿ ॥ ೨೦ ॥

ಟೀಕಾ ॥ ಸ್ವೇನೇತಿ। ಹಿಯಸ್ಮಾದೇಷಃ ಸ್ತವಭಾಜನೀಕೃತಃ— ಮುಕುಂದಃ ನಾರಾಯಣಃ ಸ್ವೇನಆತ್ಮ ನೈವ ಚತುರ್ಮುಖ ರೂಪೇಣ—ವಿರಚಿತಂ—ಸ್ವೇನ ವಿಷ್ಣುರೂಪೇಣ ಸಂರಕ್ಷಿತಂ ನಿಖಿಲಂಜಗದ್ಭಿಂದನ್— ಸ್ವಯಮೇವೇತಿಶೇಷಃ—ರುದ್ರರೂಪಸ್ಸನ್ನಿತ್ಯರ್ಥಃ— ನಚೈತಾವದೇವ—ವಿಧೃತಾನಂದಃ— ಅತಏವನಿಂದೋ ಚಿತಃ—ನತುಸ್ತುತ್ಯುಚಿತ ಇತ್ಯರ್ಥಃ — ಹಂತೇತಿಖೇದೆ—ಉನ್ಮತ್ತೋಪಿ—ಸ್ವಯಮುತ್ತಮಾನ್ ಫಲತರೂ ನುತ್ಪಾದ್ಯ— ಚಾರುಭಿರುದಕೈರುಲ್ಲಾಸ್ಯ ವರ್ಧಯಿತ್ವಾ ಉಚ್ಛಿನತ್ತಿಕಿಂ— ಕಿಂಚ— ಛಿತ್ವಾಚ ನಂದತಿಕಿಂ— ನಚಿನತ್ತ್ಯೇವ ನನಂದತ್ಯೇವೇತ್ಯರ್ಥಃ। ವೈಧರ್ಮ್ಯೇಣ ಪ್ರತಿವಸ್ತೂಪಮಾ— ಶಾರ್ದೂಲ ವಿಕ್ರೀಡಿತಂ ವೃತ್ತಂ ॥

---

* ಸಕಲ ಮಿತಿ ಪಾಠಾಂತರಂ।

ಅರ್ಥ ॥ ಈ ನಾರಾಯಣನು, ಮೊದಲಲ್ಲಿ ತಾನೇ ಹುಟ್ಟಿಸಿದ ಮತ್ತು ತಾನೇ ಕಾಯಿದ ಸಂಪೂರ್ಣ ಜಗತ್ತನ್ನು ತಾನೇ ಅಳಿಸಿ ಆನಂದ ತಾಳಿ ಕೊಳ್ಳುವಂಥವನಾಗುತ್ತಾನೆ. ಆದದರಿಂದ ಅವನು ನಿಂದೆಗೆ ಅರ್ಹನಾದವನು. ಅನ್ಯೋ--ಲೋಕದಲ್ಲಿ ಹುಚ್ಚನಾದರೂ, ತಾನು ಹುಟ್ಟಿಸಿ, ಶೀನೀರಿನಿಂದ ಬೆಳಿಸಿದ ಇಂಪಾದ ಫಲ ಮರಗಳನ್ನು ತಾನೇ ಕಿತ್ತು ಹಾಕುವನೇ? ಕಿತ್ತು ಹಾಕಿಯೂ ಸಂತೋಷ ಬಡುವನೇ?

ಮೂ। ಶ್ಲೋ। ಸ್ವಾನುಜ್ಞಾಮನವಾಪ್ಯ ದರ್ಪಭರತಸ್ಸ್ವಾ
ಜ್ಞಾಂ ವಿಲಂಘೇತಯಃ ತಸ್ಯೈವೇಹತನೋತಿ ಲೌಕಿಕ ನೃಪ
ಶ್ಚಂಡೋಪಿದಂಡಂರುಷಾ। ಅಂತರ್ಯಾಮ್ಯಪಥೇ ಪ್ರವರ್ತ್ಯಭವಿ
ನೋಹಂತಸ್ವಯಂ ನಾರಕೇಯಸ್ತಾನ್ಪಾತಯತಿ ಕ್ರುಧಾಸತುನ
ಕಿಂ ನಾರಾಯಣೋನಿರ್ಘೃಣಃ ॥ ೨೧ ॥

ಟೀಕಾ ॥ ಕಿಂಚ । ಸ್ವೇತಿ ॥ ಯಃ ಮೂಢಃ—ದರ್ಪಭರತಃ ಗರ್ವಾತಿಶಯಾದ್ಧೇತೋಃ ಸ್ವಸ್ಯಲೌಕಿಕ ನೃಪಸ್ಯ ಅನುಜ್ಞಾಮನುಮತಿಂ—ಅನವಾಪ್ಯ—ಸ್ವಸ್ಯ ಆಜ್ಞಾಂ—ವಿಲಂಘೇತ ಅತಿಕ್ರಮೇತ—ಚಂಡಃ ಅತಿಕೋಪನೋಪಿ — ಲೋಕೇಭವಃ ಲೌಕಿಕಃ ನೃಪಃ— ರುಷಾಸ್ವಾಜ್ಞಾಲಂಘನಜನ್ಯಕೋಪೇನ— ತಸ್ಯ ಮೂಢಸ್ಯೈವ— ನತ್ವನಪರಾಧಿನಃ— ದಂಡಂ ಕರೋತಿ । ಯಃ ನಾರಾಯಣಃ— ಅಂತಃ ಮನಃ ಯಮಯತ್ಯಾಜ್ಞಾಪಯತೀತ್ಯಂತರ್ಯಾಮೀಸನ್ನತ ಏವಹಂತೇತ್ಯಾಶ್ಚರ್ಯೇ— ಸ್ವಯಮೇವ—ಭವಿನಃ— ಸಾಂಸಾರಿಕಜನಾನ್— ಅಪಥೇ ದುಷ್ಕರ್ಮಣಿ— ಪ್ರವರ್ತ್ಯ ಪ್ರವರ್ತಯಿತ್ವಾ— ಕ್ರುಧಾ ಅಸತ್ಕರ್ಮಜನ್ಯಕೋಪೇನ— ತಾನ್ಭವಿನಃನಾರಕೇ— ಪಾತಯತಿ ಬಾಧತ ಇತ್ಯರ್ಥಃ— ಸನಾರಾಯಣಸ್ತು— ನಿರ್ಘೃಣೋ ನಕಿಂ—ನಿರ್ಘೃಣ ಏವೇತ್ಯರ್ಥಃ । ಅತ್ರನಿರಪರಾಧೇಪಿ ದಂಡನಮಿತಿ ವಿಭಾವನಾಲಂಕಾರೇಣ ನಿರ್ಘೃಣತ್ವ ಸಮರ್ಥನಾತ್ಕಾವ್ಯಲಿಂಗ ಭೇದಃ । ಶಾರ್ದೂಲ ವಿಕ್ರೀಡಿತಂ ॥

ಅರ್ಥ ॥ ಈ ಲೋಕದಲ್ಲಿ ಬಹಳ ಶಿಟ್ಟುಳ್ಳ ಅರಸು ಕೂಡ, ತನ್ನ ಅಪ್ಪಣೆ ಪಡೆಯದೆ ತನ್ನ ಆಜ್ಞೆಯನ್ನು ಯಾರಾದರೂ ಬಹಳ ಹಮ್ಮಿಕೆಯಿಂದ ಮೀರಿದರೆ, ಶಿಟ್ಟಿನಿಂದ ಅವನನ್ನೇ ಮಾತ್ರ ಶಿಕ್ಷೆ ಕೊಡುತ್ತಾನೆ. ಆದರೆ ಈ ಆಶ್ಚರ್ಯ ನೋಡು! ಯಾವಾತನು ತಾನೇ ಅಂತರ್ಯಾಮಿಯಾಗಿ ( ಅಂದರೆ ಮನಸ್ಸಿಗೆ ಪ್ರೇರೇಪಣೆ ಮಾಡುವವನಾಗಿ ) ತಾನೇ ಸಾಂಸಾರಿಕ ಜನರುಗಳನ್ನು ಕೆಟ್ಟ ದಾರಿಯಿಂದ ನಡಿಸಿ, ಕೋಪದಿಂದ ಅವರನ್ನು ನರಕದಲ್ಲಿ ಇಳಿಸುತ್ತಾನೋ ಅಂಥ ನಾರಾಯಣನು ನಿರ್ದಯನಲ್ಲವೊ? ನಿರ್ದಯನೇ ಎಂಬ ತಾತ್ಪರ್ಯವು.

ವಿಶ್ವಾವಸುಃ ॥

ಮೂ। ಅಹೋತವಮತಿರತಿ ಸ್ಥೂಲಾಯತಃ ಪರಮಕಾರುಣಿಕಂ
ಭಗವಂತಂ ಪಂಕಜವಾಸಿನೀ ಪ್ರಾಣನಾಥಮಪಿ ಸ್ಪೃಶತಿತ್ವ~~ಶೋ~~ ಶ್ಲೋ

ಪಾಲಂಭಃ । ಆಕರ್ಣಯೇದಂ ॥೨೨ ॥

ಟೀಕಾ ॥ ಅಹೋಇತಿ । ಅಹೋ ಇತಿಖೇದೇ–ಮತಿಃ ಬುದ್ಧಿಃ ಅತಿಸ್ಥೂಲಾ ಅತಿಮೂಢಾ– ಉಪಾಲಂಭಃ ನಿಂದಾವಾಕ್ಯಂ–ಸ್ಪೃಶತಿ ವ್ಯಾಪ್ನೋತಿ– ತಮಪಿನಿಂದಸೀತ್ಯರ್ಥಃ । ಇದಂ ಕಾರುಣ್ಯ ಪ್ರಖ್ಯಾಪಕಂ ವಕ್ಷ್ಯಮಾಣ ಭಗವಚ್ಚರಿತಂ ॥

ಅರ್ಥ ॥ ಅಯ್ಯೋ ನಿನ್ನ ಬುದ್ಧಿಯು ಅತಿ ಮಂದವಾದದ್ದು, ಯಾಕಂದರೆ ನೀನು ಹೇಳುವ ನಿಂದೆಯ ಮಾತುಗಳು ಬಹು ಕರುಣೆಯುಳ್ಳ ಭಗವಂತನಾದ ಲಕ್ಷ್ಮೀ ಪತಿಯನ್ನು ಕೂಡ ತಗಲುತ್ತವೆ; ಕೇಳು ಹೇಳುತ್ತೇನೆ:

ಮೂ। ಶ್ಲೋ। ಚಿರಾಯ ಸಂಸೃತ್ಯುದಧೌಸಮಜ್ಜನಂ ನ ಮಜ್ಜನಂ ಮಜ್ಜನ ಇತ್ಯಧೋಕ್ಷಜಃ। ದಯಾಪಯೋಧಿಃ ಪರಿಗೃಹ್ಯದುರ್ಲಭಂ ನಿಜಂ ಪದಂಪ್ರಾಪಯತಿ ಸ್ವಯಂಪ್ರಭುಃ ॥ ೨೩ ॥

ಟೀಕಾ ॥ ಚಿರಾಯೇತಿ । ದಯಾಪಯೋಧಿಃ– ಅತಏವ–ಅಧೋಕ್ಷಜಃ ನಾರಾಯಣಃ –ಸಂಸೃತ್ಯುದಧೌ ಸಂಸಾರ ಸಮುದ್ರೇ–ಚಿರಾಯ ಆಸೃಷ್ಟಿ– ಮಜ್ಜನೇನ ಭ್ರಮಣೇನ ಸಹಿತಂ ಸಮಜ್ಜನಂ– ನಮಜ್ಜನಂ ನಮಂತಂ ಜನಂ ಭಕ್ತಂ –ಮಮಸಂಬಂಧೀ ಜನೋ ಮಜ್ಜನ ಇತಿ–ಪ್ರಭುಃ ಸರ್ವ ಸಮರ್ಥಃ –ಸ್ವಯಂ ಪರಿಗೃಹ್ಯ ಸ್ವೀಕೃತ್ಯ –ದುರ್ಲಭಂ ನಿಜಂ ಪದಂ ವೈಕುಂಠಂ ಪ್ರಾಪಯತಿ –ಅತ್ರದಯಾಪ್ರಭುತ್ವಯೋಃ ಕ್ರಮೇಣ ಸಂಸಾರಿಣಾಂ ಸ್ವಜನತ್ವೇನ ಸ್ವೀಕರಣ ವೈಕುಂಠ ಪ್ರಾಪಣ ಹೇತುತ್ವಾತ್ಕಾವ್ಯಲಿಂಗಭೇದಃ– ವಂಶಸ್ಥವೃತ್ತಂ ॥

ಅರ್ಥ ॥ ದಯೆಯ ಸಮುದ್ರನಾದ ನಾರಾಯಣ ಸ್ವಾಮಿಯು ಸಂಸಾರ ಕಡಲಿನಲ್ಲಿ ಬಹಳ ಕಾಲದಿಂದ ಹೊರಳ್ಯಾಡುವಂಥ ಭಕ್ತರುಗಳನ್ನು ಇವರು ನನ್ನವರೆಂದು ತಾನಾಗಿ ಸ್ವೀಕರಿಸಿ ಅವರನ್ನು ತನ್ನ ದುರ್ಲಭವಾದ ಸ್ಥಾನವನ್ನು ಕುರಿತು ಸೇರಿಸುತ್ತಾನೆ.

ಮೂ। ಕಿಂಚ ॥ ಶ್ಲೋ। ಲೀಲಾಲೋಲತಮಾಂ ರಮಾಮಗಣಯನ್ನೀಲಾಮನಾಲೋಕಯನ್ ಮುಂಚನ್ ಕಿಂಚ ಮಹೀಮಹೀಶ್ವರಮಯಂ ಮುಂಚಂ ಹರಾದ್ವಂಚಯನ್। *ಆಕರ್ಷನ್ ದ್ವಿಜರಾಜಮಪ್ಯತಿಜವಂಹಾಹಂತ ಲೋಕಾಂತರಾದ್ಗೋಪ್ತುಂ ಶೌರಿರುದಿತ್ವರತ್ವರ †ಉಪೈದ್ಗ್ರಾಹಗ್ರಹಾರ್ತಂಗಜಂ ॥ ೨೪ ॥

---

* ಸಂತ್ಯಜನ್ ದ್ವಿಜರಾಜಮಪ್ಯತಿ ಜವಾದ್ಧಾಹಂತ ಇತಿಪಾಠಾಂತರಂ। † ಉಪೈತ್ ಇತಿ ಅನ್ಯೋಪಾಠಃ ।

ಟೀಕಾ ॥ ಲೀಲೇತಿ । ಗ್ರಾಹೇಣ ಮಕರೇಣ ಗ್ರಹಾತ್ ಗ್ರಹಣಾತ್ ಆರ್ತಂ ಗಜಂ— ಕಿಮುತ ಮನುಷ್ಯಂ ಗೋಪ್ತುಂ ರಕ್ಷಿತುಂ— ಉದಿತ್ವರಾ ಆವಿರ್ಭವಂತೀ ತ್ವರಾ ಯಸ್ಯ ಸಃ— ಅತ ಏವ—ಶೌರಿಃ ನಾರಾಯಣಃ ಲೀಲಾಭಿಃ ಶೃಂಗಾರ ಚೇಷ್ಟಾಭಿಃ ಲೋಲತಮಾಂ ಅತ್ಯಂತಾಸಕ್ತಾಂ— ತಿಸೃಷ್ವಪೀದಂ ಯೋಜ್ಯಂ— ರಮಾಂ ಲಕ್ಷ್ಮೀಂ ಅಗಣಯನ್ ಅವಿಚಾರಯನ್—ನೀಲಾಂ ದೇವೀಂ ಅನಾಲೋಕಯನ್—ಕಿಂಚ ಮಹೀಂ ದೇವೀಂ ಮುಂಚನ್ —ಅಹೀಶ್ವರಮಯಂ ಶೇಷಸ್ವರೂಪಂ —ಮಂಚಂ ಶಯನಂ —ಹಠಾತ್—ವಂಚಯನ್ ತ್ಯಜಂಸ್ತ್ವರನ್—ಏತೇನ ಸ್ವಸೌಖ್ಯಾದಪಿ ಪ್ರಿಯತಮಂ ಸ್ವೀಯರಕ್ಷಣಮಿತಿ ಸೂಚ್ಯತೇ ಅತಿಜವಮಪಿ ದ್ವಿಜರಾಜಂ ಗರುಡಮಾಕರ್ಷಂಸ್ತನ್ನಿತಿ ಭಕ್ತಾರ್ತೇಃ ಕ್ಷಣಮಪ್ಯನುಪೇಕ್ಷ್ಯತಾ ಸೂಚ್ಯತೇ—ಲೋಕಾಂತರಾತ್ ವೈಕುಂಠಾತ್ ಉಪೈತ್ ಆಗತವಾನ್— ಏತೇಃ ಕರ್ತರಿ ಲುಙ್ ॥

ಅರ್ಥ ॥ ಮೊಸಳೆಯಿಂದ ಹಿಡಿಯಲ್ಪಟ್ಟದರಿಂದ ಪೀಡಿತವಾದ ಗಜೇಂದ್ರನನ್ನು ಸಲಹುವದಕ್ಕೋಸ್ಕರ ತ್ವರೆಯುಳ್ಳಂಥವನಾಗಿ, ನಾರಾಯಣನು ಶೃಂಗಾರ ಆಟಗಳಿಂದ ಯುಕ್ತಳಾಗಿ ತನ್ನಲ್ಲಿ ಆಸಕ್ತಳಾದ ಲಕ್ಷ್ಮೀಯನ್ನು ಎಣಿಕೆಯಲ್ಲಿ ತರದೆ, ನೀಲಾದೇವಿಯನ್ನು ನೋಡದೆ, ಮಹೀದೇವಿಯನ್ನೂ ಬಿಟ್ಟುಕೊಟ್ಟು, ಶೇಷರೂಪವಾದ ಮಂಚವನ್ನು ತ್ವರೆಯಿಂದ ತ್ಯಜಿಸಿ, ಅತಿವೇಗವುಳ್ಳವನಾದ ಗರುಡನನ್ನು ಕೂಡ ಹಿಂದೆಹಾಕಿ, ವೈಕುಂಠದಿಂದ ಬಂದಂಥವನಾದನು.

ಮೂ । ಶ್ಲೋ । ವೈಕುಂಠೋ *ಮಹತಾಹತಾಖಿಲ ಮಹಾರಂಭಂ
ಮದೇನೋಚ್ಚೈಶ್ಚಂಡಂ ಖಂಡಯಿತುಂ ಹಿರಣ್ಯಕಶಿಪುಂ † ವೇ
ದಂಡಮುತ್ಕಂಠಯಾ । ಸೈಂಹಂ ವೇಷಮಶೇಷ ಭೀಷಣ ಮಹೋ
ಗೃಹ್ಣನ್ ತ್ವರಾಗೌರವಾತ್ಪ್ರಹ್ಲಾದವ್ಯಸನಾಸಹಿಷ್ಣುರುದಗಾದಾ
ಕಂಠ ಕಂಠೀರವಃ ॥ ೨೫ ॥

ಟೀಕಾ ॥ ವೈಕುಂಠ ಇತಿ । ವೈಕುಂಠೋ ನಾರಾಯಣಃ ಮಹತಾ ಮದೇನ ಗರ್ವೇಣ ಹತಾ ಅಖಿಲಾಃ ಮಹಾಂತಃ ಆರಂಭಾಃ ದೈವಪಿತ್ರ್ಯ ಕರ್ಮಾಣಿ ಯೇನ ತಂ— ಅನ್ಯತ್ರ ಮದೇನ ಮದಜಲೇನ ಉಪಲಕ್ಷಿತಃ ಮಹಾನ್ ಆರಂಭಃ ನಿರ್ಮಾಣಾದಿವ್ಯಾಪಾರಃ ಯೇಷಾಂ ತೇ ಗೃಹಾರಾಮಾದಯಃ ಅಖಿಲಾಸ್ತೇ ಹತಾಃ ಯೇನ ತಂ—ಉಚ್ಚೈರುನ್ನತಂ— ಚಂಡಂ ಅತಿಕೋಪನಂ— ಹಿರಣ್ಯಕಶಿಪುಮೇವ ವೇದಂಡಂ ಗಜಮಿತಿ ವ್ಯಸ್ತರೂಪಕಂ ಖಂಡಯಿತುಂ—ಸೈಂಹಂ ಸಿಂಹಸಂಬಂಧಿ ಅಶೇಷ ಭೀಷಣಂ— ವೇಷಂ ರೂಪಂ—ಉತ್ಕಂಠಯಾ ಗಜಮಾರಣ ಸೌಕರ್ಯವಾಂಛಯಾ— ಗೃಹ್ಣನ್ ಸನ್— ಪ್ರಹ್ಲಾದಸ್ಯ ಹಿರಣ್ಯಕಶಿಪುಪುತ್ರಸ್ಯ ಭಕ್ತಸ್ಯ— ವ್ಯಸನಾಸಹಿಷ್ಣುಃ— ಅತ ಏವ ಆಕಂಠಂ ಕಂಠಪರ್ಯಂತಂ ಕಂಠೀರವಸ್ಸಿಂಹಸ್ಸನ್—ತ್ವರಾಯಾ ಗೌರವಾತ್ ಅತಿಶಯಾತ್—ಉದಗಾತ್—ಆವಿರ್ಬಭೂವ—ಅಹೋ ಇತ್ಯಾಶ್ಚರ್ಯೇ—ಅತ್ರ ಪುಂಡರೀಕಾಕ್ಷತ್ವಾಭಿಜ್ಞೇನ ಸ್ವದರ್ಶನಕ್ಷಣ ಏವ ತದ್ವ್ಯಸನಂ ನಿವರ್ತತೇ—ತಥಾಪಿ ಸಿಂಹತ್ವೇ ತಸ್ಯ ಸಿಂಹದೃಷ್ಟಿತ್ವಾತ್ತನ್ನಿವರ್ತೇತ ಇತಿ ಭಗವದಭಿಪ್ರಾಯ ಆಕಂಠ ಕಂಠೀರವ ಇತ್ಯನೇನ ಸೂಚ್ಯತೇ । ರೂಪಕಪರಿಕರಯೋಸ್ಸಂಸೃಷ್ಟಿಃ ॥

---

* ಮಹಸಾ ಇತಿ ಪಾಠಾಂತರಂ । † ವೇತಂಡ ಇತಿ ಪಾಠಾಂತರಂ ।

ಅರ್ಥ॥ ಬಹಳ ಮದೋನ್ಮತ್ತನಾಗಿ, ಶ್ರೇಷ್ಟವಾದ ಎಲ್ಲ ಕೆಲಸಗಳನ್ನು ಅಂದರೆ ದೈವ ಪಿತೃ ಕರ್ಮಗಳನ್ನು ಅಳಿಸಿದಂಥವನಾದ, ಉನ್ನತ ಮತ್ತು ಅತಿಭಯಂಕರವಾದ ಆನೆಯೋ ಎಂಬಂತೆ ಕಂಡು ಬರುವ ಹಿರಣ್ಯ ಕಶಿಪುವನ್ನು ಕೊಲ್ಲಲಿಕ್ಕೆ ನಾರಾಯಣನು ಉಗ್ರವಾದ ಸಿಂಹರೂಪವನ್ನು ಒತ್ತರಿಕೆಯಿಂದ ಧರಿಸಿಕೊಂಡು ಪ್ರಹ್ಲಾದನ ದುಃಖವನ್ನು ತಾಳಲಾರದೆ ಕೊರಳುಪರ್ಯಂತ ಸಿಂಹನಾಗಿ ಹಿರಿದಾದ ತ್ವರೆಯಿಂದ ಮೈದೋರಿದನು.

ಮೂ॥ ಅನ್ಯಚ್ಚ। ಶ್ಲೋ। ಅವೇಮವ್ಯಾಪಾರಾ ಕಲನಮತುರೀ ಸ್ಪರ್ಶಮಚಿರಾದನುನ್ಮೀಲತ್ತಂತು ಪ್ರಕರ ಘಟನಾಯಾಸಮಸಕೃತ್। ವಿಷೀದತ್ಪಾಂಚಾಲೀ ವಿಪದಪನಯೈಕ ಪ್ರಣಯಿನಃ ಪಟಾನಾಂ ನಿರ್ಮಾಣಂ ಪತಗ ಪತಿಕೇತೋರವತುನಃ ॥ ೨೬ ॥

ಟೀಕಾ ॥ ಅವೇಮೇತಿ। ವಿಷೀದಂತ್ಯಾಃ ದುಶ್ಶಾಸನ ಕೃತವಸ್ತ್ರಾಪಹರಣೇನ ದುಃಖಾಯಮಾನಾಯಾಃ ಪಾಂಚಾಲ್ಯಾಃ ದ್ರೌಪದ್ಯಾಃ-ಯಾವಿಪತ್ ವಸ್ತ್ರಾಪಹರಣರೂಪಾ-ತಸ್ಯಾಃ ಅಪನಯೇನಿವಾರಣೇ ವಿಷಯೇ-ಏಕಃ ಮುಖ್ಯಃ-ಪ್ರಣಯಃ ಪ್ರೇಮ ಅಸ್ಯಾಸ್ತೀತಿತದ್ವತಃ-ಪತಗಪತಿಕೇತೋಃ ಭಗವತ್ಸಂಬಂಧಿ-ವೇಮಾವಯನದಂಡಃ-ತುರೀ ತಂತುವೇಷ್ಟಿತತಿರ್ಯಕ್ಸೂಕ್ಷ್ಮದಾರುವಿಶೇಷಃ- ತಂತವಶ್ಚೇತಿ-ತ್ರಯಃ ಪಟಕಾರಣಾನಿ-ತೇಷಾಂ ಸಂಬಂಧೋನಾಸ್ತಿಯಸ್ಮಿನ್ ತಾದೃಶಂಪಟಾನಾಂ ನಿರ್ಮಾಣಂ ಸಂಪಾದನಂ-ನಃಅಸ್ಮಾನ್-ಅವತು ರಕ್ಷತು-ಶಿಖರಿಣೀವೃತ್ತಂ। ರಸೈರುದ್ರೈಶ್ಛಿನ್ನಾಯಮನಸಭಲಾಗಶ್ಶಿಖರಿಣೀತಿ ಲಕ್ಷಣಾತ್ ॥

ಅರ್ಥ॥ ದುಶ್ಶಾಸನನು ವಸ್ತ್ರಾಪಹರಣ ಮಾಡಿದರಿಂದ ದುಃಖಿತಳಾದ ದ್ರೌಪದಿಯ ಸಂಕಟವನ್ನು ನಿವಾರಿಸುವದರಲ್ಲಿ ಪ್ರೀತಿಯುಳ್ಳವನಾಗಿ ಶ್ರೀಕೃಷ್ಣನು ಮಗ್ಗದಕೋಲು ಲಾಳಿ ಮತ್ತು ನೂಲು ಈ ಮೂರೂ ಸಾಮಗ್ರಿಗಳಿಲ್ಲದೆ ವಸ್ತ್ರಗಳನ್ನು ನೇಯಿದನು. ಇಂಥ ಶ್ರೀಕೃಷ್ಣನ ವಸ್ತ್ರರಚನೆಯು ನಮ್ಮನ್ನು ಯಾವಾಗಲೂ ಪಾಲಿಸಲಿ.

ಮೂ। ಅಪರಂಚ ॥ ಶ್ಲೋ। ಕಾಕಶ್ಶೋಕಂ * ವ್ಯಜಹದಮಿತಂ ವೃದ್ಧಗೃಧ್ರೋಪ್ಯನೇಕಾನ್ ಲೋಕಾನ್ ಲೇಭೇಕುಶಲ ಮಗಮನ್ನಿರ್ವಿಷಾದಂ ನಿಷಾದಃ। ರಾಜ್ಯಂಪ್ರಾಪ್ತೌಕಪಿನಿಶಿಚರೌ ರಾಘವತ್ವೇಮುರಾರೇಃ ಪಾರೇವಾಚೋಜಯತಿ ಕರುಣಾ ಪಶ್ಯ ಪದ್ಮಾಸಖಸ್ಯ ॥ ೨೭ ॥

ಟೀಕಾ ॥ ಕಾಕಇತಿ। ಮುರಾರೇಃ-ಶೌರಿವದ್ವ್ಯಾಖ್ಯೇಯಂ-ರಾಘವತ್ವೇಭಗವತಃ ಶ್ರೀರಾಮಾವತಾರೆ-ಕಾಕಃ ಜಯಂತಶ್ಚ- ಅಮಿತಂಶೋಕಂವ್ಯಜಹತ್ ವೃದ್ಧೋ ಗೃಧ್ರೋಜಟಾಯುಶ್ಚ ಅನೇಕಾನ್

---

* ವ್ಯಸೃಜ ದಿತಿಪಾಠಾಂತರಂ।

ಲೋಕಾನ್ ಲೇಭೇ— ನಿಷಾದಃ ಶ್ವಪಚಃ ಗುಹಶ್ಚ ನಿರ್ವಿಷಾದಂ ಕುಶಲಂ ಅಗಮತ್— ಕಪಿನಿಶಿಚರೌ ವಾನರ ಪಿಶಾಚೌ ಸುಗ್ರೀವ ವಿಭೀಷಣೌಚ—ರಾಜ್ಯಂಪ್ರಾಪ್ತೌ— ಯತಸ್ತತಃ— ಪದ್ಮಾಸಖಸ್ಯಭಗವತಃ— ಕರುಣಾ ಕೃಪಾ—ವಾಚಾಂ ಪಾರೇಜಯತಿ—ವಕ್ತುಮಶಕ್ಯೇತ್ಯರ್ಥಃ—ಪಶ್ಯೇತಿ ವಾಕ್ಯಾರ್ಥ ಕರ್ಮಕಂ—ಮಂದಾ ಕ್ರಾಂತಾ||

ಅರ್ಥ॥ ಶ್ರೀವಿಷ್ಣುವಿನ ರಾಮಾವತಾರದಲ್ಲಿ ಜಯಂತನೆಂಬ ಕಾಕನು ಮೇರೆ ಇಲ್ಲದ ದುಃಖದಿಂದ ಬಿಡುಗಡೆ ಹೊಂದಿದನು; ಮುದಿಯಾದ ಗೃಧ್ರನೆಂದರೆ ಜಟಾಯುವು ಅನೇಕ ಲೋಕಗಳೆಂದರೆ ಸ್ವರ್ಗಗಳನ್ನು ಪಡೆದನು; ಶ್ವಪಚನಾದ ಗುಹನು ಮೋಕ್ಷ ವನ್ನು ಕುರಿತು ಮುಟ್ಟುವಂಥಾವನಾದನು; ಕೋಡಗನಾದ ಸುಗ್ರೀವನು ಮತ್ತು ರಾಕ್ಷ ಸನಾದ ವಿಭೀಷಣನು ರಾಜ್ಯವನ್ನು ಹೊಂದುವಂಥವರಾದರು; ನೋಡಪ್ಪಾ ಲಕ್ಷ್ಮೀ ಗೆಳೆಯನಾದ ನಾರಾಯಣನ ದಯೆಯು ವರ್ಣಿಸಲಳವಲ್ಲ!

ಮೂ। ತದೇವಂದೇವ ಪರಿಬೃಢೇ ದಯಾಪಯೋನಿಧಾವಪಿ ಉ ಪನ್ಯಸ್ತಂ ನೈರ್ಘೃಣ್ಯಂ ತವತಾವದ ನೈಪುಣ್ಯಮಪುಣ್ಯಫಲಂ ಬುದ್ಧೇಃ ಪಿಶುನಯತಿ ॥ ೨೮ ॥

ಟೀಕಾ ॥ ನನುಜಗತ್ಸಂಹರಣಸ್ಯ ಪ್ರಥಮಸ್ಯ ನರಕಪಾತನಸ್ಯ ದ್ವಿತೀಯಸ್ಯಚ ದೂಷಣಸ್ಯ ನೈ ರ್ಘೃಣ್ಯ ಪ್ರಯೋಜಕಸ್ಯ ನೈತಾವತಾಪ್ಯನುದ್ಧಾರಃ ದಾರುಣೇಷ್ವಪಿ ಸ್ವೀಯರಕ್ಷಣಸ್ಯ ನೈಸರ್ಗಿಕತ್ವಾ ದಿತ್ಯತ ಆಹ ॥ ತದಿತಿ ॥ ತತ್ತಸ್ಮಾತ್—ಪರಿಬೃಢೇಪ್ರಭೌ—ಏವಮುಕ್ತ ಪ್ರಕಾರಂ— ದಯಾಪಯೋನಿಧೌ— ಉಪನ್ಯಸ್ತಂ ಆರೋಪಿತಂ—ನೈರ್ಘೃಣ್ಯಂ—ಕರ್ತೃ—ಅ ಪುಣ್ಯಫಲಂ ತವಬುದ್ಧೇಃ ಅನೈಪುಣ್ಯಂ ಮೂಢ ತ್ವಂ— ಪಿಶುನಯತಿ ಸೂಚಯತಿ ॥

ಅರ್ಥ॥ ಆದದರಿಂದ, ಪೂರ್ವೋಕ್ತ ಪ್ರಕಾರವಾಗಿ ಕರುಣಾಸಮುದ್ರನಾದ ಪ್ರಭು ವಿನಲ್ಲಿ ನೀನು ಆರೋಪಿಸಿದ ಕ್ರೂರತ್ವವು ನಿನ್ನ ಪಾಪದ ಫಲವಾಗಿ ನಿನ್ನ ಬುದ್ಧಿಯ ಮೂರ್ಖತ್ವವನ್ನು ತೋರಿಸುತ್ತೆ.

ಮೂ। ಶೃಣುತಾವತ್। ಶ್ಲೋ। ಜೀವಾನಾಂದೃಷದಾದಿಮತ್ವ ಮಯುತಾಂಸ್ವರ್ಗಾಪವರ್ಗಾ ಸ್ಪದಂ ದೇಹಂ ದತ್ತವತಿಶ್ರಿಯಃ ಪ್ರಿಯತಮೇನ್ಯೈರ್ವೋಪಕಾರಸ್ಮೃತಿಃ। ದುಃಖೇ ಜಾತುಚಿದಾಗತೆ ಸ್ವಕಲಿತಾದ್ದುಷ್ಕರ್ಮಣಃ ಪಕ್ತ್ರಿಮಾನ್ನಾಥೆ ಹಂತನಿರಾಗಸಿ ವ್ಯಸನಿಭಿರ್ನೈರ್ಘೃಣ್ಯಮಾರೋಪ್ಯತೆ ॥ ೨೯ ॥

ಟೀಕಾ ॥ ಜೀವಾನಾಮಿತಿ। ದೃಷತ್ಪಾಷಾಣಃ ಆದಿಮಃ ಪ್ರಥಮಃ ಯೇಷಾಂ ತೇಷಾಂ ದೇಹಾನಾಂ ಭಾವಂ ತತ್ತ್ವಂ ಪಾಷಾಣ ಪಶ್ವಾದಿದೇಹಮಿತ್ಯರ್ಥಃ—ಅಯುತಾಂ ಪ್ರಾಪ್ತವತಾಂ—ಜೀವಾನಾಂ—ಸ್ವರ್ಗಸ್ಯ ಅಪವರ್ಗಸ್ಯ ಮೋಕ್ಷಸ್ಯಚ ಆಸ್ಪದಂ ಸಂಪಾದಕಂ—ಕರ್ಮಜ್ಞಾನದ್ವಾರೇತಿಭಾವಃ—ದೇಹಂ ಮನುಷ್ಯಶರೀ

ರಂ—ದತ್ತವತಿ ಶ್ರಿಯಃ ಪ್ರಿಯತಮೇ ವಿಷಯೇ—ಉಪಕಾರಸ್ಯ ತಾದೃಶದೇಹದಾನರೂಪಸ್ಯ ಸ್ಮೃತಿಃ ಚಿಂತಾ—ನಾಸ್ತ್ಯೇವ ಪ್ರತ್ಯುತಜಾತುಕದಾಚಿತ್ಸ್ವೇನಕಲಿತಾತ್ಕೃತಾತ್ಪಕ್ತ್ರಿಮಾತ್ಫಲಾಭಿಮುಖಾತ್— ದುಷ್ಕರ್ಮಣಃ ಪಾಪಾತ್—ದುಃಖೇ ಆಗತೇಸತಿ ವ್ಯಸನಿಭಿಃ ಶೋಚದ್ಭಿಃ ಜನ್ಯೈಃ—ನಿರಾಗಸಿನಿರಪರಾಧೇ—ದುಃಖಸ್ಯ ಸ್ವಪಾಪಜನ್ಯತ್ವಾದಿತಿಭಾವಃ— ನಾಥೇ ಜಗದೀಶ್ವರೇ ನೈರ್ಘೃಣ್ಯಂ ಆರೋಪ್ಯತೇ—ನವಸ್ತುತೋಸ್ತೀತ್ಯರ್ಥಃ— ಹಂತೇತ್ಯಾಶ್ಚರ್ಯೇ ||

ಅರ್ಥ॥ ಹೇಳುತ್ತೇನೆ ಕೇಳು: ಪಾಷಾಣ ಮೊದಲಾದ ನೀಚ ಶರೀರಗಳನ್ನು ಪಡೆಯುವ ಜೀವಗಳಿಗೆ ಸ್ವರ್ಗ ಮೋಕ್ಷ ಘಳಿಸಲಿಕ್ಕೆ ಅನುಕೂಲವಾದ ಮನುಷ್ಯ ಶರೀರವನ್ನು ಕೊಟ್ಟ ಲಕ್ಷ್ಮೀಗೆಳೆಯನಲ್ಲಿ ಜನರು ಉಪಕಾರ ಕೂಡ ನೆನಿಸುವದಿಲ್ಲವು; ಒಂದಾನುವೇಳೆ ತಾವು ಸ್ವತಹಾ ಮಾಡಿದ ಕೆಟ್ಟ ಕೆಲಸಗಳು ಹಂಣಾಗಿ ದುಃಖ ಬಂದೊದಗಲು ದುಃಖಿಜನಗಳು ನಿರಪರಾಧಿಯಾದ ಸ್ವಾಮಿಯಲ್ಲಿ ದಯಾಶೂನ್ಯತ್ವವನ್ನಿಡುತ್ತಾರೆ. ಇದೇನು ಆಶ್ಚರ್ಯ!

ಮೂ। ಹಂತ ಜಂತವಃ ಪಾಮರಾಃ ಸ್ವಾಪರಾಧಂ ಪರಮ ಕಾರುಣಿಕೇ ಪರಸ್ಮಿನ್ ಬ್ರಹ್ಮಣ್ಯಧ್ಯಸ್ಯಂತಿ ॥ ೨೦ ॥

ಟೀಕಾ ॥ ಹಂತೇತಿ ॥ ಪಾಮರಾಃ ನೀಚಾಃ ಸ್ವೇಷಾಂ ಅಪರಾಧಂ ಅನರ್ಥ ಸಂಘಟನಂ— ಕರುಣಾಶೀಲಮಸ್ಯ ಕಾರುಣಿಕ ಇತಿಠಕ್ ಅಧ್ಯಸ್ಯಂತಿ ಆರೋಪಯಂತಿ ॥

ಅರ್ಥ॥ ಅಹಹ! ಕೀಳು ಜನರು ಸ್ವಂತ ತಪ್ಪುಗಳನ್ನು ಅತ್ಯಂತ ಕೃಪಾಳುವಾದ ಪರ ಬ್ರಹ್ಮನಲ್ಲಿ ಆರೋಪಿಸುತ್ತಾರಲ್ಲವೆ.

ಮೂ। ತಥಾಹಿ। ಶ್ಲೋ। ಕ್ಲೇಶತ್ಯಾಗ ಕೃತೇಪಿತೇನ ಕರಣವ್ಯೂಹೇನದೇಹೇನಚ ಸ್ವಾನರ್ಥಂ ಬತಜಂತುರಾರ್ಜಯತಿ ಚೇನ್ಮಂತುರ್ನಿಯಂತುಃ ಕುತಃ। ಶಸ್ತ್ರೇಶತ್ರು ಜಯಾಯ ನೈಜ ಗುರುಣಾ ದತ್ತೇಥತೆ ನೈವಚೇತ್ಪುತ್ರೋ ಹಂತಿನಿಜಂ ವಪುಃಕಥಯ ರೇತತ್ರಾಪರಾಧೀತುಕಃ ॥ ೨೧ ॥

ಟೀಕಾ ॥ ಕ್ಲೇಶೇತಿ । ಜಂತುರ್ಜೀವಃ ಜಾತ್ಯೇಕ ವಚನಂ— ಕ್ಲೇಶಸ್ಯ ಸಂಸಾರದುಃಖಸ್ಯ ತ್ಯಾಗಕೃತೇ ವರ್ಜನಾರ್ಥಂ— ಅಪಿಃತೇನದತ್ತೇ ನೇತ್ಯುಭಯತ್ರಯೋಜ್ಯಂ—ಕರಣಾನಾಂ ಚಕ್ಷುರಾದೀಂದ್ರಿಯಾಣಾಂ ವ್ಯೂಹೇನ ಸಮೂಹೇನ— ದೇಹೇನಚ— ಸ್ವಂ ಸ್ವೀಯಂ ಅನರ್ಥಂ ದುಷ್ಕರ್ಮರೂಪಂ ಆರ್ಜಯತಿ ಚೇತ್ತದಾ— ನಿಯಂತುಃ ಭಗವತಃ—ಮಂತುಃ ಅಪರಾಧಃ—ಕುತೋಭವತಿ— ನಕುತೋಪೀತ್ಯರ್ಥಃ । ಉಕ್ತಾರ್ಥೇದೃಷ್ಟಾಂತಮಾಹ। ಶಸ್ತ್ರ ಇತಿ। ಪುತ್ರಃ— ನಿಜಃ ಸ್ವೀಯಏವನೈಜಃ ತೇನಗುರುಣಾಪಿತ್ರಾ— ಶತ್ರೂಣಾಂ ಜಯಾಯಶಸ್ತ್ರೇ ಖಡ್ಗೆದತ್ತೇಸತಿ— ಅಥತೇನಖಡ್ಗೇನ— ನಿಜಮೇವಶಿರಃ— ನತುಶತ್ರುಶಿರಃ—ಹಂತಿಚೇತ್‌ಘ್ನೇತ್ತಿಯದಿ— ತದಾ— ತತ್ರ ಪಿತೃ ಪುತ್ರ ಯೋರ್ಮಧ್ಯೇ ಅಪರಾಧೀಕಃ ಕಥಯ ॥

ಅರ್ಥ ॥ ಜೀವನು ದುಃಖ ಇಲ್ಲಪಡಿಸಿ ಕೊಳ್ಳುವದಕ್ಕಾಗಿ ಕೊಡಲ್ಪಟ್ಟ ಇಂದ್ರಿಯ ಸಮೂಹದಿಂದಲೂ ಶರೀರದಿಂದಲೂ ತನಗೆ ಕೇಡು ಉಂಟುಮಾಡಿಕೊಳ್ಳುತ್ತಾನಾದರೆ ದೇವರು ಹ್ಯಾಗೆ ತಪ್ಪುಗಾರನು? (ತಪ್ಪುಗಾರನಲ್ಲ ಎಂಬ ತಾತ್ಪರ್ಯವು ). ತಂದೆಯು ಮಗನಿಗೆ ಶತ್ರುವನ್ನು ಗೆಲುವದಕ್ಕೆ ಆಯುಧ ಕೊಡಲು ಅದೇ ಆಯುಧದಿಂದ ಮಗನು ತನ್ನ ಸ್ವಂತ ತಲೆ ಹೊಯಿದುಕೊಂಡರೆ ಅವರೊಳಗೆ ತಪ್ಪುಗಾರನ್ಯಾರೈಯ್ಯಾ? ಹೇಳು ನೋಡುವಾ? (ಮಗನೇ ತಪ್ಪುಗಾರನು ಎಂಬ ತಾತ್ಪರ್ಯವು).

ಮೂ ॥ ಕಿಂಬಹುನಾ। ಶ್ಲೋ। ಶಾಸ್ತ್ರಂ ಭೂರಿನಿಜಸ್ವರೂಪಮತ ಯೆ ಸ್ವಾರಾಧನಾರ್ಥಂ ವಪುಃ ಸ್ವಧ್ಯಾನಾಯ ಮನಶ್ಚ ಬುದ್ಧಿ ಮನಘಾಂ ಲಬ್ಧುಂ ಚತೀರ್ಥಾದಿಕಂ। ತತ್ತ್ವಾನ್ಯ ಪ್ಯುಪದೇಷ್ಟು ಮುತ್ತಮಗುರೂನ್ ದತ್ವಾನುಗೃಹ್ಣಾತಿನಃ ಸಂಸಾರೆತದಪಿಭ್ರ ಮೇ ಮಯದಿ ಕಿಂ ಕುರ್ವೀತ ಸರ್ವೇಶ್ವರಃ ॥ ೩೨ ॥

ಟೀಕಾ ॥ ಬಹು ನೋಕ್ತೇನ ಕಿಮಿತ್ಯರ್ಥಃ। ಶಾಸ್ತ್ರಮಿತಿ। ಸರ್ವೇಶ್ವರಃ ಭಗವಾನ್_ನಿಜಸ್ಯ ಸ್ವರೂಪಸ್ಯ ಸರ್ವತ್ರಪರಿಪೂರ್ಣಸ್ಯ ಮತಯೇವಿಜ್ಞಾನಾರ್ಥಂ_ಭೂರಿಶಾಸ್ತ್ರಂ ಶಾರೀರಕಸೂತ್ರಾದಿ ಸ್ವಸ್ಯಆರಾಧನಾರ್ಥಂ ಪೂಜನಾಯ_ವಪುಃ ಕರಚರಣಾದಿ_ ಸ್ವಧ್ಯಾನಾಯಚಮನಃ_ ಅನಘಾಂಬುದ್ಧಿಂ ಲಬ್ಧುಂಚ ತೀರ್ಥಾದಿಕಂ_ತತ್ತ್ವಾನಿ ಉಪನಿಷದಾದೀನಿ ಉಪದೇಷ್ಟುಮಪಿ ಉತ್ತಮ ಗುರೂನ್ ದತ್ವಾಪಿನಃ ಅಸ್ಮಾನ್ ಅನುಗೃಹ್ಣಾತಿ_ತದಪಿಏವಮನುಗ್ರಹೆ ಕೃತೇಪಿ_ ಸಂಸಾರೇಭ್ರಮೇಮ ವರ್ತೇಮ ಹಿ–ಯದಿ_ತದಾ_ಸರ್ವೇಶ್ವರಃ ಕಿಂಕುರ್ವೀತ_ತಥಾಚ ಜಗತ್ಸಂಹಾರನರಕಪಾತಾದಿಸರ್ವಂಕರ್ಮಾ ಯತ್ತಂನಭಗವತ್ಕೃತಮಿತಿನತಸ್ಯನೈರ್ಘೃಣ್ಯಾಲೇಶೋಪೀತಿಭಾವಃ ॥

ಅರ್ಥ ॥ ಸರ್ವ ಜಗತ್ತಿಗೂ ಒಡೆಯನಾದ ದೇವರು ಜನರುಗಳು ತನ್ನ ರೂಪ ವನ್ನು ತಿಳಕೊಳ್ಳುವದಕ್ಕಾಗಿ ಬಹಳ ಶಾಸ್ತ್ರಗಳನ್ನು ತನ್ನ ಪೂಜೆಮಾಡುವದ ಕ್ಕಾಗಿ ಹಸ್ತಪಾದಾದಿ ಶರೀರವನ್ನು, ತನ್ನ ಧ್ಯಾನಮಾಡುವದಕ್ಕಾಗಿ ಮನಸ್ಸುವನ್ನು ನಿಷ್ಪಾಪವಾದ ಬುದ್ಧಿಯನ್ನು ಘಳಿಸುವದಕ್ಕೆ ತೀರ್ಥಾದಿಗಳನ್ನು, ಮತ್ತು ತತ್ವಗಳು ಅಂದರೆ ಉಪನಿಷದಾದಿಗಳನ್ನು ಹೇಳಿ ಕೊಡುವದಕ್ಕೆ ಶ್ರೇಷ್ಠರಾದ ಗುರುಗಳನ್ನು ಕೊಟ್ಟು ನಮ್ಮ ಮೇಲೆ ದಯೆಮಾಡುತ್ತಾನೆ. ಆದಾಗ್ಯೂ ನಾವು ಪ್ರಪಂಚದಲ್ಲಿ ಸುಳಿ ಪಾಡಿದರೆ ಅದಕ್ಕೆ ದೇವರೇನು ಮಾಡ್ಯಾನು?

ವಿಶಾವ್ವಸುಃ ॥

ಮೂ ॥ ಇತಿಪರಿಕ್ರಾಮನ್ ಕಿಂಚಿದುತ್ತರ ಮುಪಸೃತ್ಯ್ಯಧಸ್ತಾ ದವ ಲೋಕ್ಯಸಖೇ ಸಕಲ ಪುರುಷಾರ್ಥ ಸಾಧನಾ ನುಷ್ಠಾನ

* ಸ್ಥಾನಭೂತಂ ತಾವದವಲೋಕಯ ಭೂಲೋಕಂ ಸಬಹುಮಾನಂ ॥ ೨೨ ॥

ಟೀಕಾ । ಇತೀತಿ । ಇತಿಉಕ್ತ್ವೇತಿಶೇಷಃ—ಏವಮಗ್ರೇಽಪಿ—ಪರಿಕ್ರಾಮ್ಯ ವಿಮಾನಂ ಗಮಯ್ಯ—ಉತ್ತರಂ ದೇಶಮುಪಸೃತ್ಯ ಪ್ರಾಪ್ಯ—ಸಕಲಾಃ ಚತ್ವಾರಃ ಪುರುಷಾರ್ಥಾಃ ಧರ್ಮಾದಯಃ ತತ್ಸಾಧನಾನಾಂ ಕರ್ಮಣಾಂ ಅನುಷ್ಠಾನಸ್ಯ ಸ್ಥಾನಭೂತಂ ॥

ಅರ್ಥ । ಈ ಪ್ರಕಾರವಾಗಿ ಹೇಳಿ, ಮುಂದೆ ವಿಮಾನವನ್ನು ನಡಿಸಿ, ಸ್ವಲ್ಪ ಬಡಗ ದಿಕ್ಕಿಗೆ ಸಮೀಪಿಸಿ ಕೆಳಗೆ ನೋಡಿ ವಿಶ್ವಾವಸು ಹೇಳುತ್ತಾನೆ, ಏನೆಂದರೆ: ಸಖೆ, ಎಲಾ ಗೆಳೆಯನೇ, ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲುಗು ಪುರುಷಾರ್ಥಗಳನ್ನು ಫಲಿಸಲಿಕ್ಕೆ ಸಾಧನವಾದ ಕರ್ಮಗಳನ್ನು ಮಾಡುವದಕ್ಕೆ ಎಡೆಯಾದ ಭೂಲೋಕವನ್ನು ಆದರದೊಡನೆ ನೋಡು.

ಮೂ ॥ ಶ್ಲೋ । ಸ್ವರ್ಗೌಕೋಭಿರದೋನಿವಾಸಿ ಪುರುಷಾರಬ್ಧಾತಿಶುದ್ಧಾಧ್ವರ ಸ್ವಾಹಾಕಾರವಷಟ್ಕ್ರಿಯೋತ್ಥಮಮೃತಂ ಸ್ವಾದೀಯ ಆದೀಯತೇ। ಆಮ್ನಾಯ ಪ್ರವಣೈ ರಲಂಕೃತಿ ಜುಷೇ ಮುಷ್ಯೈ ಮನುಷ್ಯೈ ಶ್ಶುಭೈಃ ದಿವ್ಯಕ್ಷೇತ್ರ ಸರಿತ್ಪವಿತ್ರ ವಪುಷೇ ದೇವ್ಯೈ ಚ ತಸ್ಯೈ ನಮಃ ॥ ೨೩ ॥

ಟೀಕಾ । ಸ್ವರ್ಗೇತಿ । ಸ್ವರ್ಗಃ ಓಕಃ ಸ್ಥಾನಂ ಏಷಾಂ ತೈರ್ದೇವೈಃ ಅಮುಷ್ಮಿನ್ ಭೂಲೋಕೇನಿವಾಸಿಭಿಃ ಪುರುಷೈಃ ಆರಬ್ಧೇಷು ಅನುಷ್ಠಿತೇಷು ಅತಿಶುದ್ಧೇಷು ಯಜಮಾನಾಪಚಾರಾದಿದೋಷರಹಿತೇಷು ಅಧ್ವರೇಷು ಯಾಗೇಷು ಸ್ವಾಹಾಕಾರವಷಟ್ಕ್ರಿಯಾಭ್ಯಾಂ ತದುಪಲಕ್ಷಿತಹವಿಸ್ತ್ಯಾಗಾಭ್ಯಾಂ ಉತ್ಥಂ ಸ್ವೀಕೃತಂ—ಸ್ವಾದೀಯಃ ರುಚ್ಯಂ—ಅಮೃತಂ ಹವಿಃ—ಆದೀಯತೇ ಸ್ವೀಕ್ರಿಯತೇ—ಆಮ್ನಾಯೇಷು ವೇದೇಷು ಪ್ರವಣೈಃ ವ್ಯಗ್ರೈಃ—ತದಧ್ಯಯನತದ್ವಿಹಿತಕರ್ಮಾನುಷ್ಠಾನತತ್ಪರೈರಿತಿಯಾವತ್—ಶುಭೈಃ ಮನುಷ್ಯೈಃ ಅಲಂಕೃತಿಜುಷೇ—ದಿವ್ಯೈಃ ಕ್ಷೇತ್ರೈಃ ಬದರೀ ಕೇದಾರಾದಿಭಿಃ ಸರಿದ್ಭಿಃ ಗಂಗಾದಿಭಿಃ ಪವಿತ್ರಂ ಪರಿಶುದ್ಧಂ ವಪುಃ ಶರೀರಂ ಯಸ್ಯಾಸ್ತಸ್ಯೈ ಅಮುಷ್ಯೈ ಪೃಥಿವ್ಯೈ ದೇವ್ಯೈ ನಮಃ ॥

ಅರ್ಥ । ಈ ಭೂಲೋಕದಲ್ಲಿ ಜೀವಿಸುವ ಪುರುಷರುಗಳಿಂದ ಮಾಡಲ್ಪಡುವ ಅತಿಶುದ್ಧವಾದ ಯಜ್ಞಗಳಲ್ಲಿ ಸ್ವಾಹಾಕಾರ ಮತ್ತು ವಷಟ್ಕಾರ ಕ್ರಿಯೆಗಳಿಂದ ಅರ್ಪಿಸಲ್ಪಡುವ ಹವಿಯಿಂದ ಉಂಟಾಗುವ ಸವಿಯಾದ ಅಮೃತವು ಸ್ವರ್ಗವನ್ನೇ ಸ್ಥಾನ ಮಾಡಿಕೊಂಡಿರುವ ದೇವರುಗಳಿಂದ ಸ್ವೀಕರಿಸಲ್ಪಡುತ್ತೆ. ವೇದಗಳಲ್ಲಿ ಮನಸ್ಸು ಹಾಕಿದವರಾದ ಶುದ್ಧ ಪುರುಷರುಗಳಿಂದ ಎಸೆಯುವ ಮತ್ತು ಶ್ರೇಷ್ಠವಾದ ಕ್ಷೇತ್ರ ನದಿಗಳಿಂದ ಪರಿಶುದ್ಧವಾದ ದೇಹವು

---

* ಹೇತು ಭೂತ ಮಿತಿ ಪಾಠಾಂತರಂ ।

ಈ ಭೂಮಿದೇವಿಗೆ ನಮಸ್ಕಾರವಿರಲಿ.

ಕೃಶಾನುಃ ॥

ಮೂ । ನನುಸನಾಕಗತೋ ಭವಾನ್ನ ಮಧ್ಯಮ ಲೋಕಂ
ನಮಸ್ಕರ್ತು ಮರ್ಹತಿ ॥ ೩೫ ॥

ಟೀಕಾ । ನನ್ವಿತಿ । ನನುಸಪೇ—ಮಧ್ಯಮ ಲೋಕಂ ಭೂಲೋಕಂ—ಅರ್ಹತಿ ಅರ್ಹಸೀತ್ಯರ್ಥಃ—ಶೇಷೇ ಪ್ರಥಮ ಇತಿಭವಚ್ಛಬ್ದಯೋಗಾತ್ ಪ್ರಥಮ ಪುರುಷಃ ।

ಅರ್ಥ । ಎಲಾ ಮಿತ್ರನೇ ಸ್ವರ್ಗಕ್ಕೇರಿದವನಾದ ನೀನು ಭೂಲೋಕವನ್ನು ಕುರಿತು ನಮಸ್ಕಾರ ಮಾಡಲಿಕ್ಕೆ ಪಾತ್ರನಲ್ಲವು.

ಮೂ । ಶ್ಲೋ । ಜನನ ಮರಣ ಕ್ವಾಧಿ ವ್ಯಾಧಿ ಪ್ರಭೇದ ಶುಭೇ
ತರಾ ಕಲನ ಮಲಿನಾ ಲೋಕಾಶೋಕಾತುರಾಶ್ಚ ಭುವಂಗತಾಃ ।
ತದಿಹಮದಿಭಿಃ ಕ್ಷುದ್ರೈಶ್ಛಿದ್ರೈಕ ಮಾರ್ಗಣ ತತ್ಪರೈಃ
ಪ್ರಭುಭಿರುದಿತ ಕ್ಷತ್ಯೈ ಕ್ಷಿತ್ಯೈ ಬುಧಸ್ಸ್ಪೃಹಯೇತ
ಕಃ ॥ ೩೬ ॥

ಟೀಕಾ । ಜನನೇತಿ । ಯತಃ ಭುವಂಗತಾಃ ಮನುಷ್ಯಾಃ— ಜನನಮರಣಾಭ್ಯಾಂ ಕ್ವಾಧಿಸ್ಸಂತಾಪಶ್ಚ ವ್ಯಾಧಿ ಪ್ರಭೇದಾಃ ಜ್ವರಾದಿರೋಗಾಶ್ಚ ಶುಭೇತರಾಣಿ ಅಶುಭಾನಿಚ ತೇಷಾಂ ಆಕಲನೇನ ಸಂಬಂಧೇನ ಮಲಿನಾಃ— ಶೋಕೇನಾತುರಾಃ ಪೀಡಿತಾಶ್ಚ— ತತ್ತಸ್ಮಾತ್—ಇಹಸ್ವರ್ಗೇಸ್ಥಿತಃ ಬುಧಃ ನತುಮೂಢಃ— ಕಃಪುಮಾನ್— ಕ್ಷುದ್ರೈಃ ಛಿದ್ರಾಣಾಂ ಪರಮರ್ಮಣಾಂ ಏಕಂ ಮುಖ್ಯಂ ಯಥಾತಥಾ ಮಾರ್ಗಣೇ ಅನ್ವೇಷಣೇ ತತ್ಪರೈಃ ಆಸಕ್ತೈಃ ಮದಿಭಿಃ ದುರಹಂಕಾರೈಃ ಪ್ರಭುಭಿಃ ಉದಿತಾಕ್ಷತಿರ್ಹಾನಿರ್ಯಸ್ಯಾಸ್ತಸ್ಯೈ—ಕ್ಷಿತ್ಯೈ ಪೃಥಿವ್ಯೈ ಸ್ಪೃಹಯೇತ— ಸ್ಪೃಹೇರೀಪ್ಸಿತ ಇತಿ ಸಂಪ್ರದಾನತ್ವಾಚ್ಚತುರ್ಥೀ । ಹರಿಣೀ ವೃತ್ತಂ ॥ ರಸಯುಗ ಹಯೈರ್ನ್ಸೌಮ್ರೌಸ್ಲೌಗೋ ಯದಾ ಹರಿಣೀ ತದಾ ಇತಿ ಲಕ್ಷಣಾತ್ ॥

ಅರ್ಥ । ಹುಟ್ಟು, ಸಾವು, ಸಂತಾಪ ಬೇರೆ ಬೇರೆ ರೋಗಗಳು ಮತ್ತು ಇತರ ಕೆಡಕುಗಳು ಇವುಗಳ ಸಂಬಂಧದಿಂದ ಭೂಮಿಯನ್ನು ಸೇರಿಕೊಂಡಿರುವ ಜನರುಗಳು ಮಲಿನರಾಗಿಯೂ ದುಃಖಿಗಳಾಗಿಯೂ ಪೀಡೆಯುಳ್ಳವರಾಗಿಯೂ ಇರುವರು. ಆದದರಿಂದ ಕೀಳರಾದ ಪರರ ಮರ್ಮಗಳನ್ನು ಹುಡುಕಿ ತೆಗೆಯುವದರಲ್ಲಿ ಆಸಕ್ತರಾದ ಮತ್ತು ಹಮ್ಮಿಕೆಯಿಂದ ಯುಕ್ತರಾದ ಅರಸರುಗಳಿಂದ ಹಾನಿ ಹೊಂದಿದ ಭೂಲೋಕವನ್ನು ಈ ಸ್ವರ್ಗದಲ್ಲಿರುವ ಯಾವ ಜಾಣನು ಬಯಸ್ಯಾನು ? (ಯಾವನೂ ಬಯಸಲಿಕ್ಕಿಲ್ಲೆಂಬ ಭಾವವು.)

ಮೂ । ಕಿಂಚ । ಶ್ಲೋ । ಬಾಲತ್ವೇವಾ ತರುಣಿಮನಿವಾ ಪ್ರಾಯ

ಶೊವಾರ್ಧಕೇವಾ ಮೃತ್ವಾ ಮರ್ತ್ಯಾಬತಯಮಭಟೈರ್ಮ
ಥ್ಯಮಾನಾ ವ್ಯಥಂತೆ। ಶ್ರೇಯಸ್ತೇಷಾಮಮಿತವಿಪದಾಂ ಜೀವ
ತಾಂವಾಕಿಮಾಸ್ತೆ ಕಸ್ಮಿನ್ ಗ್ರಾಮೆ ಪುನರ ನಡುಹಾಂ ಕರ್ಷ
ಣ ಕ್ಲೇಶಹಾನಿಃ ॥೩೭॥

ಟೀಕಾ ॥ ಬಾಲತ್ವ ಇತಿ । ಪ್ರಾಯಶ ಇತಿ ಸರ್ವತ್ರಯೋಜ್ಯಂ– ಬಾಲತ್ವೇವಾ ತರುಣಿಮನಿವಾ ವಾರ್ಧಕೇವಾ– ಮೃತ್ವಾಮರ್ತ್ಯಾಃ ಯಮಭಟೈಃ ಮಥ್ಯಮಾನಾಃ ನರಕೇಷು ಬಾಧ್ಯಮಾನಾಸ್ಸಂತಃ– ವ್ಯಥಂತೆ ದುಃಖಾಯಂತೆ– ಕಿಂಚ– ಅಮಿತವಿಪದಾಂ ತೇಷಾಂ ಜೀವತಾಂ ವಾಸತಾಂ ಕಿಂಶ್ರೇಯಃ ಆಸ್ತೆ– ನಕಿಮಪೀತ್ಯರ್ಥಃ– ಅನಡುಹಾಂ ವೃಷಭಾಣಾಂ ಲೋಕಪೂಜ್ಯಾನಾಂ ಕರ್ಷಣೇನ ಯಃ ಕ್ಲೇಶಃ ತಸ್ಯಹಾನಿಃ– ಕಸ್ಮಿನ್ ಗ್ರಾಮೇಸ್ತಿ– ನಕಸ್ಮಿನ್ನಪೀತಿಭಾವಃ । ಮಂದಾಕ್ರಾಂತಾ ॥

ಅರ್ಥ ॥ ವಾಡಿಕೆಯಾಗಿ ಮನುಷ್ಯರು ಚಿಕ್ಕತನದಲ್ಲಿ ಅಥವಾ ಎಳೆಯತನದಲ್ಲಿ ಅಥವಾ ಮುದಿಪ್ರಾಯದಲ್ಲಿ ಸತ್ತುಹೋಗಿ ಯಮಧರ್ಮನ ಬಂಟರುಗಳಿಂದ ಪೀಡಿಸಲ್ಪಟ್ಟಂಥವರಾಗಿ ದುಃಖವನ್ನು ಅನುಭವಿಸುತ್ತಾರೆ. ಮತ್ತು ಜೀವಂತರಾಗಿದ್ದರು ಕೂಡ ಅಪಾರ ಕಷ್ಟಗಳುಳ್ಳವರಾಗಿರುವದರಿಂದ ಅವರಿಗೆ ಏನು ಸುಖ ಉಂಟು? ( ಏನೂ ಸುಖ ಇಲ್ಲವೆಂಬ ತಾತ್ಪರ್ಯವು. ) ಎತ್ತುಗಳಿಗೆ ಕೃಷಿಯಿಂದ ಆಗುವ ದುಃಖಕ್ಕೆ ಯಾವ ಗ್ರಾಮದಲ್ಲಿ ಪರಿಹಾರ ಉಂಟು? ( ಯಾವ ಗ್ರಾಮದಲ್ಲಿಯೂ ಇಲ್ಲವೆಂಬ ತಾತ್ಪರ್ಯವು. )

ವಿಶ್ವಾವಸುಃ ॥

ಮೂ । * ಸತ್ಯಮೇವ ತಥಾಪಿ ಸಖೆ ಮಹ್ಯಾಶ್ರಯಂ ಮಾನುಷ
ಜನ್ಮ ಮಾದುದುಷಃ ॥ ೩೮॥

ಟೀಕಾ ॥ ಸತ್ಯಮಿತಿ ॥ ಸತ್ಯ ಮಿತ್ಯರ್ಥಾಂಗೀಕಾರೆ ॥

ಅರ್ಥ ॥ ಅಹುದು, ಆದಾಗ್ಯೂ ಪೃಥ್ವಿಯನ್ನು ಆಶ್ರಯಿಸಿಕೊಂಡ ಮನುಷ್ಯಜನ್ಮವನ್ನು ನಿಂದಿಸ ಬೇಡ.

ಮೂ । ಶ್ಲೋ । ರಾಮಃ ಕ್ಷೇಮಸ್ಯದಾತಾ ಭುವಿನನು ಮನುಜೊ
ರಾವಣಸ್ಯ ಪ್ರಹರ್ತಾ ತತ್ರಾತ್ರಃ ಕಿಂನಮರ್ತ್ಯಾಸ್ತ್ರಿ ದಶಕು
ಲ ಪತೆರ್ದೈತ್ಯ ಯುದ್ಧೆ ಸಹಾಯಃ ಕೃಷ್ಣೋ ವೃಷ್ಣೀಮದಂ

* ಸತ್ಯಂ ತಥಾಪಿಮಾ ಸ್ಮತ್ಸಖೆ ಮಹ್ಯಾಶ್ರಯಂ ಮನುಷ್ಯಂ ಜನ್ಮದೂದುಷಃ ॥

ಯೋಹರತ್ನರತಯಾನ ಶ್ರುತಃ ಕಿಂ ತ್ವಯಾಸೌ *ಕೇವಾ ದೇವಾಃ
ಪ್ರಭಾವಾತ್ಸ್ವಯಮತಿಶಯಿತಾ ಮಾನವಾದ್ದಾನವಾವಾ ॥ ೩೯ ॥

ಟೀಕಾ ॥ ರಾಮ ಇತಿ । ಭುವಿಕ್ಷೇಮಸ್ಯದಾತಾ ರಾಮೋದಾಶರಥಿಃ— ಮನುಜೋನನು— ಮನುಜ ಏವೇತ್ಯರ್ಥಃ—ತ್ರಿದಶಕುಲಪತೇರಿಂದ್ರಸ್ಯ— ದೈತ್ಯಯುದ್ಧೆ ಸಹಾಯಃ— ತಸ್ಯ ರಾಮಸ್ಯ ತಾತಃ ದಶರಥಃ— ಮರ್ತ್ಯಃ—ನಕಿಂ—ಮರ್ತ್ಯ ಏವೇತ್ಯರ್ಥಃ— ಯಃ ಕೃಷ್ಣಃ— ವೃಷ್ಣಃ ಇಂದ್ರಸ್ಯ— ಮದಂ ಅಹರತ ಗೋವರ್ಧನೋದ್ಧರಣಾದಿನೇತಿಭಾವಃ— ಅಸೌಕೃಷ್ಣಃ ನರತಯಾ ಮನುಷ್ಯತ್ವೇನ ಉಪಲಕ್ಷಿತಃ— ತ್ವಯಾ ಶ್ರುತಃ ನಕಿಂ— ಕೇವಾದೇವಾಃ— ಕೇವಾದಾನವಾಃ— ಸ್ವಯಂಪ್ರಭಾವಾನ್ಮಾನವಾತ್ ಅತಿಶಯಿತಾಃ ಸಂಜಾತಾತಿಶಯಾಃ— ನಕೇ ಪೀತ್ಯರ್ಥಃ । ಅತೋಮನುಷ್ಯಾ ದೇವತುಲ್ಯಾ ಏವೇತಿ ಪರಮಾರ್ಥಃ । ಸ್ರಗ್ಧರಾ ॥

ಅರ್ಥ ॥ ಭೂಲೋಕಕ್ಕೆ ಕ್ಷೇಮವನ್ನು ಇತ್ತ ರಾಮನು ಮನುಷ್ಯನಲ್ಲವೊ? (ಮನುಷ್ಯನೇ ಸರಿ.) ದೇವರ ಅರಸನಾದ ಇಂದ್ರನಿಗೆ ದೈತ್ಯರ ಕಾಳಗದಲ್ಲಿ ಸಹಾಯ ಮಾಡಿದ ಆ ರಾಮನ ತಂದೆ ದಶರಥನು ಮನುಷ್ಯನಲ್ಲವೊ? ಇಂದ್ರನ ಹಮ್ಮಿಕೆ ಇಳಿಸಿದ ಆ ಕೃಷ್ಣನು ಮನುಷ್ಯನೆಂತ ನೀನು ಕೇಳಲಿಲ್ಲವೊ? ದೇವರುಗಳಲ್ಲಿ ಆಗಲೀ ದಾನವರುಗಳಲ್ಲಿ ಆಗಲೀ ತಮ್ಮ ಸ್ವಂತ ಪರಾಕ್ರಮದಿಂದ ಮನುಷ್ಯನಿಗಿಂತ ಹಿರಿಯರೆಂದೆನ್ನಿಸಿ ಕೊಂಡವರ್‍ಯಾರು? (ಯಾರೂ ಇಲ್ಲ ಎಂಬ ತಾತ್ಪರ್ಯ.)

ಮೂ। ಕಿಂಚ। ಶ್ಲೋ। ಮಾಂಧಾತಾಚ ಭಗೀರಥಶ್ಚ ಸಗರೋ
ಮಾನ್ಯಃ ಕಕುತ್ಸ್ಥೋರಘುಃ ಪೂರುಸ್ಸೋಪಿಪುರೂರ ವಾಸ್ಸ
ಚ ಶಿಬಿಃ ಪುಣ್ಯಶ್ಚ ರುಕ್ಮಾಂಗದಃ। ವೈದೇಹೋನಹುಷಶ್ಚ
ಹೈಹಯ ಪತಿರ್ವೀರೋಯಯಾತಿರ್ನಳಃ ಪಾರ್ಥಶ್ಚೇತಿನೃಪಾಃ
ಪ್ರಶಸ್ತಯಶಸಃ ಪ್ರಾದುರ್ಬ ಭೂವುರ್ನಕಿಂ ॥ ೪೦ ॥

ಟೀಕಾ ॥ ನನುರಾಮಕೃಷ್ಣಯೋಃ ಭಗವದವತಾರತ್ವಾದ್ದಶರಥಸ್ಯ ತತ್ಪಿತೃತ್ವಾಚ್ಚ ತಥಾತ್ವೇಪಿ ತದನ್ಯೇನ ತಾದೃಶ ಇತ್ಯಾಶಂಕ್ಯಾಹ ॥ ಮಾಂಧಾತೇತಿ । ವೈದೇಹಃ ಜನಕಃ— ಪಾರ್ಥಃ ಧರ್ಮರಾಜಃ ಇತ್ಯೇತೆ ಪ್ರಶಸ್ತ ಯಶಸಃ ನೃಪಾಃ— ಭುವಿ ನ ಪ್ರಾದುರ್ಬಭೂವುಃ ಕಿಂ ॥

ಅರ್ಥ ॥ ಮಾಂಧಾತಾ, ಭಗೀರಥ, ಸಗರ, ಕಕುತ್ಸ್ಥ ವಂಶದಲ್ಲಿ ಹೆಸರು ಪಟ್ಟ ರಘು, ಪೂರು, ಪುರೂರವ, ಶಿಬಿ, ಪುಣ್ಯವಂತನಾದ ರುಕ್ಮಾಂಗದ, ವೈದೇಹ, ನಹುಷ, ಯಯಾತಿ, ನಳ, ಧರ್ಮರಾಜ, ಮೊದಲಾದ ಬಹಳ ಕೀರ್ತಿಪಟ್ಟ ಅರಸುಗಳು ಭೂಲೋಕದಲ್ಲಿ ವಿಜಯ ಗೈಯಲಿಲ್ಲವೊ?

---

* ಕೇತೇ ದೇವಾ ಇತಿ ಪಾಠಾಂತರಂ।

ಕೃಶಾನುಃ ||

ಮೂ| ಸಾರ್ಧಾಂಗೀಕಾರಂ| ಶ್ಲೋ| ಕಾಮಂಜನಾಃ ಕೇಪಿಗುಣಾ ಭಿರಾಮಾಃ ಕ್ಷಮಾತಲೇಸಂತು ಯುಗಾಂತರೇಷು| ಕಲೌಯುಗೇ ಸ್ಮಿನ್ ಗುಣಲೇಶವಂಧ್ಯಾಃ ಸರ್ವೇಪಿ ಖರ್ವೇತರ ದೋಷಭಾಜಃ || ೪೧ ||

ಟೀಕಾ|| ಕಾಮಮಿತಿ| ಕಾಮಂಗುಣಾಭಿರಾಮಾಃ ಕೇಪಿಕತಿಚಿನ್ಮಾಂಧಾತ್ರಾದಯಃ ಕ್ಷಮಾತಲೆ ಯುಗಾಂತರೇಷು ಕೃತಾದಿಷು ಸಂತು— ಅಸ್ಮಿನ್ ಕಲೌಯುಗೆ ಸರ್ವೇಪಿ ಗುಣಲೇಶೇನಾಪಿ ವಂಧ್ಯಾಃ ಶೂನ್ಯಾಃ ಖರ್ವೇತರಾನ್ ಮಹತಃ ದೋಷಾನ್ ಭಜಂತೀತಿ ತದ್ಭಜಶ್ಚ ಅತಃ ಪೃಥಿವ್ಯೈ ಕೋಪಿ ನ ಸ್ಪೃಹಯೇತೇತಿ ಪೂರ್ವೇಣಾಸಂಬಂಧಃ || ಉಪಜಾತಿಃ ||

ಅರ್ಥ || ಕೃಶಾನುವು ಅರ್ಧ ಒಡಂಬಡಿಕೆಯಿಂದ ಹೇಳುತ್ತಾನೆ: ಬೇರೆ ಯುಗಗಳಲ್ಲಿ ಅಂದರೆ ಕೃತಾದಿ ಮೂರು ಯುಗಗಳಲ್ಲಿ ಒಳ್ಳೆ ಗುಣಗಳಿಂದ ಭೂಷಿತರಾದವರು ಯಾರಾದರೂ ಭೂಲೋಕದಲ್ಲಿದ್ದರೆ ಇರಲಿ, ಈಗ ನಡಿಯುವ ಕಲಿಯುಗದಲ್ಲಿ ಎಲ್ಲರು ಲವಷ್ಟಾದರು ಗುಣ ಇಲ್ಲದಂಥವರು ಮತ್ತು ಮಹತ್ತಾದ ಪಾಪಗಳುಳ್ಳಂಥವರು.

ಮೂ| ಕಿಂಚ| ಶ್ಲೋ| ಮಂದೇತರ ಸ್ಮರಮಲೀಮಸಮಾನ ಸಾನಾಂ ಮನ್ಯುಃಸ್ಪೃಹಾದುರಭಿಮಾನ ಮದಾಸ್ಪದಾನಾಂ| ಕಾಲೇಕಲೌಕಲುಷತಃ ಕಲಿತೋದಯಾನಾಂ ದೋಷಾಯ ದೃಷ್ಟಿರಪಿಹಂತದುರೀಶ್ವರಾಣಾಂ || ೪೨ ||

ಟೀಕಾ|| ಮಂದೇತಿ|| ಮಂದೇತರಃ ಅನಲ್ಪಃ ಸ್ಮರಃ ಕಾಮಃ ತೇನಮಲೀಮಸಂ ಮಲಿನಂ ಮಾನಸಂ ಮನೋ ಯೇಷಾಂ ತೇಷಾಂ—ಮನ್ಯುಃ ಕ್ರೋಧಃ ಸ್ಪೃಹಾಲೋಭಃ ದುರಭಿಮಾನಃ ಮೋಹಃ ಮದಶ್ಚ ತದಾಸ್ಪದಾನಾಂ ಕಲೌಕಾಲೇ—ಕಲುಷತಃ ಪಾಪಾತ್—ಕಲಿತೋದಯಾನಾಂ ಘಟಿತಜನ್ಮನಾಂ ದುಷ್ಟಾನಾಂ ಈಶ್ವರಾಣಾಂ ರಾಜ್ಞಾಂ ದೃಷ್ಟಿಃ ದರ್ಶನಮಪಿ—ದೋಷಾಯ ಪಾಪಾಯ ಭವತಿ—ದುಷ್ಟತ್ವಂ ಮಾತ್ಸರ್ಯಂ| ವಸಂತತಿಲಕಾ|| ಉಕ್ತಾವಸಂತತಿಲಕಾತ ಭಜಾಜಗೌಗ ಇತಿಲಕ್ಷಣಾತ್||

ಅರ್ಥ || ಬಲವಂತನಾದ ಕಾಮನಿಂದ ಮಲಿನವಾದ ಮನಸ್ಸುಳ್ಳವರಾದಂಥಾ ಕೋಪ, ಲೋಭ, ಮೋಹ ಮದಗಳಿಗೆ ಎಡೆಯಾದಂಥಾ ದುಷ್ಕರ್ಮಮೂಲವಾಗಿ ಕಲಿಯುಗದಲ್ಲಿ ಜನ್ಮಕ್ಕೆ ಬಂದಂಥಾ ದುಷ್ಟ ಅರಸುಗಳ ದರ್ಶನ ಕೂಡ ಪಾಪಕ್ಕೆ ಕಾರಣವು.

ವಿಶ್ವಾವಸುಃ ||

ಮೂ| ತಥಾಪಿಸರ್ವಥಾ ಕಲಿಕಾಲಿಕಾ ಅಪಿ ಮಾನುಷಾ ನ ದೂಷ

ಣಿಯಾಃ ಯತಃ ಸರ್ವಕಾಲೇಪಿ ಕೇಚನ ಸಂತ್ಯೇವ ಸಾಧ
ವಃ ॥ ೪೩ ॥

ಅರ್ಥ ॥ ಆದಾಗ್ಯೂ, ಕಲಿಕಾಲದ ಸರ್ವ ಮನುಷ್ಯರು ದೂಷಣೆಗೆ ಪಾತ್ರರಲ್ಲವು; ಯಾಕೆಂದರೆ, ಎಲ್ಲ ಕಾಲದಲ್ಲಿಯೂ ಸತ್ಪುರುಷರು ಯಾರಾದರು ಇದ್ದೇ ಇರುತ್ತಾರೆ.

ಮೂ। ಪಶ್ಯ। ಶ್ಲೋ। ದುರಿತ ಭರಿತಕ್ಷೀಬ ಕ್ಷ್ಮಾಪಪ್ರಸಾದ ನಿರಾದರಾಃ ಕಮಲನಯನ ಸ್ವೈರಕ್ರೀಡಾ ಗೃಹಾಯಿತ ಹೃದ್ಗುಹಾಃ। ನಿಗಮಪದವೀ ನಿರ್ವಾಹಾಯ ಕ್ಷಿತಾವುದಿತಾಃಸ್ವಯಂ ಕತಿನ ಕೃತಿನಸ್ಸಂದೃಶ್ಯಂತೆ ಕಲಾವಪಿನಿರ್ಮಲಾಃ ॥೪೪॥

ಟೀ॥ ಪಶ್ಯೇತಿ ವಕ್ಷ್ಯಮಾಣ ವಾಕ್ಯಾರ್ಥ ಕರ್ಮಕಂ॥ ದುರಿತೇನ ಭರಿತಾನಾಂ ಪೂರ್ಣಾನಾಂ ಕ್ಷೀಬಾನಾಂ ಮತ್ತಾನಾಂ ಕ್ಷ್ಮಾಪಾನಾಂ ರಾಜ್ಞಾಂ ಪ್ರಸಾದೇವಿಷಯೇ ನಿರಾದರಾಃ–ಕಮಲನಯನಃ ವಿಷ್ಣುಃ–ಕಮಲಂ ಕುರಂಗಂ ನಯತಿಹಸ್ತಂ ಪ್ರಾಪಯತೀತಿ ಕಮಲನಯನಃ ಶಿವಶ್ಚ–ಸ್ಯಾತ್ಕುರಂಗೇಪಿಕಮಲ ಇತ್ಯಮರಃ – ತಯೋಃ ಸ್ವೈರಕ್ರೀಡಾ ಇಚ್ಛಾವಿಹಾರಾಸ್ತದರ್ಥಂ ಗೃಹವದಾಚರಂತ್ಯಃ ಗೃಹಾಯಿತಾಃ ಹೃದ್ಗುಹಾಃ ದಹರಾಕಾಶಾ ಯೇಷಾಂತೆ ಸಂತತ ಹರಿಹರಧ್ಯಾನ ಸಂಸಕ್ತಾಂತಃ ಕರಣಾಇತ್ಯರ್ಥಃ ಅತ ಏವನಿರ್ಮಲಾಃ ಸ್ವಯಮಾತ್ಮನಾ–ನಿಗಮಾನಾಂ ಪದವ್ಯೋಃ ಕರ್ಮಜ್ಞಾನಮಾರ್ಗಯೋಃ ನಿರ್ವಾಹಾಯ ಅನುಷ್ಠಾನಾಯ– ಕ್ಷಿತಾವುದಿತಾಃ– ಕೃತಿನಃ ಕುಶಲಾಃ– ಕತಿಕಿಯಂತಃ ಸಜ್ಜನಾಃ–ಕಲಾವಪಿ–ನಸಂದೃಶ್ಯಂತೆ–ಬಹವೋಪಿದೃಶ್ಯಂತ ಏವೇತ್ಯರ್ಥಃ–ಹರಿಣೀವೃತ್ತಂ ॥

ಅರ್ಥ ॥ ಪಾಪತುಂಬಿ ಮತ್ತರಾದ ಅರಸುಗಳ ಒಲವುವನ್ನು ಪಡೆಯಲಿಕ್ಕೆ ಉದ್ಯುಕ್ತರಾಗದಂಥ ಶಿವವಿಷ್ಣುಗಳ ಯಥೇಚ್ಛ ವಿಹಾರ ಮನೆಯೋಪಾದಿಯಾದ ಹೃದಯ ಗುಹೆಗಳುಳ್ಳಂಥ ಶುದ್ಧರಾದಂಥ ವೇದೋಕ್ತ ಮಾರ್ಗಗಳ ಅನುಷ್ಠಾನ ಮಾಡಲಿಕ್ಕೆ ಪೃಥ್ವಿಯಲ್ಲಿ ಜನ್ಮ ತಾಳಿಕೊಂಡಂಥ ಎಷ್ಟೋ ಮಂದಿ ಜ್ಞಾನಿಗಳು ಕಲಿಯುಗದಲ್ಲಿ ಕೂಡ ಕಣ್ಣಿಗೆ ಬೀಳುವದಿಲ್ಲವೋ? (ಬೀಳುತ್ತಾರೆ ಯಂಬಭಾವವು.)

ಮೂ। ಅಥಯದಿಮದೀಯೆವಚ ಸಿನವಿಸ್ರಂಭ ಸಂಭವಃ ತರ್ಹಿ ತತ್ರತತ್ರ ಸಂಚಾರ ಮಾರಚಯ್ಯ ತತ್ತದ್ಗುಣ ದರ್ಶನಂ ಕರವಾವೇತಿ ವಿಮಾನಮಗ್ರತಃ ಪ್ರಸ್ಥಾಪಯನ್ ಅಂಗುಲ್ಯಾನಿರ್ದಿಶ್ಯ ॥ ೪೫ ॥

ಟೀಕಾ ॥ ಅಥೇತಿ ಪ್ರಶ್ನೆ ವಿಸ್ರಂಭಸ್ಯ ವಿಶ್ವಾಸಸ್ಯಸಂಭವಃ ಸತ್ತಾ। ನಿರ್ದಿಶ್ಯಕಂಚಿತ್ ಪ್ರದೇಶಮಿತಿಶೇಷಃ ॥

ಅರ್ಥ ॥ ಇನ್ನೂ ನನ್ನ ಮಾತಿನಲ್ಲಿ ನಂಬಿಕೆ ಹುಟ್ಟದೆ ಇದ್ದರೆ ಅಲ್ಲ್ಯಲ್ಲಿ ಸಂಚಾರ ಮಾಡಿ ಅವರವರ ಗುಣಗಳನ್ನು ನೋಡುವಾ, ಎಂದು ಹೇಳಿ ಮುಂದೆ ನಡದು ವಿಮಾನವನ್ನು ನಿಲ್ಲಿಸಿ ಕೈಬೆರಳಿನಿಂದ ತೋರಿಸಿ (ವಿಶ್ವಾಸು ಹೇಳುತ್ತಾನೆ ಏನಂದರೆ:)

ಮೂ। ಶ್ಲೋ। ಇದಂ ಬದರಿಕಾಶ್ರಮಸ್ಥಲ ಮಿಹೈಷ ನಾರಾ
ಯಣಸ್ತಪಸ್ಯತಿ ನಮಸ್ಯತಾಂ ಸ್ಥಿರತಮಂ ತಮಶ್ಶೋಷಯನ್।
ವಿಕಾಸಿಧಿಷಣೋನ್ಮಿಷ ದ್ವಿಷಯ ವರ್ಜನಾಸ್ಸಜ್ಜನಾ ಜನಾರ್ದ
ನಮಹರ್ದಿವಂ ಭುಜಗಮಂಚ ಮಂಚಂತ್ಯಮೀ ॥ ೪೮ ॥

ಟೀಕಾ ॥ ಇದಮಿತಿ। ಇದಂ ಪುರೋವರ್ತಿ ದೇಶಃ–ಬದರಿಕಾಶ್ರಮೋನಾಮಸ್ಥಲಂ ದಿವ್ಯಕ್ಷೇತ್ರಂ– ಇಹ ಬದರಿಕಾಶ್ರಮೇ–ಏಷ ನಾರಾಯಣಃ–ನಮಸ್ಯತಾಂ ನಮಸ್ಕುರ್ವತಾಂ– ಸತಾಂ–ಸ್ಥಿರತಮಂ–ತಮಃ ಅಜ್ಞಾನಂ ಶೋಷಯನ್ ನಾಶಯಂತ್ಸನ್–ತಪಸ್ಯತಿ ತಪಶ್ಚರತಿ– ಸಜ್ಜನಾಃ ಅತಏವ ಅಮೀಮುಷಯಃ–ವಿಕಾಸಿನ್ಯಾಃ ತತ್ವಜ್ಞಾನ ರೂಪಪ್ರಕಾಶ ವತ್ಯಾಃ ಧಿಷಣಾಯಾಃ ಬುದ್ಧೇಃ ಉನ್ಮಿಷತ್ ಜಾಯಮಾನಂ–ವಿಷಯಾಣಾಂ ಶಬ್ದಾದೀನಾಂ ವರ್ಜನಂ ತ್ಯಾಗಃ ಯೇಷಾಂತೆ ತಥೋಕ್ತಾಸ್ಸಂತಃ– ಭುಜಗಃ ಶೇಷಃ ಮಂಚಃ ಶಯನಂ ಯಸ್ಯತಂ–ಜನಾರ್ದನಂ–ಅಹರ್ದಿವಂ ದಿನೇದಿನೆ ಅಂಚಂತಿ ಪೂಜಯಂತಿ। ಪೃಥ್ವೀ ॥

ಅರ್ಥ ॥ ಇದೇ ನೋಡು. ನಮ್ಮ ಎದುರಿಗೆ ಇರುವದು ಬದರಿಕಾಶ್ರಮವೆಂಬ ಸ್ಥಳವು. ಇಲ್ಲಿ ನಾರಾಯಣ ಸ್ವಾಮಿಯು ಭಕ್ತರ ದಟ್ಟವಾದ ಅಜ್ಞಾನಕರುಗತ್ತಲೆಯನ್ನು ಬೆಳಗಿಸುವಂಥವನಾಗಿ ತಪಶ್ಚರ್ಯೆ ಮಾಡುತ್ತಿದ್ದಾನೆ. ಇದೇ ಕಾರಣದಿಂದ ಸಾಧುಜನಗಳು ಜ್ಞಾನದಿಂದ ಅರಳಿದ ತಮ್ಮ ಬುದ್ಧಿಗೆ ವಿಷಯ ಇಚ್ಛೆ ಇಲ್ಲಮಾಡಿಸಿ ಕೊಂಡಂಥವರಾಗಿ, ಸರ್ಪವೇ ಮಂಚವಾದ ಶ್ರೀ ನಾರಾಯಣನನ್ನು ಪೂಜಿಸುತ್ತಾರೆ.

ಕೃಶಾನುಃ ॥

ಮೂ। ಸಖೇ ತವಾತ್ರ ಗುಣವತ್ತಾ ಸಮರ್ಥನಂ ನರೋಚತೆ ಮ
ಹ್ಯಂ ॥ ೪೯ ॥

ಟೀಕಾ ॥ ಹೇಸಖೆ–ತವ ಸಂಬಂಧಿ–ಅತ್ರಬದರಿಕಾಶ್ರಮೆ–ಗುಣಾಃ ಭಗವತ್ಸಾನ್ನಿಧ್ಯಾದಯಃ ತದ್ವತ್ತಾಯಾಃ ಸಮರ್ಥನಂ ಪ್ರತಿಪಾದನಂ ॥

ಅರ್ಥ ॥ ಎಲಾ ಮಿತ್ರನೇ! ಈ ಬದರಿಕಾಶ್ರಮವನ್ನು ಕುರಿತು ನೀನು ಮಾಡಿದ ಬಣ್ಣಿಕೆಯು ನನಗೆ ಇಷ್ಟವಲ್ಲವು.

ಮೂ। ಶ್ಲೋ। ಯದತ್ರ ಜಾಗರ್ತಿ ಶಿಲಾಸಮಂಹಿಮಂ ಸುಶೀ
ತಲಾ ಗಂಧವಹಾಶ್ಚ ದುಸ್ಸಹಾಃ। ಜಲಾವ ಗಾಹಾಚ್ಚಕಿತೋ ಜ

ನಸ್ನಾತಃ ಕುತ್ರಸ್ತ್ವನುಷ್ಠಾಸ್ಯತಿ ಕರ್ಮನಿರ್ಮಲಂ ॥ ೪೮ ॥

ಟೀಕಾ ॥ ಕುತಃ ॥ ಯದಿತಿ ॥ ಯದ್ಯಸ್ಮಾದತ್ರ ಬದರಿಕಾಶ್ರಮೇ ಶಿಲಾಸಮಂ ಘನೀಭಾವಾತ್ಪಾಷಾಣ ತುಲ್ಯಂ–ಹಿಮಂ–ಜಾಗರ್ತಿವರ್ತತೇ–ಸುಶೀತಲಾಃ ಹಿಮಸಂಸ್ಪರ್ಶಾದತಿ ಶೀತಲಾಃ–ಅತಏವ ದುಸ್ಸಹಾಃ ಸೋಢುಮಶಕ್ಯಾಃ–ಗಂಧವಹಾಃ ವಾತಾಶ್ಚ– ಜಾಗ್ರತಿ– ತತಃ ಉತ್ಕೋಭಯಸ್ಮಾತ್ಕಾರಣಾತ್– ಜಲೇ ಅತಿಶೀತೇ ಅವಗಾಹಾತ್ಸ್ನಾನಾಚ್ಚಕಿತಃ ಜನಃ– ನಿರ್ಮಲಂಕರ್ಮಕುತಃ– ಕುತಃ ಕಥಂ– ಅನುಷ್ಠಾಸ್ಯತಿ ಕರಿಷ್ಯತಿ– ಸರ್ವಸ್ಮಿನ್ನಪಿ ಕರ್ಮಣಿ ಸ್ನಾನಸ್ಯ ಪ್ರಾಥಮಿಕತ್ವಾದಿತಿಭಾವಃ ॥ ವಂಶಸ್ಥಂ ॥

ಅರ್ಥ ॥ ಇಲ್ಲಿ ಪಾಷಾಣದಂತಿರುವ ಗಟ್ಟಿಕಟ್ಟಿದ ಮಂಜು ಬಹಳವಾಗಿರುತ್ತದೆ. ಅದರ ಸ್ಪರ್ಶಮೂಲವಾಗಿ ಸಹಿಸಲಳವಲ್ಲದ ಅತ್ಯಂತ ತಂಪಿನಿಂದ ಕೂಡಿರುವ ಘಾಳಿ ಬೀಸುತ್ತದೆ. ಆದದರಿಂದ ಅತಿ ತಂಪಾದ ನೀರಿನಲ್ಲಿ ಸ್ನಾನ ಮಾಡಲಿಕ್ಕೆ ಅಂಜುವ ಜನರು ಶುದ್ಧವಾದ ಕರ್ಮ ಹ್ಯಾಗೆ ಮಾಡ್ಯಾರು?

ವಿಶ್ವಾವಸುಃ ॥

ಮೂ। ಅಸ್ಮನ್ಮತಾನುಕೂಲಮೇವೈತದ್ಭವತಿಭವದುಕ್ತಂ ॥ ೪೯ ॥

ಟೀಕಾ ॥ ಅಸ್ಮದಿತಿ। ಏತದ್ಭವತಃ ಉಕ್ತಂ ಶಿಲಾಸಮಂ ಹಿಮಮಿತ್ಯಾದಿ ವಾಕ್ಯಂ–ಅಸ್ಮಾಕಂ ಮತೇಇಷ್ಟೇ ಬದರಿಕಾಶ್ರಮ ಮಹತ್ವೇ ವಿಷಯೇ ಅನುಕೂಲಮೇವ ॥

ಅರ್ಥ ॥ ನೀನು ಹೇಳಿದ್ದು ನನ್ನ ಅಭಿಪ್ರಾಯಕ್ಕೆ ಸರಿಯಾಗಿದೆ.

ಮೂ। ಯತಃ। ಶ್ಲೋ। ಪರಮಹಿಮಯುತತ್ವಾತ್ಪ್ರಾಪ್ತ
ವೈಕುಂಠ ಸಾಮ್ಯಂಪದಮಿದಮುಪಯಾಂತಃ ಪಂಡಿತಾಶ್ಶಾಂತಿ
ಮಂತಃ। ಮುಹುರಿಹ ಸಮಯೇಷು ಸ್ನಾನಹೇತೋಸ್ಸರೋ
ಗಾಸ್ತದಪಿಭೃಶಮರೋಗಾಸ್ತಾರ್ಕ್ಷ್ಯಕೇತೋಃಪ್ರಸಾದಾತ್॥೫೦॥

ಟೀಕಾ ॥ ಪರಮೇತಿ ॥ ಪರಮೇಣ ಸಾಂದ್ರೇಣ ಹಿಮೇನ–ಪರೇಣ ಸರ್ವೋತ್ಕೃಷ್ಟೇನ ಮಹಿಮ್ನಾ ಮಹಾತ್ಮ್ಯೇನಚ–ಯುತತ್ವಾತ್ಪ್ರಾಪ್ತ ವೈಕುಂಠಸಾಮ್ಯಂ–ಇದಂ ಪದಂ ಬದರಿಕಾಶ್ರಮಂ–ಉಪಯಾಂತಃ– ಶಾಂತಿ ಮಂತಃ–ಪಂಡಿತಾಃ– ಯದ್ಯಪಿ ಇಹ ಬದರಿಕಾಶ್ರಮೇ–ಸಮಯೇಷು ಕರ್ಮಕಾಲೇಷು– ಸ್ನಾನಸ್ಯ ಹೇತೋಃ–ರೋಗಃ ಶೀತಬಾಧಾಮುಹುಃ ತೇನಸಹಿತಾಃ ಸರೋಗಾಃ–ಸರೋಗಚ್ಛಂತೀತಿ ಸರೋಗಾಶ್ಚ–ತದಪಿತಥಾಪಿ–ತೇ–ತಾರ್ಕ್ಷ್ಯಕೇತೋಃ ವಿಷ್ಣೋಃ–ಪ್ರಸಾದಾದನುಗ್ರಹಾತ್ ಅರೋಗಾಃ ನಿಶ್ಚಿತಾಃ– ಭವಂತಿ–ಪ್ರಸನ್ನೇಭಗವತಿ ಕಿಂ ದುರ್ಲಭಮಿತಿಭಾವಃ– ಮಾಲಿನೀವೃತ್ತಂ ।ನನಮಯಯಯುತೇಯಂ ಮಾಲಿನೀ ಭೋಗಿಲೋಕೈರಿತಿ ॥

ಅರ್ಥ ॥ (೧) ಬಹಳ ಮಂಜು ಕೂಡಿರುವದರಿಂದ ವೈಕುಂಠಕ್ಕೆ ಸಮಾನವೆಂದೆನ್ನಿಸಿ ಕೊಳ್ಳುವ ಈ ಸ್ಥಳವನ್ನು ಕುರಿತು ಮುಟ್ಟಿದ ಶಾಂತರಾದ ಪಂಡಿತರು ಅಲ್ಲಿ ಕರ್ಮಾ

ಚರಣ ವೇಳೆಗಳಲ್ಲಿ ಸ್ನಾನ ಮಾಡುವದರಿಂದ ಪದೇ ಪದೆ ಶೀತಬಾಧೆ ಪಡುವರಾದಾಗ್ಯೂ, ವಿಷ್ಣುವಿನ ಕೃಪೆಯಿಂದ ನಿರೋಗಿಗಳಾಗಿರುವರು.

(೨) ಬಹಳ ಶ್ರೇಷ್ಠತೆಯಿಂದ ಯುಕ್ತವಾದದರಿಂದ ವೈಕುಂಠಕ್ಕೆ ತುಲ್ಯವಾದದ್ದೆನ್ನಿಸಿ ಕೊಳ್ಳುವ ಈ ಸ್ಥಾನವನ್ನು ಅಡೆದು ಶಾಂತರಾದ ಬುದ್ಧಿವಂತರು ಇಲ್ಲಿ ಕರ್ಮಾಚರಣ ಕಾಲಗಳಲ್ಲಿ ಸರ್ವದಾ ಸರೋವರಕ್ಕೆ ಹೋಗಿ ಸ್ನಾನಮಾಡುವರಾದಾಗ್ಯೂ ವಿಷ್ಣುವಿನ ದಯೆಯಿಂದ ಅವರು ಶೀತಬಾಧೆಯುಳ್ಳವರಾಗುವದಿಲ್ಲವು. ದೇವರ ದಯೆಯಿದ್ದರೆ ಏನೂ ಕೆಡಕು ಬರುವದಿಲ್ಲವೆಂಬ ತಾತ್ಪರ್ಯ.

ಮೂ॥ ಇತಿವಿಮಾನಮನ್ಯತಃ ಪ್ರಸ್ಥಾಪ್ಯಸಾಂಜಲಿಬಂಧಃ॥೫೧॥

ಅರ್ಥ॥ ಈ ಪ್ರಕಾರವಾಗಿ ಹೇಳಿ, ವಿಮಾನವನ್ನು ಮುಂದೆ ನಡಿಸಿ ಕೈ ಜೋಡಿಸಿ (ವಿಶ್ವಾವಸು ಹೇಳುತ್ತಾನೆ,)

ವಿಶ್ವಾವಸುಃ ॥

ಮೂ। ಶ್ಲೋ। ಸಾಕೇತಾಯನಮಃ ಪುರಾಯಭವತು ಸ್ತೋಕೇ
ತರ ಶ್ರೀಪುಷೇ* ನಾನಾದೋಷ ಮುಷೇತದಾಂತಿಕ†ಜುಷೇ ನದ್ಯೈ‡
ಸರಯ್ವೈನಮಃ। ಯೇಮೀತತ್ತ್ರಟ ಭೂಮಿಷು ಪ್ರವಿಲ ಸದ್ರೂ
ಪಾಶ್ಚಯೂ ಪಾಸ್ಥಿತಾಸ್ತೇಭ್ಯೋ ಭಾನುಕುಲೀನ ಕೀರ್ತಿಲತಿ
ಕೋಪುಷ್ಣಾಯಿತೇಭ್ಯೋನಮಃ ॥ ೫೨ ॥

ಟೀಕಾ ॥ ಸಾಕೇತಾಯೇತಿ। ಸ್ತೋಕೇತರಾಮನಲ್ಪಾಂ ಶ್ರಿಯಂಪುಷ್ಣಾತೀತಿಪುಷೇ—ಸಾಕೇತಾಯಪುರಾಯ ಅಯೋಧ್ಯಾಯೈ—ನಮಃ ಭವತು—ನಾನಾದೋಷಾನ್ ಪಾಪಾನಿಮುಷ್ಣಾತಿ ಹರತೀತಿಮುಷೇ— ತಸ್ಯ ಸಾಕೇತಸ್ಯ ಅಂತಿಕಜುಷೇ ಸಮೀಪಸ್ಥಿತಾಯೈ—ಸರಯ್ವೈನಾಮನದ್ಯೈ—ನಮಃ ಭವತು—ತತ್ತ್ರಟಭೂಮಿಷು ಪ್ರವಿಲಸದ್ರೂಪಾಃ— ಯೇಮೀಯೂಪಾಃ ಯಜ್ಞೀಯಪಶುಬಂಧದಾರೂಣಿ ಸ್ಥಿತಾಃ— ಭಾನುವಂಶೆ ಸೂರ್ಯಕುಲೇಭವಾಃ ಭಾನುಕುಲೀನಾಃ ರಾಜಾನಃ ತೇಷಾಂ ಕೀರ್ತಯ ಏವಲತಿಕಾಃ ಲತಾಸ್ತಾಸಾಂ ಮುಪಷ್ಣಾಃ ಅಂತಿಕಾಶ್ರಯಾ ಇವಾಚರಂತೀತ್ಯುಪಷ್ಣಾಯಿತೇಭ್ಯಃ ಯೂಪೇಭ್ಯಃ ನಮಃ ॥

ಅರ್ಥ॥ ಬಹಳವಾದಶಿರಿಯನ್ನು ತಾಳಿಕೊಂಡಿರುವ ಅಯೋಧ್ಯಾ ಪಟ್ಟಣವನ್ನು ಕುರಿತು ನಮಸ್ಕಾರವಿರಲಿ. ಹಲವು ಪಾಪಗಳನ್ನು ತೊಳೆಯುವಂಥಾ ಆ ಅಯೋಧ್ಯಾ ಪಟ್ಟಣದ ಸಮೀಪದಿಂದ ಹರಿಯುವ ಸರಯೂ ನದಿಯನ್ನೂ ಕುರಿತು ನಮಸ್ಕಾರವಿರಲಿ; ಆ ಹೊಳೆಯ ಕರೆ ಸ್ಥಳಗಳಲ್ಲಿ ಶೋಭಾಯಮಾನ ರೂಪವಾಗಿ ತೋರುವ ಯಜ್ಞಾ

---

* ಜುಷೆ † ಅಂತರಜುಷೆ ‡ ದೇವ್ಯೈ ಇತಿಪಾಠಾಂತರಾಣಿ ॥

ಸ್ತಂಭಗಳಿವೆ. ಸೂರ್ಯವಂಶದ ಅರಸುಗಳ ಕೀರ್ತಿಯೇ ಬಳ್ಳಿ, ಆ ಬಳ್ಳಿಗೆ ಆಧಾರ ಕೊಡುತ್ತವೆ ಎಂಬಂತೆ ಕಾಣುವ ಆ ಸ್ತಂಭಗಳನ್ನು ಕುರಿತು ನಮಸ್ಕಾರವಿರಲಿ.

ಮೂ। ಪುನಃ ಪುರೀಂ ನಿರೀಕ್ಷ್ಯ ಸ ಭಕ್ತ್ಯುನ್ಮೇಷಂ ॥ ೫೩ ॥

ಅರ್ಥ॥ ಮರಳಿ ಅದೇ ಪಟ್ಟಣವನ್ನು ನೋಡಿ ಭಕ್ತಿಯ ವಿಕಸನದಿಂದ (ಹೇಳುತ್ತಾನೆ)

ಮೂ। ಶ್ಲೋ। ಭವಸಾಗರ ಶೋಷಣೇನ ಪಶ್ಯಚ್ಚರಣಾಂತಃ
ಪುರಜೀವನೌಷಧೇನ ರಜಸಾ ರಘುನಾಥ ಪಾದಭಾಜಾಂರಚಿತಾಂ
ಹಃ ಪ್ರಶಮಾಮಿಮಾಂನಮಾಮಿ ॥ ೫೪ ॥

ಟೀಕಾ॥ ಭವೇತಿ। ಭವಸ್ಯೇವ ಸಾಗರಸ್ಯ ಶೋಷಣೇನ–ಪಶ್ಯಚ್ಚರಣಾಸ್ಯ ಗೌತಮಸ್ಯಾಂತಃ ಪುರ ಮಹಲ್ಯಾ ತಜ್ಜೀವನೌಷಧೇನ ಶಾಪಪ್ರಾಪ್ತ ಪಾಷಾಣಭಾವ ನಿವಾರಕೇಣ ರಘುನಾಥ ಪಾದಭಾಜಾ ರಜಸಾ– ರಚಿತಃ ಕೃತಃ ಅಂಹಸಾಂ ಪಾಪಾನಾಂ ಪ್ರಶಮಃ ಯಯಾತಾಮಿಮಾಮಯೋಧ್ಯಾನ್ನ ಮಾಮಿ। ಔಪಚ್ಛಂದಸಿಕಂ ವೃತ್ತಂ॥

ಅರ್ಥ॥ ಪ್ರಪಂಚ ಕಡಲು ಒಣಗಿಸಿದಂಥ ಮತ್ತು ಗೌತಮಋಷಿಯ ಹೆಂಡತಿ ಅಹಲ್ಯೆಯನ್ನು ಪಾಷಾಣಸ್ಥಿತಿಯಿಂದ ಬಿಡಿಸಿ ಜೀವಂತಳಾಗಿ ಮಾಡಿದಂಥ ಶ್ರೀರಾಮ ಚಂದ್ರನ ಅಡಿ ದೂಳಿಯಿಂದ ಈ ಪಾಪ ಶಾಂತಿಯುಂಟು ಪಡಿಸುವ ಅಯೋಧ್ಯಾಪಟ್ಟ ಣವನ್ನು ಕುರಿತು ನಮಸ್ಕಾರ ಮಾಡುತ್ತೇನೆ.

ಮೂ। ಪುನಸ್ಸಾನು ಸ್ಮರಣರೋಮಾಂಚಂ ॥ ೫೫ ॥

ಟೀಕಾ॥ ಪುನರಿತಿ ಅನುಸ್ಮರಣಂ ಶ್ರೀ ರಾಮಧ್ಯಾನಂ ॥

ಅರ್ಥ॥ ತಿರಿಗಿ ಶ್ರೀ ರಾಮನನ್ನು ಧ್ಯಾನಿಸಿ ರೋಮಾಂಚಗೊಂಡು,

ಮೂ। ಶ್ಲೋ। ಕಲ್ಯಾಣೋಲ್ಲಾಸಸೀಮಾ ಕಲಯತು ಕುಶಲಂ
ಕಾಳಮೇಘಾಭಿರಾಮಾ ಕಾಚಿತ್ಸಾಕೇತಧಾಮಾ ಭವಗಹನ ಗತಿ
ಕ್ಲಾಂತಿಹಾರಿ ಪ್ರಣಾಮಾ। ಸೌಂದರ್ಯಾದ್ಧ್ರೀಣಕಾಮಾಧೃತ ಜನ
ಕಸುತಾ ಸಾದರಾಪಾಂಗದಾಮಾ ದಿಕ್ಷುಪ್ರಖ್ಯಾತ ಭೂಮಾ
ದಿವಿಷದಭಿನುತಾದೇವತಾರಾಮನಾಮಾ ॥ ೫೬ ॥

ಟೀಕಾ ॥ ಕಲ್ಯಾಣೇತಿ॥ ಸೀಮಾಮರ್ಯಾದಾ–ಭವಸ್ಸಂಸಾರ ಏವಗಹನಂ ಅರಣ್ಯಂ ತಸ್ಮಿನ್ಗತ್ಯಾಭ್ರ ಮಣೇನಯಾಕ್ಲಾಂತಿಃ ಶ್ರಮಃ ತಸ್ಯಾಹಾರೀನಾಶಕಃ ಪ್ರಣಾಮಃ ಯಸ್ಯಾಸ್ಸಾ–ಹ್ರೀಣಃ ಲಜ್ಜಿತಃ–ಅಪಾಂಗ ದಾಮಾ ಕಟಾಕ್ಷಪಜ್ತಿಃ–ಭೂಮಾಅತಿಶಯಃ ದಿವಿಷದಃ ದೇವಾಃ–ಕುಶಲಂಕ್ಷೇಮಂ ಕಲಯತುಘಟಯತು–

ಸ್ರಗ್ಧರಾ ||

ಅರ್ಥ॥ ಕ್ಷೇಮದ ಪೆರೆಯುವಿಕೆಗೆ ಮೇರೆಯಾದಂಥ, ಕಾರ್ಮುಗಿಲಿನಂತೆ ಚಂದವುಳ್ಳಂಥಾ, ಸಾಕೇತವೆಂದರೆ ಅಯೋಧ್ಯಾ ನಗರಿಯೆ ಮನೆಮಾಡಿಕೊಂಡಿರುವಂಥಾ, ಯಾವಳ ನಮಸ್ಕಾರದಿಂದ ಸಂಸಾರರೂಪವಾದ ಅಡವಿಯಲ್ಲಿ ತಿರುಗಾಟದಿಂದ ಉಂಟಾಗುವ ಬಳಲಿಕೆ ಪರಿಹರವಾಗುತ್ತದೊ ಅಂಥವಳಾದಂಥ, ಮದನನನ್ನು ನಾಚಿಸುವ ಸೊಗಸು ಉಳ್ಳಂಥ, ಜನಕರಾಜನ ಕುಮಾರ್ತಿಯ ಪ್ರೀತಿಯುಕ್ತನಾದ ನೇತ್ರಕಟಾಕ್ಷಕ್ಕೆ ನೆಲೆಯಾದಂಥ, ನಾಲ್ದಿಕ್ಕುಗಳಲ್ಲಿಯೂ ಹೆಸರೆತ್ತ ದೊಡ್ಡಸ್ಥಿಕೆಯುಳ್ಳಂಥ, ದೇವತೆಗಳಿಂದ ಮದಿಸಲ್ಪಡುವಂಥ, „ ರಾಮ ” ಎಂಬ ಹೆಸರುಳ್ಳಂಥ ಯಾವಳೋ ಒಬ್ಬ ದೇವತೆಯು ಕ್ಷೇಮವನ್ನು ಈಯುವಂಥವಳಾಗಲೀ.

ಮೂ। ಶ್ಲೋ। ದಶಾನನ ಕುಶಾಸನತ್ರಸದಶೇಷ ಲೋಕವ್ಯಥಾ ವಿಲೋಪಕರ ಕೋಪಕೋವ ಸುಮತೀ ಸುತಾವಲ್ಲಭಃ। ಕೃಪಾರಸಮಪಾರ ಸಂಸೃತಿಪಯೋನಿಧೇಸ್ತಾರಕಂ ಕೃಷೀಷ್ಟ ಋಷೀಷ್ಟ ಕೃತ್ಕೃಪಣತೈಕತಾನೇಮಯಿ ॥ ೩೭ ॥

ಟೀಕಾ || ದಶಇತಿ। ದಶಾನನಸ್ಯ ರಾವಣಸ್ಯ ಕುತ್ಸಿತಾತ್ ಶಾಸನಾತ್ತ್ರಸತೋಬಿಭ್ಯತಃ– ಅಶೇಷಸ್ಯ ಲೋಕಸ್ಯ ವ್ಯಥಾಯಾವಿಲೋಪಂ ನಾಶಂ ಕರೋತೀತಿ ತತ್ಕರಃ ಕೋಪಃಯಸ್ಯಸಃ ತತ್ಕಃ– ಋಷೀಣಾಂ ಇಷ್ಟಕೃತ್–ವಸುಮತೀ ಸುತಾಯಾಃ ಸೀತಾಯಾಃ ವಲ್ಲಭೋರಾಮಃ ಕೃಪಣತಾಯಾದೀನತ್ವಸ್ಯ ಏಕತಾನೇಮುಖ್ಯಾಶ್ರಯೇಮಯಿ ಅಪಾರಾಯಾಸ್ಸಂಸೃತೇ ಸ್ಸಂಸಾರಸ್ಯೈವಪಯೋನಿಧೇರ್ನಿಸ್ತಾರಕಂ– ಕೃಪಾರಸಂ– ಕೃಷೀಷ್ಟ ಕುರ್ಯಾತ್– ಕರೋತೇರಾಶಿಷಿಲಿಜೆರೂಪಂ ||

ಅರ್ಥ ॥ ರಾವಣನ ಕ್ಷುದ್ರವಾದ ದಂಡಣೆಯಿಂದ ಭಯಪಟ್ಟ ಸಂಪೂರ್ಣ ಲೋಕದ ದುಃಖವನ್ನು ನಾಶ ಪಡಿಸಿದಂಥಾ ಮುನಿಸು ಉಳ್ಳವನಾದ, ಋಷಿಗಳ ಬಯಕೆಗಳನ್ನು ತೀರಿಸುವಂಥಾವನಾದ ಸೀತಾಪತಿಯು ಬಡತನಕ್ಕೆ ಮುಖ್ಯನೆಲೆಯಾದ ನನ್ನಲ್ಲಿ ದಾಟಲಳವಲ್ಲದ ಸಂಸಾರಸಮುದ್ರನನ್ನು ದಾಟಿಸುವಂಥಾ ದಯಾರಸವನ್ನು ಮಾಡಲೀ.

ಮೂ। ಶ್ಲೋ। ಸಜಯತಿ ಚಿತ್ರಚರಿತ್ರೋಯಸ್ಯಹಿಪರ ಚರಣಪುಷ್ಕರ ಕರೇಣುಃ। ಮಹಿಷೀಮೃಷಿ ಸಿಂಹಸ್ಯ ಪ್ರಾಜೀಜನದಪಿವೃಷೋದಯೆ ಹೇತುಃ ॥ ೩೮ ॥

ಟೀಕಾ॥ ಸಇತಿ॥ ಯಸ್ಯ ಶ್ರೀ ರಾಮಸ್ಯ ಸಂಬಂಧೀ– ವೃಷಸ ವೃಷಭಸ್ಯ ಧರ್ಮಸ್ಯಚ ಉದಯೆ ಉತ್ಪತ್ತೌ ಹೇತುಃ– ಅಪಿಃಕ್ರಮೇಣ ವಿರೋಧಂಸಮುಚ್ಚಯಂಚದ್ಯೋತಯತಿ– ಪರಾಣಿ ಚರಣಾನಿ

ಪುಷ್ಕರಂ ಶುಂಡಾಗ್ರಂಚ ಯಸತಾದೃಶಃ ಕರೇಣುಃ ಗಜಃ— ವರಸ್ಯ ಚರಣ ಪುಷ್ಕರಕಸ್ಯ ಪಾದ ಪದ್ಮಸ್ಯರೇಣುಃ ಗಜ ಇತಿಚ—ಋಚ್ಛತಿಗಚ್ಛತಿ ಜಾನಾತಿ ತತ್ವಂಚೇತಿ—ಋಷೇಃ ಸಿಂಹಸ್ಯ—ಋಷಿ ಶ್ರೇಷ್ಠಸ್ಯ ಗೌತಮಸ್ಯಚ ಮಹಿಷೀಮ್ ಮಹಿಷ ಸ್ತ್ರಿಯಂ— ಪತ್ನೀಂ—ಪ್ರಾಜೀಜನತ್ ಜನಯಾಮಾಸ— ಅತ ಏವ— ಚಿತ್ರಮಾಶ್ಚರ್ಯಕರಂ ಚರಿತ್ರಂ ಯಸ್ಯಸಃ ಶ್ರೀ ರಾಮಃ— ಜಯತಿ— ವಿರೋಧಾನು ಪ್ರಾಣಿ ತಃ ಸಭಂಗೇನ ಅನ್ಯತ್ರಾ ಭಂಗೇನ ಶ್ಲೇಷೇಣ ಅನು ಪ್ರಾಣಿತ ಇತಿ ತ್ರಯಾಣಾಮಂಗಾಂಗಿಭಾವೇನ ಸಂಕರಃ—ಗೀತ್ಯಾರ್ಯಾ ಲಕ್ಷಣಂ ತ್ವಾರ್ಯೋಃ ಪೂರ್ವಾರ್ಧಗತಂ ||

ಅರ್ಥ || ಧರ್ಮ ಉತ್ಪತ್ತಿಗೆ ಮೂಲವಾದ ರಾಮನ ಶ್ರೇಷ್ಠವಾದ ಪಾದ ಕಮಲಗಳ ದೂಳು ಗೌತಮ ಋಷಿಯ ಹೆಂಡತಿಯನ್ನು ಹುಟ್ಟಿಸಿದರಿಂದ ಆ ರಾಮನು ಲೋಕದಲ್ಲಿ ಆಶ್ಚರ್ಯ ಕರವಾದ ಚರಿತ್ರ ಉಳ್ಳವನಾಗಿ ಮೆರೆಯುತ್ತಾನೆ.

ಮೇಲಿನ ಶ್ಲೋಕಕ್ಕೆ ಇನ್ನೊಂದು ಅರ್ಥ ಉಂಟು; ಏನೆಂದರೆ: ಒಂದು ವಿಚಿತ್ರವಾದ ಆನೆಯು ಲೋಕದಲ್ಲಿ ಮೆರೆಯುತ್ತದೆ. ಅದು ಎಂಥಾದ್ದೆಂದರೆ: ಶ್ರೇಷ್ಠವಾದ ಪಾದವೇ ಸೊಂಡಿಲಾಗಿ ಉಳ್ಳಂಥಾದ್ದು, ಮತ್ತು ಋಷಿಯೆಂಬ ಹೆಸರಿನ ಒಂದು ಸಿಂಹಕ್ಕೆ ಹೆಂಡತಿಯಾದ ಒಂದು ಎಮ್ಮೆಯನ್ನು ಹುಟ್ಟಿಸಿ, ಎತ್ತಿನ ಜನ್ಮಕ್ಕೆ ಕಾರಣ ರೂಪವಾದದ್ದು. ( ಈ ಅರ್ಥ ದಲ್ಲಿ ಸ್ವಾರಸ್ಯ ಇಲ್ಲವು. ಅದು ಕವಿಯ ಶಬ್ದಕ್ರೀಡೆ ಸಾಮರ್ಥ್ಯ ಮಾತ್ರ ತೋರಿಸುತ್ತೆ.)

ಮೂ । ಶ್ಲೋ । ಶ್ರೇಯಾಂಸಿಭೂಯಾಂಸಿಮಹಾವದಾನ್ಯಃ ಪ್ರೇ
ಯಾನ್ಸದೇಯಾ ಜ್ಜನಕಾತ್ಮಜಾಯಾಃ । ಕಾಕಾಯ ಕಂಕಾಯಚ
ಯೊದಿತೇಷ್ಟಂ ದಾಶಾಯ ಕೀಶಾಯಚ ರಾಕ್ಷಸಾಯ ॥ ೫೯ ॥

ಟೀಕಾ || ಶ್ರೇಯಾಂಸೀತಿ || ಯಃ ರಾಮಃ ಕಾಕಾಯ ವಾಯಸಾಯ— ಕಂಕಾಯ ಗೃಧ್ರಾಯ— ದಾಶಾಯ ಕೈವರ್ತಾಯ— ಕೀಶಾಯಕಪಯೇ— ರಾಕ್ಷಸಾಯಚ— ಜಯಂತ ಜಟಾಯುಗುಹ ಸುಗ್ರೀವ ವಿಭೀಷಣೇಭ್ಯಃ— ಇಷ್ಟಮರ್ಥಂ— ಅದಿತದತ್ತವಾನ್— ದದಾತೇರ್ಲುಙಿ ತಙಿ ಸ್ಥಾಘ್ವೋ ರಿಚ್ಚೇ ತೀತ್ವಂ— ಜನಕಾತ್ಮಜಾಯಾಃ ಪ್ರೇಯಾನ್ ಪ್ರಿಯಃ— ಮಹಾವದಾನ್ಯಃ— ಸರಾಮಃ—ಭೂಯಾಂಸಿಶ್ರೇ ಯಾಂಸಿದೇಯಾತ್‌ದದಾತೇರಾಶಿಷಿಲಿಙಿರೂಪಂ— ಇಂದ್ರ ವಜ್ರಾವೃತ್ತಂ ||

ಅರ್ಥ || ಸೀತಾದೇವಿಗೆ ಪ್ರಿಯನಾದ ಮತ್ತು ದಾನಿಗಳಲ್ಲಿ ಅತಿ ಉದಾರನಾದ ರಾಮನು ಜಯಂತನೆಂಬ ಕಾಕಾಸುರನಿಗೂ, ಜಟಾಯು ಎಂಬ ರಣಹದ್ದಿಗೂ, ಬೆಸ್ತನಾದ ಗುಹನಿಗೂ, ಕಪಿಯಾದ ಸುಗ್ರೀವನಿಗೂ, ರಾಕ್ಷಸನಾದ ವಿಭೀಷಣನಿಗೂ ಅಪೇಕ್ಷಿತವನ್ನು ಕೊಡುವಂಥಾತನಾದನು. ಅಂಥಾ ರಾಮನು ಅನೇಕ ಭಾಗ್ಯಗಳನ್ನು (ನಮಗೆ) ಪಾಲಿಸುವಂಥವನಾಗಲೀ.

ಮೂ । ಅನ್ಯಚ್ಚ ॥ ಅಭೀಷ್ಟ ಘಟಕಃಕ್ಷಿತಾವತುಲದೀಪ್ತಿ
ಕೋದಂಡಭಾಗಿ ಶಿಕ್ಷಮುಮಿದಂ ಕುನಃ ಕುರಮುದ್ಧೃತಂ ಬ್ರೂ

ಮಹೆ । ವಿಧೂತ ಪರಮಾರ್ತಿಕೋ ವಿಘಟಿತಾರಿ ಚಕ್ರಸ್ಸ್ವಯಂ
ಸಕುಂಭ ಜನಕಂ ಕ್ರುಧಾಶಕಲಯಾಂಬ ಭೂವಪ್ರಭುಃ ॥೬೦॥

ಟೀಕಾ ॥ ಅಭೀಷ್ಟೇತಿ ॥ ಕ್ಷಿ ತೌ ಲೋಕೇ—ಅಭೀಷ್ಟಃ ಕಾಂಕ್ಷಿತಃ ಘಟಃಯೇನಸಃ ಘಟಕಃ ಜನಃ—ದೀಪ್ಯತೇಘಟೋನೇನೇತಿ ದೀಪ್ತಿರ್ಮೃತ್ಪಿಂಡಃ—ಅತುಲಾ ಅನರ್ಘ್ಯಾ ಸಾ ಯಸ್ಯ ತಥೋಕ್ತಃ—ಉಭಯತ್ರ ಶೈಷಿಕಃ! ಕಪ್—ದಂಡಭಾಕ್ಟ್ಇತಿ—ಕ್ಷಮಂ ಉಚಿತಂ—ಸಃ ಅಭೀಷ್ಟ ಘಟಕಏವ—ಸ್ವಯಂ—ವಿಧೂತಾಅಪಾಸ್ತಾ-ಪರಾಶ್ರೇಷ್ಠಾ-ಮೃತ್ತಿಕೈವಮಾರ್ತಿಕಾ-ಯೇನಸಃ-ಅರಾಣಿಚಕ್ರಾಂತಸ್ತಿರ್ಯಗ್ದಾರೂಣಿ ಅಸ್ಯಸಂತೀತ್ಯರಿ-ತಚ್ಚಕ್ರಂ ವಿಘಟಿತಂಖಂಡಿತಂ ಯೇನಸತಥೋಕ್ತಸ್ಸನ್—ಕಿಂಚ—ಕ್ರುಧಾ—ಕುಂಭಸ್ಯಜನಕಂ ಘಟಕಾರಣಂ ಅನ್ಯದ್ದಂಡಾದಿಕಂ— ಶಕಲಯಾಂ ಬಭೂವ ಖಂಡಿತವಾನಿತಿಯಾವತ್ ತದಿದಂ ಪರಮಮದ್ಭುತಂ ಬ್ರೂಮಹೇವದಾಮಃ—ಘಟಕಾಮಸ್ಯತತ್ಸಾಮಗ್ರೀನಾಶನಮಾಶ್ಚರ್ಯಕರಮಿತಿ ಪ್ರತೀತಿಕೋರ್ಥಃ—ವಾಸ್ತವಸ್ತು-ಅಭೀಷ್ಟಂಭಕ್ತಕಾಂಕ್ಷಿತಂ ಘಟಯತೀತಿ ಅಭೀಷ್ಟಘಟಕಃ ರಾಮಃ—ಅತುಲಾದೀಪ್ತಿಃಪ್ರಭಾಯಸ್ಯತಾದೃಶಂ ಕೋದಂಡಂ ಚಾಪಂ ಭಜತೀತಿತದ್ಭಾಕ್ ಇತೀದಂ ಕ್ಷಮಂ—ಪುನಃ ಕಿಂಚ—ಸಃ ಅಭೀಷ್ಟೇತ್ಯಾದಿ ವಿಶೇಷಣದ್ವಯಾನ್ವಿತಃ—ಅತಏವ—ಸ್ವಯಂ ವಿಧೂತಾಪರಮಾ ಆರ್ತಿಃ ರಾವಣಕೃತಲೋಕಪೀಡಾಯೇನ ಸತಥೋಕ್ತಃ—ಶೈಷಿಕಃ ಕಪ್—ವಿಘಟಿತಂ ಅರೀಣಾಂ ಖರಾದೀನಾಂ ಚಕ್ರಂ ಬೃಂದಂ ಯೇನ ಸತಥೋಕ್ತಶ್ಚಸನ್—ಕ್ರುಧಾ— ಕುಂಭಸ್ಯ ರಾಕ್ಷಸಸ್ಯ ಜನಕಂ ಕುಂಭಕರ್ಣಂ ಶಕಲಾಯಾಂಬಭೂವೇತಿ ಯತ್ತದಿದಂ ಕರ್ಮ ಅದ್ಭುತಂ ಬ್ರೂಮಹೇ— ಕುಂಭಕರ್ಣಸ್ಯ ದೇವೈರಪ್ಯಜೇಯತ್ವಾದಿತಿಭಾವಃ ॥

ಅರ್ಥ॥ ೧. ಅಪಾರತೇಜವುಳ್ಳ ಕೋದಂಡವೆಂಬ ಧನಸ್ಸು ಧರಿಸಿಕೊಂಡಂಥಾ ಆ ರಾಮನು ಲೋಕದಲ್ಲಿ ಬೇಡಿದ್ದನ್ನು ಕೊಡುವವನು; ಇದು ಯೋಗ್ಯವು. ಆದರೆ ಇದೊಂದು ಆಶ್ಚರ್ಯವು. ಏನೆಂದರೆ: ಶ್ರೀರಾಮನು ತಾನು ರಾವಣಾಸುರನ ಕಾಟವನ್ನು ದೂರ ಪಡಿಸಿದಂಥವನಾಗಿಯೂ ಖರದೂಷಣ ಮೊದಲಾದ ಶತ್ರುಗಳ ಗುಂಪನ್ನು ನಾಶಮಾಡಿದಂಥವನಾಗಿಯೂ, ಕೋಪದಿಂದ ಕುಂಭಕರ್ಣನನ್ನು ತುಣಕು ಮಾಡಿದಂಥವನಾಗಿಯೂ ಇರುತ್ತಾನೆ.

೨. ಬಹಳ ತೇಜ ಉಳ್ಳಂಥಾ ತನಾದ ಒಬ್ಬ ಮನುಷ್ಯನು ಒಂದು ಕೊಡವನ್ನು ಮಾಡಲಿಕ್ಕೆ ಇಚ್ಛಿಸಿ ದಂಡವನ್ನು ಧರಿಸಿಕೊಳ್ಳುವದು ಸ್ವಭಾವಿಕವಾಗಿದೆ. ಆದರೆ ಆಶ್ಚರ್ಯವೇನೆಂದರೆ: ಅವನು ಹತ್ತರ ಇದ್ದ ಒಳ್ಳೇ ಮಣ್ಣು ಒಗದು ಕೊಟ್ಟು ಬಿಟ್ಟನು, ಕುಲಾಲ ಚಕ್ರವನ್ನು ಒಡದು ಬಿಟ್ಟನು, ಮತ್ತು ಕೊಡ ಮಾಡಲಿಕ್ಕೆ ಅವಶ್ಯವಿರುವ ದಂಡಾದಿ ಸಾಮಗ್ರಿಯನ್ನೆಲ್ಲ ತುಂಡುತುಂಡು ಮಾಡಿ ಬಿಟ್ಟನು.

ಕೃಶಾನುಃ ॥

ದೂ । ಕಥಂನಾಮರಾಮಭದ್ರಮನುಚಿತಕರ್ಮಾಣಿ ಮಯ್ಯೇವ
ವಿಧಾಪಿಪಿಷೆ ॥೬೧॥

ಟೀಕಾ ॥ ಕಥಂ ಕುತಃ ಈಡಿದಿಷೆ ಈಡಿತುಮಿಚ್ಛಸಿ ॥

ಅರ್ಥ ॥ ಅಯೋಗ್ಯವಾದ ಕೆಲಸವನ್ನು ಮಾಡಿದ ರಾಮಚಂದ್ರನನ್ನು ಯಾಕೆ ಹೀಗೆ ಸ್ತುತಿಸಲಿಕ್ಕೆ ಇಚ್ಛಿಸುತ್ತಿಯೇ?

ಮೂ। ಶ್ಲೋ। ವರ್ಷೀಯಾನಪಿ ಜಾನಕೀಸಹಚರೋ ಮಾತುಸ್ಸಪತ್ನ್ಯಾ ಮುದೇ ಸಂಪನ್ನಂ ರಥಹಸ್ತಿಪತ್ತಿತುರಗೈಸ್ಸಂತ್ಯಜ್ಯ ರಾಜ್ಯಂ ನಿಜಂ। ವಿಂದನ್ ಹಂತ ಘನಂ ವನಂ ಕಥಮಸೌ ನಸ್ಯಾದಯುಕ್ತಕ್ರಿಯೋ ಗವ್ಯಂದುಗ್ಧಮಪಾಸ್ಯ ಪಾಸ್ಯತಿಜನಃ ಕೋವಾಯವಾಗೂರಸಂ ॥೬೨॥

ಟೀಕಾ ॥ ವರ್ಷೀಯಾನಿತಿ ॥ ವರ್ಷೀಯಾನ್ ಜ್ಯೇಷ್ಠೋಽಪಿಸನ್—ಮಾತುಸ್ಸಪತ್ನ್ಯಾಃ ಕೈಕೇಯ್ಯಾಃ ನತುಮಾತುರ್ವಾ— ತಥಾತ್ವೇ ರಾಜ್ಯತ್ಯಾಗೋಽಪ್ಯುಚಿತಏವಸ್ಯಾದಿತಿಭಾವಃ— ರಥೈಃ ಹಸ್ತಿಭಿಃ ಪತ್ತಿಭಿಃ ಪಾದಾತೈಃ ತುರಗೈಶ್ಚ— ಸಂಪನ್ನಂ ಸಮೃದ್ಧಂ— ನಿಜಂಕುಲಕ್ರಮಾತ್ಸ್ವೀಯಂ ನತ್ವನ್ಯದೀಯಂ—ರಾಜ್ಯಂ ಸಂತ್ಯಜ್ಯಘನಂ ವನಂವಿಂದನ್ ಪ್ರಾಪ್ನುವನ್ ಅಸೌ ಜಾನಕೀಸಹಚರಃ ರಾಮಃ— ಅಯುಕ್ತಕ್ರಿಯಃ ಅನುಚಿತಕರ್ಮಾ— ಕಥಂನಸ್ಯಾತ್— ಸ್ಯಾದೇವೇತ್ಯತ್ರದೃಷ್ಟಾಂತಮಾಹಗವ್ಯಮಿತಿ— ಗವ್ಯಂ ಗೋಸಂಬಂಧಿ— ದುಗ್ಧಂಕ್ಷೀರಂ— ಅಪಾಸ್ಯತ್ಯಕ್ತ್ವಾ— ಯವಾಗೂರಸಂ ಉಷ್ಣಿಕಾಂಕೋವಾ ಪಾಸ್ಯತಿ ನಕೋಽಪೀತ್ಯರ್ಥಃ ॥

ಅರ್ಥ ॥ ಹಿರೆ ಮಗನಾಗಿದ್ದಾಗ್ಯೂ ತಾಯಿಯ ಸವತಿಯನ್ನು ಸಂತೋಷ ಪಡಿಸುವದಕ್ಕಾಗಿ ರಥಗಳಿಂದಲೂ ಆನೆಗಳಿಂದಲೂ ಪತ್ತಿಗಳಿಂದಲೂ (ಒಂದು ರಥ, ಒಂದು ಆನೆ, ಮೂರು ಕುದುರೆ, ಐದು ಕಾಲಾಳು ಕೂಡಿ ಪತ್ತಿಸಂಜ್ಞಕ ಸೇನೆ ಎನಿಸುವದು) ಕುದುರೆಗಳಿಂದಲೂ ಸಮೃದ್ಧವಾಗಿದ್ದ ತನ್ನ ರಾಜ್ಯವನ್ನು ನೀಗಿ, ಘೋರವಾದ ಕಾಡು ಸೇರಿದನು. ಆದದರಿಂದ ಈ ಸೀತಾದೇವಿಯ ಗೆಳೆಯನು ಅಯೋಗ್ಯ ಕೆಲಸ ಮಾಡಿದವನು. ಗೋವಿನ ಹಾಲು ಬಿಟ್ಟು ಕೊಟ್ಟು ಗಂಜಿಯನ್ನು ಯಾರಾದರೂ ಲೋಕದಲ್ಲಿ ಕುಡಿಯುವರೋ?

ಮೂ। ಕಿಂಚ। ಶ್ಲೋ। ಧಿಕ್ಕೃತ್ಯೈವ ದಶಾಸ್ಯದರ್ಪದಮನಂ ಧೀಶಾಲಿನಂ ವಾಲಿನಂ ಸೋಽಯಂ ರಾಕ್ಷಸವರ್ಗನಿಗ್ರಹಕೃತೇ ಸುಗ್ರೀವಮನ್ವಗ್ರಹೀತ್ । ತುಂಗಪ್ರಸ್ತರಭಂಗಲಿಪ್ಸುರಿಹನಿಶ್ಯಂಕಂತುಟಂಕಂ ತ್ಯಜನ್ ಸಂಕಲ್ಪಂ ಕಲಯೇತಪಂಕಜದಳಾದಾನಪ್ರಸಂಗಾಯಕಃ ॥೬೩॥

ಟೀಕಾ ॥ ಧಿಕ್ಕೃತ್ಯೇತಿ । ಸೋಽಯಂ ರಾಮಃ—ರಾಕ್ಷಸಾನಾಂ ರಾವಣಾದೀನಾಂ ವರ್ಗಸ್ಯ ಬೃಂದಸ್ಯ

ನಿಗ್ರಹಾರ್ಥಂ ನಿಗ್ರಹಕೃತೇ–ದಶಾಸ್ಯಸ್ಯ ರಾವಣಸ್ಯ ದರ್ಪದಮನಂ ಗರ್ವಹಂತಾರಂ–ಧೀಃ ಜ್ಞಾನಂ ತಚ್ಛಾಲಿನಂ ವಾಲಿನಂ–ಧಿಕ್ಕೃತ್ಯ ಅನಾದೃತ್ಯೈವ–ಸುಗ್ರೀವಂ– ಅನ್ವಗ್ರಹೀತ್ ಅನುಗೃಹೀತವಾನ್–ತುಂಗಪ್ರಸ್ತರಸ್ಯ ಕಠಿಣ ಪಾಷಾಣಸ್ಯ ಭಂಗಂ ಭೇಧನಂ ಲಿಪ್ಸುಃ ಇಚ್ಛುಃ–ಕಃ ಪುಮಾನ್–ಟಂಕಂ–ಪಾಷಾಣ ಭೇಧಕಮಪ್ಯೇಂ ನಿಶ್ಯಂಕಂ ತ್ಯಜನ್ ಸನ್–ಪಂಕಜದಳಸ್ಯ ಆದಾನಂ ಪಾಷಾಣ ಭೇಧನಾರ್ಥಂ ಸ್ವೀಕಾರಸ್ತಸ್ಯ ಪ್ರಕರ್ಷೇಣ ಸಂಗಾಯ ಸಂಬಂಧಂಕರ್ತುಂ–ಕ್ರಿಯಾರ್ಥೇತ್ಯಾದಿನಾಚತುರ್ಥೀ– ಸಂಕಲ್ಪಮಿಚ್ಛಾಂ– ಕಲಯೇತಕುರ್ಯಾತ್– ನಕೋಪಿಕುರ್ಯಾದೇವೇತ್ಯರ್ಥಃ– ದೃಷ್ಟಾಂತಾಲಂಕಾರಃ ||

ಅರ್ಥ || ಆ ರಾಮನು ರಾವಣಾದಿ ರಾಕ್ಷಸರ ಕುಲವನ್ನು ಜಯಿಸುವದಕ್ಕಾಗಿ ರಾವಣನ ಗರ್ವವನ್ನು ಹರಣ ಮಾಡಿದಂಥವನಾದ ಮತ್ತು ಜ್ಞಾನವಂತನಾದ ವಾಲಿಯನ್ನು ಅನಾದರಿಸಿ ಸುಗ್ರೀವನ ಮೇಲೆ ದಯೆಯುಳ್ಳವನಾದನು. ಕಠಿಣವಾದ ಪಾಷಾಣವನ್ನು ಪುಡಿ ಮಾಡಲಿಕ್ಕೆ ಇಚ್ಛೆಯುಳ್ಳವನಾಗಿರಲು ಅಂಜಿಕೆಯಿಲ್ಲದವನಾಗಿ ಕಲ್ಲ ಹೊಡೆಯುವ ಉಳಿಯನ್ನು ಬಿಟ್ಟು ಕೊಟ್ಟು ಕಮಲಯೆಸಳಿನ ಸ್ವೀಕಾರ ಮಾಡುವ ಇಚ್ಛೆ ಯಾರು ಮಾಡ್ಯಾನು? ಯಾರು ಮಾಡಲಿಕ್ಕಿಲ್ಲೆಂಬ ಭಾವವು.

ಮೂ|ಅಪಿಚ|ಶ್ಲೋ|ಕೃತ್ವಾಸೇತುಂ ಕಿಲಜಲನಿಧೌ ಖಂಡಯಿತ್ವಾ ದುರಧ್ವಾನ್ ಲಬ್ಧ್ವಾದೇವೀಂ ಸ್ಫುಟವಿದಿತಸಂಶುದ್ಧಿಮಗ್ನಿಪ್ರವೇಶಾತ್ । ಭೂಯೋಽಪ್ಯೇನಾಂ ಭುವನ ಜನನೀಂ ಭೂಮಿಕನ್ಯಾ ಮನನ್ಯಾಮಂತರ್ವತ್ನೀಂ ಮನಯತ್ವನಂ ಹಂತ ಪೌಲಸ್ತ್ಯ ಹಂತಾ || ೬೪ ||

ಟೀಕಾ || ಅಪಿಚ ಕಿಂಚ || ಕೃತ್ವೇತಿ || ಪೌಲಸ್ತ್ಯಸ್ಯ ರಾವಣಸ್ಯ ಹಂತಾರಾಮಃ–ಜಲನಿಧೌ ಸೇತುಂ ಬಧ್ವಾದುರಧ್ವಾನ್ ದುರ್ಮಾರ್ಗಾನ್– ರಾವಣಾದೀನ್–ಖಂಡಯಿತ್ವಾ–ಅಗ್ನಿಪ್ರವೇಶಾತ್ ಸ್ಫುಟಂ ವಿದಿತಾಜ್ಞಾಪಿತಾಸಂಶುದ್ಧಿಃ ಪಾತಿವ್ರತ್ಯಂ ಯಸ್ಯಾಸ್ತಾಂ ದೇವೀಂ ಸೀತಾಂ ಲಬ್ಧ್ವಾ–ಭುವನ ಜನನೀಮಿತಿ ರಾವಣಸ್ಯಾಪಿಮಾತೃವತ್‌ಪೂಜ್ಯತ್ವಂ– ಭೂಮಿಕನ್ಯಾಮಿತಿ ಅಯೋನಿಜತ್ವಾಲ್ಲೋಕೋತ್ತರತ್ವಂ–ಅನನ್ಯಾಆತ್ಮಸ್ವರೂಪತ್ವಾತ್ತ್ಯಾಗಾಯೋಗ್ಯತ್ವಂ–ಅಂತರ್ವತ್ನೀಂ ಗರ್ಭಿಣೀಮಿತಿ ಕಾರುಣ್ಯಂಚಸೂಚ್ಯತೆ–ಏನಾಂ ಸೀತಾಂ–ಅನಯತಪ್ರಾಪಿತವಾನ್ ||

ಅರ್ಥ || ರಾವಣಾಸುರನನ್ನು ಕೊಂದಂಥವನಾದ ರಾಮನು ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ, ಕೆಟ್ಟ ನಡತೆಯುವರನ್ನು ನಾಶಮಾಡಿ, ಅಗ್ನಿಪ್ರವೇಶದಿಂದ ತನ್ನ ಪಾತಿವ್ರತ್ಯ ಧರ್ಮದ ನಿದರ್ಶನ ಮಾಡಿ ಕೊಟ್ಟ ಸೀತಾದೇವಿಯನ್ನು ಸಂಪಾದಿಸಿ ಕೊಂಡನು. ಇಷ್ಟೆಲ್ಲ ಆದ ಮೇಲೆ ಪುನಹಾ ಲೋಕತಾಯಿಯಾದ ಭೂಮಿದೇವಿಯ ಮಗಳಾದ ಮತ್ತು ತನಗೆ ಆತ್ಮಸ್ವರೂಪಳಾದ ಆ ಸೀತಾದೇವಿಯನ್ನು ಅವಳು ಗರ್ಭಿಣಿಯಾಗಿರುವ ವೇಳೆಯಲ್ಲಿ, ವನವನ್ನು ಕುರಿತು ನೂಕಿ ಬಿಟ್ಟನು. ಅಯ್ಯೋ ಇದೆಷ್ಟು ದುಃಖಕರವಾದದ್ದು!

## ವಿಶ್ವಾವಸುಃ ||

ಮೂ|ಗುಣಿಷುದೋಷಾವಿಷ್ಕಾರಂ ಕಥಂಕಾರಮಾಚರಸಿ*|| ೬೫ ||

ಟೀಕಾ || ಗುಣಿಷ್ವಿತಿ | ಗುಣಿಷು ಪಿತ್ರಾಜ್ಞಾಕರಣಾದಿ ಕಲ್ಯಾಣ ಗುಣವತ್ಸು ದೋಷಿತ್ವಸ್ಯ ಆವಿಷ್ಕಾರಂ ಆರೋಪಂ– ಕಥಂ ಕಾರಂಕಥ ಮಿತ್ಯರ್ಥಃ |

ಅರ್ಥ || ಗುಣವಂತರುಗಳಲ್ಲಿ- ಅಂದರೆ ತಂದೆಯ- ಅಪ್ಪಣೇ ಮೇರೆಗೆ ನಡಕೊಳ್ಳುವದೇ ಮೊದಲಾದ ಸದ್ಗುಣಗಳುಳ್ಳವರಲ್ಲಿ- ದೋಷಾರೋಪಣೆ ಹ್ಯಾಗೆ ಮಾಡುತ್ತೀಯೆ?

ಮೂ| ಶ್ಲೋ| ಗುರಾವಸತ್ಯೋಕ್ತಿ ನಿರಾಸ ಹೇತೋಸ್ಸ್ವರಾಜ್ಯ ಮಗ್ರ್ಯೋಪಿ ಸರಾಮಚಂದ್ರಃ |ತೃಣಾಯಮೇನೆ ನಿಪುಣಾಯತೇ ನಘಣಾಭೃದೀಶೋಪಿ ಘಣಾಯಿತುಂತಂ || ೬೬ ||

ಟೀಕಾ || ಗುರಾವಿತಿ| ಅಗ್ರ್ಯಃ ಜ್ಯೇಷ್ಠೋಪಿ– ಸರಾಮಚಂದ್ರಃ–ಗುರೌ ಪಿತರಿದಶರಥೇ–ಅಸತ್ಯೋಕ್ತೇಃ ವರದ್ವಯಾ ಪ್ರದಾನೇ ಸತೀತಿನಿರಾಸಃ ನಿವಾರಣಂ ತದ್ರೂಪಾದ್ಧೇತೋಃ–ಸ್ವಂಅರ್ಹತ್ವೇನಸ್ವೀಯಂ ರಾಜ್ಯಂ– ತೃಣಾಯತೃಣಕಲ್ಪಂಮೇನೇ– ಮನ್ಯಕರ್ಮಣೀತ್ಯಾದಿನಾ ಚತುರ್ಥೀ–ತತಃ– ಘಣಾಭೃದೀಶಃ ಸಹಸ್ರಮುಖಶ್ಶೇಷೋಪಿ– ತಂರಾಮಚಂದ್ರಂ ಘಣಾಯಿತುಂಸ್ತೋತುಂ– ನನಿಪುಣಾಯತೇ ನಕುಶಲೀ ಭವತಿ– ಕಿಮುತಾನ್ಯ ಇತ್ಯರ್ಥಃ ||

ಅರ್ಥ || ಆ ರಾಮಚಂದ್ರನು ಹಿರೇ ಮಗನಾದಾಗ್ಯೂ ತಂದೆಯಲ್ಲಿ ಹುಸಿ ನುಡಿಯಾಡಿದ ದೋಷವನ್ನು ಬರಗೊಡಬಾರದೆಂಬ ಹೇತುವಿನಿಂದ ತನ್ನ ರಾಜ್ಯವನ್ನು ಹುಲ್ಲುಕಡ್ಡಿಯಂತೆ ಎಣಿಸುವಂಥಾತನಾದನು; ಮಹಾಶೇಷನು ಕೂಡ ಆ ರಾಮನನ್ನು ಸ್ತುತಿಸಲಿಕ್ಕೆ ಕುಶಲನಲ್ಲವು.

ಮೂ| ಕಿಂಚ| ಶ್ಲೋ| ವಾಲಿನಿಬಲೋರ್ಮಿಮಾಲಿನಿ ಜಾಗ್ರತಿ ಸುಗ್ರೀವ ಮಗ್ರಹೀದ್ಯದಯಂ| ಅಸ್ಯಶ್ರುತಿಶತವಿದಿತಂ ಸುವ್ಯಕ್ತಂತೇನ ದೀನಬಂಧುತ್ವಂ || ೬೭ ||

ಟೀಕಾ || ಧಿಕ್ಕೃತ್ಯೇತ್ಯಾದಿದೂಷಣಂ ಪರಿಹರತಿ || ವಾಲಿನೀತಿ || ಅಯಂರಾಮಃ– ಬಲಸ್ಯ ಊರ್ಮಿಮಾಲಿನಿ ಸಮುದ್ರೇ– ವಾಲಿನಿಜಾಗ್ರತಿ ವರ್ತಮಾನೇ ಸತ್ಯಪಿ ಸುಗ್ರೀವ ಮಗ್ರಹೀದಿತಿಯತ್–ತೇನವಾಲಿನಂ ತ್ಯಕ್ತ್ವಾ ಸುಗ್ರೀವಾನುಗ್ರಹಣೇನ– ಶ್ರುತಿಶತೇನವಿದಿತಂ ಪ್ರಸಿದ್ಧಂ ದೀನಬಂಧುತ್ವಂ ಸುವ್ಯಕ್ತಂ ಭವತಿ– ಇತ್ಯರ್ಥಃ ||

ಅರ್ಥ || ಆ ರಾಮನು ಬಲಸಮುದ್ರನಾಗಿಯೂ ಎಚ್ಚರಿಕೆಯುಳ್ಳವನಾಗಿಯೂ ಇದ್ದ

* ಕಥಮಾರಚಯ ಸೀತಿಪಾಠಾಂತರಂ ||

ವಾಲಿಯನ್ನು ಬಿಟ್ಟು ಸುಗ್ರೀವನಿಗೆ ಆಶ್ರಯ ಕೊಟ್ಟನು. ಇದರಿಂದ ಆಪನು ಬಡವ ಪಾಲಕನೆಂಬ ಪ್ರಸಿದ್ಧಿಯು ಸ್ಪಷ್ಟವಾಗುತ್ತೆ.

ಮೂ। ಅಪಿಚ। ಶ್ಲೋ।ಲಕ್ಷ್ಮೀಂ ವಕ್ಷಸಿಬಿಭ್ರದಪ್ಯವಿರತಂ ರಾಮಾಕೃತಿ ಶ್ರೀಪತಿಃ ವೃತ್ತಿಂ ಕಾಮಪಿಮಾನುಷೀಮಭಿನಯನ್ ವೀರಾಗ್ರಯಾಯೀ ಪ್ರಿಯಾಂ। ಕಲ್ಯಾಣೀಂತು ವನೀಮನೀನಯದಹೋಕಸ್ಯಾಪ್ಯಮೃಷ್ಯ ನ್ವಚೋ ಮೇದಿನ್ಯಾ ಮವಲೋಕಿತಃ ಕಿಮಪರೋಮಾನೀಪುಮಾನೀದೃಶಃ ॥ ೬೮ ॥

ಟೀಕಾ ॥ ಕೃತ್ವಾಸೇತುಮಿತ್ಯಾದಿಪರಿಹರತಿ ॥ ಲಕ್ಷ್ಮೀಮಿತಿ॥ ರಾಮಾಕ್ರೀರಾಮರೂಪಾ ಆಕೃತಿರ್ಮನುಷ್ಯಶರೀರಂಯಸ್ಯಸಃ— ಅತಏವಶ್ರೀಪತಿರ್ವಿಷ್ಣುಃ— ವಕ್ಷಸಿಲಕ್ಷ್ಮೀಂ ಅವಿರತಂ ಸತತಂ ಬಿಭ್ರದಪಿಸನ್— "ವಿಷ್ಣೋರೇಷಾನಪಾಯಿನೀತ್ಯಾಗಮಾದಿತಿಭಾವಃ"—ಕಾಮಪಿ ಆತ್ಮೈಕವೇದ್ಯಾಮಿತ್ಯರ್ಥಃ—ಮಾನುಷೀಂ ವೃತ್ತಿಂ ರೀತಿಂ— ಅಭಿನಯನ್ ಅತಏವಕಸ್ಯಾಪಿ ಅಜ್ಞಾತಕುಲಗೋತ್ರಸ್ಯ ಕಿಮುತಮಹತ ಇತ್ಯರ್ಥಃ— ವಚಃ— ಅಪವಾದವಾಕ್ಯಂ—ಅಮೃಷ್ಯನ್ ಅಸೋಢಾಸನ್ — ಕಲ್ಯಾಣೀಂ ಲೋಕೋತ್ತರಪಾತಿವ್ರತ್ಯಶಾಲಿನೀಮಪಿ—ತುಶಬ್ದೋಪ್ಯರ್ಥಕಃ—ಪ್ರಿಯಾಂನತುಭಾರ್ಯಾಂ— ವಿಶೇಷಣದ್ವಯೇನಮಾನ್ಯೈಕಧನತ್ವಂ ಸೂಚ್ಯತೇ—ವನೀಮರಣ್ಯಾಮನೀನಯತ್ಪ್ರಾಪಿತವಾನ್—ತತಃ— ಅಪರಃ ಶ್ರೀರಾಮಾದನ್ಯಃ— ಈದೃಶಃ ಮಾನೀ ಪ್ರಶಸ್ತಮಾನಃ ಪುಮಾನ್—ಮೇದಿನ್ಯಾಂಭುವಿ—ಅವಲೋಕಿತಃ ದೃಷ್ಟಃ ಕಿಂ—ನದೃಷ್ಟಏವೇತ್ಯರ್ಥಃ ॥

ಭಾವಾರ್ಥ ॥ ವೀರರಲ್ಲಿ ಹಿರಿಯನಾದಂಥಾ ರಾಮರೂಪವನ್ನು ಧರಿಸಿ ಕೊಂಡವನಾದಂಥಾ ಶ್ರೀವಿಷ್ಣುವು, ಯಾವಾಗಲೂ ಲಕ್ಷ್ಮೀದೇವಿಯನ್ನು ಎದೆಯ ಮೇಲೆ ಹೊತ್ತು ಕೊಂಡಿರುವಂಥಾತನಾದರೂ, ಯಾವದೋ ಒಂದು ಮನುಷ್ಯ ರೀತಿಯನ್ನು ಅನುಸರಿಸಿ ಒಬ್ಬ ಕೀಳು ಮನುಷ್ಯನು ಆಡಿದ ಮಾತು ಸಹಿಸಲಾರದೆ, ಪತಿವ್ರತೆಗಳಲ್ಲಿ ಶ್ರೇಷ್ಠಳಾದ ಸೀತಾದೇವಿಯನ್ನು ಕಾಡಿಗೆ ಕಳುಹಿಸಿದನು. ಏನೈಯ್ಯಾ, ಲೋಕದಲ್ಲಿ ಇಷ್ಟು ಮರ್ಯಾದೆಯುಳ್ಳ ಬೇರೆ ಮನುಷ್ಯನನ್ನು ನೀವು ನೋಡಿದ್ದೀರಾ?

ಮೂ। ವಸ್ತುತಸ್ತು। ಶ್ಲೋ। ಗಾತುಂಕ ಈಷ್ಟೇ ಶ್ರಿತರಾಮಭದ್ರಾನ್ ಗಣಾನ್ಗುಣಾನಾಂಗಣನಾದರಿದ್ರಾನ್। ಪ್ರಾಚೇತಸಾದ್ಯಾಃ ಕವಯೋನವದ್ಯಾಃ ಯದೇಕದೇಶಾಕಲನೇಪಿನೇಶಾಃ ॥೬೯॥

ಟೀಕಾ ॥ ವಸ್ತುತಸ್ತು— ವಿಚಾರ್ಯಮಾಣೆ ಸತೀತ್ಯರ್ಥಃ ॥ ಗಾತುಮಿತಿ। ಶ್ರಿತಃ ರಾಮಭದ್ರಃ— ಯೈಸ್ತಾನ್—ರಾಮಭದ್ರಾಶ್ರಯಾನ್—ಗಣನಾದರಿದ್ರಾನ್—ಅಸಂಖ್ಯಾನ್—ಗುಣಾನಾಂಗಣಾನ್—ಗಾತುಂ ಸಾಮಗ್ರ್ಯೇಣಕೀರ್ತಿತುಂ—ಕಃ ಪುಮಾನೀಷ್ಟೇಶಕ್ನೋತಿ—ನಕೋಪೀತ್ಯರ್ಥಃ—ಯತಃ-ಪ್ರಾಚೇತಸಾದ್ಯಾಃ ವಾಲ್ಮೀಕ್ಯಾದಯಃ— ಅನವದ್ಯಾಅನಿಂದ್ಯಾಃ— ಮಹಾತ್ಮಾನೋಪೀತಿಯಾವತ್— ಕವಯಃ— ಯೇಷಾಂ ಶ್ರೀರಾಮಗುಣಗಣಾನಾಂ ಏಕದೇಶಸ್ಯ ಕಿಂಚಿದಂಶಸ್ಯಾಪಿ ಆಕಲನೆ ವರ್ಣನೇಪಿ—ನೇಶಾ ನಸಮರ್ಥಾಃ—

ಅತ್ರೋತ್ತರವಾಕ್ಯಾರ್ಥಸ್ಯ ಸಾಮಸ್ತ್ಯೇನ ಶ್ರೀರಾಮಗುಣಗಣಗ್ರಹಣಾಸಮರ್ಥತ್ವೇ ಹೇತುತ್ವಾತ್ಪೂರ್ವವಾಕ್ಯಾರ್ಥ ಹೇತುಕಂ ಕಾವ್ಯಲಿಂಗಂ ||

ಅರ್ಥ || ವಿಚಾರದಿಂದ ನೋಡಲು ಶ್ರೀರಾಮನಲ್ಲಿ ಕೂಡಿಕೊಂಡಿರುವ ಎಣಿಸಲಶಕ್ಯವಾದ ಗುಣಗಳ ಸಮೂಹವನ್ನು ಬಣ್ಣಿಸಲಿಕ್ಕೆ ಸಮರ್ಥನಾದವನ್ಯಾರೂ ಇಲ್ಲವು. ಆ ಗುಣಗಳ ಕೊಂಚ ಅಂಶವನ್ನಾಗಲೀ ಬಣ್ಣಿಸಲಿಕ್ಕೆ ವಾಲ್ಮೀಕಿ ಮೊದಲಾದ ಉತ್ತಮ ಕಬ್ಬಿಗರು ಸಮರ್ಥರಾಗಲಿಲ್ಲವು.

ಮೂ। ತಥಾಪಿ ತದೀಯ ಗುಣಾರ್ಣವ * ಕಣೈಕದೇಶಕೋಽಪಿ ತಮಾಂಶಕಲಾಮಾತ್ರ ಮಿದಮತ್ರ ಭವತಾ ಶ್ರೋತವ್ಯಂ || ೨೦ ||

ಟೀಕಾ || ತದೀಯೇತಿ । ತದೀಯಾಃ ಶ್ರೀರಾಮ ಸಂಬಂಧಿನಃ ಗುಣಾ ಏವ ಅರ್ಣವಃ ತಸ್ಯ ಕಣಾನಾಮೇಕದೇಶಃ ಕಿಂಚಿದಂಶಃ ತಸ್ಯ ಕೋಟಿತಮೋಂಶಃ ತಸ್ಯ ಕಲಾ ಷೋಡಶಭಾಗಃ ತನ್ಮಾತ್ರಮಿದಂ ವಕ್ಷ್ಯಮಾಣಂ—ಅತ್ರಭವತಾ ಪೂಜ್ಯೇನ ಭವತಾ ||

ಅರ್ಥ || ಆದಾಗ್ಯೂ ಆ ಶ್ರೀರಾಮನ ಗುಣಸಮುದ್ರದೊಳಗಿನ ಒಂದು ತಟಕಿನ ಸ್ವಲ್ಪ ಭಾಗದ ಕೋಟಿ ಅಂಶಗಳಲ್ಲಿ ಒಂದು ಅಂಶದ ಹದಿನಾರನೇ ಪಾಲು ಮಾತ್ರ ಹೇಳುತ್ತೇನೆ. ಪೂಜ್ಯನಾದ ನೀನು ಆಲಿಸಿ ಕೇಳು.

ಮೂ। ಶ್ಲೋ। ಕಕುತ್ಸ್ಥಕುಲಪರ್ಯಾಯ ಕಲಶಾರ್ಣವ ಕೌಸ್ತುಭಃ। ಕೌಸಲ್ಯಾ ಸುಕೃತ ವ್ರಾತಕಲ್ಪಕ ಪ್ರಸವೋದಯಃ || ೨೧ ||

ಟೀಕಾ || ಕಕುತ್ಸ್ಥೇತಿ— ಇದಮಾದ್ಯಷ್ಟಾದಶ ಶ್ಲೋಕೈಕಂ ವಾಕ್ಯಂ। ಕಕುತ್ಸ್ಥಸ್ಯನಾಮ ರಾಜ್ಞಃ ಕುಲಂ ವಂಶಃ ಪರ್ಯಾಯಃ—ಏಕಾರ್ಥಃ ಶಬ್ದಾಂತರಂ ಯಸ್ಯ ತಸ್ಯ ಕಲಶಾರ್ಣವಸ್ಯ ಕ್ಷೀರಾಬ್ಧೇಃ ಕೌಸ್ತುಭಃ ರತ್ನಂ—ಏತದಾದ್ಯ ಯೋಧ್ಯಾಮರೇತ್ಯಂತ ವಾಕ್ಯಾರ್ಥೇಷು ಸರ್ವತ್ರರೂಪಕಾಲಂಕಾರಃ ಸುಕೃತ ವ್ರಾತಃ ಪುಣ್ಯರಾಶಿಃ—ಕಲ್ಪಕಃ ಕಲ್ಪವೃಕ್ಷಃ—ಪ್ರಸವೋದಯಃ ಪುಷ್ಪೋದ್ಗಮಃ ||

(ಈ ಶ್ಲೋಕದಿಂದ ೪೪ನೇ ಶ್ಲೋಕ ಪರಿಯಂತ ಒಂದೇ ವಾಕ್ಯವು. ಇದರಲ್ಲಿ ರಾಮಾಯಣ ಕಥೆಯ ಗುರುತಗಳನ್ನು ತೋರಿಸುವ ವಿಶೇಷಣಗಳಿಂದ ಶ್ರೀ ರಾಮನ ವರ್ಣನೆ ಮಾಡಲ್ಪಟ್ಟಿದೆ.)

ಅರ್ಥ || ಕಕುತ್ಸ್ಥನೆಂಬ ಅರಸಿನ ವಂಶಾನುಕ್ರಮವೆಂಬ ಹಾಲುಕಡಲಿಗೆ ರತ್ನವು; ಕೌಸಲ್ಯಾದೇವಿಯು ಮಾಡಿದ ಪುಣ್ಯರಾಶಿರೂಪ ಕಲ್ಪವೃಕ್ಷಕ್ಕೆ ಮೂಡಿದ

* ಕಣಾನಾಮೇಕದೇಶ ಲೇಶೇತಿಪಾಠಾಂತರಂ ||

ಪುಷ್ಪವು;

ಮೂ। ಶ್ಲೋ। * ಪ್ರಾಂಚತ್ಪಜ್ತ್ರಥಾಗಾರ ಪರಿಷ್ಕಾರ ಹರಿ
ನ್ಮಣಿಃ। ಜಾನಕೀಲೋಚನ ದ್ವಂದ್ವಚಕೋರಾನಂದ ಚಂದ್ರ
ಮಾಃ ॥ ೭೨ ॥

ಟೀಕಾ ॥ ಪ್ರಾಂಚದಿತಿ। ಪಜ್ತ್ರಿರಥಃ ದಶರಥಃ—ಹರಿನ್ಮರಕತಂ—ಚಕೋರಃ ಜ್ಯೋತ್ಸ್ನಾ ಪಾಯಿಃ ॥

ಅರ್ಥ॥ ದಶರಥನೆಂಬ ಮನೆಗೆ ಅಲಂಕಾರವಾದ ಪಚ್ಚೆ ರತ್ನವು; ಸೀತಾದೇವಿಯ ನೇತ್ರಯುಗ್ಮವೆಂಬ ಚಕೋರ ಪಕ್ಷಿಗೆ ಸಂತೋಷಕರವಾದ ಬೆಳದಿಂಗಳು;

ಮೂ। ಶ್ಲೋ। ಸಂಸಾರ ಮಾರ್ಗ ಸಂಚಾರ ಶ್ರಾಂತಚ್ಛಾಯಾ
ಮಹೀರುಹಃ। † ಸರ್ವರಾಕ್ಷಸ ಬೇತಾಳ ಸಮುಚ್ಚಾಟ ನಮಾಂ
ತ್ರಿಕಃ ॥ ೭೩ ॥

ಟೀಕಾ ॥ ಸಂಸಾರೇತಿ ॥ ಛಾಯಾ ಮಹೀರುಹಃ ನಮೇರುಃ ಬೇತಾಳಾಃ ಪಿಶಾಚಭೇದಾಃ—ಮಾಂತ್ರಿಕಃ ಭೂತವೈದ್ಯಃ ॥

ಅರ್ಥ॥ ಪ್ರಪಂಚದ ಹಾದಿಯಲ್ಲಿ ನಡದು ಬಳಲಿದವರಿಗೆ ನೆರಳು ಕೊಡುವ ವೃಕ್ಷವು; ರಾಕ್ಷಸರೆಂಬ ಭೂತಗಳನ್ನು ನಾಶ ಮಾಡಿದ ಭೂತವೈದ್ಯನು.

ಮೂ। ಶ್ಲೋ। ಕರುಣಾರಸಕಲ್ಲೋಲ‡ ಕದಂಬವರುಣಾಲಯಃ।
ತಪೋಧನ ಜನಾಕಾಂಕ್ಷಾ ತಟಾಕನವತೋಯದಃ ॥ ೭೪ ॥

ಟೀಕಾ ॥ ಕರುಣೇತಿ। ಕಲ್ಲೋಲ ಕದಂಬಂ ಪೃಥುತರಂಗ ಸಮೂಹಃ—ವರುಣಾಲಯಃ ಸಮುದ್ರಃ—ಆಕಾಂಕ್ಷಾಃ ಕಾಮಾಃ— ತೋಯದಃ ಮೇಘಃ ॥

ಅರ್ಥ॥ ಕರುಣವೆಂಬ ನೀರಿನ ಘೋರ ಬುಗ್ಗೆಗಳು ಹೊರಡುವಂಥಾ ಸಮುದ್ರನು; ತಪಸ್ಸೇ(ತಪವೆಂದರೆ ಅನ್ನ ತಿನ್ನದೆ ಉಪವಾಸದಿಂದ ಕೃಶವಾಗಿ ಪಾಪವಂ ಕಳಕೊಳ್ಳುವಿಕೆ) ಸೊತ್ತು ಉಳ್ಳವರಾಗಿರುವವರ ಬಯಕೆಗಳೆಂಬ ಕೆರೆಗಳಿಗೆ ನೀರು ಕೊಡುವ ನೂತನ ಮೇಘನು;

ಮೂ। ಶ್ಲೋ। ವಿದ್ಯಾವಿಹರಣೋದ್ಯಾನ ವಿನಯಾಸ್ಥಾನಮಂ

* ಪ್ರೌಢಪಜ್ತ್ರರಥಾಗಾರ ಇತಿಪಾಠಾಂತರಂ ॥ † ಸರ್ವಪಾತಕವೇತಾಳ ಇತಿಪಾಠಾಂತರಂ ॥
‡ ಪಿಯೂಷ ವರುಣಾಲಯ ಇತಿಪಾಠಾಂತರಂ ॥

ಟಪಃ। ಸೌಲಭ್ಯ ಪ್ರಾಭವೋತ್ಕರ್ಷ ಸಮಾವೇಶ ನಿವೇಶ
ನಂ ॥ ೭೫ ॥

ಟೀಕಾ ॥ ವಿದ್ಯೇತಿ। ಸೌಲಭ್ಯಂ ಸೌಮ್ಯತಾ–ಪ್ರಾಭವಂ ಪ್ರಭುತ್ವಂ–ತದುತ್ಕರ್ಷಯೋಃ ಮಿಥೋವಿರುದ್ಧಯೋಃ ಸಮಾವೇಶಸ್ಯ ಏಕತ್ರವಾಸಸ್ಯ ನಿವೇಶನಂ ಗೃಹಂ ॥

ಅರ್ಥ॥ ವಿದ್ಯೆಯು ಕ್ರೀಡೆ ಮಾಡುವ ಕ್ರೀಡಾ ವನವು; ವಿನಯವೆಂದರೆ ಯುಕ್ತವಾದ ನಡತೆಗೆ ನೆಲೆಯಾದ ಮಂಟಪವು; ಸೌಮ್ಯತೆ ಮತ್ತು ದೊರೆತನ ಇವುಗಳು ಅತಿಶಯದೊಡನೆ ಒಕ್ಕಟ್ಟಾಗಿ ಸೇರಿಕೊಂಡಿರುವ ಸ್ಥಾನವು;

ಮೂ। ಶ್ಲೋ। ಸೌಜನ್ಯ ವಾದಾನ್ಯ ಕಯೋಸ್ಸಮಾನಾಧಿ ಕರ
ಣ್ಯಭೂಃ। ಸೌಮುಖ್ಯ ಮುಖ್ಯಭವನಂ ಸೌಹಾರ್ದೈಕವಿತ
ರ್ದಿಕಾ ॥ ೭೬ ॥

ಟೀಕಾ ॥ ಸೌಜನ್ಯೇತಿ। ಸೌಜನ್ಯಂ ಸುಜನತ್ವಂ ವಾದಾನ್ಯಕಂ ಪ್ರದಾತೃತ್ವಂ ತಯೋ ಸ್ಸಮಾನಾಧಿಕರಣ್ಯಭೂಃ– ಸಹವಾಸದೇಶಃ ಏತಯೋರಪಿ ವಿರುದ್ಧತ್ವಾಲ್ಲೋಕೋತ್ತರತ್ವಂ ಸೂಚ್ಯತೆ– ಸೌಮುಖ್ಯಂ ಪ್ರಸನ್ನ ಮುಖತ್ವಂ– ಸೌಹಾರ್ದಂ ಆಶ್ರಿತಪ್ರೇಮ–ವಿತರ್ದಿಕಾವೇದಿಃ ॥

ಅರ್ಥ॥ ಸುಜನತ್ವ ಮತ್ತು ತ್ಯಾಗ ಇವುಗಳು ಕೂಡಿಕೊಂಡಿರುವ ಭೂಮಿಯು, ಸುಪ್ರಸನ್ನ ಮುಖಕ್ಕೆ ಮುಖ್ಯವಾದ ಮನೆಯು; ಮರೆಹೊಕ್ಕಿದವರ ಮೇಲಿನ ಪ್ರೇಮಕ್ಕೆ ಸ್ಥಾನವಾದ ಜಗಲಿ ಅಥವಾ ಕಟ್ಟೆಯು.

ಮೂ। ಶ್ಲೋ। * ಪ್ರಸಾದಲಕ್ಷ್ಮ್ಯಾಃ ಪ್ರಾಸಾದಃ ಪ್ರತಾಪಸ್ಯ
ಪರಾಗತಿಃ। ಪ್ರಾಣಪ್ರತಿಷ್ಠಾಕ್ಲಿಷ್ಟಾನಾಂ ಪ್ರಪನ್ನಾನಾಂ ಪರಾ
ಯಣಂ ॥ ೭೭ ॥

ಟೀಕಾ ॥ ಪ್ರಸಾದೇತಿ। ಗತಿಃ ಪ್ರಾಪ್ಯಸ್ಥಾನಂ–ಕ್ಲಿಷ್ಟಾನಾಂ ಕ್ಲೇಶೇನ ಪೀಡಿತಾನಾಂ ಮೃತಕಲ್ಪಾನಾಮಿತ್ಯರ್ಥಃ– ಪ್ರಾಣಾನಾಂ ಪ್ರತಿಷ್ಠಾ ಪ್ರತಿಸಂಧಾನಂ– ಪ್ರಪನ್ನಾನಾಂ ಶರಣಾಗತಾನಾಂ ಪರಮಯನಂ ಪ್ರಾಪ್ಯಸ್ಥಾನಂ ॥

ಅರ್ಥ॥ ಅನುಗ್ರಹ ಸಂಪತ್ತಿಗೆ ಉಪ್ಪರಿಗೆಯು; ಪ್ರತಾಪವೆಂದರೆ ಹಣದಿಂದಲೂ ಸೇನೆಯಿಂದಲೂ ಉಂಟಾಗುವ ತೇಜಸ್ಸಿಗೆ ಯೋಗ್ಯವಾದ ಸ್ಥಿತಿಯು; ದುಃಖಿತರ ಜೀವಕ್ಕೆ ಶಕ್ತಿ ಸ್ಥಾನವು, ಅಥವಾ ವಿಶ್ರಾಂತಿ ಸ್ಥಾನವು; ಮರೆಹೊಕ್ಕವರಿಗೆ ಶ್ರೇಷ್ಠವಾದ ಗತಿ

* “ಅದ್ಭುತೋತ್ಸಾಹ ಶಕ್ತೀನಾಮಸಾಧಾರಣ ಜೀವಿಕಾ” ಇತ್ಯಧಿಕಂ ಪುಸ್ತಕಾಂತರೇ ॥

ಸ್ಥಾನವು;

ಮೂ। ಶ್ಲೋ। ಅನಪಾಯ ಸಮೃದ್ಧೀನಾಮವಗಾಹನದೀರ್ಘಿಕಾ। ಜಂಭಶಾಸನ ಜೀವಾತುಃ ಜನ್ಮಗೇಹಂ ಜಯಶ್ರಿಯಃ ॥ ೭೮ ॥

ಟೀಕಾ ॥ ಅನಪಾಯೇತಿ । ದೀರ್ಘಿಕಾವಾಪೀ–ಜಂಭಶಾಸನಸ್ಯ ಇಂದ್ರಸ್ಯ ರಾವಣೋಪದ್ರವೇಣ ಮೃತಪ್ರಾಯಸ್ಯ ಜೀವಾತುರ್ಜೀವನೌಷಧಂ ಗೇಹಂ ಗೃಹಂ ॥

ಅರ್ಥ॥ ಕೇಡಿಲ್ಲದ ಸಂಪತ್ತುಗಳು ಸ್ನಾನಮಾಡುವ ಬಾವಿ; ರಾವಣನ ಬಾಧೆಯಿಂದ ಮೃತಪ್ರಾಯನಾದ ಇಂದ್ರನಿಗೆ ಜೀವನೌಷಧವು; ಜಯಶ್ರೀ ಅಂದರೆ ಗೆಲುವಿಕೆಯ ಸಂಪತ್ತಿನ ತೌರಮನೆ;

ಮೂ। ಶ್ಲೋ। ದುರ್ವಾರ ಘೋರದಾರಿದ್ರ್ಯದರ್ವೀಕರಖಗೇಶ್ವರಃ। ತತ್ತಾದೃಕ್ತಾಟಕಾ ದೇಹ ಧ್ವಾಂತರಾಜೀವ ಬಾಂಧವಃ ॥ ೭೯ ॥

ಟೀಕಾ ॥ ದುರ್ವಾರೇತಿ ॥ ದರ್ವೀಕರಸ್ಸರ್ಪಃ–ಖಗೇಶ್ವರಃ ಗರುತ್ಮಾನ್–ಧ್ವಾಂತಂ ತಮಃ– ರಾಜೀವ ಬಾಂಧವಸ್ಸೂರ್ಯಃ ।

ಅರ್ಥ ॥ ನಿವಾರಿಸಲಿಕ್ಕೆ ಕಠಿಣವಾದಂಥ ಕಡುದರಿದ್ರವೆಂಬ ಸರ್ಪನಿಗೆ ಗರುಡನು; ಅದೇ ತರದ ಅಂದರೆ ನಿವಾರಿಸಲಿಕ್ಕೆ ಕಠಿಣವಾದ ತಾಟಕಿ ಎಂಬ ರಾಕ್ಷಸಿಯ ದೇಹ ರೂಪವಾದ ಕತ್ತಲೆಗೆ ಸೂರ್ಯನು;

ಮೂ। ಶ್ಲೋ। ಸುಬಾಹುಮತ್ತಮಾತಂಗ ಸಂಹಾರ ವರ ಕೇಸರೀ। ಭಾರ್ಗವಾಗ್ರಹ ದಾವಾಗ್ನಿಪರಿಮಾರ್ಜನನಿರ್ಝರಃ ॥ ೮೦ ॥

ಟೀಕಾ ॥ ಸುಬಾಹ್ವೇತಿ ॥ ಮಾತಂಗಃ ಗಜಃ–ಕೇಸರೀ ಸಿಂಹಃ–ಭಾರ್ಗವಸ್ಯ ಪರಶುರಾಮಸ್ಯ–ಆಗ್ರಹಃ ಕ್ರೋಧಃ–ನಿರ್ಝರಃ ಪ್ರವಾಹಃ ॥

ಅರ್ಥ ॥ ಸುಬಾಹು ಎಂಬ ಮದದಾನೆಯನ್ನು ಕೊಂದ ಶ್ರೇಷ್ಠವಾದ ಸಿಂಹವು; ಪರಶುರಾಮನ ಕ್ರೋಧವೆಂಬ ಕಾಡುಗಿಚ್ಚನ್ನು ನೊಂದಿಸಿದ ನೀರಿನ ಒರತೆಯು;

ಮೂ। ಶ್ಲೋ। ವಿರಾಧಾಖ್ಯ ದುರಾತಂಕ ವಿದ್ರಾವಣ ಮಹೌಷಧಂ। ಖರದೂಷಣಕಿಂಪಾಕ ಖಂಡನೈಕ ಪರಶ್ವಥಃ ॥ ೮೧ ॥

ಟೀಕಾ ॥ ವಿರಾಧೇತಿ । ದುರಾತಂಕಸ್ಯ ದುಷ್ಟರೋಗಸ್ಯ ವಿದ್ರಾವಣಂ ನಾಶನಂ–ಕಿಂಪಾಕಃ ವಿಷವೃಕ್ಷಃ ಪರಶ್ವಥಃ ಕುಠಾರಃ ॥

ಅರ್ಥ ॥ ವಿರಾಧ ರಾಕ್ಷಸನೆಂಬ ದುಷ್ಟ ರೋಗವನ್ನು ನಾಶಪಡಿಸಿದ ಶ್ರೇಷ್ಠವಾದ ಮೂಲಿಕೆಯು; ಖರದೂಷಣರೆಂಬ ನಂಜಿನ ಮರಗಳನ್ನು ಕತ್ತರಿಸಿದ ಕೊಡಲಿಯು;

ಮೂ । ಶ್ಲೋ । ದುರ್ಮೋಚನೀಚ ಮಾರೀಚ ಕೀಚಕ ಪ್ರಬಲಾನಲಃ॥ಗೃಧ್ರರಾಜಸ್ಯ ನಾಕಾದಿ ಲೋಕಾಕ್ರಮಣವರ್ತನೀ॥ ೪೨ ॥

ಟೀಕಾ ॥ ದುರ್ಮೋಚೇತಿ । ದುರ್ಮೋಚಃ ದುಸ್ತ್ಯಾಜ್ಯಃ ಕೀಚಕಃ ವೇಣುವಿಶೇಷಃ ವರ್ತನೀ ಏಕಪದೀಮಾರ್ಗಃ ॥

ಅರ್ಥ॥ ದುಸ್ತ್ಯಾಜ್ಯನಾದ ಮತ್ತು ಕೀಳನಾದ ಮಾರೀಚನೆಂಬ ಬಿದುರನ್ನು ಸುಟ್ಟಂಥ ಬಿರುಸಾದ ಬೆಂಕಿಯು; ಗೃಧ್ರರಾಜನಾದ ಜಟಾಯುವಿಗೆ ಸ್ವರ್ಗ ಮೊದಲಾದ ಲೋಕಗಳಿಗೆ ಹೋಗುವದಕ್ಕೆ ಕಾಲುದಾರಿಯು;

ಮೂ। ಶ್ಲೋ। ಕಬಂಧ ಮಯಕಾಸಾರ ಕಬಳೀಕರಣಾತಪಃ। ಶಬರೀ ಚಿತ್ತ ಕುಮುದ ಶಾರದ ಜ್ಯೋತ್ಸ್ನಿಕೋದಯಃ ॥ ೪೩ ॥

ಟೀಕಾ ॥ ಕಬಂಧೇತಿ। ಕಾಸಾರಸ್ಯಸರಸಃ— ಕಬಳೀಕರಣಂ ಶೋಷಣಂ—ಶಬರೀ ಭಕ್ತಾ ರಾಚಿತ್ತ ರಾಶೀ —ಕುಮುದಂ ಶ್ವೇತೋತ್ಪಲಂ ॥

ಅರ್ಥ ॥ ಕಬಂಧನೆಂಬ ರಾಕ್ಷಸ ರೂಪವಾದ ಕೆರೆಯನ್ನು ಬತ್ತಿಸಿದ ಬಿಸಿಲು; ಶಬರಿಯೆಂಬ ಬೇಡತಿಯ ಮನಸ್ಸೆಂಬ ಕನ್ನೈದಿಲೆಗೆ ಶರದೃತುವಿನ ಬೆಳದಿಂಗಳ ಮೂಡಿಕೆಯು;

ಮೂ। ಶ್ಲೋ। ಪಾವಮಾನೀಯಶಃ ಕಾಶಪ್ರಕಾಶ ಶರದಾಗಮಃ। ಪ್ರಗಲ್ಭವಾಲಿಜೀಮೂತ ಪ್ರೋತ್ಸಾರಣ ಸಮೀರಣಃ ॥ ೪೪ ॥

ಟೀಕಾ ॥ ಪಾವಮಾನೀತಿ । ಪಾವಮಾನಿರ್ಹನೂಮಾನ್ — ಕಾಶಾನಿಶರಪುಷ್ಪಾಣಿ ಜೀಮೂತಃ ಮೇಘಃ ಸಮೀರಣಃ ವಾಯುಃ ॥

ಅರ್ಥ ॥ ಹನುಮಂತನ ಕೀರ್ತಿ ಎಂಬ ಶರ ಪುಷ್ಪಗಳಿಗೆ ವೃದ್ಧಿಕರವಾದ ಶರದೃತು ಆಗಮಾನವು; ಕಲಿಯಾದ ವಾಲಿ ಎಂಬ ಮೇಘವನ್ನು ಹಾರಿಸಿಬಿಟ್ಟ ವಾಯುವು;

ಮೂ। ಶ್ಲೋ। ಸುಗ್ರೀವ ರಾಜ್ಯಸಾಮಗ್ರೀ ಸುದಿನಂ ಕಾನನೌಕಸಾಮ್। ದುರ್ನಿರೋಧ ಧುನೀನಾಥ ಜಾಡ್ಯರೋಗಚಿಕಿತ್ಸಕಃ ॥ ೪೫ ॥

ಟೀಕಾ ॥ ಸುಗ್ರೀವೇತಿ ॥ ಸಾಮಗ್ರೀ ಸಾಧನ ಸಂಪತ್ತಿಃ— ಕಾನನೌಕಸಃ ಕಪಯಃ— ಸುದಿನಂ

ಶ್ರೇಯಸ್ಕರದಿವಸಃ ಧುನೀನಾಥಸ್ಯ ಸಮುದ್ರಸ್ಯ ಜಾಡ್ಯಂ ಮೂಢತ್ವಮೇವಶೈತ್ಯರೋಗಃ_ಚಿಕಿತ್ಸಕಃ ವೈದಃ||

ಅರ್ಥ॥ ಸುಗ್ರೀವನ ಅರಸುತನಕ್ಕೆ ಸಾಧನವಾದ ಸಾಹಿತ್ಯವು; ಮಂಗಗಳ ಮಂಗಲ ದಿವಸವು; ತಡಿಸಲಿಕ್ಕೆ ಕಠಿಣವಾದ ಸಮುದ್ರನ ಶೀತರೋಗಕ್ಕೆ ಮದ್ದುಗಾರನು;

ಮೂ।ಶ್ಲೋ। ದುಷ್ಟನಕ್ತಂಚರಸ್ತೋಮ ಧೂಮಕೇತುವಿಜೃಂಭಣಂ। ಕುಂಭಕರ್ಣ ಮದಾಂಭೋಧಿ ಸ್ತಂಭನೇ ಕುಂಭ ಸಂಭವಃ ॥೪೬॥

ಟೀಕಾ॥ ದುಷ್ಟೇತಿ। ಧೂಮಕೇತುರುತ್ಪಾತಃ ಸವಾಲನಕ್ಷತ್ರಂ_ ಕುಂಭಸಂಭವಃ ಅಗಸ್ತ್ಯಃ॥

ಅರ್ಥ॥ ಕ್ರೂರವಾದ ರಾಕ್ಷಸ ಸಮೂಹಕ್ಕೆ ಧೂಮಕೇತು ಅಂದರೆ ಬಾಲಚಿಕ್ಕಿಯ ವಿಸ್ತಾರವು; ಕುಂಭಕರ್ಣನೆಂಬ ಉಬ್ಬಿದ ಕಡಲನ್ನು ಶೋಷಣ ಮಾಡುವದರಲ್ಲಿ ಅಗಸ್ತ್ಯನು.

ಮೂ।ಶ್ಲೋ। ಬಲೀಯೋ ರಾವಣಪ್ರಾಣ ಪಾಷಾಣದಳನಾಶನಿಃ। ವಿಭೀಷಣಸ್ಯಸಾಮ್ರಾಜ್ಯ ವಿಶ್ರಾಣನಸುರದ್ರುಮಃ ॥೪೭॥

ಟೀಕಾ॥ ಬಲೀಯ ಇತೀ। ಬಲೀಯರ್ಾ ಬಲಿಷ್ಠಃ ಪವಿಃ ವಜ್ರಾಯುಧಂ॥

ಅರ್ಥ॥ ಬಲಿಷ್ಠನಾದ ರಾವಣನ ಜೀವವೆಂಬ ಬಂಡೆ ಶೀಳಿದ ವಜ್ರವು; ವಿಭೀಷಣನಿಗೆ ರಾಜ್ಯಕೊಟ್ಟ ಕಲ್ಪವೃಕ್ಷವು.

ಮೂ] ಶ್ಲೋ। ಅಯೋಧ್ಯಾ ಪುರನಾರೀಣಾಮ ಕ್ಷ್ಣೋರತ್ಯದ್ಭುತೋತ್ಸವಃ *। ರಮತೇ ಮಮತೇಜಸ್ವೀರಾಮಃ ಕಾಮಸಮೋಹೃದಿ॥೪೮॥

ಟೀಕಾ॥ ಅಯೋಧ್ಯೇತಿ। ಕಾಮಸಮ ಇತ್ಯುಪಮಾ_ರಮತೇ ಕ್ರೀಡತಿ_ಸರ್ವದಾ ತಂಭಜಾಮಿ ಇತ್ಯರ್ಥಃ॥ ಉಕ್ತವಿಶೇಷಣಾನಿ ಕ್ರಮೇಣರಾಮಾಯಣ ಕಥಾಸೂಚಕಾನಿ॥

ಅರ್ಥ॥ ಅಯೋಧ್ಯಾ ಪಟ್ಟಣದ ಹೆಣ್ಣಗಳ ಕಣ್ಣಗಳಿಗೆ ಆನಂದ ಪಡಿಸಿದ ಸೋಜಿಗವಾದ ಉತ್ಸಹವು। (ಈ ಪ್ರಕಾರವಾಗಿ) ಮಹಿಮೆಯುಳ್ಳವನಾದಂಥಾ ಮತ್ತು ಮನ್ಮಥನಿಗೆ

* "ಅಭಿಷಿಕ್ತೋಯಥಾವ ಚ್ಚ ವಸಿಷ್ಠಾದ್ಯೈರ್ಮಹರ್ಷಿಭಿಃ"ಇತ್ಯಧಿಕಂ ಪುಸ್ತಕಾಂತರೇ॥

ಜೋಡಾದಂಥಾ ರಾಮನು ನನ್ನ ಹೃದಯದಲ್ಲಿ ಆಡುತ್ತಾನೆ.

ಮೂ। ಶ್ಲೋ। ಅತ್ರಕಿಲ ಪವಿತ್ರ ಚರಿತ್ರಃ ಕಶ್ಚಿದ್ವಿ ಪಶ್ಚಿದ
ಜಸ್ರಮಿತ್ಥಮನು ಸಂಧತ್ತೇ ॥ ೮೯ ॥

ಟೀಕಾ ॥ ಅತ್ರೇತಿ ॥ ಕಶ್ಚಿದ್ವಿ ಪಶ್ಚಿದೇತತ್ಕಾವ್ಯ ಕರ್ತಾ– ಏವಮಗ್ರೇಪಿ ॥

ಅರ್ಥ ॥ ಇದೇ ವಿಷಯವಾಗಿ ಶುದ್ಧ ನಡತೆಯುಳ್ಳ ಒಬ್ಬಾನೊಬ್ಬ ಕವಿಯು ಯಾವಾಗಲೂ ಕೆಳಗೆ ಹೇಳಲ್ಪಡುವ ಮೇರೆಗೆ ಧ್ಯಾನವನ್ನು ಮಾಡುತ್ತಾನೆ.

ಮೂ । ಶ್ಲೋ । ಧ್ಯಾಯಾಮಿರಾಮಮಭಿರಾಮಗಿರಾಮ ರಂ
ದಧಾರಾಮದಘ್ನಮಿತರಾಮ ಮರೇರ್ವಿರಾಮಂ । ಆರಾಮಮ
ದ್ಭುತತರಾಮಲ ಸದ್ಗುಣಾನಾಂ ಘೋರಾಮಯಘ್ನ ಮಸು
ರಾಮರವಂದಿತಾಂಘ್ರಿಂ ॥ ೯೦ ॥

ಟೀಕಾ ॥ ಧ್ಯಾಯಾಮಿತಿ । ಅಭಿರಾಮಯಾಗಿರಾವಾಚಾ ಮಧುರಯೇತ್ಯರ್ಥಃ–ಮರಂದಸ್ಯ ಮಕರಂದಸ್ಯ ಧಾರಾಯಾಮದಂಹಂತೀತಿಮದಘ್ನಂ ಇತಾಪ್ರಾಪ್ತಾರಾಮಾ ಸೀತಾಯೇನತಂ– ಅರೇಃ ಶತ್ರೋಃ– ಜಾತಾವೇಕವಚನಂ– ವಿರಾಮಂನಾಶಕಂ– ಅದ್ಭುತತರಾಣಾಂ ಅಮಲಾನಾಂ ಸತಾಂ ಚಗುಣಾನಾಂ ಆರಾಮಮಾಸ್ಪದ ಮಿತ್ಯರ್ಥಃ ಘೋರಮಾಮಯಂ ಸಂಸಾರರೋಗಂ ಹಂತೀತಿತದ್ಘ್ನಂ ಅಸುರೈರಮರೈಶ್ಚ ವಂದಿತಾಂಘ್ರಿಂ ಧ್ಯಾಯಾಮಿ ॥

ಅರ್ಥ ॥ ಮಧುರವಾದ ವಾಗ್ರಸಧಾರೆಯ ಸೊಕ್ಕನ್ನು ಮುರಿದವನಾದಂಥಾ; ಸೀತೆಯನ್ನು ಪ್ರಾಪ್ತ ಮಾಡಿಕೊಂಡಂಥಾ ಶತ್ರುನಾಶಕನಾದಂಥಾ, ಅತಿ ಸೋಜಿಗವಾದ ಮತ್ತು ನಿಷ್ಕಲಂಕವಾದ ಸದ್ಗುಣಗಳ ತೋಟವಾದಂಥಾ, ಕಡು ಕಠಿಣವಾದ ಸಂಸಾರರೋಗವನ್ನು ನಾಶ ಪಡಿಸುವಂಥಾ, ಮತ್ತು ದೇವ ದೈತ್ಯರುಗಳಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳಂಥಾ ರಾಮನನ್ನು ಸ್ಮರಿಸುತ್ತೇನೆ.

ಮೂ। ಶ್ಲೋ। ದಯಾಸಮುದಯಾಲಯೆ ಮುದಧಿಕಾನನೆ ಕಾನ
ನೆಪಲಾಶನಪಲಾಯನ ಪ್ರಣಯಿಕಾರ್ಮುಕೆ ಧಾರ್ಮಿಕೆ। ಸವೀರ
ಜನವಿಮೋಡಿತೆ ಪ್ರವಿಶಚಿತ್ತಮೆ ಸತ್ತಮೆ ಬಲೀಕೃತವಲೀಮುಖೆ
ಮನುಜಧರ್ಮಣಿ ಬ್ರಹ್ಮಣಿ ॥ ೯೧ ॥

ಟೀಕಾ ॥ ದಯೇತಿ ॥ ದಯಾಯಾಃ ಸಮುದಯಸ್ಯರಾಶೇಃ ಆಲಯೆ ಸ್ಥಾನೆ–ಕಾನನೇಪಿ–ಮುದಾ ಅಧಿಕಂ ಸರ್ವೋನ್ನತಮಾನನಂ ಯಸ್ಯತಸ್ಮಿನ್–ಪಲಾಶನಾನಾಂ ರಾಕ್ಷಸಾನಾಂ ಪಲಾಯನೆ ಪಿದ್ರಾವಣೆ ಪ್ರಣಾಯಿಪರಿಚಯವತ್ ಕಾರ್ಮುಕಂ ಧನುಃ ಯಸ್ಯತಸ್ಮಿನ್ ಧಾರ್ಮಿಕೆ–ಸವೀರಜನವಿಮೋಡಿತೆ

ಹನೂಮತ್ ಸ್ತುತೆ—ಸತ್ತಮೆ—ಬಲೀಕೃತಾಃ ವಲೀಮುಖಾಃ ಕಪಯೋಯೇನತಸ್ಮಿನ್—ಮನುಜಧರ್ಮಿ ಣಿ ಬ್ರಹ್ಮಣಿ ಶ್ರೀರಾಮೆ—ಮೇಚೆತ್ತಹೇಮದೀಯಮನಃ—ಪ್ರವಿಶ— ತಂಭಜೇತ್ಯರ್ಥಃ ||

ಅರ್ಥ || ಕರುಣಾರಾಶಿಗೆ ಮನೆಯಾದಂಥಾ, ಹಿರಿದಾದ ಸಂತೋಷದಿಂದ ತುಂಬಿದ ಮುಖ ಉಳ್ಳಂಥಾ, ಅಡವಿಯೊಳಗೆ ಮಾಂಸಭಕ್ಷಕರಾದ ರಾಕ್ಷಸರನ್ನು ಓಡಿಸುವದರಲ್ಲಿ ಬಳಿಕೆಯಾದ ಧನುಸ್ಸು ಉಳ್ಳಂಥಾ, ಶ್ರುತಿಸ್ಮೃತಿಗಳಿಂದ ವಿಧಾ ಡು ಮಾಡಲ್ಪಟ್ಟ ಕಟ್ಟಳೆಗಳ ಮೇರೆಗೆ ನಡೆದಂಥಾ, ಹನುಮಂತನಿಂದ ಸ್ತುತಿಸಲ ಟ್ಟಂಥಾ, ಕಪಿಗಳನ್ನು ಬಲಿಷ್ಟರಾಗಿ ಮಾಡಿದಂಥಾ, ಮನುಷ್ಯರಂತೆ ನಡಕೊಂಡಂಥಾ, ಜಗತ್ತಿನ ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣವಾದ ಬ್ರಹ್ಮ ಸ್ವರೂಪವಾದಂಥಾ, ಪರವಸ್ತು ವಿನಲ್ಲಿ ( ಶ್ರೀ ರಾಮನಲ್ಲಿ ) ಎಲೇ ನನ್ನ ಮನಸ್ಸೇ ಪ್ರವೇಶಮಾಡು.

ಮೂ। ಶ್ಲೋ। ಅಸ್ತ್ರಮಾಸತೃಣಂ ಪ್ರಿಯಾದ್ರುಹಿತೃಣಾ ಮಾಸಸ್ಮರಾರೇರ್ಧನುರ್ದಾರಾಮಾಸ ಮುನೇಶ್ಶಿಲಾಪಿನೃವರಾಮಾ ಸಸ್ವಯಂ ಪಾದುಕಾ। ಕುಲ್ಯಾಮಾಸ ಮಹಾರ್ಣವೋಪಿ ಕಪ ಯೋ ಯೋಧಾಂಬಭೂವುಸ್ತಥಾ ಪೌಲಸ್ತ್ಯೋಮಶಕಾಂಬಭೂ ವ * ಬಹುನಾತ್ವಂಮಾನುಷಾಮಾಸಿಥಾಃ || ೯೨ ||

ಟೀಕಾ || ಅಸ್ತ್ರಮಾಸೇತಿ || ಹೇ ಭಗವನ್ ಶ್ರೀ ರಾಮ— ತವ—ತೃಣಂ—ಪ್ರಿಯಾಯೈದ್ರುಹ್ಯತೀತಿ ಪ್ರಿಯಾದ್ರುಟ್‌ತಸ್ಮಿನ್ ಕಾಕಾಸುರೆ ವಿಷಯೆ— ಅಸ್ತ್ರಮಾಸ ಆಯುಧವದಾಚಚಾರ— ಅಸ್ತ್ರಾದಿ ಶಬ್ದಾದಾಚಾರಾರ್ಥೆ ಕ್ವಿಪಿ ಅನೇಕಾಲ್ತ್ವಾಲ್ಲಿಟ್ಯಾಮಾದೇಶೇನಾಸ್ತೇರ್ಭವತೇರ್ವಾನುಪ್ರಯೋಗಃ— ಸ್ಮರಾರೇಃ ಧನುಃ ಶಿವಚಾಪಃ— ತೃಣಾಮಾಸ—ಶಿಲಾಪಿ—ಮುನೇರ್ಗೌತಮಸ್ಯದಾರಾಮಾಸ—ಪಾದುಕಾತ್ವ ದೀಯಾ— ಸ್ವಯಂ—ನೃವರಾಮಾಸ—ರಾಜಾಬಭೂವ—ಭರತೇನ ತಸ್ಯಾಂ ರಾಜ್ಯಾರ್ಪಣಾದಿತಿಭಾವಃ—ಮಹಾರ್ಣ ವೋಪಿಕುಲ್ಯಾಮಾಸ ಕಪಯೋಪಿ ಯೋಧಾಂಬಭೂವುಃ—ತಥಾತಾದೃಶಃ— ಪೌಲಸ್ತ್ಯಃ ರಾವಣಃ— ಮಶಕಾಂಬಭೂವ—ಕಿಂಬಹುನಾ—ತ್ವಂಮಾನುಷಾಮಾಸಿಥಾಃ ||

ಅರ್ಥ || ಎಲಾ ರಾಮನೇ, ನೀನು ಬಿಟ್ಟ ಹುಲ್ಲುಕಡ್ಡಿಯು ನಿನ್ನ ಕಾಂತೆಯಾದ ಸೀತಾ ದೇವಿಯನ್ನು ಕುರಿತು ಅಪರಾಧಮಾಡಿದ ಕಾಕಾಸುರನ ವಿಷಯದಲ್ಲಿ ಬಾ ಣದಂತೆ ಕೆಲಸ ಮಾಡಿತು; ( ನಿನ್ನಿಂದ ) ಮನ್ಮಥನ ವೈರಿಯಾದ ಶಂಕರನ ಧನುಸ್ಸು ಹುಲ್ಲಿನಂತೆ ಆಯಿತು; ಶಿಲೆ ಅಂದರೆ ಕಲ್ಲು ಗೌತಮ ಋಷಿಯ ಹೆಂಡತಿಯಾಯಿತು; ನಿನ್ನ ಪಾದುಕೆಗಳು ಅರಸಾದವು; (ರಾಮನು ಅರಣ್ಯಕ್ಕೆ ಹೋದ ಮೇಲೆ ಭರತನು ತಾನು ಗದ್ದುಗೆ ಏರಲಿಲ್ಲವು, ರಾಜ್ಯವನ್ನು ಶ್ರೀ ರಾಮನ ಪಾದುಕೆಗಳಲ್ಲಿ ಅರ್ಪಿಸಿ ನಡ ಕೊಂಡನು ಎಂಬ ಕಥೆ ರಾಮಾಯಣದಲ್ಲ ಉಂಟು. ) ವಿಸ್ತಾರವಾದ ಸಮುದ್ರವು

---

* ಭಗವನ್ನಿತಿ ಪಾಠಾಂತರಂ ||

ಕೂಡ ಕಾಲ್ಪವೆಂದರೆ ಕಾಲಿಪೆಯಂತೆ ಆಯಿತು; ಮಂಗಗಳು ರಣಭಟರಂತೆ ಆದವು; ಹಾಗೆಯೇ ರಾವಣನು ನುಸಿಯಂತೆ ಆದನು; ಬಹಳ ಏನು ಬಣ್ಣಿಸಲಿ-- ನೀನು ಮನುಷ್ಯನಂತೆ ನಡಕೊಂಡಿಯು.

ಮೂ। ಶ್ಲೋ। ಅಶಿಲಾಪ್ರಾಣದ ಪದ್ಯೈರಚರಾಚರ ಮುಕ್ತಿದೈಃ।
ಅಸರ್ವಭೂತಾ ಭಯದ್ಯೈರ ಶರ್ವಧನುರರ್ದನೈಃ ॥ ೯೩ ॥

ಅಬ್ರಹ್ಮಾಸ್ತ್ರೀಕೃತ ತೃಣೈರತೃಣೀಕೃತರಾವಣೈಃ। ಅಲಂ
ಕಾತರ ದೇವೈಸ್ತ್ರೈರಲಂಕಾಪುರಸಾಧಕೈಃ ॥ ೯೪ ॥

ಟೀಕಾ ॥ ಅಶಿಲೇತಿ। ಶ್ಲೋಕದ್ವಯಮೇಕಂ ವಾಕ್ಯಂ। ಅರ್ದನಂ ಭಂಜನಂ--ಕಾತರಾಃ ಭೀತಾಃ ಅಲಮಿತಿನಿ ಷೇಧೆ--ಈ ದೃತಾದೇವಾಮಾಸಂತ್ವಿತ್ಯರ್ಥಃ ॥

ಅರ್ಥ॥ (ಎರಡು ಶ್ಲೋಕಗಳು ಕೂಡಿ ಒಂದೇ ವಾಕ್ಯವು.) ಪಾಷಾಣಕ್ಕೆ ಜೀವ ಕೊಡಲಾರದಂಥಾ, ಸ್ಥಾವರಜಂಗಮರೂಪಕವಾದ ಜಗತ್ತಿಗೆ ಮೋಕ್ಷ ಕೊಡಲಾರದಂಥಾ, ಎಲ್ಲಾ ಪ್ರಾಣಿಗಳಿಗೆ ಅಂಜಬೇಡಿರಿ ಎಂದು ಅಭಯ ಕೊಡಲಾರದಂಥಾ, ಶಂಕರನ ಬಾಣ ಮುರಿಯಲಿಕ್ಕೆ ಅಶಕ್ಯವಾದಂಥಾ, ಬ್ರಹ್ಮಾಸ್ತ್ರವನ್ನು ಹುಲ್ಲುಕಡ್ಡಿಯಾಗಿ ಮಾಡಲಾರದಂಥಾ, ರಾವಣನನ್ನು ಹುಲ್ಲುಕಟ್ಟಿಯಂತೆ ಮಾಡಲಾರದಂಥಾ, ಅಂಜುಗುಳಿಯರಾದಂಥಾ, ಲಂಕಾಪಟ್ಟಣವನ್ನು ಕೈವಶಮಾಡಿಕೊಳ್ಳಲಾರದಂಥಾ, ದೇವರು ಸಾಕೈಯ್ಯಾ ಸಾಕು! ಅಂದರೆ ಇಂಥಾ ದೇವರು ಇರದೇ ಹೋಗಲೀ ಎಂಬ ತಾತ್ಪರ್ಯವು.

## ಗಂಗಾನದೀ ವರ್ಣನಂ ॥

ಮೂ। ಇತಿವಿಮಾನಂ ದಕ್ಷಿಣತಃ ಪ್ರಸ್ಥಾಪ್ಯ॥ ಕೃಶಾನುಮುದ್ದಿಶ್ಯ॥

ಈ ಮೇರಿಗೆ ಹೊಗಳಿ, ವಿಮಾನವನ್ನು ತೆಂಕಣದಿಕ್ಕಿಗೆ ನಡಿಸಿ, ಕೃಶಾನುವನ್ನ ಕುರಿತು (ವಿಶ್ವಾಸು ಹೇಳುತ್ತಾನೆ.)

ಮೂ। ಶ್ಲೋ। ಶಿಥಿಲಿತಭವಖೇದಾ ಶ್ಲಿಷ್ಟ ವೈಕುಂಠಪಾದಾ ಕೃತವಿಪದಪನೋದಾ*ಕ್ಲಿಪ್ತಚಿತ್ತಪ್ರಸಾದಾ। ವಿಮಲತರತರಂಗಾ ವಿಶ್ರುತಾಂಭೋಧಿಸಂಗಾ ವಿಹಿತ ದುರಿತಭಂಗಾ ವೀಕ್ಷತಾಮತ್ರ

* ಕ್ಲಿಪ್ತಚಿತ್ತಪ್ರಮೋದಾ ಇತಿಪಾಠಾಂತರಂ ॥

ಗಂಗಾ ॥ ೯೫ ॥

ಟೀಕಾ ॥ ಶಿಥಿಲಿತೇತಿ। ಶಿಥಿಲಿತಃ ಮೋಚಿತಃ ಭವಾತ್ಸಂಸಾರಾತ್ ಖೇದಃ ಯಯಾಸಾ–ಶ್ಲಿಷ್ಟಃ ಆಶ್ರಿತಃ ವೈಕುಂಠಸ್ಯಪಾದಃ ಯಯಾಸಾ–ಕೃತಃ ವಿಪದಾಂ ಅಪನೋದಃ ವಾರಣಂ ಯಯಾಸಾ–ಕ್ಲಿಷ್ಟಾನಾಂ ಚಿತ್ತಸ್ಯ ಪ್ರಸಾದಃ ದುಃಖರಾಹಿತ್ಯರೂಪಂ ನೈರ್ಮಲ್ಯಂ ಯತಸ್ಸಾತಜ್ಜನ ಕೇತ್ಯರ್ಥಃ– ವಿಮಲತರತರಂಗಾ–ವಿಶ್ರುತಾಂಭೋಧಿಸಂಗಾ– ವಿಹಿತಃ ಕೃತಃ ದುರಿತಭಂಗಃ ಯಯಾಸಾ–ಗಂಗಾ–ಅತ್ರಪುರೋದೇಶೇವೀಕ್ಷ್ಯತಾಂ ॥

ಅರ್ಥ ॥ ಸಂಸಾರ ದುಃಖವನ್ನು ಸಡಲಿಸಿದಂಥಾವಳಾದ, ವಿಷ್ಣುವಿನ ಅಡಿಯನ್ನು ಆಶ್ರಯಿಸಿದವಳಾದ, ವಿಪತ್ತಿಗಳನ್ನು ನಿವಾರಿಸಿದವಳಾದ, ದುಃಖಿತರ ಮನಸ್ಸುಗಳಿಗೆ ಸುಖವನ್ನು ಕೊಡುವಂಥವಳಾದ, ಅತಿಸ್ವಚ್ಛವಾದ ನೀರು ಗುಳ್ಳೆಗಳುಳ್ಳವಳಾದ, ಪ್ರಸಿದ್ಧವಾದ ಸಮುದ್ರ ಕೂಡುವಿಕೆಯುಳ್ಳವಳಾದ, ಪಾಪಗಳ ನಾಶಮಾಡಿದವಳಾದ ಗಂಗಾನದಿಯು, ಇದೇ ಎದುರಿಗಿದೆ ನೋಡು.

ಕೃಶಾನುಃ ॥

ಮೂ। ಉಪೇಕ್ಷಣೀಯಾನಿ ಭಾಗೀರಥೀಯಾನಿಪಾನೀಯಾನಿ
ಕಿಮಿತಿವೀಕ್ಷಣೀಯಾನಿ ॥

ಟೀಕಾ॥ ಉಪೇಕ್ಷಣೀಯಾನೀತಿ। ಉಪೇಕ್ಷಣೀಯಾನ್ಯನಾದರಣೀಯಾನಿ ಉಪಸಮೀಪೇ ಈಕ್ಷಣೀಯಾನಿ ದರ್ಶನೀಯಾನೀತಿಚ ॥

ಅರ್ಥ ॥ ೧. ಆದರಕ್ಕೆ ಅನರ್ಹವಾದ ಗಂಗಾನದಿಯು ಏನೆಂತಾ ನೋಡಲಿಕ್ಕೆ ಯೋಗ್ಯವಾದದ್ದು ?

೨. ಸಮೀಪ ಕಾಣುವ ಈ ಗಂಗಾನದಿಯು ದೃಷ್ಟಿಗೆ ಚಂದವಾದದ್ದು.

ಮೂ। ಯತಃ ॥ ಏಷಾಂಜನಿಶ್ಚರಣತಸ್ತುಹಿರಣ್ಯ ಹರ್ತುರ್ದೋಷಾ ಕರೇಣ ಗುರುದಾರ ವಿಟೀನಮೌಳೌ*। ಬ್ರಹ್ಮೋತ್ತ ಮಾಂಗ
ಭಿದ ಏಪಸುಹಸ್ಥಿತಿಶ್ಚ ಖ್ಯಾತೋ ಲಯೊ ಜಲನಿಧೌಕಿಲ ಗಾಂಗ
ವಾರಾಂ ॥ ೯೬ ॥

ಟೀಕಾ॥ ಏಷಾಮಿತಿ। ಏಷಾಂಗಾಂಗಾನಾಂ ವಾರಾಂಜಲಾನಾಂ–ಜನಿಃ ಜನ್ಮತು–ಹಿರಣ್ಯಹರ್ತುಃ ಸ್ವರ್ಣಸ್ತೇಯಿನಃ–ಚರಣಾಂ ಕರ್ಮ–ಸ್ವರ್ಣಸ್ತೇಯಃ ತಸ್ಮಾನ್ಮಹಾ ಪಾತಕಾತ್–ಖ್ಯಾತಾ ಪ್ರಸಿದ್ಧಾ–ಬ್ರಹ್ಮಣಃ ಬ್ರಾಹ್ಮಣಸ್ಯ ಉತ್ತಮಾಂಗಭಿದಃ ಶಿರಶ್ಛೇತ್ತುಃ ಮೌಳೌ– ಗುರೋರಾಚಾರ್ಯಸ್ಯದಾರಾಣಾಂ

* ಮೂರ್ಧ್ನೀ ಇತಿಪಾಠಾಂತರಂ ॥

ವಿಡೇನ—ಅತಿಪಿಪದೋಷಾಣಾಂ ಸರ್ವೇಷಾಂ ಆಕರೇಣ ಸ್ಥಾನೇನ ಸಹ—ಯೇಷಾಂ—ಸ್ಥಿತಿರ್ವಾಸಃ—ಅನೇನತತ್ಸಂಯೋಗಪಾತಕ ಮವ್ಯಕ್ತಂ—ಜಡಾನಾಂ ಮೂಢಾನಾಂ ಮದ್ಯಪಾಯಿನಾಮಿತಿ ಯಾವತ್ತನ್ನಿಧೌ—ಯೇಷಾಂ—ಮೀಯತೇ ಅನ್ಯೋನ್ಯೈಕೀಭೂಯತ ಇತಿಲಯಃ ಮೈತ್ರೀ—ಖ್ಯಾತ ಇತಿಯಥಾಯೋಗಂ ಸರ್ವತ) ಯೋಜ್ಯಂ—ಅನೇನಸುರಾಪಾನಂ ಸೂಚ್ಯತೇ—ಶಥಾಚ ಮಹಾಪಾತಕ ಪಂಚಕಾಶ್ರಯಾಣಿ ಗಂಗಾಜಲಾನೀತಿ ಪ್ರಾಪ್ತೀತಿ ಕೋರ್ಥಃ—ವಾಸ್ತವಸ್ತು—ಹಿರಣ್ಯೋ ಹಿರಣ್ಯಾ ಕಶಿಪುನಾರ್ಮ ದೈತ್ಯಕದೇಶ ಗೃಹಣಾಂ—ತದ್ಧರ್ತುರ್ವಿಷ್ಣೋಃ— ಪಾದಾಜ್ಜನ್ಮ— ಬ್ರಹ್ಮಕಪಾಲಧಾರಿಣಶ್ಶಿವಸ್ಯ ಮೌಳೌ—ಬೃಹಸ್ಪತಿ ಪತ್ನೀ ವಿಡೇನ ನಿಶಾಕರೇಣ ಸಹಸ್ಥಿತಿಃ ಸಮುದ್ರ ಮೇಳನಮಿತಿ ||

ಅರ್ಥ ॥ ಈಶ್ಲೋಕಕ್ಕೆ ಎರಡು ಅರ್ಥಗಳುಂಟು. ಮೊದಲನೇದು: ಈ ಗಂಗಾನದಿಯು ನೀರು ಚಿನ್ನ ಕಳವು ಮಾಡಿದವನಿಂದ ಹುಟ್ಟಿದೆಂತಲೂ, ಬ್ರಹ್ಮನ ತಲೆ ಕತ್ತರಿಸಿದವನ ಶಿರಸ್ಸಿನಲ್ಲಿ, ಉಪಾಧ್ಯಾಯನ ಹೆಂಡತಿಯೊಡನೆ ಹಾದರ ಮಾಡಿದವನಾದ ಸಕಲ ತಪ್ಪುಗಳಿಗೆ ಎಡೆಯಾದ ಚಂದ್ರನ ಜತೆಯಲ್ಲಿ, ವಾಸ್ತವ್ಯ ಮಾಡುವಂಥಾದೆಂತಲೂ, ಅಥವಾ ಮದ್ಯ ಕುಡಿಯುವವರ ಸಂಗಡ ಸ್ನೇಹ ಮಾಡಿಕೊಂಡಿರುವಂಥಾದೆಂತಲೂ, ಎಲ್ಲರಿಗು ತಿಳದಿರುತ್ತೆ; ಅಂದರೆ ಗಂಗಾಜಲವು ಪಂಚಮಹಾ ಪಾತಕಗಳಿಗೆ ಎಡೆಯಾಗಿರತ್ತದೆ ಎಂಬ ತಾತ್ಪರ್ಯವು; ಇದು ಬಹಿರ ಅಂದರೆ ತೋರಿಕೆಯ ಅರ್ಥವು;

ಎರಡನೇದು: ಈ ಗಂಗಾನದಿಯು ಹಿರಣ್ಯಕಶಿಪು ಎಂಬ ದೈತ್ಯನನ್ನು ಕೊಂದವನ ಅಡಿಯೊಳಗಿಂದ ಹುಟ್ಟಿದಂಥಾದ್ದೆಂತಲೂ, ಬ್ರಹ್ಮಕಪಾಲ ಧರಿಸಿಕೊಂಡ ಶಿವನ ನೆತ್ತಿಯಲ್ಲಿ ಚಂದ್ರನ ಸಂಗಡ ವಾಸಮಾಡುವಂಥಾದ್ದೆಂತಲೂ, ಸಮುದ್ರಕ್ಕೆ ಕೂಡಿದೆಂತಲೂ, ಪ್ರಸಿದ್ಧವಾಗಿದೆ. ಇದು ವಾಸ್ತವಿಕವಾದ ಅರ್ಥವು.

## ವಿಶ್ವಾವಸುಃ ॥

ಮೂ। ಮಂದ ಮತೆ ಕಿಂ ಮುಕುಂದಪಾದಾರವಿಂದ ಮರಂದ ಧಾರಾಧುನೀಮಪಿನಿಂದಸಿ ॥ ೯೭ ॥

ಅರ್ಥ ॥ ಎಲಾ ಮೂಢಬುದ್ಧಿಯಾದ ಕೃಶಾನುವೆ, ಇದೇನು ಶ್ರೀವಿಷ್ಣುವಿನ ಅಡಿದಾವರೆಯ ಮಧುರ ರಸಪ್ರವಾಹವಾದ ಗಂಗಾನದಿಯನ್ನು ಹೀಕರಿಸುತ್ತೀಯಾ ?

ಮೂ। ಪಶ್ಯ।

ಶ್ಲೋ। ಗಾಂಗಾನಿ ವಾರಿ ಗರುಡಧ್ವಜಪಾದ ಪದ್ಮಾ ದಾವಿರ್ಭೂವುರ ಪುನನ್ ಪುನರಿಂದು ಮೌಳಿಂ। ನಿನ್ಯುರ್ವಿ ಚಿತ್ರ ಮಮೃತಂ ಸಗರಾನ್ವಯಂಚ * ನಾತೋಧಿಕಂ ಭುವಿಪವಿತ್ರ ತಮಂ

---

* ನೇಶೋಧಿಕ ಮಿತಿಪಾಠಾಂತರಂ ||

ಸಮಂವಾ ॥ ೯೮ ॥

ಟೀಕಾ । ಗಾಂಗಾನೀತಿ ॥ ಗಾಂಗಾನಿ— ವಾರಿಜಲಾನಿ— ಶೇಷಾಂತಮಿದಂ— ಗರುಡಧ್ವಜಪಾದಪದ್ಮಾದಾವಿರ್ಭೂವ್ನಃ—ಇಂದುಮೌಳಿಂಪುನಃ— ಅಪುನರ್ಪವಿತ್ರೀಚಕ್ರುಃ— ವಿಚಿತ್ರಂ ದೃಷ್ಟಂ— ಸಗರಸ್ಯರಾಜ್ಞಃ— ಅನ್ವಯಂಪುತ್ರಸಮೂಹಮಿತ್ಯರ್ಥಃ— ಅಮೃತಂ ಸ್ವರ್ಗಂ— ನವಿದ್ಯತೆಮರಣಂ ಯತ್ರೇತಿವ್ಯುತ್ಪತ್ತೇಃ— ನಿನ್ಯುರ್ಗಮಯಾಮಾಸುಃ— ಅತಇತಃ ಗಂಗಾಜಲೇಭ್ಯಃ— ಅಧಿಕಂಪವಿತ್ರತಮಂ— ಭುವಿನಾಸ್ತಿ—ಅತಃ ಏಷಾಂ—ಸಾರ್ವವಿಭಕ್ತಿಕಸ್ತಸಿಲ್ ಸಮಂಪವಿತ್ರತಮಂವಾನಾಸ್ತಿ ಕಿಂತುನ್ಯೂನಾನ್ಯೇವಾತಸ್ಸರ್ವಾಣೀತ್ಯರ್ಥಃ ॥

ಅರ್ಥ ॥ ನೋಡು! ಗಂಗೆಯ ನೀರು ಶ್ರೀ ವಿಷ್ಣುವಿನ ಅಡಿದಾವರೆಯಿಂದ ಹುಟ್ಟಿತು; ಮತ್ತು ಚಂದ್ರನನ್ನು ಶಿರಸ್ಸಿನ ಮೇಲೆ ಧರಿಸಿ ಕೊಂಡಿರುವ ಶ್ರೀ ಮಹಾದೇವನನ್ನು ಪಾವನ ಮಾಡಿತು; ವಿಚಿತ್ರವಾದ ಸಗರರಾಜನ ಮಕ್ಕಳುಗಳನ್ನು ಸ್ವರ್ಗವನ್ನು ಕುರಿತು ಮುಟ್ಟಿಸಿತು; ಇಂಥ ಗಂಗಾಜಲಕ್ಕೆ ಸರಿಯಾದ, ಅಥವಾ ಅದಕ್ಕಿಂತಲೂ ಹಿರಿದಾದದ್ದು ಅಥವಾ ಹೆಚ್ಚು ಶುದ್ಧವಾದದ್ದು ಏನೂ ಇಳೆಯಲ್ಲಿರುವದಿಲ್ಲವು.

ಮೂ। ಶ್ಲೋ। ಸಾಸರ್ವತೋ ಮುಖಮತೀತ್ರಪಿಬನೀಸರಾಗಾಂ ಮೂರ್ತಿರ್ವಿಧೇರಿವಬಿಭರ್ತಿ ಸರಸ್ವತೀಂಚ। ಭೇದಸ್ತ್ವಯಾನ್ ಬಲಿಜಿತಶ್ಚರಣಾರವಿಂದಾ ದಾದ್ಯಾ ಬಭೂವಚರಮಾಕಿಲನಾಭಿಪದ್ಮಾತ್ ॥ ೯೯ ॥

ಟೀಕಾ ॥ ಸೇತಿ ॥ ಸರ್ವತೋಮುಖಂಜಲಂ— ಸರ್ವತಃ ಚತುಃಪಾರ್ಶ್ವೇಷುಮುಖಾನಿಚತದ್ವತೀ— ಪುಷ್ಕರಂ ಸರ್ವತೋಮುಖಮಿತಿಜಲಪರ್ಯಾಯೇಷ್ವಮರಃ—ಸಾಗಂಗಾ— ವಿಧೇರ್ಬ್ರಹ್ಮಣಃ— ಮೂರ್ತಿಶ್ಶರೀರಮಿವ— ರಾಗೇಣ ಆರುಣ್ಯೇನ ಅನುರಾಗೇಣಚಸಹಿತಾಂಸರಾಗಾಂ— ಸರಸ್ವತೀಂನಾಮನದೀಂವಾಣೀಂಚ—ಬಿಭರ್ತಿಚ— ಕಿಂತು— ಆದ್ಯಾದ್ವಯೋಃ ಪ್ರಥಮಾಗಂಗಾ— ಬಲಿಜಿತಃ ವಿಷ್ಣೋಃ—ಚರಣಾರವಿಂದಾಪ್ಬಭೂವಜಾತಾ—ಚರಮಾ—ನಾಭಿಪದ್ಮಾತ್ಬಭೂವ ಇತಿ ಇಯರ್ಾ ಏತಾವಾರ್ ಭೇದಃ ವಿಶೇಷಃ ॥

ಅರ್ಥ ॥ ಎಲ್ಲ ಕಡೆಯಲ್ಲು ಬಾಯಿಯುಳ್ಳ ಅಂದರೆ ಹರಿಯುವ ಜಲ ಉಳ್ಳ ಆ ಗಂಗಾನದಿಯು, ಬ್ರಹ್ಮದೇವರು ಪ್ರೀತಿಯಿಂದ ಯುಕ್ತಳಾದ ವಾಗ್ದೇವತೆಯನ್ನು ಧರಿಸಿಕೊಂಡಿರುವಂತೆ, ರಕ್ತವರ್ಣದವಳಾದ ಸರಸ್ವತೀ ನದಿಯನ್ನು ಹೊತ್ತು ಕೊಂಡಿರುತ್ತೆದೆ. ಎರಡರಲ್ಲಿ ಇಷ್ಟೇ ಹೆಚ್ಚು ಕಡಿಮೆ, ಏನೆಂದರೆ--ಮೊದಲಿನದು ಅಂದರೆ ಗಂಗಾನದಿಯು ವಿಷ್ಣುವಿನ ಅಡಿಯಲ್ಲಿ ಹುಟ್ಟಿತು; ಎರಡನೇಯದು ಅಂದರೆ ಸರಸ್ವತಿಯು ವಿಷ್ಣುವಿನ ಹೊಕ್ಕಳಿನಲ್ಲಿ ಹುಟ್ಟಿತು.

ಮೂ। ಅಪಿಚ। ಶ್ಲೋ। ಭಾಗೀರಥೀಂ ಪ್ರಾಪ್ಯಬುಧಾಃ ಪಿತೃಭ್ಯೋಜಲಾಂಜಲಿಂ ಸಾದರಮರ್ಪಯಂತಿ। ಪಾಪಾನಿ ಸರ್ವಾಣಿ ತತಃ ಪಿತೄಣಾಂ ಭವಂತ್ಯ ಹೊದತ್ತೆಜಲಾಂಜಲೀನಿ ॥ ೧೦೦ ॥

ಟೀಕಾ || ಭಾಗೀರಥೀಮಿತಿ || ಬುಧಾಃ ಕರ್ತವ್ಯಕುಶಲಾಃ—ಭಾಗೀರಥೀಂಪ್ರಾಪ್ಯಪಿತೃಭ್ಯಃ ಜಲಾಂಜಲಿಂ ನಿವಾಪಾಂಜಲಿಂ—ಸಾದರಂ ಯಥಾತಥಾ—ಅರ್ಪಯಂತಿದದತಿ— ತತಃನಿವಾಪದಾನಾತ್ಸರ್ವಾಣಿಪಿತೄಣಾಂಪಾಪಾನಿ—ದತ್ತಃಕೃತಃಜಲಾಂಜಲಿಃ ಸಾಸ್ಮಾಕಂಪಿತರಸ್ಸಂಬಂಧಿನ ಇತ್ಯುತ್ಸರ್ಗಜಲನಿಕ್ಷೇಪಃ ಯೈಸ್ತಥೋಕ್ತಾನಿಘನಂತಿ— ಪಿತೄಂಸ್ತ್ಯಜಂತೀತ್ಯರ್ಥಃ—ಅಹೋ ಇತ್ಯಾಶ್ಚರ್ಯೇ ||

ಅರ್ಥ || ಜಾಣರು ಗಂಗಾನದಿಯನ್ನು ಕುರಿತು ಹೋಗಿ ಮೃತರಾದ ತಮ್ಮ ಹಿರಿಯರುಗಳ ಸಲುವಾಗಿ ಪ್ರೀತಿಯೊಡನೆ ನಿವಾಪಾಂಜಲಿಯಂದರೆ ಪಿತೃತರ್ಪಣ ಮಾಡುತ್ತಾರೆ. ಅದರಿಂದ ಸತ್ತ ಹಿರಿಯರ ಪಾಪಗಳಿಗೆನೀರು ಬಿಟ್ಟ ಹಾಗೆ ಆಗುತ್ತದೆ. ಅಂದರೆ ಪಾಪಗಳು ತೊಳದು ಹೋಗುತ್ತವೆ. ಅಹಾ! ಇದೇನು ಆಶ್ಚರ್ಯ!

ಮೂ । ಶ್ಲೋ । ಭಾಗೀರಥೀಂಯಃ ಪಟುಧೀರುಪಾಸ್ತೇಯಥಾ
ಕ್ರತುನ್ಯಾಯತ ಏಷಧನ್ಯಃ। ದೇವತ್ವಮೇತ್ಯ ತ್ರಿದಿವೇಸುರಾ
ಣಾಂ ಭಾಗೀರಥೀತಿ ವ್ಯಪದೇಶಮೇತಿ ॥ ೧೦೧ ॥

ಟೀಕಾ || ಭಾಗೀರಥೀಮಿತಿ । ಪಟ್ವೀಸಮರ್ಥಾ-ಧೀರ್ಯಸ್ಯಸಃ—ಯಃಜನಃ—ಭಾಗೀರಥೀ ಮುಪಾಸ್ತೆ ಭಜತೇ— ಅತಏವಧನ್ಯಸ್ಸಏಷಃ— ಯಥಾಕ್ರತುನ್ಯಾಯತಃ ಯಾಂಯೈದೇವತಾ ಮುಪಾಸ್ತೆ ಸ್ವೆವಭವತೀತ್ಯಾತ್ಮಕಾತ್— ದೇವತ್ವಮೇತ್ಯ— ತ್ರಿದಿವೇಸ್ವರ್ಗೇ— ಸುರಾಣಾಂ ಸಂಬಂಧಿನಂ ಭಾಗೀರಥೀತ್ಯಾಕಾರಕಂ ವ್ಯಪದೇಶಂ ವ್ಯವಹಾರಂ— ಸುರಾಣಾಂ ಮಧ್ಯೇಭಾಗೀ ಅಮೃತಾದಿ ಭಾಗವಾನ್—ರಥೀವಿಮಾನವಾಂಶ್ಚೇತಿ ವ್ಯಪದೇಶಂ— ಏತಿಪ್ರಾಪ್ನೋತಿ ಸುಧಾಯಾ ಇತಿಪಾಠಃ— ಕಥಂಚಿದ್ಯೋಜ್ಯಃ ||

ಅರ್ಥ || ಯಾವ ಕುಶಲಬುದ್ಧಿಯುಳ್ಳ ಮನುಷ್ಯನು ಭಾಗೀರಥಿಯನ್ನು ಭಜಿಸುತ್ತಾನೋ ಅವನು ಧನ್ಯನು, ಪುಣ್ಯವಂತನು; ಯಥಾಕ್ರತು ನ್ಯಾಯವೆಂದರೆ:- ಯಾವ ದೇವತೆಯನ್ನು ಭಜಿಸುತ್ತಾನೋ ಆ ದೇವತೆಯಲ್ಲಿ ಸಾಯುಜ್ಯಮುಕ್ತಿ ಪಡೆಯುತ್ತಾನೆ ಅಂದರೆ ಆ ದೇವತೆಯಲ್ಲಿ ಏಕರೂಪವಾಗುತ್ತಾನೆ ಎಂಬ ನ್ಯಾಯದಿಂದ, ಭಾಗೀರಥಿಯನ್ನು ಭಜಿಸುವವನು ದೇವತ್ವವನ್ನು ಘಳಿಸಿದಂಥಾತನಾಗಿ ಸ್ವರ್ಗದಲ್ಲಿ ದೇವರುಗಳ ಸಂಗಡ ಭಾಗೀರಥಿಯಂದರೆ ಅಮೃತ ಮತ್ತು ವಿಮಾನ ಮೊದಲಾದ ಸುಖೋಪಭೋಗಗಳ ಪಾಲುಗಾರನೆಂಬ ಹೆಸರು ಪಡೆಯುತ್ತಾನೆ.

ಮೂ । ಶ್ಲೋ । ಸರಸ್ವತ್ಯಾಶ್ಲಿಷ್ಟಾ ಸವಿತೃತನಯಾ ಲಿಂಗಿತರುಚಿ
ರಾ ಸ್ಫುರದ್ಗುಚ್ಛ ಸ್ವಚ್ಛಾ ಪ್ರಕೃತಿ ರಿವಭಾತಿ ತ್ರಿಗುಣಭಾಕ್ ।
ತಥಾಪ್ಯೇಷಾ ದೋಷಾಪ ನಯನ* ಪಟುಸ್ಸ್ವೈಕ ಲನಯಾಪು,
ಗಲ್ಭಂ ಸಂಸಾರಂ ಪ್ರಶಮಯತಿ ಕಂಸಾರಿ ಪದಭೂಃ ॥ ೧೦೨ ॥

* ಪಟುತ್ವೈಕಲನ ಯೇತಿಪಾಠಾಂತರಂ ||

ಟೀಕಾ ॥ ಸರಸ್ವತೀತಿ ।ಸರಸ್ವತ್ಯಾಸಿತಯಾಶ್ಲಿಷ್ಟಾ ಸವಿತೃತನಯಯಾ ಯಮುನಯಾ ನೀಲಯಾ ಆಲಿಂಗಿತ ಝುರಾಸಂಗತ ಪ್ರವಾಹಾ ಸ್ಫುರ್ದ್ಗುಚ್ಛಃ ಕುಸುಮ ಪುಂಜ ಇವಸ್ವಚ್ಛಾಧವಳಾ–ವಿಷ್ಣುಗಂಗಾ–ತ್ರಿರ್ಗುಣಾ ಸತ್ವರಜಸ್ತಮಾಂಸಿ ಶುಕ್ಲಪೀತನೀಲವರ್ಣಾಂಶ್ಚ ಭಜತೀತಿ ತದ್ಯಾಕ್ ಪ್ರಕೃತಿಸ್ಸಂಸಾರಕಾರಿಣೀಮಾಯೆವ ಯದ್ಯಪಿಭಾತಿ–ತಥಾಪಿತ್ರೈಗುಣ್ಯವತ್ವೆಪಿ ಕಂಸಾರಿ ಪದಭೂರತ ಏವದೋಷಸ್ಯ ಸಂಸಾರ ಬಂಧಸ್ಯ ದೋಷಾಣಾಂಚ ಅಪನಯನ ಪಟುರೇಷಾ–ಸ್ವಸ್ಯಾಃ ಆಕಲನಯಾ ಸೇವಯಾ ಕರಣೇನ– ಪ್ರಗಲ್ಭಂ ಸಂಸಾರಂ ಪ್ರಶಮಯತಿ ॥

ಅರ್ಥ॥ ಕಪ್ಪುವರ್ಣದ ಸರಸ್ವತೀ ನದಿಯಿಂದಲೂ, ನೀಲವರ್ಣದ ಯಮುನಾ ನದಿಯಿಂದಲೂ ಅಪ್ಪಿ ಕೊಳ್ಳಲ್ಪಟ್ಟ ಅಂದರೆ ಕೂಡಲ್ಪಟ್ಟ ಪ್ರವಾಹ ಉಳ್ಳವಳಾದ, ಮತ್ತು ಶುಭ್ರ ವರ್ಣದ ಹೂವು ಗೊಂಚಲಿನಂತೆ ಬಿಳುಪು ಉಳ್ಳವಳಾದ, ಈ ಗಂಗೆಯು ಸತ್ವರಜತಮವೆಂಬ ಮೂರು ಗುಣಗಳುಳ್ಳ ಪ್ರಕೃತಿ ಅಂದರೆ ಸಂಸಾರ ಮೂಲವಾದ ಮಾಯೆಯಂತೆ ತೋರುತ್ತಾಳೆ. ಆದಾಗ್ಯೂ ಶ್ರೀ ವಿಷ್ಣುವಿನ ಪಾದದೊಳಗೆ ಹುಟ್ಟಿದವಳಾದದರಿಂದ ಪಾಪಗಳನ್ನು ಹೋಗಲಾಡಿಸುವದರಲ್ಲಿ ಸಮರ್ಥಳಾದ ಪ್ರಯುಕ್ತಾ ತನ್ನ ಸೇವೆ ಮಾಡುವವರನ್ನು ವಿಸ್ತಾರವಾದ ಸಂಸಾರದಿಂದ ಬಿಡಿಸುತ್ತಾಳೆ.

ಮೂ। ಶ್ಲೋ। ಗಾಂಭೀರ್ಯೇಣ ಗದಾಧರಸ್ಯ ಹೃದಯಂ ಮಾಧುರ್ಯತಸ್ತದ್ಗಿರಂ ಶ್ವೇತಿಮ್ನಾಚ ಯಶಸ್ತದೀಯಮನಘಂ ಶೈತಲ್ಯತಸ್ತತ್ಕೃಪಾಂ। ನೈರ್ಮಲ್ಯಾತಿಶಯೇನ ತಸ್ಯಧಿಷಣಾಂ ನಿತ್ಯಪ್ರಸಾದೇನ ತದ್ವಕ್ತ್ರಂ ಚಾನುಸರಂತಿ ತತ್ಪದಭುವೋವಾರಾಶ್ರಿದಾರಾಇಮೆ ॥ ೧೦೩ ॥

ಟೀಕಾ ॥ ಗಾಂಭೀರ್ಯೇಣೇತಿ। ತಸ್ಯಗದಾಧರಸ್ಯ ಪದಾದ್ಭವಂತೀತಿ ತತ್ಪದಭುವಃ– ಇಮೇವಾರಾಶಿದಾರಾಃ ಗಂಗಾ– ಗಾಂಭೀರ್ಯೇಣ ಗದಾಧರಸ್ಯ ವಿಷ್ಣೋಃ ಹೃದಯಂ– ಮಾಧುರ್ಯತಃ ಮಧುರತ್ವೇನ–ತಸ್ಯ ವಿಷ್ಣೋಃ ಗಿರಂವಾಚಂ– ಶ್ವೇತಿಮ್ನಾಧಾವಳ್ಯೇನಚ–ತದೀಯಂ ಅನಘಂ ಯಶಃ– ಶೈತಲ್ಯತಶ್ಶೈತ್ಯೇನ ತತ್ಕೃಪಾಂ– ನೈರ್ಮಲ್ಯಾತಿಶಯೇನ ತಸ್ಯಧಿಷಣಾಂ ಬುದ್ಧಿಂ– ನಿತ್ಯಪ್ರಸಾದೇನ ಅಕಲುಷತ್ವೇನ ಸಾಮ್ಯತ್ವೇನಚತದ್ವಕ್ತ್ರಂಚ ಅನುಸರಂತೀತಿ ಸರ್ವತ್ರದ್ವಿತೀಯಾಂ ತೇನಯೋಜ್ಯಂ– ಅತ್ರಅನುಸರಣಂ ವಿಷ್ಣುಜನ್ಯತ್ವ ಪ್ರಯುಕ್ತ ತದೀಯಾಂಗ ಗುಣಜನ್ಯ ಗುಣವತ್ವಮಿತಿ ಬೋಧ್ಯಮ್ ॥

ಅರ್ಥ॥ ಗದಾಧರನಾದ ವಿಷ್ಣುವಿನ ಪಾದದಿಂದ ಹುಟ್ಟಿದಂಥಾ, ಸಮುದ್ರಕ್ಕೆ ಹೆಂಡತಿಯಂತೆಯಾಗಿರುವಂಥಾ, ಈ ಗಂಗೋದಕಗಳು ಬಹಳ ಆಳವಾಗಿರುವದರಿಂದ ವಿಷ್ಣುವಿನ ಹೃದಯವನ್ನು ಅನುಕರಿಸುತ್ತವೆ. ಬಹಳ ಮಧುರ ಅಂದರೆ ಸೀಯಾಗಿರುವದರಿಂದ ವಿಷ್ಣುವಿನ ವಾಕ್ಯವನ್ನನುಕರಿಸುತ್ತವೆ. ಬಿಳುಪುವರ್ಣ ಉಳ್ಳವುಗಳಾಗಿರುವದರಿಂದ ವಿಷ್ಣುವಿನ ನಿಷ್ಕಲಂಕವಾದ ಯಶಸ್ಸನ್ನು ಅನುಕರಿಸುತ್ತವೆ. ತಂಪು ಉಳ್ಳವುಗಳಾಗಿರುವದರಿಂದ ವಿಷ್ಣುವಿನ ದಯೆಯನ್ನನುಕರಿಸುತ್ತವೆ. ಅತಿ ತಿಳ್ಳವಾಗಿರುವದರಿಂದ ವಿಷ್ಣುವಿನ

ಬುದ್ಧಿಯನ್ನನುಕರಿಸುತ್ತವೆ. ಯಾವಾಗಲೂ ನಿಷ್ಕಲಂಕವಾದ ಶೋಭೆ ಅಥವಾ ಸೌವ್ಯತೆಯುಳ್ಳವುಗಳಾದದರಿಂದ ವಿಷ್ಣುವಿನ ಮುಖವನ್ನನುಕರಿಸುತ್ತವೆ. (ಈ ಶ್ಲೋಕದಿಂದ ವಿಷ್ಣುಪಾದದಿಂದ ಹುಟ್ಟಿದ ಗಂಗೆಯು ಗುಣಗಳಲ್ಲಿ ವಿಷ್ಣುವಿನ ಅಂಗಗುಣಗಳ ಹೋಲಿಕೆಯುಳ್ಳದ್ದು ಎಂಬ ತಾತ್ಪರ್ಯ ಸೂಚಿಸಲ್ಪಡುತ್ತದೆ.)

## ಕಾಶೀವರ್ಣನಂ॥

ಮೂ। ಇತಿ ಬದ್ಧಾಂಜಲಿರಗ್ರತೋ ವಲೋಕ್ಯ ಸಾನಂದಂ ॥

ಟೀಕಾ॥ ಇತೀತಿ ॥ ಇತ್ಯುಕ್ತ್ವಾಗ್ರತೋವಲೋಕ್ಯಬದ್ಧಾಂಜಲಿಸ್ಸನ್ ಸಾನಂದಂ ॥

ಅರ್ಥ ॥ ಈ ಪ್ರಕಾರವಾಗಿ ಹೇಳಿ ಮುಂದೆ ನೋಡಿ ಕೈಗಳನ್ನು ಜೋಡಿಸಿ ಸಂತೋಷಯುಕ್ತನಾಗಿ (ವಿಶ್ವಾವಸು ಹೇಳುತ್ತಾನೆ.)

ಮೂ। ಶ್ಲೋ। ಕಾಶೀ ಸಕಾಶೀ ಭವದಿಂದ್ರಗೇಹ ಸೌಧಾಗ್ರಭಾಗಾ ಬಹುಸಪ್ತಿ * ನಾದಾ। ಇಂಧೇಮಯೂಖೈರಿಯ ಮಂಧಕಾರವ್ಯುತ್ಪತ್ತಿಶೂನ್ಯಾ ಶಿವಶೇಖರೇಂದೋಃ ॥ ೧೦೪ ॥

ಟೀಕಾ ॥ ಕಾಶೀತಿ। ಸಕಾಶೀ ಭವತ್ ಸಾನ್ನಿಧ್ಯೇನವರ್ತಮಾನಂ ಇಂದ್ರಗೇಹಂ ಸ್ವರ್ಗಃ ಯೇಷಾಂ ತಾದೃಶಾಃ ಸೌಧಾನಾಂ ಅಗ್ರಭಾಗಾಃ ಯಸ್ಯಾಂಸಾ—ಬಹವಸ್ಸಪ್ತಯಃ ಅಶ್ವಾಃ ತೇಷಾಂನಾದಃ ಯಸ್ಯಾಂ ಸಾ—ಶಿವಸ್ಯವಿಶ್ವೇಶ್ವರಸ್ಯ ಶೇಖರಸ್ಯ ಶಿರೋಭೂಷಣಸ್ಯ ಇಂದೋಃ ಮಯೂಖೈಃ ಕಿರಣೈಃ ಅಂಧಕಾರಸ್ಯವ್ಯುತ್ಪತ್ತ್ಯಾ ಉದಯೇನಶೂನ್ಯಾ ಇಯಂ ಕಾಶೀನಾಮಪುರೀ ಇಂಧೇಪ್ರಕಾಶತೇ ॥

ಅರ್ಥ ॥ ಸ್ವರ್ಗವನ್ನನುಕರಿಸುವ ತುದಿ ಭಾಗಗಳಿಂದ ಯುಕ್ತವಾದ ಉಪ್ಪರಿಗೆಗಳುಳ್ಳಂಥಾದ್ದಾಗಿಯೂ, ಬಹಳ ಕುದುರೆಗಳ ಶಬ್ದ ಉಳ್ಳಂಥಾದ್ದಾಗಿಯೂ ಶಿವನ ನೆತ್ತಿಯ ಮೇಲಿರುವ ಚಂದ್ರನ ಕಿರಣಗಳಿಂದ ಕತ್ತಲೆಯ ಉತ್ಪತ್ತಿ ಇಲ್ಲವಾದಂಥಾದ್ದಾಗಿಯೂ ಈ ಕಾಶಿ ಪಟ್ಟಣವು ಮೆರೆಯುತ್ತದೆ.

## ಕೃಶಾನುಃ ॥

ಮೂ। ಕಿಮುರೇವಯಸ್ಯೈಷಾಪಿತವಸ್ತ್ವಸ್ಯಪದಂ ॥

ಟೀಕಾ॥ ಕಿಮಿತಿ। ಅಪಿಃ ಪ್ರಶ್ನೇ—ನನ್ವಿತಿಯಾವತ್—ಏಷಾಕಾಶೀತವಸ್ತ್ವಸ್ಯಪದಂ ವಿಷಯಃ ಇತಿಕಾಕುಃ—ಕಿಮಿತ್ಯಾಶ್ಚರ್ಯೇತಸ್ಮಾತ್ಮಹಾತ್ಮ್ಯಸ್ಯಮನೋವಾಚಾಮಗೋಚರತ್ವಾದಿತಿಭಾವಃ— ಇತಿವಾಸ್ತವಾರ್ಥಃ—ಪ್ರಾತೀತಿಕಸ್ತುಸ್ಪಷ್ಟಏವ ॥

---

* ನಾಗಾ ಇತಿಪಾಠಾಂತರಂ ॥

ಅರ್ಥ ॥ ಈ ವಾಕ್ಯದಿಂದ ಎರಡು ಅರ್ಥಗಳು ಹುಟ್ಟುತ್ತವೆ.

(೧) ಏನೆಲಾ ಗೆಳೆಯನೇ, ಈ ಕಾಶಿ ಪಟ್ಟಣ ಕೂಡ ನಿನ್ನ ಹೊಗಳಿಕೆಗೆ ಪಾತ್ರವೋ ? ಇದು ನಿಂದಾಸೂಚಕವಾದ ಅರ್ಥವು.

(೨) ಎಲಾ ಮಿತ್ರನೇ, ಈ ಕಾಶೀ ಪಟ್ಟಣ ಕೂಡ ನಿನ್ನ ಹೊಗಳಿಕೆಗೆ ಪಾತ್ರವಲ್ಲವೋ? ಪಾತ್ರವು. ಇದು ಸ್ತುತಿ ಸೂಚಕವಾದ ಅರ್ಥವು.

ಮೂ।ಪದ್ಯ।ಶ್ಲೋ। ಯೇ *ಮೃಷ್ಟಾನ್ನಭುಜೋ ಗಜೋತ್ತಮಹಯಾರೋಹಾ†ಸ್ಸುಗೇಹಾಂತರೇ ‡ಮತ್ತಾಭಿರ್ಮಹಿಳಾಭಿ ರತ್ರ ವಿಹರಂತ್ಯಾಮುಕ್ತಮುಕ್ತಾಸ್ರಜಃ । ತೇ ಘೋರಾಸ್ಥಿಧರಾವಿರಾಜದನಡುದ್ವಾಹಾ ವಿಷಾಹಾರಿಣೋನರ್ತಿಷ್ಯಂತ್ಯವಶಾಃ ಸ್ಮಶಾನನಿಲಯಾನೀಚೈಃ ಪಿಶಾಚೈಸ್ಸಮಂ ॥ ೧೦೫ ॥

ಟೀಕಾ ॥ ಕಾಶೀಮರಣಾನ್ಮುಕ್ತಿ ರಿತ್ಯತ್ರಮುಕ್ತಿ ಪದಸ್ಯಸಾರೂಪ್ಯಪರತಾ ಮಾಶ್ರಿತ್ಯಾಹ|ಯ ಇತಿ ॥ ಅತ್ರಕಾಶ್ಯಾಂ ಯೇಜನಾಃ—ಮೃಷ್ಟಂ ಷಡ್ರಸೋಪೇತಂ ಅನ್ನಂ ಭುಂಜತ ಇತಿತದ್ಭುಜಃ—ಆಮುಕ್ತಾಃ ಧೃತಾಃ ಮುಕ್ತಾಸ್ರಜಃ ಮೌಕ್ತಿಕ ಹಾರಾಯೈಸ್ತೇ—ಗಜೋತ್ತಮಾಹಯಾರೋಹಾಶ್ಚ ಭವಂತಿ—ಕಿಂಚ—ಸುಗೇಹಾಂತರೇ—ಮತ್ತಾಭಿಃ ಸೌಂದರ್ಯಾದಿ ಗರ್ವಿತಾಭಿಃ ಮಹಿಳಾಭಿಃ ಅಂಗನಾಭಿಃ ಸಹ—ವಿಹರಂತಿಕ್ರೀಡಂತಿ—ತೇ ಏವಂ ವಿಷಯೋಪರಕ್ತಚಿತ್ತಾ ಅಪೀತಿವಾಸ್ತವಾರ್ಥಃ ಜನಾಃ—ವಿಷಾಹಾರಿಣಃ—ಘೋರಾಣಿ ಅತ್ಯಂತಭೀಕರಾಣಿ ಅಸ್ಥೀನಿಧರಂತೀತಿಧರಾಃ—ವಿರಾಜನ್ ಅನಡ್ವಾನ್ ವೃಷಭಃ ವಾಹಃ ವಾಹನಂ ಏಷಾಂತೇ ತಥೋಕ್ತಾಃ—ಅವಶಾ ಉನ್ಮತ್ತಾಃ ಸ್ವತಂತ್ರಾಶ್ಚೇತಿ ಚತುಷ್ಟಯಂ ವಿಧೇಯಂ—ನೀಚೈಃ ಪಿಶಾಚೈಃ ಸಮಂ—ಸ್ಮಶಾನನಿಲಯಾಸ್ಸಂತಃ—ನರ್ತಿಷ್ಯಂತಿ ನೃತ್ಯಂ ಕರಿಷ್ಯಂತಿ—ಅಂತೇ ಇತಿಶೇಷಃ—ತಾದೃಗುನ್ಮತ್ತಾ ನಾವಿಶಾದ್ಯನೈಚ್ಯಕಾರಿಣೀಯ ಮಿತ್ಯಹಿತದೂಷಣಂ। ವಸ್ತುತಸ್ತು— ಈ ದೃಶ ವಿಷಯೋಪರಕ್ತ ಚಿತ್ತಾನಾಮಪಿಶಿವಸಾರೂಪ್ಯ ಮುಕ್ತಿಸಂಪಾದಿಕೇಯಮ್ ಅನ್ಯನ್ನಕಿಮಪೀದೃಶಂ ಕ್ಷೇತ್ರಮಿತಿ ಪ್ರತೀತೇರ್ವಸ್ತುನಾಲಂಕಾರಧ್ವನಿಃ ॥

ಅರ್ಥ ॥ ಈ ಕಾಶಿಯಲ್ಲಿ ಯಾವ ಜನರು ಷಡ್ರಸಾನ್ನವನ್ನು ತಿನ್ನುತ್ತಾರೋ, ಮುತ್ತಿನ ಸರಗಳನ್ನು ತೊಟ್ಟುಕೊಳ್ಳುತ್ತಾರೋ, ಶ್ರೇಷ್ಠವಾದ ಆನೆ ಕುದುರೆ ವಾಹನಂಗಳ ಮೇಲೆ ಏರಿ ಮೆರೆಯುತ್ತಾರೋ, ಮನೆಗಳೊಳಗೆ ಮದವೇರಿದಂಥಾ ಹೆಂಗಳ ಸಂಗಡ ವಿಲಾಸ ಮಾಡುತ್ತಾರೋ, ಅವರು ನಂಜು ಉಣ್ಣುವಂಥವರಾಗಿ ಭಯಂಕರವಾದ ಎಲುವುಗಳನ್ನು ತೊಟ್ಟು ಕೊಂಡಂಥವರಾಗಿ ಅಲಂಕಾರವುಳ್ಳ ಎತ್ತುಗಳ ಏರಿದಂಥವರಾಗಿ, ಸುಡುಗಾಡೇ ಮನೆಯುಳ್ಳವರಾಗಿ ಕ್ಷುದ್ರರಾದ ಭೂತಗಳ ಸಂಗಡ ಕುಣಿದಾಡುವರು.

---

* ಮಿಷ್ಟಾನ್ನ † ಸ್ವಗೇಹಾಂತರೆ ‡ ಸಕ್ತಾಭಿಃ ಇತಿಪಾಠಾಂತರಾಣಿ ॥

ಈ ಶ್ಲೋಕಕ್ಕೆ ಎರಡು ಅರ್ಥಗಳಾಗುತ್ತವೆ: ಕಾಶಿಕ್ಷೇತ್ರದಲ್ಲಿ ಪುರುಷರೆಲ್ಲರು ವಿಷಯಾಸಕ್ತಿಯುಳ್ಳವರಾಗಿ ಕೊನೆಗೆ ಕೆಟ್ಟು ಹೋಗುತ್ತಾರೆ ಎಂಬದೊಂದು; ಅಲ್ಲಿಯ ಜನರು ವಿಷಯಸುಖೋಪಭೋಗಗಳನ್ನು ಮಾಡಿ, ಕೊನೆಗೆ ಶಿವಸಾರೂಪ್ಯವನ್ನು ಪಡೆಯುತ್ತಾರೆ ಎಂಬುವದು ಎರಡನೇದು.

ಮೂ। ಅನ್ಯಚ್ಚ।

ಶ್ಲೋ।ದತ್ತಂ ಸಾಧುಮುದೆ ಯದೇಕ ಮಪಿತತ್ಕ್ಷೇತ್ರಪ್ರಭಾ
ವಾದ್ಭವೇತ್ಕಾಮಂ ಕೋಟಿಗುಣಂಭವಾಂತರ ಇತಿಖ್ಯಾತಂ ತ್ವಯಿ
ತ್ವಾಸ್ಥಯಾ। ವಾಸಂ ಪ್ರಾಪ್ಯ ಮುಹುರ್ಬಹೂನಿದದತೋವಾ
ಸಾಂಸಿಜನ್ಮಾಂತರೆ ಲೋಕಾ ಹಂತಭಜಂತಿ ದಿಗ್ವಸನತಾಂ ಹೇಕಾ
ಶಿತುಭ್ಯಂನಮಃ ॥ ೧೦೬ ॥

ಟೀಕಾ ॥ ದತ್ತಮಿತಿ ॥ ಹೇಕಾಶಿ–ಏಕಮಪಿ–ಕಿಮುತದ್ವಯಾದಿಕಂ–ಯತ್ಯಜ್ಜಾತೀಯಂವಸ್ತು–ಸಾಧೋಃ ಪಾತ್ರಸ್ಯಮುದೇ– ದತ್ತಂ– ಜನೇನಪುಣ್ಯಾಕ್ಷೇತ್ರಇತಿಶೇಷಃ– ತದ್ವಸ್ತು– ಕ್ಷೇತ್ರಸ್ಯತ್ವದನ್ಯಸ್ಯಪ್ರಭಾವಾದ್ಭವಾಂತರೇ ಅನ್ಯಜನ್ಮನಿ– ಕಾಮಂಭೃಶಂ– ಕೋಟಿಗುಣಂಕೋಟಿಸಂಖ್ಯಾಕಂಸತ್ ಭವೇತ್ ಸಂಪದ್ಯೇತಇತಿವಚನಜಾತಂಖ್ಯಾತಂಪುರಾಣಾದಾವಿತಿಭಾವಃ– ತ್ವಯಿತುವಾಸಂಪ್ರಾಪ್ಯ– ಮುಹುಃ–ಆಸ್ಥಯಾಆಸಕ್ತ್ಯಾಬಹೂನಿವಾಸಾಂಸಿದದತಃ– ನಾಭ್ಯಸ್ತಾಚ್ಛತುರಿತಿನುಮ್ನಿಷೇಧಃ– ಲೋಕಾಃ ಜನಾಃ– ಜನ್ಮಾಂತರೇ–ದಿಗ್ವಸನತಾಂದಿಗಂಬರತ್ವಂಭಜಂತಿ– ಹಂತೇತಿಖೇದೇ– ತುಭ್ಯಂನಮ ಇತಿಸರ್ವಥಾತ್ಯಾಜ್ಯೈವತ್ವಮಿತಿಪ್ರತೀತಿಕಃ–ಶಿವಸಾರೂಪ್ಯದಾಯಿನ್ಯೈತುಭ್ಯಂನಮಃ– ಹಂತೇತ್ಯಾನಂದೇಇತಿವಾಸ್ತವಃ ॥

ಅರ್ಥ॥ ಎಲೇ ಕಾಶಿಪಟ್ಟಣವೇ, ಸತ್ಪಾತ್ರನಾದವನ ಸಂತೋಷಾರ್ಥವಾಗಿ ಯಾವದಾದರು ಪದಾರ್ಥ ಕೊಟ್ಟರೆ, ಅದು ಕ್ಷೇತ್ರಮಹಾತ್ಮ್ಯದ ಬಲದಿಂದ, ಅನ್ಯಜನ್ಮದಲ್ಲಿ ಕೋಟಿ ಪಾಲು ಹೆಚ್ಚಾಗಿ ದೊರಕುತ್ತದೆ ಎಂತ ಪ್ರಸಿದ್ಧಿಯುಂಟು. ಆದರೆ, ನಿನ್ನಲ್ಲಿ ವಾಸ್ತವ್ಯ ಮಾಡಿ, ಆಸಕ್ತಿಯಿಂದ ಬಹಳ ವಸ್ತ್ರಗಳನ್ನು ಕೊಡುವ ಜನರುಗಳು ಮತ್ತೊಂದು ಜನ್ಮದಲ್ಲಿ ಬಟ್ಟೆಹೀನರಾಗುತ್ತಾರೆ. ಅಯ್ಯೋ! ಹೇ,ಕಾಶಿ, ನಿನಗೆ ನಮಸ್ಕಾರವಿರಲೀ; ಅಂದರೆ, ನಿನ್ನ ತಳ್ಳಿ ಬೇಡವೆಂಬ ತಾತ್ಪರ್ಯವು. ಮೇಲೆ ಹೇಳಲ್ಪಟ್ಟದ್ದು ಬಹಿರರ್ಥವು. ನಿಜವಾದ ಭಾವವೇನೆಂದರೆ: ಕಾಶಿಯಲ್ಲಿ ವಾಸ್ತವ್ಯ ಮಾಡಿ ವಸ್ತ್ರದಾನ ಮಾಡಿದವರು ಇನ್ನೊಂದು ಜನ್ಮದಲ್ಲಿ ದಿಗಂಬರತ್ವ ಅಂದರೆ ಶಿವಸಾರೂಪ್ಯ ವನ್ನು ಪಡೆಯುತ್ತಾರೆ. ಹಂತ ಎಂಬ ಪದವು ಈ ಅರ್ಥದಲ್ಲಿ ಆನಂದಸೂಚಕವಾಗಿದೆ.

ಮೂ। ಶ್ಲೋ। ವಾರಾಣಸಿತ್ವಯಿಸದೈವ ಸರೋಗಭೂವಸಾವಾ
ರೋಗ್ಯಭೂಮಿರಿತಿ ಕಾಮಮಲೀಕವಾದಃ। ಸಂತಸ್ತ್ವಷಾಂ ಭವ

ತಿಯತ್ರವಪುಸ್ಸಶೂಲಂ ಜನ್ಮಾಂತರೇಪಿ ಜಲಭಾರವದುತ್ತಮಾಂ
ಗಂ ॥೧೦೭ ॥

ಟೀಕಾ ॥ ವಾರಾಣಸೀತಿ ॥ ಹೇವಾರಾಣಸಿ ಕಾಶಿ–ಯತ್ರತ್ವಯಿ–ಸಂತಸ್ಥುಷಾಂ ನಿವಾಸಿನಾಂ–ವಪುಃ ಜನ್ಮಾಂತರೇಪಿ ಕಿಮುತಾಸ್ಮಿನ್ ಜನ್ಮನಿ–ಶಿವಸಾರೂಪ್ಯ ಜನ್ಮನಿಚ–ಸಶೂಲಂ ಶೂಲರೋಗೇಣ ಶೂಲಾಯುಧೇನ ಚಾನ್ವಿತಂ ಭವತಿ–ಉತ್ತಮಾಂಗಂಶಿರಃ ಜಲಭಾರಃ ಶೈತ್ಯರೋಗಃ ಗಂಗಾಜಲಾತಿಶಯಶ್ಚ ತದ್ವದ್ಭವತಿ–ಯತಸ್ತತಃ–ಸದಾಸರೋಗಭೂಮಾತ್ವಯಿ–ಆರೋಗ್ಯಯುಕ್ತಾಭೂಮಿರಿತಿವಾದಃ-ಕಾಮಂ ಭೃಶಂ ಅಲೀಕಃ ಮೃಷಾವಾದಃ ಪ್ರವಾದಃ–ಸರಃ ಗಂಗಾಪ್ರವಾಹಂ ಗಚ್ಛತಿ ಪ್ರಾಪ್ನೋತೀತಿಸರೋಗಾ–ಭೂಮಿರಿತಿ–ಅಃ ವಿಷ್ಣುಬಿಂದುಮಾಧವಃ–ರೇಣ ಲೋಚನಾಗ್ನಿನಾಯುಕ್ತಃ ಉಃ ಶಿವಃ ವಿಶ್ವೇಶ್ವರಃ–ತೌಗಚ್ಛತೀತ್ಯರೋಗಾ–ತಸ್ಯಾಃ ಭಾವಃ ಆರೋಗ್ಯಂ ತೇನಯುಕ್ತಾಭೂಮಿರಿತಿಚ–ಕಾಮಂ–ಅಲೀಕವಾದ ಇತಿ ಕಾಕುಃ–ನಾಲೀಕವಾದ ಏವೇತಿವಾಸ್ತವೋರ್ಥಃ–ಅತ್ರ-ಯೇನಸೃಷ್ಟೇತ್ಯಾದಿಶ್ಲೋಕತ್ರಯೇವಾಚ್ಯಯಾನಿಂದಯೋಕ್ತ ವಿಧಸ್ತುತಿಪ್ರತೀತೇರ್ವ್ಯಾಜಸ್ತುತ್ಯಲಂಕಾರಃ ॥

ಅರ್ಥ ॥ ಹೇ ಕಾಶೀಪಟ್ಟಣವೇ, ಯಾವಾಗಲೂ ರೋಗದಿಂದ ಯುಕ್ತವಾದ ನಿನ್ನ ಭೂಮಿಯು ಆರೋಗ್ಯಭೂಮಿಯೆಂದು ಜನರು ಅನ್ನುವ ಮಾತು ಸಂಪೂರ್ಣವಾಗಿ ಸುಳ್ಳಾಗಿದೆ, ಯಾಕಂದರೆ ನಿನ್ನಲ್ಲಿ ವಾಸಮಾಡಿಕೊಂಡಿರುವವರಿಗೆ ಮುಂದಿನ ಜನ್ಮದಲ್ಲಿ ಕೂಡ ಶರೀರವು ಶೂಲದಿಂದ ಯುಕ್ತವಾಗುತ್ತದೆ; ತಲೆಯು ನೆಗಡಿಹಿಡಿದಂತೆ ಆಗುತ್ತದೆ.

ಮೇಲೆ ಹೇಳಿದ ಅರ್ಥವು ತೋರಿಕೆಯ ಅರ್ಥವಾಗಿದೆ. ನಿಜವಾದ ಅರ್ಥವೇನಂದರೆ: ಹೇ ಕಾಶಿಪಟ್ಟಣವೇ, ಗಂಗಾಪ್ರವಾಹ ಹರಿಯುವ ನಿನ್ನ ಭೂಮಿಯಲ್ಲಿ ಆರೋಗ್ಯವೆಂದರೆ ಅಕಾರವೇ ವಿಷ್ಣುವಾದ ಬಿಂದುಮಾಧವನು, „ಉಃ” ಕಾರವೇ ಶಿವನಾದ ವಿಶ್ವೇಶ್ವರನು, ಅವರನ್ನು ಕುರಿತು ಹೋಗುವವಳೇ „ ಅರೋಗಾ ”, ಅವಳ ಭಾವವೆಂದರೆ ಲಕ್ಷಣ ಉಳ್ಳದ್ದು ಆರೋಗ್ಯವು, ಅಂಥಾ ಆರೋಗ್ಯದಿಂದ ನಿನ್ನ ಭೂಮಿಯು ಯಾವಾಗಲೂ ಯುಕ್ತವಾಗಿದೆ ಎಂಬ ಮಾತು ಹುಸಿಯೋ? ಹುಸಿಯಾದದ್ದಲ್ಲವು. ಯಾಕಂದರೆ ನಿನ್ನಲ್ಲಿ ವಾಸಮಾಡಿಕೊಂಡಿರುವವರು ಮುಂದಿನ ಜನ್ಮದಲ್ಲಿ ತ್ರಿಶೂಲಾಯುಧಧಾರಿಯಾದ ಶರೀರ ಮತ್ತು ಗಂಗೆಹೊತ್ತುಕೊಂಡ ತಲೆಯುಳ್ಳವರಾಗುತ್ತಾರೆ, ಅಂದರೆ ಶಿವನ ರೂಪವನ್ನು ಅಡೆಯುತ್ತಾರೆ ಎಂಬ ತಾತ್ಪರ್ಯವು.

ವಿಶ್ವಾವಸುಃ ॥

ಮೂ। ಅನಿಪುಣಧಿಷಣ*ಗುಣೋದಯಾಮಪಿ ಕಿಮಿತಿದೋಷೀಕರೋಷಿ। ಯದೇತನ್ನಗರವಾಸಿನಾ ಭೋಗಿನಾ ಯೋಗಿನಾಂಪ್ರಾಪ್ಯಂ ಶಿವಸಾರೂಪ್ಯ ಮಾಪ್ಯತೇ ॥೧೦೮ ॥

---

* ಗುಣಾಮಪೀತಿಪಾಠಾಂತರಂ ॥

ಟೀಕಾ ‖ ಅನಿಪುಣೇತಿ ‖ ಹೇ ಅನಿಪುಣಧಿಷಣಮಂದ ಬುದ್ಧೇ— ಗುಣಸ್ಯ ಶಿವಸಾರೂಪ್ಯಾದೇಃ ಉದಯಃ ಯಸ್ಯಾಂತಾಂ ವಾರಾಣಸೀಂ ಕಿಮಿತಿ ಕುತ್ರೋಽಹೇತೋಃ—ಭೋಗಿನಾ ವಿಷಯಾನುಭವವತಾಪಿ—ಏತಸ್ಮಿನ್ನಗರೇ ಕಾಶ್ಯಾಂ ವಾಸಿನಾ—ಯೋಗಃ ಹಠಾದಿಃ ತದ್ವತಾಂ—ಪ್ರಾಪ್ಯಂ ಶಿವಸ್ಯ ಸಾರೂಪ್ಯಂ ಸಮಾನಂ ಉಪಾಸಿತ ದೇವತಾತುಲ್ಯಂ ರೂಪಂ ಯಸ್ಯಾಂ ತಸ್ಯಾಭಾವಸ್ಸಾರೂಪ್ಯಂ ಮುಕ್ತಿಃ ‖

ಅರ್ಥ ‖ ಎಲಾ ಮಂದಬುದ್ಧಿಯೇ, ಈ ಕಾಶೀ ನಗರದಲ್ಲಿ ವಾಸಮಾಡುವ ವಿಷಯಾಸಕ್ತರು ಕೂಡ ಯೋಗಿಗಳಿಗೆ ಸಾಧ್ಯವಾದ ಶಿವಸ್ವರೂಪವನ್ನು ಪಡೆಯುತ್ತಾರೆ. ಅಂಥಾ ಶಿವಸಾರೂಪ್ಯಾದಿಲಾಭಗಳು ಹುಟ್ಟುವ ಕಾಶಿನಗರವನ್ನು ಏನೆಂತ ದೂಷಿಸುತ್ತೀಯಾ?

ಮೂ। ಶ್ಲೋ। ಅತ್ರ ದೇಹ ಮಪವಿತ್ರಮಪಾಸ್ಯನ್ನಚ್ಛ ಮೃಚ್ಛ
ತಿ ವಪುಃ ಕಿಲಯಸ್ಯ ಲೋಚನೇ ಶುಚಿರವಾಪ್ತ ನಿಟಾಲೇ ಮಸ್ತ
ಕೇ ಹರಿಪದಾಂಬುಜಟಾಲೇ ‖ ೧೦೯ ‖

ಟೀಕಾ ‖ ಅತ್ರೇತಿ ‖ ಅತ್ರ ಕಾಶ್ಯಾಂ—ಅಪವಿತ್ರಂ ಮಲಮೂತ್ರಾದಿ ಬಂಧುರಂ—ದೇಹಂ—ಅಪಾಸ್ಯ ತ್ಯಜನ್ ಸನ್—ಅಚ್ಛಂ ನಿರ್ಮಲಂ ಧವಳಂಚ—ವಪುಃ ಶರೀರಂ—ಋಚ್ಛತಿ ಪ್ರಾಪ್ನೋತಿ ಯಸ್ಯ ವಪುಷಸ್ಸಂಬಂಧಿನಿ—ಅವಾಪ್ತ ಮಾಶ್ರಿತಂ ನಿಟಾಲಂ ಫಾಲಂ ಯೇನ ತಸ್ಮಿನ್—ಲೋಚನೇ—ಶುಚಿರಗ್ನಿಃ ಅಸ್ತಿ—ಜಟಾಲೇ ಜಟಾಯುಕ್ತೇ—ಮಸ್ತಕೇ—ಹರಿಪದೇ ಆಕಾಶೇ ಅಂಬು ಗಾಂಗಂ ಅಸ್ತಿ—ತದ್ವಪುರಿತಿ ಸಂಬಂಧಃ—ಅಪಾಸ್ಯನ್ ಋಚ್ಛತೀತಿ ವರ್ತಮಾನನಿರ್ದೇಶೇನ ದೇಹತ್ಯಾಗ ಸಮಕಾಲಮೇವ ಶಿವ ಸಾರೂಪ್ಯಲಾಭ ಇತಿ ಸೂಚಿತಂ ‖

ಅರ್ಥ ‖ ಈ ಕಾಶಿಯಲ್ಲಿ ಅಪವಿತ್ರವಾದ ಅಂದರೆ ಮಲಮೂತ್ರಾದಿಗಳಿಂದ ತುಂಬಿದ ಶರೀರವನ್ನು ಬಿಟ್ಟುಕೊಟ್ಟು ನಿರ್ಮಲವಾದ ಗೌರವರ್ಣವುಳ್ಳ ಶರೀರವನ್ನು ಪಡೆಯುವವನ ಹಣೆಯ ಮೇಲೆ ಇಂಬುಗೊಳ್ಳುವ ಕಣ್ಣಿನಲ್ಲಿ ಅಗ್ನಿಯು ಇರುತ್ತಾನೆ. ಜಡೆಯುಕ್ತವಾದ ತಲೆಯ ಮೇಲೆ ಆಕಾಶದಲ್ಲಿ ಗಂಗೆಯು ಇರುತ್ತದೆ.

ಮೂ। ಅದಃ ಪುರವಾಸಿನಾ ಮನ್ಯಾಪ್ಯೇಷಾ ಧನ್ಯತಾ ‖ ೧೧೦ ‖

ಟೀಕಾ ‖ ಅದಇತಿ। ಅಮುಷ್ಮಿನ್ ಪುರೇ ಕಾಶ್ಯಾಂ ವಾಸಿನಾಂ— ಅನ್ಯಾ ಉಕ್ತ ಸಾರೂಪ್ಯ ಮುಕ್ತೇರನ್ಯಾ ಧನ್ಯತಾ ಶ್ರೈಷ್ಠ್ಯಂ ‖

ಅರ್ಥ ‖ ಈ ಪಟ್ಟಣದಲ್ಲಿ ವಸ್ತಿಮಾಡಿ ಕೊಂಡಿರುವವರ ಮತ್ತೊಂದು ಶ್ರೇಷ್ಠವಾದ ಪುಣ್ಯವ್ಯಾವದೆಂದರೆ:—

ಮೂ। ಶ್ಲೋ। ಪ್ರದೋಷಪವತಾಪ್ರಸ್ತ ಇಹಪ್ರದೋಷಪ ನ
ಟೋಂಧ ಕಾರಿವ್ಯಪದೇಶಮಂತೇ। ಪ್ರಕಾಶಯತ್ಯೇಷ ಹಿತಾರ
ಕೋದ್ಯದ್ವರ್ಣಾನ್ನೃಣಾಂ ಕರ್ಣನಭಃ ಪ್ರದೇಶೇ ‖ ೧೧೧ ‖

ಟೀಕಾ ॥ ಪ್ರದೋಷವದಿತಿ। ಅಂಧಕೋನಾಮಕಶ್ಚಿದಸುರಃ ತಸ್ಯಾರಿರಂಧಕಾರಿಃ– ಅನ್ಯತ್ರ–ಅಂಧಕಾರಃ ಅಸ್ಮಿನ್ನಸ್ತೀತಿ ಅಂಧಕಾರೀ– ಇತಿವ್ಯಪದೇಶಂನಾಮ–ಪ್ರಾಪ್ತಃ– ಪ್ರದೋಷೇ ಸಾಯಂಕಾಲೇ ನಟತೀತಿನಟಃ– ಏಷಃ ಶಿವಃ– ಪ್ರದೋಷವತ್– ಇಹ ಕಾಶ್ಯಾಂ– ನೃಣಾಂ ಅಂತೇದೇಹಾವಸಾನೇ ಅನ್ಯತ್ರದಿನಾಂತೇ– ಕರ್ಣನಭಃ ಪ್ರದೇಶೇ– ಶ್ರೋತ್ರವಿವರಾಂತರ್ವರ್ತ್ಯಾಕಾಶಪ್ರದೇಶೇ– ಅನ್ಯತ್ರ– ಕಿರತಿ ವ್ಯಾಪ್ನೋತೀತಿ ಕರ್ಣಃ ವ್ಯಾಪಕಃ ನಭಃ ಪ್ರದೇಶಃ ತಸ್ಮಿನ್– ತಾರ ಏವ ತಾರಕಃ ಪ್ರಣವಃ– ಸ್ವಾರ್ಥೇಕಃ– ತಸ್ಮಿನ್ ಉದ್ಧೃತಃ ಉಚ್ಚಾರಣೇನವ್ಯಕ್ತೀ ಭವತಃ ವರ್ಣಾನ್ ಅಕಾರಮುಕಾರಂ ಮಕಾರಂಚತ್ರೀನ್– ಅನ್ಯತ್ರ ತಾರಕಾಭ್ಯೋ–ನಕ್ಷತ್ರೇಭ್ಯಃ ಉದ್ಯತಃ ವರ್ಣಾನ್ ಕಾಂತೀಃ– ಪ್ರಕಾಶಯತಿ ಉಪದಿಶತಿ– ಅನ್ಯತ್ರಪ್ರಕಟಯತಿ– ಅತ್ರವೈಷ್ಣವಾಃ ಅತ್ರಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಂ ಬ್ರಹ್ಮೋಪದಿಶತೀತ್ಯತ್ರ ತಾರಕೋ ರಾಮಮಂತ್ರ ಇತ್ಯಾಚಕ್ಷ್ಯುಃ ॥

ಅರ್ಥ ॥ ಅಂಧಕನೆಂಬ ಅಸುರನನ್ನು ಕೊಂದವನಾದದರಿಂದ ಅಂಧಕಾರಿ ಎಂಬ ಹೆಸರು ಪಟ್ಟವನಾದಂಥಾ, ಸಾಯಂಕಾಲದಲ್ಲಿ ನರ್ತನ ಮಾಡುವವನಾದಂಥಾ ಈ ಶಿವನು, ಪ್ರದೋಷಕಾಲವೆಂದರೆ ಇರುಳುಕಾಲದಂತೆ, ಕಾಶಿಯಲ್ಲಿ ಮನುಷ್ಯರಿಗೆ ದೇಹಾವಸಾನದ ವೇಳೆಯಲ್ಲಿ ಕಿವಿಯಲ್ಲಿ ರಾಮತಾರಕಮಂತ್ರದ ಅಕ್ಷರಗಳನ್ನು ಬೆಳಗಿಸುತ್ತಾನೆ, ಅಂದರೆ ಉಪದೇಶ ಮಾಡುತ್ತಾನೆ.

ಮೇಲೆ ಹೇಳಿದ ಅರ್ಥವು ಶಿವಪರವಾದದ್ದು. ಅದರಲ್ಲಿ ಪ್ರದೋಷವತ್ ಅಂದರೆ ಸಂಜೆಕಾಲದಂತೆ ಎಂಬ ಪದ ಉಂಟು, ಅದಕ್ಕನುಸಾರವಾಗಿ ಅಂದರೆ ಪ್ರದೋಷಪರವಾದ ಇನ್ನೊಂದು ಅರ್ಥವೇನೆಂದರೆ: ಸಾಯಂಕಾಲವಾಗಿ ಬಂದ ಪ್ರದೋಷ ನಟುವನು. ಅಂಧಕಾರಿಯೆಂದರೆ- ಕತ್ತಲೆಯನ್ನುಂಟು ಪಡಿಸುವ ಇರುಳುಕಾಲದಲ್ಲಿ ಕುಣಿದಾಡುವಂಥವನಾಗಿ, ನಕ್ಷತ್ರಗಳಿಂದ ಹೊರಡುವ ಕಾಂತಿಯನ್ನು ಆಕಾಶದಲ್ಲಿ ರಾತ್ರಿಕಾಲದಲ್ಲಿ ಮನುಷ್ಯರು ನೋಡುವಂತೆ ಬೆಳಗಿಸುತ್ತಾನೆ.

ಮೂ। ಇತಿಗಂಗಾತೀರಜನಪದಂ ಕೃತ್ಸ್ನಮವೇಕ್ಷ್ಯಸಾಂಜಲಿಬಂಧಂ ॥ ೧೧೨ ॥

ಟೀಕಾ ॥ ಇತೀತಿ। ಕೃತ್ಸ್ನಂ ಸಮಸ್ತಂ–ಜನಪದಂ ರಾಷ್ಟ್ರಂ ॥

ಅರ್ಥ ॥ ಈ ಪರಿಗೆ ಗಂಗಾತೀರವಾಸಿ ವಿಶಿಷ್ಟ ಜನ ಸಮುದಾಯವನ್ನು ನೋಡಿ ಕೈಮುಗಿದು:—

ಮೂ। ಶ್ಲೋ। ಪ್ರಾತಃ ಪ್ರಾತರ್ಜಾಹ್ನವೀವಾರಿ ಭಕ್ತ್ಯಾ ಗಾಹಂ ಗಾಹಂ ಕ್ಲಿಪ್ತನಿತ್ಯ ಕ್ರಿಯೇಭ್ಯಃ। ಪುಷ್ಪೈರಾದ್ಯಂ ಪೂರುಷಂ ಪೂಜಯದ್ಭ್ಯಃ ಪೂತಾತ್ಮಭ್ಯೋ ಭೂಸುರೇಭ್ಯೋ ನಮೋಸ್ತು ॥ ೧೧೩ ॥

ಟೀಕಾ || ಪ್ರಾತರಿತಿ | ಪ್ರಾತಃ ಪ್ರಾತಃನಿತ್ಯಂ ಪ್ರಾತಃಕಾಲೆ– ಭಕ್ತ್ಯಾ– ಜಾಹ್ನವೀವಾರಿ ಸಂಗಾಜಲಂ ಗಾಢಂ ಗಾಢಂ ಅವಗಾಹ್ಯ ಆಭೀಕ್ಷ್ಣ್ಯೇ ಣಾಮುಲ್–ಕ್ಲ್ಪ್ರಾಪ್ತಃ ಅನುಷ್ಠಿತಾಃ ನಿತ್ಯಾಃ ಕ್ರಿಯಾಸ್ಸಂಧ್ಯಾದಯಃ ಯೈಸ್ತೆಭ್ಯಃ– ಆದ್ಯಂ ಪುರಾಣಂ ಪೂರುಷಂ ಹರಿಂಪರಂವಾ–ಪುಷ್ಪೈಃ ಪೂಜಯದ್ಭ್ಯಃ ಅತ ಏವಪೂತಃ ಆತ್ಮಾದೇಹಃ ಮನಃ– ಜೀವೋವಾಯೇಷಾಂತೇಭ್ಯಃ– ಬ್ರಾಹ್ಮಣೇಭ್ಯಃ ನಮೋಸ್ತು ||

ಅರ್ಥ || ನಿತ್ಯ ಬೆಳಿಗ್ಯೆ ಶ್ರದ್ಧೆಯಿಂದ ಗಂಗಾತೀರ್ಥದಲ್ಲಿ ಸ್ನಾನ ಮಾಡಿ ನಿತ್ಯ ಕರ್ಮಗಳಾದ ಸಂಧ್ಯಾವಂದನಾದಿಗಳನ್ನು ಆಚರಿಸಿ ಜಗತ್ತಿಗೆ ಮೂಲಕಾರಣನಾದ ಪರಮೇಶ್ವರನನ್ನು- ಹೂವುಗಳಿಂದ ಪೂಜಿಸುವ ಹಾರವರಿಗೆ ನಮಸ್ಕಾರವಿರಲಿ.

ಕೃಶಾನುಃ ||

ಮೂ | ಕಿಮೇತದ್ದೇಶವಾಸಿನೋಽಪಿ ಬ್ರಾಹ್ಮಣಾಃ ಕೇವಲಂ ಕಲಿ *ಮಹಾತ್ಮ್ಯಕಲಿತ ಶಾಸ್ತ್ರೀಯಚರ್ಯಾವಿಪರ್ಯಯಾಃ ತ್ವಯಾ ನಮಸ್ಕ್ರಿಯಂತೆ || ೧೧೪ ||

ಟೀಕಾ || ಕಿಮಿತಿ | ಕೇವಲಮತ್ಯಂತಂ– ಕಲೇರ್ಯುಗಸ್ಯಮಹಾತ್ಮ್ಯೇನ ಕಲಿತಃ ಸಂಗತಃ ಶಾಸ್ತ್ರೀಯಾಯಾಃ ಶ್ರುತಿಸ್ಮೃತಿ ವಿಹಿತಾಯಾಃ ಚರ್ಯಾಯಾಃ ಆಚಾರಸ್ಯ ವಿಪರ್ಯಯಃ ವೈಪರೀತ್ಯಂ ವಿಹಿತತ್ಯಾಗನಿಷಿದ್ಧಸೇವನರೂಪಂ ಯೈಸ್ತೇ– ಅಪಿಗರ್ಹಾಯಾಂ ||

ಅರ್ಥ || ಇದೇನು ! ಕಲಿಯುಗದ ದೋಷ ಮಹಾತ್ಮ್ಯದಿಂದೊಡಗೂಡಿರುವಂಥ ಮತ್ತು ಶ್ರುತಿಸ್ಮೃತ್ಯಾಚಾರಗಳಿಗೆ ವಿರುದ್ಧವಾದ ನಡಿಕೆಯುಳ್ಳವರಾದಂಥಾ ಈ ನಾಡಿನ ಬ್ರಾಹ್ಮಣರನ್ನು ಕೂಡ ನೀನು ನಮಸ್ಕಾರ ಮಾಡುತ್ತೀಯಾ ?

ಮೂ | ಪಶ್ಯತಾವತ್ ಪ್ರಾಯೇಣಾಸ್ಯ ಕಾಶೀದೇಶ† ಜನಸ್ಯ ಸುಚರ್ಯಾವಿಪರ್ಯಾಸಂ || ೧೧೫ ||

ಅರ್ಥ || ನೋಡು ಈ ಕಾಶೀ ದೇಶದ ಜನರುಗಳ ಭ್ರಷ್ಟ ನಡತೆ:

ಮೂ | ಶ್ಲೋ | ಪ್ರಾತರ್ಹಂತ ಕೃತಾಪ್ಲವೋಽಪಿರಜಕಸ್ಪೃಷ್ಟಾನ್ ಜಡೋರಾಸಭ್ಯೈರೂಢಾನ್ ಧಾರಯತೇ ಪಟಾನನುದಿನಂ ಧೃತ್ವಾ ಬಹಿರ್ಗಚ್ಛತಿ | ಗತ್ವಾವೈಮ್ಲೇಚ್ಛ ಮುಖಾಶುಚೀನ್ ಸ್ಪೃಶತಿಚ ಸ್ಪೃಷ್ಟ್ವಾಪಿ ನಸ್ನಾತ್ಯಹೋನಸ್ನಾತೋಽಶ್ನಥ ಭುಙ್ತ್ತೆ ‡ ಏಷಚ ಫಲೋಽಭುಕ್ತ್ವಾಪಿನ ವ್ರೀಡತಿ || ೧೧೬ ||

* ಮಹಾತ್ಮ್ಯ ಕಲಿತೇತಿಪಾಠಾಂತರಂ || † ದೇಶೀಯೇತಿ ಪುಸ್ತಕಾಂತರೆ || ‡ ಏವೇತಿಪಾಠಾಂತರಂ ||

ಟೀಕಾ ॥ ಪ್ರಾತರಿತಿ । ಜಡಃ ಮೂಢಃ— ಅತಏವ ಚಪಲಃ ಶಾಸ್ತ್ರೀಯಾಚರ್ಯಾವಿಕಲಃ— ಏಷಏತದ್ದೇಶವಾಸೀ—ಅನುದಿನಂ ನತ್ವೇಕಸ್ಮಿನ್ನಿತ್ಯರ್ಥಃ—ಪ್ರಾತಃ—ಕೃತಃ ಆಪ್ಲವಃ ಗಂಗಾಯಾಂ ಸ್ನಾನಂ ಯೇನಸ ತಥೋಕ್ತೋಪಿ ರಜಕಸ್ಪೃಷ್ಟಾನ್ ರಾಸಭ್ಯೈಃ ಊಢಾನ್ ಪಟಾನ್ ಧಾರಯತೇ—ಧೃತ್ವಾಬಹಿರ್ಗಚ್ಛತೀ—ಗತ್ವಾಪಿಮ್ಲೇಚ್ಛಮುಖಾಶುಚೀನ್ ಜನಾನ್ ಸ್ಪೃಶತಿಚ— ಸ್ಪೃಷ್ಟ್ವಾಪಿನಸ್ನಾತಿ— ನಸ್ನಾತೋಪಿ— ನಞರ್ಥಸ್ಯಸುಪ್ಸುಪೇತಿ ಸಮಾಸಃ—ಅಥಭುಙ್ಕ್ತೇ—ಭುಕ್ತ್ವಾಪಿ—ನವ್ರೀಡತಿನಲಜ್ಜತೇ—ಅಹೋ ಇತ್ಯಾಶ್ಚರ್ಯೇ— ಅತ್ರರಜಕಸ್ಪೃಷ್ಟರಾಸಭಾರೂಢ ಪಟಧಾರಣಾದ್ಯನೇಕ ಕಾರಣಸತ್ತ್ವೇಪಿ ಲಜ್ಜಾನುತ್ಪತ್ತೇರ್ವಿಶೇಷೋಕ್ತಿರಲಂಕಾರಃ ॥

ಅರ್ಥ॥ ಜಡನೆಂದರೆ ಮೂಢನಾದಂಥ, ಚಪಲನೆಂದರೆ ಶಾಸ್ತ್ರಕಟ್ಟಳೆ ಹೀನನಾದಂಥ ಈ ಕಾಶಿವಾಸಿಯು ಪ್ರತಿದಿನ ಬೆಳಿಗ್ಯೆ ಗಂಗೆಯಲ್ಲಿ ಜಳಕವಮಾಡಿ, ಮಡಿವಾಳರು ಮುಟ್ಟಿದಂಥಾ ಮತ್ತು ಕತ್ತೆಗಳು ಹೊತ್ತಂಥಾ ಬಟ್ಟೆಗಳನ್ನು ತೊಟ್ಟುಕೊಂಡು ಹೊರಗೆ ಹೋಗುತ್ತಿರುತ್ತಾನೆ. ಹೋಗಿ ಹೊಲಸು ಮುಖದ (ಅಂದರೆ ಮುಖ ತೊಳಿಯದ) ಜನರನ್ನು ಮುಟ್ಟುತ್ತಾನೆ. ಮುಟ್ಟಿ, ನಂತರ ಸ್ನಾನಮಾಡುವದಿಲ್ಲವು. ಸ್ನಾನಮಾಡದೆ ಊಟಮಾಡುತ್ತಾನೆ: ಈ ಪ್ರಕಾರವಾಗಿ ಊಟಮಾಡಿದ್ದಾಗ್ಯೂ ನಾಚಿಕೆ ಬಡುವದಿಲ್ಲವು.

ಮೂ। ಕಿಂಚ। ಶ್ಲೋ। ಶಸ್ತ್ರೈರ್ಜೀವತಿ ಶಾಸ್ತ್ರಮುಜ್ಝತಿ ಪರಂಶೂದ್ರಾಹೃತೈರಂಬುಭಿಸ್ಸ್ವ*ತ್ವಾಚಾಮತಿ ದೇವತಾಸ್ಸ್ನಪಯತಿ ಸ್ವೈರಂಪಚತ್ಯೋದನಂ। ಉಚ್ಛಿಷ್ಟಾನ್ನ ಬಿಭೇತಿಯಾತಿಯವನೈರುಚ್ಚಾವಚೈಸ್ಸಂಗತಿಂ ಮಾತಂಗಾನ್ನಿಕಟಾಗತಾನಗಣಯನ್ಮಾರ್ಗಾನ್ಮುಹುರ್ಗಾಹತೇ॥ ೧೧೭ ॥

ಟೀಕಾ॥ ಕಿಂಚ। ಶಸ್ತ್ರೈರಿತಿ। ಏಷಃ ಶಸ್ತ್ರೈಃ ಆಯುಧವೃತ್ತಿಭಿರ್ಜೀವತಿ— ಪರೀಕ್ಷಾರ್ಥಮಪಿತದ್ಧಾರಣಸ್ಯ ನಿಷಿದ್ಧತ್ವಾದಿತಿಭಾವಃ— ಶಾಸ್ತ್ರಂವೇದಾದಿ— ಪರಂಸರ್ವಥಾ— ಉಜ್ಝತಿತ್ಯಜತಿ— ಶೂದ್ರಾಹೃತೈರಂಬುಭಿಃ— ಇದಮೋದನಪಾಕಪರ್ಯಂತ ಮನ್ವೇತಿ— ಉಚ್ಚಾವಚೈರ್ನಾನಾವಿಧೈರ್ಯವನೈಃ ಮ್ಲೇಚ್ಛೈಸ್ಸಂಗತಿಂ ಸ್ಪರ್ಶಂ ಯಾತಿಪ್ರಾಪ್ನೋತಿ— ನಿಕಟಂ ಸಮೀಪದೇಶಂ— ಆಗತಾನಪಿಮಾತಂಗಾನ್ ಚಂಡಾಲಾನಗಣಯನ್ ಅವಿಚಾರಯನ್ ಸನ್— ಮಾರ್ಗಾನ್— ಮುಹುಃ ನತ್ವೇಕದಾ ಏಕವಾರಂವಾ— ಗಾಹತೇ ಪ್ರವಿಶ್ಯಗಚ್ಛತೀತ್ಯರ್ಥಃ ॥

ಅರ್ಥ॥ ಮತ್ತು ಈ ಕಾಶಿವಾಸಿಯು ಆಯುಧ ಕಸಬಿನಿಂದ ಹೊಟ್ಟೆ ಹೊರಕೊಳ್ಳುತ್ತಾನೆ. ವೇದಸ್ಮೃತಿ ಮೊದಲಾದ ಶಾಸ್ತ್ರಗಳನ್ನು ಬಿಟ್ಟುಬಿಡುತ್ತಾನೆ. ಶೂದ್ರರು ತಂದ ನೀರಿನಿಂದ ಸ್ನಾನ ಆಚಮನ ಮಾಡಿ ದೇವರ ಮೂರ್ತಿಗಳನ್ನು ತೊಳೆದು ಯಥೇಚ್ಛವಾಗಿ ಅನ್ನ ಬೇಯಿಸುತ್ತಾನೆ. ಎಂಜಲಿಗೆ ಅಂಜುವದಿಲ್ಲವು. ಕೀಳು ಮೇಲಾದ ಮ್ಲೇಚ್ಛರ ಸಂಗತಿಯಲ್ಲಿ ಹೋಗುತ್ತಾನೆ. ಸಮೀಪಬಂದ ಹೊಲೆಯರನ್ನೂ ಲೆಕ್ಕಿಸದೆ

---

* ಸ್ನಾತ್ವೇತಿಪಾಠಾಂತರಂ ॥

ಯಾವಾಗಲೂ ಮಾರ್ಗದಲ್ಲಿ ನಡಿಯುತ್ತಾನೆ.

ಮೂ। ಶ್ಲೋ। ನೀಚೈರ್ದುರ್ಯವನೈಶ್ಶ್ವ ನೀಭಿರಪಿ ಪಾನಿಶ್ಶಂಕ ಮಾಲೋಕಿತಂ ಭುಙ್ಕ್ತೆಪಜ್ತ್ವಿ ವಿದೂಷ ಕೈಸ್ಸಹನರ್ಯೈ ರಜ್ಞಾತ *ವೇದಾಕ್ಷರಃ। ಮದ್ಯಾಸ್ವಾದನ ಮತ್ತಚಿತ್ತ ಜನತಾಮೋ ಹಾಯಭೀ †ಹಾನತಃ ಕರ್ಮಾಣ್ಯಾರಭತೆ ಶ್ರುತಿಸ್ಮೃತಿ ವಚೊ ದೂರಾಣ್ಯಸಾರಾಣಿಚ‡ ॥ ೧೧೪

ಟೀಕಾ ॥ ನೀಚೈರಿತಿ। ಅಜ್ಞಾತಂ ಅನಧೀತಂ ವೇದಸ್ಯ ಅಕ್ಷರಂ ಏಕಂ ಯೇನಸಃ ಏಷಃ— ನೀಚೈರ್ದುರ್ಯವನೈಃ— ಕಿಂಬಹುನಾ— ಶುನೀಭಿಃ ಶುನಕಸ್ತ್ರೀಭಿರಪಿವಾ— ಆಲೋಕಿತಂ ಅನ್ನಾದಿ— ಏತಾವದೇವನೆತ್ಯಾಹ— ಪಜ್ತ್ವಿವಿದೂಷಕೈರ್ನರ್ಮಸ್ಯೈರ್ಮಧ್ಯಪಾಯಿಭಿಸ್ಸಹ—ನಿಶ್ಶಂಕಂನಿರ್ಗತೋ ಭಯ ಲೋಕಭ್ರಂಶಭಯಂ ಯಥಾತಥಾಭುಙ್ಕ್ತೆ—ಕಿಂಚ— ಮದ್ಯಾಸ್ವಾದನಮತ್ತಚಿತ್ತಾಯಾಃ ಜನತಾಯಾಃ ಜನಸಮೂಹಸ್ಯ ಮೋಹಂ ಅಯಂಕರ್ಮಣಃ ದಾನಪಾತ್ರಮಿತಿಭ್ರಮಂ ಕರ್ತುಂ ಮೋಹಾಯ— ಕ್ರಿಯಾರ್ಥೇತ್ಯಾದಿನಾ ಚತುರ್ಥೀ— ಭಿಯಃ ಪರಲೋಕಾತ್ ಭಯಸ್ಯಹಾನತಃ ತ್ಯಾಗಂ ಕೃತ್ವಾ— ಲ್ಯಬ್ಲೋಪೇಪಂಚಮೀ— ಶ್ರುತಿಸ್ಮೃತಿವಚಸಾಂದೂರಾಣಿ ಅವಿಧಿಸಂಪಾದಿತಾನೀತ್ಯರ್ಥಃ— ಅತಏವ— ಅಸಾರಾಣಿ ನಿಷ್ಫಲಾನಿ— ಕರ್ಮಾಣಿ— ಆರಭತೆಕರೋತಿ ॥

ಅರ್ಥ ॥ ವೇದದ ಒಂದು ಅಕ್ಷರವನ್ನಾಗಲೀ ತಿಳಿಯದವನಾದ ಈ ಕಾಶೀವಾಸಿಯು ಕೀಳಾದ ಮತ್ತು ದುಷ್ಟರಾದ ಪ್ಲೇಚ್ಛರು ಮಾತ್ರವಲ್ಲ, ಹೆಣ್ಣುನಾಯಿಗಳು ಕೂಡ ನೋಡಿದಂಥ ಅನ್ನಾದಿ ತಿಂಡಿಯನ್ನು ಪಜ್ತ್ವಿವಿದೂಷಕರೆಂದರೆ ಕುಡಿಕರ ಸಂಗಡ ಲೋಕ ಭಯ ಇಲ್ಲದೆ ಉಣ್ಣುತ್ತಾನೆ. ಮತ್ತು ಸಾರಾಯಿ ಕುಡಿದು ಅಮಲು ಹತ್ತಿದ ಬುದ್ಧಿಯುಳ್ಳ ಜನರನ್ನು ಮರಳುಗೊಳಿಸುವದಕ್ಕೆ ಅಂಜಿಕೆಯಂ ಬಿಟ್ಟು ಬಿಟ್ಟು ವೇದಗಳ ವಚನಗಳಿಗೆ ದೂರವಾದದರಿಂದ ನಿಷ್ಫಲವಾದ ಕರ್ಮಗಳನ್ನು ಮಾಡುತ್ತಾನೆ.

ಮೂ। ಶ್ಲೋ। ಕನ್ಯಾಂ ಕಾಮುಕ್ಯುದೂಹ್ಯ ಪ್ರವಿಜಹದುದಯ ದ್ಯೌವನಾಮಜ್ಞಏನಾಂದ್ರವ್ಯಾ ಶಾಪಾಶಕೃಷ್ಟೊಭ್ರಮತಿ ಚಿರತರಂ ಹಂತದೇಶಾಂತರೇಷು। ಅನ್ಯೋನ್ಯಾಶ್ಲೇಷಮಾಂಭಾವಿಗಲಿತ ವಯಸೊರಾತ್ತ ಮಾಲಿನ್ಯ ಮತ್ಯೋರ್ದಂಪತ್ಯೋರ್ವ್ಯಾಕ§ದಿತ್ಥೈವಂ ಹತವಿಧಿರುಭಯೊರ್ಲೋಕ ಯೊಶ್ಶೋಕಯೋಗಂ ॥೧೧೯॥

ಟೀಕಾ ॥ ಕನ್ಯಾಮಿತಿ। ಅಜ್ಞಃ—ಅತಏವ—ಕಾಮಪಿ ಅನಿರ್ವಾಚ್ಯ ರೂಪಸೌಶೀಲ್ಯಾದಿಗುಣಾಂ ಕನ್ಯಾಂ— ಉದೂಹ್ಯಪರಿಣೀಯದ್ರವ್ಯಾಶಾಪಾಶಕೃಷ್ಟಃ—ಅತಏವ ಉದಯದ್ಯೌವನಾಮಪಿಏನಾಂ ಊಢಾಂ ಪ್ರವಿಜಹತ್

---

* ವೇದಾಕ್ಷರೈಃ † ಹಾಸಿತಃ ‡ ಅಸಾರಾಣ್ಯಹೋ ಇತಿಪಾಠಾಂತರಾಣಿ॥ § ವ್ಯಾಕೃತ್ಯೈವಂ ಇತಿಪಾಠಾಂ॥

ಗೃಹಏವತ್ಯಜ್ಯ ಸರ್ವ—ದೇಶಾಂತರೇಷುಸುದೂರೇಷು—ಭ್ರಮತಿ—ವಾರ್ತ್ತವೃದ್ಧ್ಯಾದಿನೇತಿಭಾವಃ—ಹಂತೇತಿ ಖೇದೇ— ತತಶ್ಚಾನ್ಯೋನ್ಯಸ್ಯಾಶ್ಲೇಷೇ ಆಲಿಂಗನೇವಾಂಛಯೈವ ನತುಭೋಗೇನವಿಗಳಿತಂ ಅತಿಕ್ರಾಂತಂ ವಯಃ ಯೌವನಂ ಯಯೋಸ್ತಯೋಃ— ಅತಏವ ಆತ್ತಂ ಮಾಲಿನ್ಯಂ ವ್ಯಸನಂ ಯಯಾತಾದೃಶೀ ಮತಿಃ ಮನಃ ಯಯೋಸ್ತಯೋರ್ದಂಪತ್ಯೋಃ ಏತದ್ದೇಶೀಯಯೋಃ— ಏವಮುಕ್ತಪ್ರಕಾರಂ— ಉಭಯೋರ್ಲೋಕಯೋಶ್ಶೋಕ ಯೋಗಂ— ಇಹಲೋಕೇಸಾಂಸಾರಿಕಸೌಖ್ಯಾಭಾವಾತ್ ಅಮುಷ್ಮಿನ್ ಉಕ್ತದುಷ್ಕರ್ಮ ವಶಾಚ್ಚೇತಿ ಭಾವಃ— ಹತವಿಧಿಃ ದುಷ್ಟದೈವಂ— ವ್ಯಾದಿತದತ್ತವಾನ್—ಅತ್ರಹತಪದಾರ್ಥಸ್ಯ ಶೋಕದಾನೇ ಹೇತುತ್ವಾತ್ಕಾವ್ಯ ಲಿಂಗಂ ||

ಅರ್ಥ ॥ ಮೂಢನಾದ ಈ ಕಾಶಿದೇಶಸ್ಥನು ಯಾವಳಾದರು ಒಂದು ಕನ್ಯೆಯನ್ನು ಮದುವೆ ಮಾಡಿಕೊಂಡು ಹಣವಿನ ಆಶೆಎಂಬ ಹಗ್ಗದಿಂದ ಎಳಿಯಲ್ಪಟ್ಟಂಥಾತನಾಗಿ ಹೆಂಡತಿಯು ವಿಕಸಿತತಾರುಣ್ಯಉಳ್ಳವಳಾದಾಗ್ಯೂ ಅವಳನ್ನು ಮನೆಯಲ್ಲಿ ಬಿಟ್ಟು ಬಿಟ್ಟು ದೂರವಾದ ಅನ್ಯದೇಶಗಳಲ್ಲಿ ಬಹಳ ಕಾಲ ತಿರುಗಾಡುತ್ತಾನೆ. ಇದೆಷ್ಟು ಖೇದಕರವಾದದ್ದು! ಬಳಿಕ ಪರಸ್ಪರ ಅಪ್ಪಿಕೊಳ್ಳಬೇಕೆಂಬ ಆಶೆಯಿಂದಲೆ ಎಳೆಯತನ ಕಳಕೊಂಡಂಥಾವರಾದದರಿಂದ ವ್ಯಸನ ಹತ್ತಿದ ಮನಸುಳ್ಳವರಾದ ಈ ಗಂಡಹೆಂಡರುಗಳಿಗೆ ಕಠೋರವಾದ ಪ್ರಾರಬ್ಧವು ಎರಡೂಲೋಕದಲ್ಲಿ ದುಃಖದ ಜೋಡಿಗೆಯನ್ನು ಕೊಡುವಂಥಾದ್ದಾಯಿತು.

ಮೂ। ಶ್ಲೋ। ನಾಧೀತೇತ್ರಜನೋ ಯದಿಕಶ್ಚಿದಧೀತೇ ಶತೇಸಹಸ್ರೇವಾ ದುಸ್ತರ್ಕೇಷು ಶ್ರಾಮ್ಯತಿ ದೂರೀಕುರುತೇ ಶ್ರುತಿಸ್ಮೃತಿ ಸುತರ್ಕಾನ್ ॥ ೧೨೦ ॥

ಟೀಕಾ ॥ ನೇತಿ ॥ ಅತ್ರದೇಶೇ ಬ್ರಾಹ್ಮಣಃ ಸಾಧೀತಏವ ಕಿಮಪೀತಿಶೇಷಃ— ಶತೇವಾಸಹಸ್ರೇವಾಕಶ್ಚಿದೇಕಃ—ಅಧೀತೇಯದಿ—ತದಾ—ದುಸ್ತರ್ಕೇಷು ಗೌತಮಾದಿನಿರ್ಮಿತೇಷು ಶ್ರಾಮ್ಯತಿ-ಅಧ್ಯಯನೇನ ಶ್ರಾಂತೋ ಭವತಿ—ಶ್ರುತಿಸ್ಮೃತೀನಾಂ ಸಂಬಂಧಿನಃ ಸುತರ್ಕಾನ್ ಶಾರೀರಕಾದಿ ಮಹಾನಿಬಂಧನಾನಿ—ದೂರೀಕುರುತೇ ನಾಧೀತಇತ್ಯರ್ಥಃ ||

ಅರ್ಥ ॥ ಈ ದೇಶದಲ್ಲಿ ಜನರು ಅಧ್ಯಯನ ಮಾಡುವದೇ ಇಲ್ಲ. ನೂರರೊಳಗೆ ಅಥವಾ ಸಾವಿರರೊಳಗೆ ಒಬ್ಬನೆಲ್ಲಾದರೂ ಕಲಿತರೆ, ಗೌತಮ ಮೊದಲಾದವರು ರಚಿಸಿದ ಕುತರ್ಕ ಶಾಸ್ತ್ರಗಳಲ್ಲೇ ದಣುವಾರಿಸಿಕೊಂಡು ವೇದಶಾಸ್ತ್ರ ರೂಪವಾದ ಒಳ್ಳೇ ತರ್ಕಗಳನ್ನು ಬಿಟ್ಟುಬಿಡುತ್ತಾರೆ.

ವಿಶ್ವಾವಸುಃ ॥

ಮೂ। ಕಷ್ಟಮರೇ ಬ್ರಾಹ್ಮಣನಿಂದಾಂ ಶೃಣ್ವತಃ ಕಂಪತೇ *ಮಮ ಹೃದಯಂ। ಯಸ್ತ್ವಯಾಽಪನ್ಯಸ್ತ †ಸ್ವಚರ್ಯಾವಿಪರ್ಯಯಃ

---

* ಮೇ † ಸಚ್ಚರ್ಯಾ ವಿಪರ್ಯಾಸಃ ಇತಿಪಾಠಾಂತರೇ ||

ಸಮಸ್ತಕಲೇರೇವ ದೋಷೋನ ಬ್ರಾಹ್ಮಣಾನಾಂ ॥ ೧೨೧ ॥

ಟೀಕಾ ॥ ಕಷ್ಟಮಿತಿ ॥ ಕಷ್ಟಂ ಅಸ್ಯಾಯಂ–ಕಲೇರೇವೇತಿ–ಕಾಮಾದಿವಿಕಾರ ಜನಕಸ್ಯೇತಿಶೇಷಃ ॥

ಅರ್ಥ ॥ ಅಯ್ಯೋ ಕಷ್ಟ, ಕಷ್ಟ! ಬ್ರಾಹ್ಮಣರ ನಿಂದೆಯನ್ನು ಕೇಳಿ ನನ್ನ ಎದೆಯು ನಡುಗುತ್ತದೆ. ನೀನು ವಿವರಿಸಿದ ಸದಾಚಾರ್ಯವ್ಯತ್ಯಾಸವು ಕಲಿಯ ದೋಷ ಮೂಲಕವಾದದ್ದು ಹೊರತು ಬ್ರಾಹ್ಮಣರ ದೋಷ ಮೂಲಕವಾದದ್ದಲ್ಲವು.

ಮೂ। ಕಲೌಯುಗೆ ಕಾರ್ತಯುಗಂ ಚಾರಿತ್ರಂ ಕುತ್ರನಾಮ
ಸಂಭಾವ್ಯತೇ। ದುರಿತಲತಿಕೋಪ *ಘ್ನಾಯಿತಾತ್ಮಾ ದುರ್ಜಯಃ
ಖಲುಕಲಿಃ ॥ ೧೨೨ ॥

ಟೀಕಾ ॥ ಕಲಾವಿತಿ ॥ ಕೃತಯುಗೇಭವಂ ಕಾರ್ತಯುಗಂ– ಕುತ್ರನಾಮಸಂಭಾವ್ಯತೆ ಕೇನಹೇತುನಾ ಉತ್ಪಾದ್ಯತ ಇತ್ಯರ್ಥಃ ಯತಃ–ದುರಿತಸ್ಯ ದುಷ್ಕರ್ಮಣಾಮೇವಲತಿಕಾಯಾಃ ಉಪಘ್ನಾಯಿತಃ ಆಶ್ರಯ ವೃಕ್ಷವದಾಚರಿತ ಆತ್ಮಾಸ್ವರೂಪಂ ಯಸ್ಯಸಃ– ಕಲಿಃ– ದುರ್ಜಯಃ– ಅನಿವಾರ್ಯಃ ಖಲು ॥

ಅರ್ಥ ॥ ಕಲಿಯುಗದಲ್ಲಿ ಕೃತಾಯುಗದ ಕಟ್ಟಳೆಗಳು ಹ್ಯಾಗೆ ಹುಟ್ಟ್ಯಾವು? ಈ ಕಲಿಯು ಪಾಪಬಳ್ಳಿಯ ಹಬ್ಬಿಕೆಗೆ ಆಧಾರವಾದ ಗುಟ್ಟವು. ಅಂಥಾ ಕಲಿಯನ್ನು ಗೆಲುವದು ಅಸಾಧ್ಯವಲ್ಲವೇ?

ಮೂ। †ಶ್ಲೋ। ಹರ್ಮ್ಯಸ್ಥಾನಮಧರ್ಮ ಕರ್ಮ ವಿತತೇ ದುರ್ಮಾನ ‡ಭರ್ಮಾಸನಂ ಶಾಸ್ತ್ರಸ್ತೋಮ ಲಲಾಟ §ಭೂಲಿಪಿ ಲಯಶ್ಯಾಂತಿಸ್ಸಮಾನಾಮಪಿ। ಸರ್ವಾಮ್ನಾಯವಚಸ್ಸಮಾಪನದಿನಂ ಸಂಸ್ಥಾನದರ್ಚಾವಿಧೇರರ್ಥಾಶಾಜನಿಸ್ಸೂರಭೂದಿಹಮಹಾನರ್ಥಾವಹೋಯಂ ಕಲಿಃ ॥ ೧೨೩ ॥

ಟೀಕಾ ॥ ಹರ್ಮ್ಯೇತಿ ॥ ಮಹತಃ ಅನರ್ಥಾನ್ ವಕ್ಷ್ಯಮಾಣಾನ್ ಆವಹತಿ ಸಂಪಾದಯತೀತ್ಯಾವಹಃ–ಅಯಂಕಲಿಃ ಯುಗಂ–ನವಿದ್ಯತೆ ಧರ್ಮಃ ಪುಣ್ಯಂ ಯೇಭ್ಯಸ್ತೇಷಾಂ ಕರ್ಮಣಾಂ ಪರದಾರಧನಹರಣಾದೀನಾಂ ವಿತತೇಃ ರಾಶೇಃ– ಹರ್ಮ್ಯಸ್ಥಾನಂ ಆಶ್ರಯ ಶ್ರೇಷ್ಠಮಿತ್ಯರ್ಥಃ–ಏತದಾದಿ ಅರ್ಥಾಶಾಜನಿಭೂರಿತ್ಯಂತಂ ಪ್ರತ್ಯೇಕಂ ವಿಧೇಯಂ–ದುರ್ಮಾನಸ್ಯ ದುರಭಿಮಾನಸ್ಯ ಧರ್ಮಾಸನಂ ಸ್ವರ್ಣಪೀಠಂ–ಲಲಾಟ ಭೂಲಿಪಿಃ ಆಯುರಕ್ಷರಾಣಿ– ಆಮ್ನಾಯೋವೇದಃ–ಅರ್ಚಾವಿಧಿಃ ಪೂಜನಂ– ಸಂಸ್ಥಾಸಮಾಪ್ತಿಃ ॥

---

* –ಪಘ್ನಾತ್ಮಾ ಇತಿಪಾಠಾಂತರಂ ॥ † ಪತ್ಯೈತ್ಯಧಿಕಂ ಪುಸ್ತಕಾಂತರೆ ‡ ಧರ್ಮಾಸನಂ
§ ದುರ್ಲಿಪಿಚಯಃ ಇತಿಪಾಠಾಂತರೆ ॥

ಅರ್ಥ ॥ ಈ ಕಲಿಯು ಅಧರ್ಮ ಕರ್ಮಗಳು ಅಂದರೆ ಪರದಾರಧನಹರಣಾದಿ ದುಷ್ಟಕರ್ಮಗಳ ರಾಶಿಯ ಮುಖ್ಯ ಸ್ಥಾನವಾಗಿರುವನು. ದುರ್ಮಾನವೆಂದರೆ ದುರಭಿಮಾನಕ್ಕೆ ಚೆನ್ನದ ಪೀಠೆಯಾಗಿರುವನು. ಧರ್ಮಶಾಸ್ತ್ರಾದಿಗಳ ಹಣೆಬರಹವನ್ನು ಅಳಿಸಿದವನಾಗಿರುವನು. ಯಜ್ಞಗಳಿಗೂ ಶಾಂತಿಯಾಗಿರುವನು, ಅಂದರೆ ಯಜ್ಞಗಳನ್ನು ಕೂಡ ನಿಲ್ಲಿಸಿ ಬಿಟ್ಟಂಥವನು. ವಿಶಿಷ್ಟ ವೇದ ವಾಕ್ಯಗಳ ಸಮಾಪ್ತಿಯ ದಿವಸವಾಗಿರುವನು. ದೇವತಾ ಪೂಜೆಯ ಯಥಾರ್ಥವಾದ ವಿಧಿಯಂದರೆ ನೇಮಕ್ಕೆ ಕಡೆಗಾಲವಾಗಿರುವನು. ಧನಲೋಭಕ್ಕೆ ತೌರಮನೆಯಾಗಿರುವನು. ಈ ಪ್ರಕಾರವಾಗಿ ಕಲಿಯು ಹಿರಿದಾದ ಅನರ್ಥಗಳನ್ನುಂಟು ಪಡಿಸುವಂಥಾವನಾಗಿರುತ್ತಾನೆ.

ಮೂ। ಶ್ಲೋ। ಏತಾದೃಶೇ ಕಲಿಯುಗೇ ವಿಶತೇಷು ಕಶ್ಚಿಜ್ಜಾತಾದರೋಜಗತಿಯಃ ಶ್ರುತಿಮಾರ್ಗ ಏವ। ಯತ್ಕಿಂಚಿದಾಚರತಿ ಪಾತ್ರಮು ಸೌಸ್ತುತೀನಾಂ ಶ್ಲಾಘ್ಯಂ ಮಿತಾಪಮಪಿ ಕಿಂ ನಮರೌ ಸರಶ್ಚೇತ್ ॥ ೧೩೪ ॥

ಟೀಕಾ ॥ ಏತಾದೃಶ ಇತಿ। ಏತಾದೃಶೆ ಉಕ್ತಾನೇಕಾನರ್ಥಾವಹೇಪಿ ಕಲಿಯುಗೆ–ಶತೇಷು ಅನೇಕಶತಮಧ್ಯೇ ಜಗತಿ ಮರ್ತ್ಯಲೋಕೆ ಯಃ ಕಶ್ಚಿತ್ಕೋಪಿಜನಃ– ಶ್ರುತಿಮಾರ್ಗೇ ವೇದೋಕ್ತ ಏವಕರ್ಮಣಿ ಜಾತಾದರಃ ಯತ್ಕಿಂಚಿತ್ಕರ್ಮ ಆಚರತ್ಯೇವೇತ್ಯತ್ಯಂತಾಯೋಗವ್ಯವಚ್ಛೇದಃ– ಅಸೌಯತ್ಕಿಂಚಿತ್ಕರ್ಮಾನುಷ್ಠಾತಾಪಿ–ಸ್ತುತೀನಾಂ ಪಾತ್ರಮೇವ–ಕುತಃ ಮರೌನಿರ್ಜಲದೇಶೆಮಿತಂ ಅತ್ಯಲ್ಪಂ ಆಪ ಅಪಾಂ ಸಮೂಹಃ ಯಸ್ಮಿನ್– ಸರಃ ಅಸ್ತಿಚೇತ್–ತತ್ಸರಃ ನಶ್ಲಾಘ್ಯಂಕಿಂ–ಶ್ಲಾಘ್ಯಮೇವೇತ್ಯರ್ಥಃ ॥

ಅರ್ಥ ॥ ಈ ತೆರದ ಕಲಿಕಾಲದಲ್ಲಿ ಲೋಕದೊಳಗೆ ನೂರರಲ್ಲಿ ಒಬ್ಬನ್ಯಾರಾದರೂ ವೇದ ವಿಹಿತ ಆಚಾರದಲ್ಲಿ ಪ್ರೀತಿಯುಳ್ಳವನಾಗಿ ಸ್ವಲ್ಪ ಕರ್ಮವನ್ನಾಗಲೀ ಮಾಡಿದರೆ ಅವನು ಹೊಗಳಿಕೆಗೆ ಯೋಗ್ಯನು. ನಿರ್ಜಲವಾದ ಮಾರವಾಡ ದೇಶದಲ್ಲಿ ಅಲ್ಪ ನೀರುಳ್ಳ ಕೊಳವಾದರೂ ಸ್ತುತಿಗೆ ಅರ್ಹವಾದದ್ದಲ್ಲವೇ? ಅರ್ಹವಾದದ್ದು.

ಮೂ ॥ ಶ್ಲೋ ॥ ಕಿಂಚ। ಯೇಕಾಯಸ್ಥ ಜನಾಶ್ಚಯೇ ನೃಪಸುತಾಯೇಚದ್ವಿಜಾಶ್ಶಸ್ತ್ರಿಣಃ ತೇಯತ್ನಾದನುಸೃತ್ಯನಿರ್ದಯತಯಾ ಶುಷ್ಕಾನ್ ತುರುಷ್ಕಾಧಿಪಾನ್। ದೇವಾನ್ಭೂಮಿಸುರಾಂಶ್ಚ ಪಾಂತಿಕೃತಿನಸ್ತೇ ಚೇದ್ಗೃಹೇಷ್ವಾ ಸತೆ ಬ್ರಾಹ್ಮಣ್ಯಾಯ ಜಲಾಂಜಲಿಃಕಿಲಭುವಿ ಪ್ರಾಜ್ಞೈಃ ಪ್ರದೇಯೋಭವೇತ್ ॥ ೧೩೫ ॥

ಟೀಕಾ ॥ ಪ್ರಾಗುಕ್ತಹಂತೇತಿ ದೂಷಣಮುದ್ಧರತಿ ॥ ಯಇತಿ ॥ ಯೇತುಕಾಯಸ್ಥಜನಾಃ ಗ್ರಾಮಾಯವ್ಯಯ ಲೇಖಕ ಜಾತೀಯಾಃ–ಯೇಚನೃಪಸುತಾಃ ರಾಜಪುತ್ರಜಾತೀಯಾಃ–ಯೇಚದ್ವಿಜಾಶ್ಶಸ್ತ್ರಿಣಃ ಆಯುಧೋಪಜೀವಿನಃ ತೇತ್ರಿವಿಧಾಅಪಿ– ಯತ್ನಾತ್ತುರುಷ್ಕ ಪ್ರಭುಸೇವಾನುಕೂಲ್ಯಾತ್ಸ್ವಶ್ಶ್ಯ ಸ್ವ

ಶಸ್ತ್ರಾದಿವ್ಯಾಪಾರಮವಲಂಬ್ಯ— ಲಬ್ಧೇಽಪಿ ಪಂಚವಿಂಶೇ— ನಿರ್ದಯತಯಾ ಶುಷ್ಕಾನ್ ನಿಷ್ಕರುಣಾನ್— ತುರುಷ್ಕಾಧಿಪಾನ್ ಅನುಸೃತ್ಯ— ದೇವಾನ್ ಭೂಮಿಸುರಾನ್ ಬ್ರಾಹ್ಮಣಾಂಶ್ಚ— ಸಂರಕ್ಷಂತಿ—ಕೃತಿನಃ ದುಷ್ಟಸೇವಾಮಪ್ಯಂಗೀಕೃತ್ಯ ದೇವಬ್ರಾಹ್ಮಣ ಪೂಜನಕೌಶಲ್ಯವಂತಃ— ತೇ ತ್ರಿವಿಧಾಃ— ಗೃಹೇಷು ಆಸತೇಽಶೇಷ್ವಪಿ ವದುಕ್ತ ನೋಽಷಾತಿಶಯೇನೇತಿ ಭಾವಃ— ತದಾ ಭುವಿ—ಪ್ರಾಜ್ಞೈಃ ಬುಧೈಃ—ಬ್ರಾಹ್ಮಣ್ಯಾಯ ಬ್ರಾಹ್ಮಣ್ಯಾನಾಂ ತಮಾಜ್ಞೆ— ಜಲಾಂಜಲಿಃ ತ್ಯಾಗಸ್ಥಾಪಕಜಲಾಂಜಲಿಃ ಪ್ರದೇಯಃ ದಾತವ್ಯೋ ಭವೇತ್— ಯಾಜನಾಧ್ಯಾಪನ ಪ್ರತಿಗ್ರಹಾಣಾಂ ಜೀವಿಕಾರ್ಥಾನಾಂ ತುರುಷ್ಕಪ್ರಭುತ್ವೇ ಪ್ರಸಕ್ತ್ಯಭಾವಾದನ್ಯಾನಿ ಯಜನಾಧ್ಯಯನದಾನಾನಿ ಸ್ವಯಮೇವ ನಿಷಿದ್ಧೀಭವಂತಿ ನಿರ್ಧನಾನಾಮಿತಿ ಭಾವಃ ||

ಅರ್ಥ ॥ ಕಾಯಸ್ಥ ಜನರೆಂದರೆ ಗ್ರಾಮದಾಯವ್ಯಯದ ಲೆಕ್ಕ ಇಡುವ ಕಸಬಿನ ಜನರು. ನೃಪಸುತಾಃ ಅಂದರೆ ರಾಜಪುತ್ರ ಜಾತಿಯವರು. ಆಯುಧಧಾರಿಗಳಾಗಿ ಅಂದರೆ ಸೈನಿಕತನದ ವೃತ್ತಿಯನ್ನವಲಂಬಿಸಿಕೊಂಡಿರುವ ಬ್ರಾಹ್ಮಣರು. ಈ ಮೂರು ವರ್ಗಗಳಲ್ಲಿ ಯಾರು ಕರುಣಾರಸದ ಲವಲೇಶವಾದರು ಇಲ್ಲದವರಾದ ಮುಸಲ್ಮಾನ ಅರಸುಗಳನ್ನು, ಸಾಯಾಸದಿಂದ ಅನುಸರಿಸಿದಂಥವರಾಗಿ, ದೇವಬ್ರಾಹ್ಮಣರುಗಳ ಸಂರಕ್ಷಣೆಮಾಡುತ್ತಾರೋ, ಅವರು ಕೃತಾರ್ಥರು. ಅವರು ಮನೆಯಲ್ಲೇ ಕೂತುಕೊಳ್ಳುವಂಥವರಾಗುತ್ತಿದ್ದರೆ, ಪೃಥ್ವಿಯ ಮೇಲೆ ತಿಳಿದವರು ಬ್ರಾಹ್ಮಣತ್ವಕ್ಕೆ ನೀರು ಬಿಟ್ಟಂಥವರಾಗಬೇಕಾಗುತ್ತಿತ್ತು. ಯಜ್ಞಮಾಡಿಸುವದು, ಅಧ್ಯಯನ ಹೇಳುವದು ಮತ್ತು ದಾನದಕ್ಷಿಣೆ ತೆಗದುಕೊಳ್ಳುವದು ಈ ಮೂರು ಮಾರ್ಗಗಳು ಬ್ರಾಹ್ಮಣರ ಜೀವನಾಧಾರವಾಗಿವೆ. ಮುಸಲ್ಮಾನ ರಾಜ್ಯದಲ್ಲಿ ಅವುಗಳ ಗಂಧ ಕೂಡ ಇರುವದಿಲ್ಲವಾದದರಿಂದ, ಉಳಿದ ಮೂರು ಕರ್ಮಗಳ ಅಂದರೆ ಯಜ್ಞಮಾಡುವದು, ಅಧ್ಯಯನ ಮಾಡುವದು, ದಾನ ಕೊಡುವದು ಈ ಕರ್ಮಗಳ ಲೋಪ, ನಿರ್ಧನ ಜನರಲ್ಲಿ ಸ್ವತೇವವಾಗುತ್ತದೆ ಎಂಬ ತಾತ್ಪರ್ಯವು.

ಮೂ। ಸರ್ವತೋದೃಷ್ಟಿಂ ಪ್ರಸಾರ್ಯ ಸಶ್ಲಾಘಂ।

ಶ್ಲೋ। ಆಕ್ರಾಂತಾಸು ವಸುಂಧರಾಸು ಯವನೈರಾಸೇತು ಹೈ
ಮಾಚಲಂ ವಿದ್ರಾಣೇ ಕ್ಷಿತಿಭೃದ್ಗಣೇ ವಿಕರುಣೇ ನಿದ್ರಾತಿ ನಾರಾ
ಯಣೇ। ನಿರ್ವಿಘ್ನಪ್ರಸರೇ ಕಲಾವಪಿ ಬಲಾನ್ನಿಷ್ಕಂಟಕಂ ವೈದಿ
ಕಂ ಪಂಥಾನಂ ಕಿಲ ತತ್ರ ತತ್ರ ಪರಿಪಾತ್ಯೇಕೋಹಿ ಲೋಕೋ
ತ್ತರಃ ॥ ೧೨೬ ॥

ಟೀಕಾ ॥ ಆಕ್ರಾಂತಾಸ್ವಿತಿ। ಯವನೈರ್ಹಿಃ ಮಸ್ಯ ಸಂಬಂಧೀ ಅಚಲಃ ಹೈಮಾಚಲಂ ಸೇತುಂಚಾಭಿವ್ಯಾಪ್ಯ ಆಸೇತುಹೈಮಾಚಲಂ— ಅಭಿವಿಧಾವವ್ಯಯೀಭಾವಃ— ವಸುಂಧರಾಸು ಷಟ್ಪಂಚಾಶದ್ದೇಶೇಷು ಆಕ್ರಾಂತಾಸು ಸತೀಷು— ಕ್ಷಿತಿಭೃದ್ಗಣೇ ರಾಜಸಂಘೇ ವಿದ್ರಾಣೇ ಪಲಾಯಮಾನೇ ಸತಿ— ವಿಕರುಣೇ ಅತಏವ ನಾರಾಯಣೇ ನಿದ್ರಾತಿ ಸತಿ—ಕಲೌ ಕಲಿಯುಗೇ— ನಿರ್ವಿಘ್ನಪ್ರಸರೇ ನಿಷ್ಪ್ರತಿಬಂಧಕ ಪ್ರವೃತ್ತೌ ಸತ್ಯಾಪಿ ಲೋಕೇ ಉತ್ತರಃ ಶ್ರೇಷ್ಠಃ ಏಕೋಽಪಿ ಆಸ್ತಿಕಃ— ತತ್ರ ತತ್ರ ದೇಶೇ ಬಲಾತ್ ಹಠಾದ್ರೂಪಾದ್ವೈದಿಕಂ

ವೇದವಿಹಿತಂ ಪಂಥಾನಂ ಸತ್ಕರ್ಮಪರಿಪಾಲಯತಿ ||

ಅರ್ಥ || ಎಲ್ಲ ದಿಕ್ಕುಗಳಲ್ಲಿಯೂ ನೋಡಿ ಸ್ತುತಿಪೂರ್ವಕವಾಗಿ ವಿಶ್ವಾವಸು ಹೇಳುತ್ತಾನೆ: ಹಿಮಾಚಲ ಪರ್ವತದಿಂದ ಸೇತುಬಂಧ ರಾಮೇಶ್ವರ ಪರ್ಯಂತ ಪೃಥ್ವಿಯನ್ನು ಮುಸಲ್ಮಾನರು ಕೈವಶ ಮಾಡಿಕೊಂಡಿರಲು, ಭೂಪರಿಪಾಲಕರಾದ ಅರಸುಗಳ ಸಮೂಹವು ಓಡಿ ಹೋಗಿರಲು, ಶ್ರೀ ವಿಷ್ಣುವು ನಿರ್ದಯನಾಗಿ ನಿದ್ರೆಹೋಗುತ್ತಿರಲು, ಕಲಿಯು ನಿರಾತಂಕವಾಗಿ ವಿಸ್ತಾರಗೊಳ್ಳುತ್ತಿರಲು ಅಲ್ಲ್ಯಲ್ಲಿ ಶ್ರದ್ಧೆಯಿಂದ ಸುಖಾವಹವಾದ ವೇದ ಮಾರ್ಗವನ್ನು ಒಬ್ಬನಾಗಲೀ ಯಾರು ಸಂರಕ್ಷಿಸುತ್ತಾನೊ ಅವನು ನಿಜವಾಗಿ ಲೋಕದಲ್ಲಿ ಹಿರಿಯನು.

ಮೂ। ಪುನಸ್ಸಶ್ಲಾಘಂ।

ಶ್ಲೋ। ತ್ಯಜತುವಿಹಿತ ಮೇತದ್ದೇಶವಾಸೀನಿಷಿದ್ಧಂ ಭಜತು ತದಪಿಲೋಕೇ ನಾಸ್ತಿಧನ್ಯಸ್ತದನ್ಯಃ। ತ್ರಿಯುಗಪದನಖ ಶ್ರೀ ದತ್ತಶುದ್ಧಿರ್ಯದಂಗೇಲಗತಿದುರಿತಭಂಗೇ ಲಗ್ನ ಕೋಗಾಂಗಪೂರಃ ॥ ೧೨೩ ॥

ಟೀಕಾ || ತ್ಯಜತ್ವಿತಿ। ಯದ್ಯಪಿ–ಏತದ್ದೇಶವಾಸೀಜನಃ ವಿಹಿತಂ ವೇದ ಚೋದಿತಂ ಕರ್ಮತ್ಯಜತು– ನಿಷಿದ್ಧಂ ಕರ್ಮ ಭಜತು ಕರೋತು ತದಪಿತಥಾಪಿ– ತದನ್ಯಃ– ತಸ್ಮಾದೇತದ್ದೇಶವಾಸಿನಃ ಅನ್ಯಃ ಧನ್ಯಃ ಲೋಕೇನಾಸ್ತ್ಯೇವ– ಯದಂಗೇಯಸ್ಯ ಏತದ್ದೇಶವಾಸಿನಃ ಅಂಗೇ-- ತ್ರಿಯುಗಸ್ಯ ವಿಷ್ಣೋಃ ಪದನಖಾನಾಂ ಶ್ರಿಯಾಕಾಂತ್ಯಾದತ್ತಶುದ್ಧಿಃ ಪರಿಶುದ್ಧಃ ದುರಿತಭಂಗೇಲಗ್ನಕಃ ದೇಹಶುದ್ಧಿನಿಶ್ಚಾಯಕಃ– ಸ್ವರ್ಲಗ್ನಕಾಃ ಪ್ರತಿಭುವ ಇತ್ಯಮರಃ– ಗಾಂಗಃ ಪೂರಃ ಗಂಗಾಜಲಂ– ಲಗತಿ ಲಗ್ನೋ ಭವತಿ– ಅತ್ರತ್ರೀಣಿಯುಗಾನಿ ಭಗಶಬ್ದಾರ್ಥಾಃ ಷಟ್ಯಸ್ಯಸಃ ಇತಿವಿಗ್ರಹಃ– ಭಗಶಬ್ದಾರ್ಥಾಸ್ತು ಪೂರ್ವೈಸ್ತವ ಪ್ರಕರಣೇನಿರುಕ್ತಾಃ ||

ಅರ್ಥ || ಪುನಹಾ ಹೊಗಳಿಕೆಯಾಗಿ ವಿಶ್ವಾವಸುವು ಹೇಳುತ್ತಾನೆ: ಈ ನಾಡಿನ ಜನರುಗಳು ವೇದವಿಧಿತ ಕರ್ಮಗಳನ್ನು ಮಾಡದೆ ಬಿಡಲೀ, ವೇದ ವಿರುದ್ಧವಾದ ಕರ್ಮಗಳನ್ನು ಮಾಡಲೀ, ಆದಾಗ್ಯೂ ಅವರಿಗಿಂತ ಹೆಚ್ಚು ಪುಣ್ಯವಂತರು ಲೋಕದಲ್ಲಿರುವದಿಲ್ಲವು. ಯಾಕೆಂದರೆ: ತ್ರಿಯುಗಪದನಖಶ್ರೀ ಅಂದರೆ ಷಡ್ಗುಣೈಶ್ವರ್ಯವಂತನಾದ ಶ್ರೀ ವಿಷ್ಣುವಿನ ಪಾದದುಗುರುಗಳಿಂದ ಪಾವನತ್ವಹೊಂದಿ ಪಾಪಪರಿಹಾರಕ್ಕೆ ಹೊಣೆಯಾದ ಗಂಗಾಪ್ರವಾಹವು ಅವರ ಶರೀರಗಳಿಗೆ ತಗಲುತ್ತದೆ.

ಮೂ। ಶ್ಲೋ। ಸೌರಾಷ್ಟ್ರೇಷು ಗೌಡೇಷು ಚಕಾನ್ಯಕುಬ್ಜೇ *ಷ್ವ ಗಾಧಮೇಧೇಷು ಚಮೈಥಿಲೇಷು। ಅನ್ಯೇಷು †ಸತ್ಸ್ವೇಷು ಬು

---

* ಅಂಗೇಷು ವಂಗೇಷು † ಸತ್ಸ್ವೇವ ಇತಿಪಾಠಾಂತರೆ ||

ಧೇಷು ಧನ್ಯೆಷ್ವದ್ಯಾಪಿಜೀವಂ ತ್ಯಧಿಭೂಮಿವಿದ್ಯಾಃ ॥ ೧೨೪

ಟೀಕಾ ॥ ಪ್ರೌಢೇಷ್ವಿತಿ। ಪ್ರೌಢೇಷುಪ್ರಗಲ್ಭೇಷು ಅಗಾಧ ಮೇಧೇಷುಅಪ್ರಮೇಯ ಬುದ್ಧಿಕೌಶಲೇಷು ಇದಂ ವಿಶೇಷಣದ್ವಯಂ ತ್ರಿಷ್ವಪಿಯೋಜ್ಯಂ– ಗೌಡಕನ್ಯಾಕುಬ್ಜಮಿಥಿಲಾನಾಮಜನಪದಾಸ್ತೇಷು ಭವೇಷು ಬುಧೇಷು ಅನ್ಯೇಷು ಉಕ್ತಾನ್ಯ ದೇಶೇಷು ಪಾಂಚಾಲಾದಿಷು ಸತ್ಸುಬುಧೇಷು ಅದ್ಯಕಲಾವಪಿ– ವಿದ್ಯಾಸ್ಸರ್ವಾಃ– ಅಧಿಭೂಮಿ ಭೂಮೌ– ಜೀವಂತಿ ಪ್ರಕಾಶಂತಏವ ॥

ಅರ್ಥ ॥ ಜಾಣರಾಗಿಯೂ ಅಪ್ರಮೇಯವಾದ ಬುದ್ಧಿ ಕುಶಲತೆಯುಳ್ಳವರಾಗಿಯೂ ಬುದ್ಧಿವಂತರಾಗಿಯೂ, ಪುಣ್ಯವಂತರಾಗಿಯೂ ಇರುವ ಗೌಡ, ಕನ್ಯಾಕುಬ್ಜ, ಮತ್ತು ಬೇರೆ ಅಂದರೆ ಪಾಂಚಾಲಾದಿ ದೇಶಗಳ ಜನರು ಇರಲಿಕ್ಕಾಗಿ ಭೂಮಿಯ ಮೇಲೆ ಇದುವರಿವಿಗೂ ಅಂದರೆ ಕಲಿಯುಗದಲ್ಲಿ ಕೂಡ ವಿದ್ಯೆಗಳು ಪ್ರಕಾಶಿಸುತ್ತವೆ.

ಮೂ। *ಇದಂತಾವದವಧೇಹಿ ।

ಶ್ಲೋ। ಏತದ್ದೇಶ್ಯ ಪ್ರಚುರಚರಿತಾನ್ಯನ್ಯ ದೇಶಸ್ಥಿತಾನಾಂ
ರೋಚಂತೇಚೇ †ದಥಚಮನಸೆ ಮಾರುಚನ್ಕಾತ್ರಹಾನಿಃ। ಪ್ರಾ
ಜ್ಞಾಃ ಪುತ್ರಾಜನಯಿತ್ರ್ಯಹೃದೆಪುಶ್ಯಯದ್ವತ್ಸ್ವದಂತೆ ತದ್ವದ್ವಿ
ದ್ವನ್ನ ಪರಮನಸೆ ತಾವತಾಕೋತ್ರದೋಷಃ ॥ ೧೨೫ ॥

ಟೀಕಾ ॥ ಇದಮಿತಿ। ಇದಂತಾವದ್ವಕ್ಷ್ಯಮಾಣಮೇವ ಅವಧೇಹಿ– ಸಾವಧಾನಂ ಶೃಣು ॥ಏತದಿತಿ ॥ ಏತಸ್ಮಿನ್ ದೇಶೆಭವಾಃ ಏತದ್ದೇಶ್ಯಾಸ್ತೇಷಾಂ ಸಂಬಂಧೀನಿಪ್ರಚುರಾಣಿ ಪ್ರಸಿದ್ಧಾನಿಚರಿತಾನಿ ಆಚಾರಾಃ– ಅನ್ಯ ದೇಶಸ್ಥಿತಾನಾಂ ಮನಸೇರೋಚಂತೇಚೇದ್ವಾ– ಅಥಚ ಅಥವಾ–ಮಾರುಚನ್ವಾ–ಅತ್ರ ಉಭಯಸ್ಮಿನ್ನಪಿ– ಹಾನಿಃಕಾ– ನಕಾಪೀತ್ಯರ್ಥಃ ಪ್ರಾಜ್ಞಾಃ ಪುತ್ರಾಃ ಜನಯಿತ್ರೋಃ ಮಾತಾಪಿತ್ರೋಃ ಹೃದೆ ಮನಸೆ– ಯದ್ವತ್ಸ್ವದಂತೆ ಯಥಾರೋಚಂತೆ– ತದ್ವತ್ಪರೇಷಾಂ ಮನಸೆ ನಸ್ವದಂತಏವ– ತಾವತಾ ಪರಹೃದ್ಯತ್ವಾಭಾವೇನ ಅತ್ರ ಪುತ್ರೇಷು–ಕೋದೋಷಃ ನಕೋಪೀತ್ಯರ್ಥಃ–ಹೇವಿದ್ವನ್ ಪಕ್ಷ್ಯ– ಪ್ರತಿವಸ್ತೂಪಮಾಲಂಕಾರಃ ॥

ಅರ್ಥ ॥ ಈ ಮಾತು ಸಾವಧಾನವಾಗಿ ಕೇಳು. ಈ ದೇಶವಾಸಿ ಜನಗಳ ಪ್ರಸಿದ್ಧವಾದ ಆಚಾರಗಳು ಬೇರೆ ದೇಶದವರ ಮನಸ್ಸಿಗೆ ಬರಲೀ ಬರದೇ ಇರಲೀ, ಅದರಿಂದ ಯೇನು ಬಾಧಕಉಂಟು? ಏನೂ ಬಾಧಕವಿಲ್ಲವು. ನೋಡಂಣಾ, ಬುದ್ಧಿವಂತರಾದ ಮಕ್ಕಳು ತಂದೆತಾಯಿಗಳ ಮನಸ್ಸಿಗೆ ಒಪ್ಪಿಗೆ ಯಾಗುವಂತೆ ಇತರರ ಮನಸ್ಸಿಗೆ ಒಪ್ಪಿಗೆ ಯಾಗುವದಿಲ್ಲವು. ಇದರಲ್ಲಿ ಪರಹೃದ್ಯತ್ವಾಭಾವದಿಂದ ಪುತ್ರರಲ್ಲಿ ಏನು ದೋಷ? ಏನೂ ದೋಷವಿಲ್ಲ ಎಂಬಭಾವವು.

---

* ಏವ ಮಿತಿಪಾಠಾಂತರಂ ॥ † —ನ್ನನುನ ಇತಿಪಾಠಾಂತರಂ ॥

ಮೂ। ಕಿಂಚ

ಶ್ಲೋ। ಪ್ರಾತಶ್ಶೀತಜಲೆ ನಿಮಜ್ಯವಿಬುಧಾನಭ್ಯರ್ಚಯತ್ಯು
ಚ್ಚೈಕೈರಾರ್ಯಃ ಪರ್ಯುಷಿ ತಂತುನಾ ಭ್ಯವಹರತ್ಯಂಧಃ ಕ್ಷುದಂ
ಧೋಽಪ್ಯಸೌ। ಭಾಗೇಗೋಮಯಲಿಪ್ತ ಏವಪಚತೇಭುಙ್ತೇತ
ತೋಽನ್ಯತ್ರಯನ್ನೀತಂ ತದ್ವಿಜಹಾತಿ ಭುಕ್ತ್ವಾನಿಯಮೋದೃಷ್ಟಃ
ಕ್ವಭೂಯಾನಿಯಾನ್ ॥೧೩೦॥

ಟೀಕಾ ॥ ಪ್ರಾತರಿತಿ। ಅಸಾವೇತದ್ದೇಶೀಯಃ ಆರ್ಯಃ ಪ್ರಾತಃ ಶೀತಜಲೇಗಾಂಗೇ ನಿಮಜ್ಜ್ಯ ವಿಬುಧಾನ್ ಆದಿತ್ಯಾಂಬಿಕಾವಿಷ್ಣು ಗಣಸಾಥ ಮಹೇಶ್ವರಾನ್—ಅಭ್ಯರ್ಚಯತಿ-ಉಚ್ಚೈಃ ಭೃಶಂ—ಕ್ಷುಧಾಅಂಧಃ ಪೀಡಿತೋಽಪಿಸನ್—ಪರ್ಯುಷಿತಂ ಯಾತಯಾಮಂ—ಅಂಧಃ ಅನ್ನಂ—ಸಾಭ್ಯವಹರತಿ ನಭುಙ್ಕ್ತೇದ್ರಾವಿಡವದಿತಿಭಾವಃ—ಗೋಮಯಲಿಪ್ತೇಭಾಗೇ ಏವಪಚತಿಭುಙ್ಕ್ತೇಚ— ತತಃ ಉಕ್ತದೇಶಾದನ್ಯತ್ರಯದನ್ನಂ ನೀತಂ ಆತ್ಮನೈವ ಪ್ರಮಾದಾದಿತಿಶೇಷಃ—ತದನ್ನಂವಿಜಹಾತಿ ಭೂಯಾನ್ ಇಯಾನ್ ಭುಕ್ತ್ವಾಭೋಜನೇನಿಯಮಃ ಕ್ವದೃಷ್ಟಃ—ನಕುತ್ರಾಪೀತ್ಯರ್ಥಃ—ತಥಾಚ ಅಧಿಕಾರಿ ಪುರುಷೇಷೂಕ್ತಂ ಸರ್ವಂ ದೂಷಣಂ ಬ್ರಾಹ್ಮಣ್ಯಸಂರಕ್ಷಣೇನ ಗಂಗಾಸ್ನಾನೇನಚ ಸರ್ವಥಾನಿರಸ್ತಮಿತಿಧ್ಯೇಯಂ ॥ ಏವಂ ಆರ್ಯಾವರ್ತ ದೇಶ್ಯಗ್ರಂಥ ವಿವರಣಂ। ಇತಃ ಮಧ್ಯರಾಷ್ಟ್ರಗ್ರಂಥಃ ॥

ಅರ್ಥ ॥ ಮತ್ತು ಈ ದೇಶದ ಆರ್ಯನು ಬೆಳಿಗ್ಗೆ ತಂಣೀರಿನಲ್ಲಿ ಸ್ನಾನ ಮಾಡಿ ಸೂರ್ಯ ಅಂಬಿಕಾ ವಿಷ್ಣು ಗಣಪತಿ ಮಹೇಶ್ವರ ಮೊದಲಾದ ದೇವತೆಗಳನ್ನು ಪೂಜಿಸುತ್ತಾನೆ. ಅತಿಕಠಿಣವಾದ ಹಸಿವಿನಿಂದ ಕಂಣುಮುಚ್ಚಿ ಹೋದರೂ ತಂಗಳನ್ನ ಉಣ್ಣುವದಿಲ್ಲವು. ಗೋಮಯ ಬಳಿದ ಸ್ಥಳದಲ್ಲಿ ಮಾತ್ರ ಅಡಿಗೆ ಮಾಡಿ ಊಟ ಮಾಡುತ್ತಾನೆ. ಆ ಸ್ಥಳದಿಂದ ಬೇರೆ ಕಡೆಗೆ ಕೊಂಡುಹೋದದ್ದನ್ನು ಬಿಸಾಡಿ ಬಿಡುತ್ತಾನೆ. ಊಟದ ವಿಷಯದಲ್ಲಿ ಈ ವಿಧದ ಕಟ್ಟಳೆ ಯೆಲ್ಲಿ ನೋಡಿದ್ದೇವೆ? ಎಲ್ಲಿಯೂ ನೋಡಲಿಲ್ಲವು.

(ಇಲ್ಲಿಗೆ ಆರ್ಯಾವರ್ತ ದೇಶದ ವರ್ಣನೆ ಮುಗಿಯಿತು. ಪೂರ್ವ ಪಶ್ಚಿಮಕ್ಕೆ ಸಮುದ್ರ, ಉತ್ತರಕ್ಕೆ ಹಿಮಾಚಲ ಬೆಟ್ಟ, ಮತ್ತು ದಕ್ಷಿಣಕ್ಕೆ ವಿಂಧ್ಯಾಚಲ ಬೆಟ್ಟ, ಈ ಮೇರೆಗಳ ಒಳಗಿನ ನಾಡಿಗೆ ಆರ್ಯಾವರ್ತವೆಂದು ಹೆಸರು. ಮಧ್ಯ ದೇಶವೆಂದರೆ ನಡುನಾಡಿನ ವರ್ಣನೆಗೆ ಆರಂಭ.)

## ಸಮುದ್ರ ವರ್ಣನಂ ॥

ಮೂ। ಇತಿವಿಮಾನಂ ದೂರತಃ ಪ್ರಸ್ಥಾಪ್ಯ ಸಾಂಜಲಿಬಂಧಂ।

ವಿಶ್ವಾವಸುಃ ॥

ಶ್ಲೋ। ಭುವನಕದ *ನೋತ್ಕ್ರುದ್ಧ್ಯದ್ವೃದ್ಧಶ್ರವಃ ಕುಲಿಶಾ

* —ನಕ್ರುದ್ಧ್ಯತ್ ಇತಿಪಾಠಾಂತರಂ ॥

ಯುಧ ಪ್ರಚಕಿತಗಿರಿಪ್ರಾಣತ್ರಾಣ ಪ್ರತಿಷ್ಠಿತಕೀರ್ತಯೇ । ಪ್ರ
ಸೃಮರಮರುನ್ನಾಟ್ಯಾಚಾರ್ಯ ಪ್ರಣರ್ತಿತವೀಚಯೇ ಮಹಿತಜನ
ತಾಮಾನ್ಯಾಯಾಸ್ಮೈ ಮಹೋದಧಯೇನಮಃ ॥ ೧೩೧ ॥

ಟೀಕಾ ॥ ಭುವನೇತಿ ॥ ಭುವನಸ್ಯ ಮರ್ತ್ಯಲೋಕಸ್ಯ ಕದನೇನ ನಿಜಪಾತಾದಿಧ್ವಂಸನೇನ ಉತ್ಕ್ರುಧ್ಯತಃ ವೃದ್ಧಶ್ರವಸಃ ಇಂದ್ರಸ್ಯ ಕುಲಿಶಂ ವಜ್ರಂನಾಮ ಆಯುಧಂ ತಸ್ಮಾತ್ಪ್ರಕರ್ಷೇಣ ಚಕಿತಾನಾಂ ಗಿರೀಣಾಂ ಪಕ್ಷಯುಕ್ತಾನಾಂ ಪ್ರಾಣಾನಾಂ ತ್ರಾಣೇನ ರಕ್ಷಣೇನ ಪ್ರತಿಷ್ಠಿತಾ ಸ್ಥಿರೀಕೃತಾಕೀರ್ತಿರ್ಯಸ್ಯ ತಸ್ಮೈ— ಪ್ರಸೃಮರೇಣ ಪ್ರಬಲೇನ ಮರುತೈವ ನಾಟ್ಯಾಚಾರ್ಯೇಣ ಪ್ರಣರ್ತಿತಾಃ ತಾಂಡವಿತಾಃ ವೀಚಯಃ— ಸ್ತ್ರೀಲಿಂಗಾತ್ ಸ್ತ್ರಿಯಶ್ಚಯಸ್ಯ ತಸ್ಮೈ— ಮಹಿತಾಯಾಃ ಪೂಜ್ಯಾಯಾಃ ಜನತಾಯಾಃ ಜನಸಮೂಹಸ್ಯ ಮಾನ್ಯಾಯ ಪೂಜ್ಯಾಯ— ಅಸ್ಮೈ ಮಹೋದಧಯೇ ನಮಃ ॥

ಅರ್ಥ ॥ ವಿಮಾನವನ್ನು ಮುಂದೆ ನಡಿಸಿ ಕೈಮುಗಿದು ( ವಿಶ್ವಾವಸು ಹೇಳುತ್ತಾನೆ. )—ಪರ್ವತಗಳು ಪೃಥ್ವಿಯಮೇಲೆ ಬಿದ್ದು ಪೃಥ್ವಿಯ ವಿಧ್ವಂಸ ಮಾಡಲಿಕ್ಕೆ ಉಜ್ಜುಗಿಸಲು, ಶಿಟ್ಟಿಗೆ ಬಂದ ಇಂದ್ರನ ವಜ್ರಾಯುಧದಿಂದ ಅವುಗಳು ಬಹಳ ದಿಗಲು ಪಡಲು, ಅವುಗಳಿಗೆ ಆಶ್ರಯಕೊಟ್ಟು ಅವುಗಳ ಜೀವ ಉಳಿಸಿದವನೆಂದು ಕೀರ್ತಿಪಟ್ಟಂಥಾ, ಪ್ರಬಲನಾದ ನರ್ತನ ಬೋಧಕನಾದ ವಾಯುವಿನಿಂದ ಕುಣಿದಾಡಿಸಲ್ಪಡುವ ತೆರೆಗಳುಳ್ಳಂಥಾ, ಪೂಜ್ಯವಾದ ಜನಸಮೂಹದಿಂದ ಮನ್ನಿಸಲ್ಪಡುವಂಥಾ ಈ ಮಹಾಸಾಗರವನ್ನು ಕುರಿತು ನಮಸ್ಕಾರವಿರಲಿ.

ಕೃಶಾನುಃ ॥ ಸಹಾಸಂ ॥

ಮೂ। ಶ್ಲೋ। ಪಾಮರೈರಪ್ಯ ಪೇಯಾನಾ*ಮಿರಾಣಾಂ ಪರಿಪಾ
ತರಿ। ಆಶ್ರಯೇಜಡಜಂತೂನಾಮಾನಿನಂಸಾಕಥಂತವ ॥ ೧೩೨ ॥

ಟೀಕಾ ॥ ಪಾಮರೈರಿತಿ। ಪಾಮರೈರಜ್ಞೈರಪಿ ಕಿಮುತಪ್ರಾಜ್ಞೈಃ— ಅಪೇಯಾನಾಂ ಪಾತುಮಯೋಗ್ಯಾನಾಂ—ನಿಷಿದ್ಧತ್ವಾಲ್ಲವಣತ್ವಾಚ್ಚೇತಿಭಾವಃ—ಇರಾಣಾಂ ಸುರಾಣಾಂ ಜಲಾನಾಂಚ—ಪರಿಪಾತರಿ ಪಾಯಿನಿ ರಕ್ಷಕೇಚ—ಜಡಾನಾಂ ಮೂಢಾನಾಂ ಜಂತೂನಾಂ ಮನುಷ್ಯಾಣಾಂ—ಲಡಯೋರಭೇದಾಜ್ಜಲೇಜಂತೂನಾಂ ಮಕರ ಮೀನಾದೀನಾಂಚ— ಆಶ್ರಯೇ ಸಮುದ್ರೇ ವಿಷಯೇ ಆನಿನಂಸಾನಮಸ್ಕರ್ತುಮಿಚ್ಛಾ—ತವಕಥಮಭೂತ್— ಪತಿತಸ್ಯ ಸರ್ವಕರ್ಮಾಯೋಗ್ಯತ್ವಾದಿತಿಭಾವಃ ॥

ಅರ್ಥ ॥ ಕೃಶಾನುವು ಹಾಸ್ಯಮಾಡಿ ಹೇಳುತ್ತಾನೆ: ತಿಳಿಯದವರಿಂದ ಕೂಡ ಕುಡಿಯಲ್ಪಡಲಿಕ್ಕೆ ಅಯೋಗ್ಯವಾದ ನೀರುಗಳನ್ನು ಕಾದಿಡುವವನಾದಂಥಾ, ಮತ್ತು ಮೂಢ ಪ್ರಾಣಿಗಳು ಅಂದರೆ ಮಕರಮೀನಾದಿಗಳಿಗೆ ಮನೆಯಾಗಿರುವಂಥಾ ಈ ಸಮುದ್ರವನ್ನು

---

* ನೀರಾಣಾಮಿತಿ ಪಾಠಾಂತರಂ ॥

ಕುರಿತು ನಮಸ್ಕಾರ ಮಾಡುವ ಇಚ್ಛೆ ನಿನಗೆ ಹ್ಯಾಗೆ ಉಂಟಾಯಿತು?

ಮೂ। ಮಮತ್ವೇಧಮಾನಪರುಷಘೋಷೆ ಖಲ್ವೇತಸ್ಮಿನ್ ರೋಷ ಏವೋ*ನ್ಮಿಷತಿ ॥ ೧೩೨ ॥

ಟೀಕಾ ॥ ಮಮೇತಿ। ಏಧಮಾನಃ ವರ್ಧಮಾನಃ ಪರುಷಃ ಕಠೋರಃ ಘೋಷಃ ತರಂಗಾಘಾತಜನ್ಯಃ ಯಸ್ಯ— ಏತಸ್ಮಿನ್ಮಹೋದಧಾವಿಷಯೆ॥

ಅರ್ಥ॥ ಭರತ ಅಂದರೆ ಉಬ್ಬಿಕೆಯುಳ್ಳ ಮತ್ತು ಕಠೋರಸ್ವರದಿಂದ ಒದರುತ್ತಾ ಇರುವ ಈ ಸಮುದ್ರನನ್ನು ಕುರಿತು ನನಗಾದರೆ ಸಿಟ್ಟು ಬರುತ್ತದೆ.

ಮೂ। ಶ್ಲೋ। ಸಂತತಂ ಕ್ರಂದತೆಸರ್ವೋದೀಪ್ಯಮಾನೋದರಾಗ್ನಯೆ। ಮಹಾಪಾಯ ಸಮುದ್ರಾಯ ದರಿದ್ರಾಯೈವ ಕುಪ್ಯತಿ ॥ ೧೩೪ ॥

ಟೀಕಾ॥ ಶ್ಲೇಷೋಪ ಜೀವಿತಾರ್ಥಾಂತರನ್ಯಾಸೇನೋಕ್ತಂ ಸಮರ್ಥಯತಿ ॥ ಸಂತತಮಿತಿ ॥ ಸರ್ವೋಪಿಜನಃ—ಮಹತಿ ಪಾಯಸೆ ಕ್ಷೀರಾನ್ನೆ ಮುದ್ರಾಲೋಭಾದಾಗ್ರಹಃ ಯಸ್ಯತಸ್ಮೈ ಅಥವಾ ಮಹಾಪಾಯ ಸೆವಿಷಯೆ ಮುದಂ ರಾತಿಗೃಹ್ಣಾತೀತಿವಾತಸ್ಮೈ ಅನ್ಯತ್ರಮಹತ್ ಆಪಂಜಲಸಮೂಹಃ ಯಸ್ಯತಸ್ಮೈ— ಸಮುದ್ರಾಯೇತಿ ವಿಶೇಷ್ಯಂ— ಅತಏವದೀಪ್ಯಮಾನಃ ಉದರೆಗರ್ಭೆ ಅಗ್ನಿರ್ಜಾಠರಃ ಬಾಡಬಶ್ಚ ಯಸ್ಯ ತಸ್ಮೈ ಕಿಂಚ—ಸಂತತಂಕ್ರಂದತೆ ದೇಹಿ ದೇಹೀತಿಕಿಮಪಿನಾಸ್ತಿಕಿಂಕರೋಮೀತಿ ವಾರುದತೆ ಶಬ್ದಾಯಮಾನಾಯಚ— ದರಿದ್ರಾಯ— ಅನ್ಯತ್ರದುರ್ಗತಾಯ ಕುಪ್ಯತ್ಯೇವ ॥

ಅರ್ಥ॥ ಈ ಶ್ಲೋಕಕ್ಕೆ ಎರಡು ಅರ್ಥಗಳು:

೧. ಸಮುದ್ರವು ನಿರಂತರವಾಗಿ ಘೋಷಮಾಡುತ್ತದೆ. ಅದರಲ್ಲಿ ಬಾಡಬಾನಳ ಎಂಬ ಬೆಂಕಿ ಮತ್ತು ಅಪಾರವಾದ ಜಲರಾಶಿಯುಂಟು; ಅದರ ಮೇಲೆ ಪ್ರಯಾಣಮಾಡುವದು ಬಹಳ ಕಠಿಣವು. ಅಂಥ ಈ ಸಮುದ್ರದ ಮೇಲೆ ಎಲ್ಲ ಜನರು ಸಿಟ್ಟಾಗುತ್ತಾರೆ.

೨. ಮಹಾಪಾಯಸ ಅಂದರೆ ಹಾಲನ್ನದಲ್ಲಿ ಲೋಭದಿಂದ ಆಗ್ರಹಯುಕ್ತನಾದ ಅಥವಾ ಹಾಲನ್ನ ನೋಡಿ ಸಂತೋಷತಾಳಿಕೊಂಡದರಿಂದ ಹೊಟ್ಟೆಯೊಳಗಿನ ಜಠರಾಗ್ನಿ ಪ್ರದೀಪವಾಗಿ „ನನ್ನ ಹತ್ತರ ಯೇನುಇಲ್ಲ ಕೊಡಿರಿ ಕೊಡಿರಿ" ಎಂತ ನಿತ್ಯದಲ್ಲು ಅಳುತ್ತಿರುವ ಮನುಷ್ಯನ ಮೇಲೆ ಎಲ್ಲ ಜನರು ಸಿಟ್ಟು ಮಾಡುತ್ತಾರೆ.

ಮೂ। ಸಮೃದ್ಧೋ ಸ್ಯಯಮತಿ ಲುಬ್ಧತಯಾ ಬುದ್ಧಿಮದ್ಭಿರನಾದೃತ್ಯಃ ॥ ೧೩೫ ॥

---

* ಸಮುನ್ಮಿಷ ತೀತಿಪಾಠಾಂತರಂ ॥

ಟೀಕಾ || ಸಮೃದ್ಧ ಇತಿ || ಸಮೃದ್ಧಸ್ಸಂಪನ್ನೋಽಪಿ—ಅಯಂ ಸಮುದ್ರಃ ಅತಿಲುಬ್ಧತಯಾಹೇತುನಾ—ಅನಾದೃತ್ಯಃ ಉಪೇಕ್ಷಣೀಯಃ ||

ಅರ್ಥ || ಈ ವಾಕ್ಯಕ್ಕೆ ಎರಡು ಅರ್ಥಗಳು:

೧ ಈ ಸಮುದ್ರವು ತುಂಬ ಸಂಪತ್ತಿಯುಳ್ಳದ್ದು, ಆದಾಗ್ಯೂ ಜಾಣರಿಂದ ಪೂಜಿಸಲ್ಪಡಲಿಕ್ಕೆ ಅಯೋಗ್ಯವಾದದ್ದು.

೨. ತುಂಬಸಂಪತ್ತಿಯುಳ್ಳವನು ಲೋಭಿಯಾದರೆ ಜಾಣರಿಂದ ಸನ್ಮಾನಿಸಲ್ಪಡಲಿಕ್ಕೆ ಯೋಗ್ಯನಲ್ಲವು.

ಮೂ । ಶ್ಲೋ ।

ಶ್ಲೋ । ರತ್ನಾಕರೋಽಪಿ ರಮಾಭ್ಯುದಯಾಲಯೋಽಪಿ *ಸ್ವರ್ಣ †ಸ್ಥಲೀ ರಧಿಗತೋಽಪಿ ಬಹೂರ್ಮಿಕೋಽಪಿ। ತಾದೃಗ್ಧನೋಪ ಚಯಕೃತ್ತರಣಿ ಪ್ರಚಾರಾನ್ನೋಽ ಪೈತ್ಯಹೋವಿತರಣಿತ್ವಮ ಸೌ ಕದಾಪಿ ||೧೩೬ ||

ಟೀಕಾ || ರತ್ನೇತಿ| ರತ್ನಾನಾಂ ಶ್ರೇಷ್ಠವಸ್ತೂನಾಂ ಆಕರಃ ಉತ್ಪತ್ತಿಸ್ಥಾನಮಪಿ—ರಮಾಯಾಃ ಲಕ್ಷ್ಮ್ಯಾಃ ಅಭ್ಯುದಯಸ್ಯ ವೃದ್ಧೇಃ ಉತ್ಪತ್ತೇಶ್ಚಾಲಯೋಽಪಿ—ಸ್ವರ್ಣಃ ಶೋಭನಂ ಅರ್ಣಃ ಜಲಂ ತನ್ಮಯೀಚ ಸ್ಥಲೀಃ ಪ್ರದೇಶಾನ್—ಅಧಿಗತಃ ಪ್ರಾಪ್ತವಾನಪಿ—ಬಹ್ವ್ಯಃ ಊರ್ಮಿಕಾಃ ಅಂಗುಳೀಯಕಾನಿ ಯಸ್ಯಸತಥೋಕ್ತೋಽಪಿ ಅಸೌಸಮುದ್ರಃ—ತಾದೃಶಃ— ಧನೋಪಚಯಂ ಅರ್ಥವೃದ್ಧಿಂ ಕರೋತೀತಿ ತತ್ಕೃತಃ—ತರಣೀನಾಂ ನಾವಾಂ ಪ್ರಚಾರಾತ್—ಧನೋಪಚಯಕೃತಾಂ ವಣಿಜಾಂ ಸಂಬಂಧಿನೀನಾಂಚ—ವಿತರಣಿತ್ವಂ ದಾತೃತ್ವಂಚ—ಕದಾಪಿ—ನೋಪೈತಿ ನಪ್ರಾಪ್ನೋತಿ—ಅಹೋಇತ್ಯಾಶ್ಚರ್ಯೇ—ಪಶ್ಯ ||

ಅರ್ಥ || ಈ ಶ್ಲೋಕಕ್ಕೆ ಎರಡು ಅರ್ಥಗಳವೆ. ಒಂದು ಸಮುದ್ರಪರವಾದದ್ದು, ಇನ್ನೊಂದು ಜಿಪುಣನಾದ ಶ್ರೀಮಂತನಪರವಾದದ್ದು.

೧. ಈ ಸಮುದ್ರವು ಬೆಲೆಯುಳ್ಳ ವಸ್ತುಗಳ ಗಣಿಯಾಗಿದ್ದಾಗ್ಯೂ, ಲಕ್ಷ್ಮೀ ಹುಟ್ಟಿದ ಮನೆಯಾದಾಗ್ಯೂ, ಶೋಭನವಾದ ನೀರು ಭೂಮಿಗಳನ್ನು ಹೊಂದಿರುವದಾದಾಗ್ಯೂ ಬಹಳ ತೆರೆಗಳುಳ್ಳದ್ದಾದಾಗ್ಯೂ, ಹಡಗುಗಳ ನಡಿಯೋಣದರಿಂದ ಬಹಳ ದ್ರವ್ಯ ಸಂಗ್ರಹಿಸುವಂಥಾದ್ದಾದಾಗ್ಯೂ, ಎಂದೆಂದಿಗೂ ದಾತೃತ್ವವನ್ನು ಪಡೆಯುವದಿಲ್ಲವು. ಇದೆಷ್ಟು ಆಶ್ಚರ್ಯ ನೋಡು! (ಸಮುದ್ರದ ಮೇಲೆ ನಡಿಯುವ ಹಡಗುಗಳು ಯಾವಾಗಾದರೂ ತುಫಾನದಿಂದ ಒಡೆದು ಹೋಗಿ ಅವುಗಳ ಮೇಲಿನ ಸರಕುಗಳು ಸಮುದ್ರ ಪಾಲಾಗುವದುಂಟಷ್ಟೆ. ಅದರಿಂದ ಸಮುದ್ರವು ಧನ ಸಂಗ್ರಹ ಮಾಡಿದಂತೆ ಆಗುತ್ತದೆ.)

---

• ಸ್ವರ್ಗಸ್ಥಲೀ † ಸ್ಥಿತೀ ಇತಿಪಾಠಾಂತರೇ ||

೨. ಅಸೌ ಅಂದರೆ ಮೇಲೆ ಹೇಳಲ್ಪಟ್ಟ ಲೋಭಿಯಾದ ಧನಿಕನು ಅಮೋಲ್ಯವಾದ ಒಡವೆಗಳು ಅಡಗಿರುವ ಗಣಿಯಾಗಿಯೂ, ಸಂಪತ್ತು ಉದಯವಾದ ಸ್ಥಾನವಾಗಿಯೂ, ಜಿನ್ನ ತುಂಬಿರುವ ಪ್ರದೇಶಗಳನ್ನು ಕೈವಶಮಾಡಿಕೊಂಡಂಥವನಾಗಿಯೂ, ಬಹಳ ಉಂಗುರುಗಳುಳ್ಳವನಾಗಿಯೂ, ಹಡಗುಗಳ ಮೇಲೆ ಸರಕು ತುಂಬಿ ಬೇರೆ ದೇಶಗಳಿಗೆ ಕಳುಹಿಸಿ, ಎಷ್ಟೋ ಹಣ ಒಟ್ಟುಗೂಡಿಸಿದವನಾಗಿಯೂ ಇರುತ್ತಾನೆ. ಆದರು ಅವನಲ್ಲಿ ತುಸುವಾದರೂ ಉದಾರತ್ವ ಇರುವದಿಲ್ಲವು. ಇದೇನು ಅಶ್ಚರ್ಯ ನೋಡು!

ಮೂ। ಸೃಷ್ಟಿರೇವಾಸ್ಯ ವಿಫಲೇತಿ ಮೇದೃಷ್ಟಿಃ॥ ತಥಾಹಿ।
ಶ್ಲೋ। ನಾಸ್ತ್ಯೇಷಾಮುಪಯುಕ್ತತಾ *ತಟತರೌ ಸಸ್ಯೋಪಯೋ
ಗಃ ಕುತಃ ಸ್ನಾನಾಯ ಚ ಯೋಗ್ಯತಾಸ್ಯ ಪಯಸಾಂ ಕಾನಾಮ
ಪಾನಾರ್ಹತಾ। ಉದ್ಗರ್ಜಂತ †ಮನಂತ ಮಂತ ರುಷಿತೈರ್ದು
ರ್ಜಂತುಭಿರ್ಭೀಷಣಂ ಸೃಷ್ಟ್ವಾ ಸ್ಸೃಷ್ಟವತೋ ಜಲಾಶಯಮ
ಮುಂ ‡ಕೋವಾಶಯಃ ಕಥ್ಯತಾಂ ॥ ೧೩೨ ॥

ಟೀಕಾ। ನಾಸ್ತೀತಿ ॥ ಅಸ್ಯಸಮುದ್ರಸ್ಯ ಏಷಾಂ ಪಯಸಾಂ ಜಲಾನಾಂ— ಪದತ್ರಯಮಿದಂ ಅಗ್ರಿಮವಾಕ್ಯಚತುಷ್ಟಯೇಪಿಯೋಜ್ಯಂ— ತಟೇತರೌವೃಕ್ಷೇಪಿ— ಉಪಯುಕ್ತತಾ ಆನುಕೂಲ್ಯಂ ನಾಸ್ತಿ— ಸಸ್ಯೇ ಉಪಯೋಗಃ ಕುತೋಸ್ತಿ—ಸ್ನಾನಾಯ—ಚಕಾರೋಪ್ಯರ್ಥಃ ಯೋಗ್ಯತಾನಾಸ್ತಿ— ಪಾನಾರ್ಹತಾಕಾನಾಮ— ನಾಸ್ತ್ಯೇವೇತ್ಯರ್ಥಃ—ಉದ್ಗರ್ಜಂತಂ ಶಬ್ದಾಯಮಾನಂ ಅನಂತಂ ಅಪಾರಂ— ಅಂತರ್ಮಧ್ಯೇ ಉಷಿತೈಃ ಸ್ಥಿತೈಃ ದುರ್ಜಂತುಭಿಃ ಭೀಷಣಂ—ಅಮುಂಜಲಾನಾಂ ಜಡಾನಾಂಚ ಆಶಯಂ ಸ್ಥಾನಂ ಸಮುದ್ರಂ ಸೃಷ್ಟವತಃ ಸ್ರಷ್ಟುರ್ಬ್ರಹ್ಮಣಃ ಆಶಯಃ ಅಭಿಪ್ರಾಯಃ ಕೋವಾಕಥ್ಯತಾಂ ಕೋಪಿನಾಸ್ತೀತ್ಯರ್ಥಃ ॥

ಅರ್ಥ ॥ ಈ ಸಮುದ್ರನು ವ್ಯರ್ಥವಾಗಿ ಹುಟ್ಟಿಸಲ್ಪಟ್ಟನು ಎಂತ ನನಗೆ ಕಾಣುತ್ತೆ. ಯಾಕಂದರೆ, ಈ ಸಮುದ್ರೋದಕಗಳ ಉಪಯೋಗ ಭೂಮಿಗೆ ಅಗಲಿ, ಮರಗಳಿಗೆ ಆಗಲೀ ಆಗುವದಿಲ್ಲ. ಅಂದ ಮೇಲೆ, ಸಸಿಗಳಿಗೆ ಎಲ್ಲಿಂದಾಗುವದು? ಈ ಸಮುದ್ರನ ನೀರು ಸ್ನಾನಮಾಡಲಿಕ್ಕೆ ತಕ್ಕವಾದದ್ದಲ್ಲವು. ಕುಡಿಯುವ ನೀರಿನಯೋಗ್ಯತೆ ಆದಕ್ಕೆ ಹ್ಯಾಗೆ ಬಂದೀತು? ಬರಲಿಕ್ಕಿಲ್ಲವು. ಘೋಷಮಾಡುವ ಅಪಾರವಾದಂಥಾ ಮತ್ತು ಒಳಗೆ ವಾಸ ಮಾಡಿಕೊಂಡಿರುವ ದುಷ್ಟ ಪ್ರಾಣಿಗಳ ಮೂಲಕವಾಗಿ ಭಯಂಕರವಾದಂಥಾ ಈ ಜಲಾಶಯವೆಂದರೆ ಸಮುದ್ರವನ್ನು, ಹುಟ್ಟಿಸಿದವನ ಅಂದರೆ ಬ್ರಹ್ಮದೇವನ ಅಭಿಪ್ರಾಯವೇನಿದ್ದೀತು ಹೇಳು ನೋಡುವಾ.

ಮೂ। ಶ್ಲೋ ॥ ಯಸ್ಯಸ್ವರ್ಣಶ್ರಿಯ ಉರುತರಾ ನಿತ್ಯಮಾ

---

* ತಟತರೋಃ † ಮಿಯಂತ ‡ ಕಿಂವಾಽಯಶಃ ಇತಿಪಾಠಾಂತರಾಣಿ ॥

ಯಾಂತ್ಯ ಯತ್ನಾತ್ತೇನ ಸ್ವಾಯತ್ಯನುಗುಣತಯಾ ನಕ್ರಿಯೇತ ವ್ಯಯಶ್ಚೇತ್ । ವಹ್ನಿಗ್ರಾಸೋಭವತಿ ವಿಧಿತೋ ಮಂಥನಂಬಂಧನಂವಾ ಲಕ್ಷ್ಮೀಂ ಪ್ರೇಪ್ಸೋರ್ಜಗದಧಿ ಪತೇರತ್ರಸಾಕ್ಷೀ ಸರಸ್ವಾನ್ ॥೧೪೮॥

ಟೀಕಾ ॥ ಯಸ್ಯೇತಿ ॥ ಕಿಂಚ–ಯಸ್ಯಪುಂಸಃ ಉರುತರಃ ಅತಿಬಹುಲಾಃ–ಸ್ವರ್ಣಸ್ಯ ಕನಕಸ್ಯ ಶೋಭನಸ್ಯ ಅರ್ಣಸಃ ಜಲಸ್ಯಚ ಶ್ರಿಯಃ ಸಮೃದ್ಧಯಃ–ಅಯತ್ನಾತ್ ಯತ್ನಂ ವಿನೈವ–ನಿಶ್ಚಯಮಾಯಾಂತಿ–ತೇನ ಅಯತ್ನ ಪ್ರಾಪ್ಯಬಹುಧನವತಾ ತಾದೃಶ ಜಲವತಾಚ–ಸ್ವಸ್ಯ ಆಯತೇಃ ಲಾಭಸ್ಯ ಅನುಗುಣತಯಾ ಅನುರೂಪ್ಯೇಣವ್ಯಯಃ ತ್ಯಾಗಃ ನಕ್ರಿಯೇತಚೇತ್–ವಿಧಿತಃ ದೈವಾತ್–ತಸ್ಯ– ವಹ್ನೇರ್ಗ್ರಾಸಃ ದಾಹಃ ಬಡಬಾನಲ ಭಕ್ಷಣಂ ವಾಭವತಿ–ಲಕ್ಷ್ಮೀಂ ಸಂಪದಂ ರಮಾಂ ಸೀತಾಂಚ ಪ್ರೇಪ್ಸೋಃ ಪ್ರಾಪ್ತುಮಿಚ್ಛೋಃ ಜಗದಧಿಪತೇಃ ನೃಪಾತ್ ವಿಷ್ಣೋಃ ಶ್ರೀರಾಮಾಚ್ಚ–ಮಂಥನಂ ಕಠಿನತಾಡನಂ ಮಂಥನಂಚ ವಾಭವತಿ–ಬಂಧನಂ ಶೃಂಖಲಾದಿಭಿಃ ಶೈಲೈಶ್ಚ ಬಂಧನಂ ವಾಭವತಿ–ಅತ್ರ ಉಕ್ತಾರ್ಥೇ–ಸರಸ್ವಾನ್ ಸಮುದ್ರಃ–ಸಾಕ್ಷೀ ದೃಷ್ಟಾಂತಃ ॥

ಅರ್ಥ ॥ ಯಾವ ಮನುಷ್ಯನಿಗೆ ಯೇನು ಕಷ್ಟವಿಲ್ಲದೆ ಬಹಳ ಸಂಪತ್ತಿ ಬರುತ್ತದೆಯೊ ಆ ಮನುಷ್ಯನು ತನ್ನ ಆದಾಯಕ್ಕೆ ಸರಿಯಾಗಿ ವೆಚ್ಚ ಮಾಡದಿದ್ದರೆ, ಅವನ ಧನವು ದೈವದಿಂದ ಬೆಂಕಿಪಾಲಾಗುತ್ತದೆ. ಅಥವಾ ಅವನಿಗೆ ಧನವನ್ನು ಬಯಸುವ ಅರಸಿನ ಕಡೆಯಿಂದ ಹೊಡತವಾಗಲೀ, ಶೆರೇಮನೆಯಾಗಲೀ ಪ್ರಾಪ್ತವಾಗುತ್ತದೆ. ಇದಕ್ಕೆ ಸಮುದ್ರವೇ ದೃಷ್ಟಾಂತವು. (ಹ್ಯಾಗಂದರೆ, ಸಮುದ್ರನ ಸಂಪತ್ತಿಯು ಬಡಬಾನಲ ಅಗ್ನಿಯಿಂದ ಸುಡಲ್ಪಡುತ್ತದೆ. ಸಮುದ್ರ ಮಂಥನದ ಕಥೆ ಪುರಾಣದಲ್ಲಿ ಪ್ರಸಿದ್ಧವಾಗಿದೆ. ಸೀತೆಯನ್ನು ರಾವಣನ ಕಡೆಯಿಂದ ಬಿಡಿಸಿತರುವ ಉದ್ದೇಶ್ಯವಾಗಿ, ಅಯೋಧ್ಯೆಯ ಅರಸನಾದ ರಾಮನು ಲಂಕಾಪಟ್ಟಣಕ್ಕೆ ಹೋಗಲಿಕ್ಕೆ ಸಮುದ್ರವನ್ನು ಕಟ್ಟಿದ ಕಥೆ ಎಲ್ಲರಿಗೂ ತಿಳಿದದೆ.)

ಮೂ। ಕುಂಭಜಪೀತೋತ್ಸೃಷ್ಟಂ ಶಿಷ್ಟೈರಸ್ಪೃಶ್ಯ ಮರ್ಣವಮುಪೇತ್ಯ। ಉದ್ಗತ ತೃಷ್ಣೋಪ್ಯ ಸ್ಮಾದುದಕಂಪಾಂಥೋ ಜನೋನ ಗೃಹ್ಣಾತಿ ॥ ೧೪೯ ॥

ಟೀಕಾ ॥ ಕುಂಭಜೇತಿ ॥ ಕುಂಭಜೇನ ಅಗಸ್ತ್ಯೇನ ಪೀತಂಸತ್ ಉತ್ಸೃಷ್ಟಂ ಮೂತ್ರದ್ವಾರೇಣೇತಿ ಭಾವಃ– ಉಚ್ಛಿಷ್ಟಮಿತಿವಾಪಾಠಾಂತರಂ– ಅತಏವಶಿಷ್ಟೈಃ ಅಸ್ಪೃಶ್ಯಂ ಅರ್ಣವಮುಪೇತ್ಯ ಇಮಂ ಸಮುದ್ರಂ ಪ್ರಾಪ್ಯ ಉದ್ಗತತೃಷ್ಣೋಪಿ ಪಾಂಥಃಜನಃ ಅಸ್ಮಾತ್ಸಮುದ್ರಾತ್ ಉದಕಂ ನಗೃಹ್ಣಾತಿ ವಸ್ತುತಸ್ತುಲವಣತ್ವಾದಿತಿ ಭಾವಃ ॥

ಅರ್ಥ ॥ ಅಗಸ್ತಿ ಋಷಿಯು ಕುಡಿದು ವಿಸರ್ಜಿಸಿದಂಥ ಎಂಜಲಾದದರಿಂದ, ಒಳ್ಳೇ ಜನರಿಂದ ಮುಟ್ಟಲ್ಪಡಲಿಕ್ಕೆ ಅಯೋಗ್ಯವಾದ ಸಮುದ್ರದ ಸಮೀಪಕ್ಕೆ ಬಹಳ ನೀರಡಿಕೆ

ಯುಂಟಾದ ಮನುಷ್ಯನು ಕೂಡ ಹೋದರೂ ಅವನು ಅದರೊಳಗಿನ ನೀರನ್ನು ಕುಡಿಯನು.

ವಿಶ್ವಾವಸುಃ ॥

ಮೂ ॥ ಸಖೇಸರ್ವಗುಣಾಕರಃ ಸರಿತ್ಪತಿರೇಷನದೂಷಣೀಯಃ ॥ ೧೪೦ ॥ ತಥಾಹಿ ॥

ಅರ್ಥ ॥ ಮಿತ್ರನೇ, ಸಕಲ ಗುಣಗಳಿಗೆ ಮನೆಯಾದಂಥ ಈ ನದಿಗಳ ಪತಿಯು ನಿಂದಾರ್ಹನಲ್ಲವು.

ಮೂ। ಶ್ಲೋ। ಉಚ್ಚೈಶ್ಶ್ರವಃ ಪ್ರದಾತುರ್ವೃದ್ಧ ಶ್ರವಸೇಪುನಸ್ತದನುಜಾಯ। ವಾಮವಿಲೋಚನ ದಾತುರ್ವದಾನ್ಯ ಮಸ್ಮಾದ್ವದಾನ್ಯ ಮರ್ಣವತಃ ॥ ೧೪೧ ॥

ಟೀಕಾ। ಉಚ್ಚೈರಿತಿ। ವೃದ್ಧೇಜರಸಾ ಬಧಿರೇ ಶ್ರವಸೀಶ್ರೋತ್ರೇಯಸ್ಯ ತಸ್ಮೈ ಕಸ್ಮೈಚಿದಿಂದ್ರಾಯಚ ಉಚ್ಚೈಃ ಶ್ರೇಷ್ಠಯೋಃ ಶ್ರವಸೋಃ ಉಚ್ಚೈಶ್ಶ್ರವಸೋನಾಮ ಅಶ್ವಸ್ಯ ಪ್ರದಾತುಃ—ಪುನಃ ಕಿಂಚ— ತಸ್ಯಬಧಿರಸ್ಯ ಇಂದ್ರಸ್ಯಚ ಅನುಜಾಯಕಸ್ಮೈಚಿತ್ ವಾಮಾಕ್ಷ್ಣಾಕಾಣಾಯ— ವಿಷ್ಣವೇಚ— ವಾಮಸ್ಯ ವಿಲೋಚನಸ್ಯ ಚಂದ್ರಾತ್ಮಕಸ್ಯಚ ದಾತುಃ ಅಸ್ಮಾತ್ ಅರ್ಣವತಃ ಸಮುದ್ರಾದನ್ಯಂವದಾನ್ಯಂ ದಾತಾರಂ—ವದ ಅನ್ಯೋಸ್ತಿ ಚೇತ್ಕಥಯೇತ್ಯರ್ಥಃ ಅಂಗದಾನಸ್ಯ ಅತಿದುಷ್ಕರತ್ವಾದಿತಿಭಾವಃ ॥

ಅರ್ಥ ॥ ಈ ಶ್ಲೋಕಕ್ಕೆ ಎರಡು ಅರ್ಥಗಳು.

೧ ಇಂದ್ರನಿಗೆ „ ಉಚ್ಚೈಶ್ರವ ” ಎಂಬ ಹೆಸರಿನ ಕುದುರೆಯನ್ನೂ ವಿಷ್ಣುವಿಗೆ ಚಂದ್ರನನ್ನೂ ಕೊಟ್ಟಂಥಾತನಾದ ಸಮುದ್ರನಿಗಿಂತ ಹೆಚ್ಚು ದಾನಶೂರನಾದವನು ಬೇರೆ ಯಾರಾದರೂ ಲೋಕದಲ್ಲಿದ್ದರೆ ಹೇಳು ನೋಡುವಾ.

( ಇದು ವಾಸ್ತವಿಕವಾದ ಅರ್ಥವು. ಉಚ್ಚೈಶ್ರವ ಎಂಬ ಹೆಸರಿನ ಕುದುರೆ ಮತ್ತು ಚಂದ್ರ- ಇವೆರಡೂ ಸಮುದ್ರಮಂಥನದಲ್ಲಿ ಹೊರಟ ರತ್ನಗಳಲ್ಲಿ ಸೇರಿದವುಗಳು ಎಂತ ಪುರಾಣಪ್ರಸಿದ್ಧವದೆ).

೨. ಮುದಿತನದಿಂದ ಕಿವುಡನಾದ ಯಾರೊಬ್ಬನಿಗೆ ಶ್ರೇಷ್ಠವಾದ ಕಿವಿಗಳನ್ನು ಕೊಟ್ಟು, ಮತ್ತು ಎಡಗಣ್ಣು ಹೀನನಾದಂಥ ಆ ಕಿವುಡನ ತಮ್ಮನಿಗೆ ಎಡಗಣ್ಣು ಕೊಟ್ಟ ಸಮುದ್ರನಿಗಿಂತಲೂ ಅಧಿಕವಾದ ದಾನಶೂರನು ಯಾರಾದರು ಲೋಕದಲ್ಲಿದ್ದರೆ ಹೇಳು, ನೋಡುವಾ; ಇದು ಕಾಲ್ಪನಿಕವಾದ ಅರ್ಥವು.

ಮೂ। ಶ್ಲೋ। ಅಮೃತಂ ವಿಬುಧೇಭ್ಯೋದಾದಭೀಪ್ಸಿತಫಲದಂ ತರುಂಚ ಧೇನುಂಚ। ದಿಗ್ವಸನಾಯ ಸಿತಾಂ ಶುಕಮೋಕ್ಷಿತ ಪತಾ

ದೃಶಃ ಕ್ವಾಪಾದಾತಾ ॥ ೧೪೨ ॥

ಟೀಕಾ ॥ ಅಮೃತಮಿತಿ ॥ ಅಸೌ ಸಮುದ್ರಃ-ವಿಬುಧೇಭ್ಯಃ ಜ್ಞಾನಿಭ್ಯಃ ದೇವೇಭ್ಯಶ್ಚ- ಅಮೃತಂ ಮೋಕ್ಷಂ ಸುಧಾಂ- ಅಭೀಷ್ಟಫಲದ ವಿತ್ಯಗ್ರಿಮಯೋಸ್ತರುಧೇನ್ವೋಃ ವಿಶೇಷಣಂ ತೇನಕಲ್ಪವೃಕ್ಷಂ ಕಾಮಧೇನುಂ ಚೇತ್ಯರ್ಥಃ- ಅದಾತ್ ದತ್ತವಾನ್- ದಿಗ್ವಸನಾಯ ವಸ್ತ್ರರಹಿತಾಯ ಶಿವಾಯಚ- ಸಿತಮಂ ಶುಕಂವಸ್ತ್ರಂ- ಸಿತಾಂ ಶುರೇವ ಸಿತಾಂಶುಕಶ್ಚಂದ್ರಃ-ತಂಚ ಅದಾತ್-ಏತಾದೃಶಃ ಸಮುದ್ರತುಲ್ಯಃ ಕಶ್ಚಿದ್ದಾತಾ- ಕ್ವಾಪಾದೃಷ್ಟಃ- ನಕುತ್ರಾಪೀತ್ಯರ್ಥಃ ॥

ಅರ್ಥ ॥ (೧) ದೇವತೆಗಳಿಗೆ ಅಮೃತವನ್ನೂ, ಇಷ್ಟಿತ ಪದಾರ್ಥ ಕೊಡುವ ಶಕ್ತಿಯುಳ್ಳ ಕಲ್ಪವೃಕ್ಷ ಮತ್ತು ಕಾಮಧೇನುಗಳನ್ನೂ ಕೊಟ್ಟಂಥಾತನಾದ, ಮಹಾದೇವನಿಗೆ ಚಂದ್ರನನ್ನು ಕೊಟ್ಟಂಥಾತನಾದ ಸಮುದ್ರನಿಗೆ ಜೋಡಾದ ಧರ್ಮಿಷ್ಟನನ್ನೆಲ್ಯಾದರೂ ಕಂಡಿದ್ದೀಯಾ ? (ಅಮೃತ, ಕಲ್ಪವೃಕ್ಷ ಎಂಬ ಮರ ಮತ್ತು ಕಾಮಧೇನು ಎಂಬ ಗೋವು ಇವುಗಳು ಸಮುದ್ರ ಮಥನದಲ್ಲಿ ಹೊರಟ ರತ್ನಗಳಲ್ಲಿ ಮೂರು.)

(೨) ವಿಬುಧೇಭ್ಯೋ ಅಮೃತಂ, ದಿಗ್ವಸನಾಯಶಿತಾಂಶುಕಂ ಎಂಬ ಪದಗಳಿಗೆ ಜಾಣರಿಗೆ ಮೋಕ್ಷ, ಬತ್ತಲೆಯಾದವನಿಗೆ ವಸ್ತ್ರ ಎಂಬದಾಗಿ ಎರಡನೇ ಅರ್ಥವು.

ಮೂ। ಅಮುಷ್ಯ ಖಲುಭಾಗ್ಯವತಾಂ ಶೇಷಾದಯೋಪಿ ವಕ್ತು ಮಶಕ್ತಾಃ ॥ ೧೪೩ ॥

ಟೀಕಾ ॥ ಅಮುಷ್ಯೇತಿ। ಅಮುಷ್ಯ ಸಮುದ್ರಸ್ಯ ॥

ಅರ್ಥ ॥ ಈ ಸಮುದ್ರನ ಸಂಪತ್ತಿ ವರ್ಣಿಸುವದು ಸಾವಿರ ಫಣೆಯುಳ್ಳ ಮಹಾಶೇಷಾದಿಗಳಿಗೆ ಕೂಡ ಅಳವಲ್ಲವು.

ಮೂ। ಕುಶ್ಯ। ಶ್ಲೋ। ಜಹ್ನೋರಪತ್ಯಂ ಜಗತಃ ಪವಿತ್ರಂ ಕಳತ್ರಮಬ್ಧೇಸ್ತನಯಃ ಕಳಾತ್ಮಾ। ಕನ್ಯಾತುಧನ್ಯಾ ಕಮಲಾಬಿಭರ್ತಿಜಾಮಾತೃಭಾವಂ ಜಗದೀಶಏವ ॥ ೧೪೪ ॥

ಟೀಕಾ ॥ ಜಹ್ನೋರಿತಿ ॥ ಅಸ್ಯಾಬ್ಧೇಃ ಸಮುದ್ರಸ್ಯ ಕಳತ್ರಂ ಭಾರ್ಯಾಜಗತಃ ಪವಿತ್ರಂ ಜಹ್ನೋರ್ಮುನೇಃ ಅಪತ್ಯಂ ಪುತ್ರೀಗಂಗಾ- ತನಯಃ ಕಳಾತ್ಮಾ ವಿದ್ಯಾವಾಯಶ್ಚಂದ್ರಶ್ಚ-ಕನ್ಯಾತುಧನ್ಯಾ ಕಮಲಾ ಲಕ್ಷ್ಮೀಃ-ಕಿಂಬಹುನಾ- ಜಗದೀಶಃ ವಿಷ್ಣುರೇವಜಾಮಾತೃಭಾವಂ ದುಹಿತೃಪತಿತ್ವಂ ಬಿಭರ್ತಿ- ಜಾಮಾತೇತ್ಯರ್ಥಃ ॥

ಅರ್ಥ ॥ ಈ ಸಮುದ್ರನಿಗೆ ಜಹ್ನು ಋಷಿಯ ಮಗಳಾದ ಗಂಗೆಯು ಹೆಂಡತಿ, ವಿದ್ಯಾವಂತನಾದ ಚಂದ್ರನು ಮಗನು, ಭಾಗ್ಯವಂತಳಾದ ಲಕ್ಷ್ಮಿಯು ಮಗಳು. (ಈ ಸಮುದ್ರನ ದೊಡ್ಡಸ್ಥಿಕೆ ಎಷ್ಟೆಂದು ವರ್ಣಿಸಲೀ! ಲೋಕದೊಡೆಯನಾದ ಸಾಕ್ಷಾತ್

ವಿಷ್ಣುವೇ ಈ ಸಮುದ್ರನಿಗೆ ಅಳಿಯನಾಗಿದ್ದಾನೆ.)

## ॥ ಜಗನ್ನಾಥ ಕ್ಷೇತ್ರವರ್ಣನಂ ॥

ಮೂ। ಅನ್ಯಚ್ಛೇದಮಸ್ಯಭಾಗಧೇಯಂ ವರ್ತತೇ।

ಶ್ಲೋ। ಯತ್ತೀರೇ ಪುರುಷೋತ್ತಮಸ್ಥಲಮಿದಂ ಯಕ್ಷಾಪ್ಸರಃ ಕಿನ್ನರ *ಪ್ರೇಷ್ಠೈರ್ನಿತ್ಯಮಧಿಷ್ಠಿತಂ ಭಗವತಸ್ಸಾನ್ನಿಧ್ಯ †ಸೌಖ್ಯಾಸ್ಪದಂ। ಅತ್ರತ್ಯಕ್ತವತಾಂ ಮಸೂನ್ ಕರಗತಾಮುಕ್ತಿಸ್ತದಾಸ್ತಾಮ ಹೋದೇಹೋದಾಹವಿನಾಕೃತೋಽಪ್ಯ ವಿಕೃತಃ ಕಾಷ್ಠಾದಿವತ್ತಿಷ್ಠತಿ ॥೧೪೫॥

ಟೀಕಾ ॥ ಅನ್ಯದಿತಿ। ಭಾಗಧೇಯಂ ಭಾಗ್ಯಂ ॥

ಯದಿತಿ॥ ಯಸ್ಯ ಸಮುದ್ರಸ್ಯ ತೀರೇದಕ್ಷಿಣೇ–ಭಗವತಃ ಜಗನ್ನಾಥಸ್ಯ ಸಾನ್ನಿಧ್ಯೇನಸ್ಥಿತ್ಯಾ ಸೌಖ್ಯಾಸ್ಪದಂ–ಭಗವತ್ಸಾನ್ನಿಧ್ಯ ಮುಖ್ಯಾಸ್ಪದಮಿತಿಪಾಠೇ ಭಗವತ್ಸಾನ್ನಿಧ್ಯಸ್ಯ ಮುಖ್ಯಸ್ಥಾನಂ–ಅತಏವಯಕ್ಷಾಪ್ಸರಃ ಕಿನ್ನರಾಃ ಪ್ರೇಷ್ಠಾಃ ಮರಸ್ಸರಾ ಯೈಸ್ತೈ ಸ್ಸರ್ವೈರ್ನಿತ್ಯಮಧಿಷ್ಠಿತಮಾಶ್ರಿತಂ ಇದಂ ಪುರುಷೋತ್ತಮಸ್ಥಲಂ ಜಗನ್ನಾಥಕ್ಷೇತ್ರಂ–ತಿಷ್ಠತೀತಿಶೇಷಃ–ಅತ್ರಕ್ಷೇತ್ರೇ–ಅಸೂನ್ ಪ್ರಾಣಾನ್–ತ್ಯಕ್ತವತಾಂ–ದೇಹಿನಾಂ–ಮುಕ್ತಿಃಕರಗತಾ–ತದುಕ್ತಾಶ್ಚರ್ಯಮಾಸ್ತಾಂ– ದೇಹಃ ಮೃತಶರೀರಂ ದಾಹೇನವಿನಾಕೃತಃ ಅದಗ್ಧೋಽಪಿಸನ್– ಅವಿಕೃತಃ ಕ್ಷರಣದುರ್ಗಂಧಾದಿರಹಿತಃ ಕಾಷ್ಠಾದಿವತ್ತಿಷ್ಠತಿ–ಅಹೋ ಇತ್ಯಾಶ್ಚರ್ಯೇ ॥

ಅರ್ಥ ॥ ಈ ಸಮುದ್ರದ ಬೇರೊಂದು ಭಾಗ್ಯ ಇದೆ. ಅದ್ಯಾವದೆಂದರೆ: ಅದರ ದಕ್ಷಿಣ ತೀರದಲ್ಲಿ ವಿಷ್ಣುವಿನ ಸ್ಥಾನವಾದ ಈ ಜಗನ್ನಾಥ ಕ್ಷೇತ್ರವಿರುತ್ತದೆ. ಈ ಕ್ಷೇತ್ರವು ಭಗವಂತನ ಸ್ಥಾನವಾದದರಿಂದ ಸುಖದ ಬೀಡಾಗಿರುತ್ತದೆ. ಸುಖದ ಬೀಡಾಗಿರುವದರಿಂದ ಅಲ್ಲಿ ಯಕ್ಷರು ಅಪ್ಸರರು ಕಿನ್ನರರು ಮೊದಲಾದವರು ಆಶ್ರಯ ತೆಗದು ಕೊಳ್ಳುತ್ತಾರೆ. ಈ ಕ್ಷೇತ್ರದಲ್ಲಿ ಸಾವು ಪಡೆಯುವವರಿಗೆ ತಾತ್ಕಾಲ ಮೋಕ್ಷವಾಗುತ್ತದೆ. ಈ ಆಶ್ಚರ್ಯ ಹಾಗಿರಲಿ. ಇಲ್ಲಿ ಮೃತ ಶರೀರವು ಸುಡಲ್ಪಡದೆ ಇದ್ದರೂ ಕೊಳತು ಹೋಗದೆ ಕಟ್ಟಿಗೆಯಂತೆ ಇರುತ್ತದೆ.

ಮೂ। ಕಿಂಚ।

ಶ್ಲೋ। ನಿವೇದಿತಸ್ಯಾತ್ರರಮಾಸಖಾಯ ನೀಚೈರ್ಹೃತಸ್ಯಾಪಿಕಿ ‡ಲೌದನಾದೇಃ। §ಭಕ್ತ್ಯಾಶನಂ ಹಂತಭವಾರ್ಜಿತಾನಾಂ ಮಹಾಂಹ

---

* ಶ್ರೇಷ್ಠೈಃ † ಮುಖ್ಯಾಸ್ಪದಂ ಇತಿಪಾಠಾಂತರೇ ॥ ‡ ಓದನಸ್ಯ § ಭಕ್ತಾಶನಂ ಇತಿಪಾಠಾಂತರೇ ॥

ಸಾಂ ನಾಶನ ಮಾಮನಂತಿ ॥ ೧೪೬ ॥

ಟೀಕಾ ॥ ನಿವೇದಿತಸ್ಯೇತಿ । ಅತ್ರಕ್ಷೇತ್ರೇ-ರಮಾಸಖಾಯ ಜಗನ್ನಾಥಾಯ-ನಿವೇದಿತಸ್ಯ-ನೀಚೈಃ ಕುಲ ಶೀಲಾದಿನಾ ಅಧಮೈರಪಿ ಹೃತಸ್ಯ ಓದನಾದೇಃ-ಭಕ್ತ್ಯಾ ಉಪಲಕ್ಷಿತ ಅಶನಂ ಭಕ್ಷಣಂ-ಭವೇನಸಂಸಾರ ವೃತ್ತ್ಯಾಽರ್ಜಿತಾನಾಂ-ಮಹತಾಂ ಅಂಹಸಾಂ ಪಾಪಾನಾಂ- ನಾಶನಂ ನಿವಾರಕಂ-ಆಮನಂತಿಕಿಲ- ಶಿಷ್ಟಾ ಇತಿಶೇಷಃ-ಕಿಲೇತಿ ಪ್ರಸಿದ್ಧೌ ॥

ಅರ್ಥ ॥ ಈ ಕ್ಷೇತ್ರದಲ್ಲಿ ಜಗನ್ನಾಥಸ್ವಾಮಿಗೆ ಸಮರ್ಪಿಸಿದ ನೈವೇದ್ಯಾನ್ನ ಶೂದ್ರಾದಿ ಕೀಳು ಕುಲದವರು ತೆಗದುಕೊಂಡು ಬಂದಂಥಾದ್ದಾದಾಗ್ಯೂ ಚಿಂತೆಯಿಲ್ಲ. ಅದನ್ನು ವಿಶ್ವಾಸದಿಂದ ಸೇವನೆ ಮಾಡಿದರೆ, ಸಂಸಾರ ಕರ್ಮಗಳಿಂದ ಪ್ರಾಪ್ತಿಯಾದ ಪಾಪ ಗಳು ಪರಿಹರವಾಗುತ್ತವೆಯೆಂತ ಶಿಷ್ಟ ಜನರು ಹೇಳುವದು ಪ್ರಸಿದ್ಧವಾಗಿದೆ.

ಮೂ। ಸಭಕ್ತ್ಯನ್ಮೇಷಂ।

ಶ್ಲೋ। ದಾರುಣಿ ಸನ್ನಿಹಿತಾಯ ಪ್ರಾಜ್ಞೈರ್ಹುತಮಶ್ನುತೇಮ ಖೇಷುಹವಿಃ। ಶಿಶಿರಾಯ ನಿತ್ಯರುಚಯೆ ಶುಚಯೆ ರಚಯೇಯ ಮದ್ಭುತಾಯನತೀಃ ॥ ೧೪೭ ॥

ಟೀಕಾ ॥ ದಾರುಣೀತಿ ॥ ದಾರುಣಿಸನ್ನಿಹಿತಾಯ ಕೃತಸನ್ನಿಧಾನಾಯ ಪ್ರಾಜ್ಞೈಃ ಯಜ್ವಭಿಃ ಮಖೇ ಷು ಯಜ್ಞೇಷು-ಹುತಂ ಹವಿಃ ಅಶ್ನುತೇ ಗೃಹ್ಣತೆ ಅನ್ಯತ್ರ ಹವಿರ್ಭುಜೆ ಇತ್ಯರ್ಥಃ- ವ್ಯತಿರೇಕ ಮಾಹ-ಶಿಶಿರಾಯ ಕೃಪಯಾಶೀತಲಾಯ-ನಿತ್ಯರುಚಯೆ ಶಾಶ್ವತಪ್ರಭಾಯ ಶುಚಯೆ ನಿತ್ಯಶುದ್ಧಾಯ- ಯದ್ವಾ ಶಿಶಿರಾಯ ಋತವೇಪಿ ಶುಚಯೇಗ್ರೀಷ್ಮ ಋತವೇ ಇತಿವಿರೋಧಃ- ಪರಿಶುದ್ಧಾಯೇತಿಪರಿ ಹಾರಃ-ಶುಚಯೆ ಅಗ್ನಯೆ ಇತ್ಯತ್ರ ವಿಶೇಷ್ಯಂ-ನತೀಃ ನಮಸ್ಕಾರಾನ್-ರಚಯೇಯಂ ಕುರ್ಯಾಂ-ಶುಚಿ ಶ್ಶುದ್ಧೇನುಪಹತೇಶೃಂಗಾರಾಷಾಢಯೋರಪಿ। ಗ್ರೀಷ್ಮ ಋತವಹೇಪಿಸ್ಯಾದಿತಿವಿಶ್ವಃ ॥

ಅರ್ಥ ॥ ಕಟ್ಟಿಗೆಯಲ್ಲಿ ಕಾಣಿಸಿಕೊಂಡಂಥಾವನಾದ, ಯಜ್ಞ ಮಾಡುವವರು ಯಜ್ಞಗಳಲ್ಲಿ ಅರ್ಪಿಸಿದ ಹವಿಯನ್ನು ಸ್ವೀಕರಿಸುವಂಥಾತನಾದ, ಕೃಪೆಯಿಂದ ಶೀತಲ ನಾದಂಥಾತನಾದ, ಸರ್ವದಾ ಪ್ರಕಾಶಮಯನಾದ, ನಿತ್ಯಪಾವನನಾದ, ಮತ್ತು ಅದ್ಭುತನಾದ ( ಜಗನ್ನಾಥ ಸ್ವಾಮಿಗೆ ) ನಮಸ್ಕಾರ ಮಾಡುತ್ತೇನೆ.

## ಗುರ್ಜರ ದೇಶವರ್ಣನಂ ॥

ಮೂ। ಇತಿನಮಸ್ಕೃತ್ಯ ಸುದೂರಮನ್ಯತೋ ವಿಮಾನಂ ಪ್ರ ಸ್ಥಾಪ್ಯ। ಸಶ್ಲಾಘಂ।

ಮೂ ॥ ಸಖೇ ವಿಷುಸರ್ವಸಂಪದಾ ಮಾಸ್ಪದತಯಾತ್ರಿ ದಶಾಲ ಯಸ್ಯಾ ದೇಶಇವ ಗುರ್ಜರ ದೇಶಶ್ಚಕ್ಷುಷೋಸ್ಸುಖಾ ಕರೋ

ತಿ ॥ ೧೪೮ ॥

ಟೀಕಾ ॥ ಸಖಇತಿ ॥ ತ್ರಿದಶಾಲಯಸ್ಯ ಸ್ವರ್ಗಸ್ಯ ಆದಿಶ್ಯತೆ ಪ್ರತಿನಿರ್ದಿಶ್ಯತ ಇತ್ಯಾದೇಶಃ ರೂಪಾಂತರಮಿವಸ್ಥಿತ ಇತ್ಯುತ್ಪ್ರೇಕ್ಷಾ–ಸುಖಾಕರೋತಿ ಸುಖಂ ಜನಯತಿ ॥

ಅರ್ಥ ॥ ಈ ಮೇರಿಗೆ ಹೇಳಿ ನಮಸ್ಕಾರವಂ ಮಾಡಿ ವಿಮಾನವನ್ನು ದೂರಕ್ಕೆ ಹೊರಡಿಸಿ ಸ್ತುತಿಯಾಗಿ (ವಿಶ್ವಾವಸು ಹೇಳುತ್ತಾನೆ)—ಎಲಾ ಗೆಳಿಯನೇ, ಸಕಲ ಐಶ್ವರ್ಯಗಳಿಗೆ ಮನೆಯಾಗಿ ರೂಪಮಾರ್ಪು ಪಟ್ಟ ಸ್ವರ್ಗ ಲೋಕವೋ ಎಂಬದಾಗಿ ಕಾಣಬರುವ ಈ ಗುರ್ಜರ ದೇಶವು ಕಣ್ಗಳಿಗೆ ಬಹಳ ಇಂಪಾಗಿದೆ.

ಮೂ। ಅತ್ರಹಿ। ಶ್ಲೋ। ಸಕರ್ಪೂರರಸ್ವಾದು ಕ್ರಮುಕನವವೀ
ಟೀರಸಲಸನ್ಮುಖಾಸ್ಸರ್ವಶ್ಲಾಘ್ಯಾ ಪದವಿವಿಧದಿವ್ಯಾಂಬರಧರಾಃ।
*ಕನದ್ರತ್ನಾಕಲ್ಪಾ ಘುಮಘುಮಿತ ದೇಹಾಶ್ಚ ಘುಸೃಣೈರ್ಯುವಾನೊ
ಮೋದಂತೇಯುವತಿಭಿ ರಮೀತುಲ್ಯರತಿಭಿಃ ॥ ೧೪೯ ॥

ಟೀಕಾ॥ಸಕರ್ಪೂರೇತಿ॥ಸಕರ್ಪೂರರಾಸ್ವಾದುಕ್ರಮುಕಾಚ ನವಾವೀಟೀತಾಂಬೂಲಂ ತಸ್ಯಾರಸೇನದ್ರವೇಣ ಲಸತ್ ಮುಖಂ ವಕ್ತ್ರಂ ಯೇಷಾಂತೆ-ಸರ್ವೇಷಾಂ ಶ್ಲಾಘ್ಯಾಯಾಃ ಪದಾನಿ ಪಾತ್ರಾಣಿ ವಿವಿಧಾನಿ ನಾನಾಜಾತೀಯಾನಿ ದಿವ್ಯಾನಿ ಅಮೂಲ್ಯಾನಿಚ ಅಂಬರಾಣಿ ವಸ್ತ್ರಾಣಿ ಧರಂತೀತಿಧರಾಃ–ಕನಂತಃ ಪ್ರಕಾಶಮಾನಾಃ ರತ್ನಮಯಾಃ ಆಕಲ್ಪಾಃ ಭೂಷಣಾನಿಯೇಷಾಂತೆ ಘುಸೃಣೈಃ ಕುಂಕುಮೈಃ-ಘುಮಘುಮಿತಃ ವಾಸಿತಃ ದೇಹಃ ಯೇಷಾಂ ತೇತಥೋಕ್ತಾಶ್ಚ ಅಮೀ ಗುರ್ಜರಸ್ಥಾಯುವಾನಃ ತುಲ್ಯರತಿಭಿಃ ಅನ್ಯೋನ್ಯಾನುರಾಗಾಭಿಃ–ಯುವತಿಭಿಃ ತರುಣೀಭಿಸ್ಸಹ–ಮೋದಂತೆ ರಮಂತೆ– ಅಥ–ಭೋಗಯೋರೈಕಾಧಿಕರಣ್ಯಸ್ಯದುರ್ಲಭತ್ವಾದಿತಿ ಭಾವಃ ॥

ಅರ್ಥ ॥ ಕರ್ಪೂರದಿಂದಲೂ ಸವಿಯಾದ ಅಡಿಕೆಯಿಂದಲೂ ಯುಕ್ತವಾದ ನೂತನ ತಾಂಬೂಲ ಮಡಪಿನ ರಸದಿಂದ ಶೋಭಿಸುವ ಮುಖ ಉಳ್ಳಂಥಾವರಾಗಿಯೂ, ಎಲ್ಲರಿಂದಲೂ ಹೊಗಳಿಸಲ್ಪಡಲಿಕ್ಕೆ ಯೋಗ್ಯವಾದ ವಸ್ತ್ರಗಳನ್ನು ಉಟ್ಟಂಥಾವರಾಗಿಯೂ, ಹೊಳೆಯುವ ರತ್ನಗಳಿಂದ ರಚಿತವಾದ ಭೂಷಣಗಳನ್ನು ತೊಟ್ಟುಕೊಂಡಂಥಾವರಾಗಿಯೂ, ಕುಂಕುಮದಿಂದ ಪರಿಮಳಿತವಾದ ಶರೀರ ಉಳ್ಳಂಥಾವರಾಗಿಯೂ ಗುರ್ಜರ ನಾಡಿನ ಎಳೆಯರು ತುಂಬ ಅನುರಕ್ತಿಯುಳ್ಳ ಎಳೆತಿಯರ ಸಂಗಡ ಕ್ರೀಡೆಮಾಡುತ್ತಾರೆ.

ಮೂ। ಅತ್ರವಧೂನಾಮುಸ್ಯ ನ್ಯಾದೃಶಂ ಸೌಂದರ್ಯಂ ॥
ಶ್ಲೋ। ತಪ್ತಸ್ವರ್ಣ ಸವರ್ಣಮಂಗಕಮಿದಂ ತಾಮ್ರೋಮೃದು
ಶ್ಚಾಧರಃ ಪಾಣೀಪಾದ್ರಪಲ್ಲನವ ಪ್ರವಾಳ ಸರಣೀವಾಣೀ ಸುಧಾ

* ಲಸತ್ ಇತಿಪಾಠಾಂತರಂ ॥

ಧೋರಣೀ। ವಕ್ತ್ರಂ ವಾರಿಜಮಿತ್ರಮುತ್ಪಲದಳಶ್ರೀಸೂಚನೆ ಲೋಚನೇ ಕೇವಾಗುರ್ಜರ ಸುಭ್ರುವಾಮವಯವಾ ಯೂನಾಂ ನ ಮೋಹಾವಹಾಃ ॥ ೧೫೦ ॥

ಟೀಕಾ ॥ ಅತ್ರೇತಿ। ಅಸ್ಯಾದೃಶಮಸದೃಶಂ॥

ತಪ್ತೇತಿ। ಇದಮೇತದೀಯಂ ಇದಂ ಸರ್ವತ್ರಯಥಾ ಲಿಂಗವಚನಮನ್ವೇತಿ–ಅಂಗಮೇವಾಂಗಕಂ–ತಪ್ತೇನಪುಟಪಾಕ ಶೋಧಿತೇನ ಸ್ವರ್ಣೇನ ಕನಕೇನ ಸವರ್ಣಂ ಸಮಾನಕಾಂತಿ– ಅಧರಃ ತಾಮ್ರಃ ಮೃದುಃ ಕೋಮಲಶ್ಚ–ಪಾಣೀಹಸ್ತೌ ಪ್ರಾಪ್ತಾನವಾನಾಂ ಪ್ರವಾಲಾನಾಂ ಪಲ್ಲವಾನಾಂ ಸರಣಿಃ ರೀತಿಃ ಯಾಭ್ಯಾಂ ತಥೋಕ್ತೌ– ವಾಣೀವಾಕ್ ಸುಧಾಧೋರಣೀ ಅಮೃತಧಾರಾ– ವಕ್ತ್ರಂ ವಾರಿಜಮಿತ್ರಂ ಪದ್ಮತುಲ್ಯಂ– ಲೋಚನೆ ಉತ್ಪಲದಳಸ್ಯ ಶ್ರಿಯಃ ಶೋಭಾಯಾಃ ಸೂಚನೆ ಜ್ಞಾಪಕೇ–ತತ್ತುಲ್ಯೇ ಇತ್ಯರ್ಥಃ ಗುರ್ಜರ ದೇಶಸ್ಥಸುಭ್ರುವಾಂ ಸ್ತ್ರೀಣಾಂ–ಕೇ ಅವಯವಾಃ– ಯೂನಾಂ ಮೋಹಾವಹಾನ ಭವಂತಿ ॥ ಸರ್ವೇಪಿ ಸಂತೋಷ ಸಂಪಾದಕಾ ಏವೇತ್ಯರ್ಥಃ ॥

ಅರ್ಥ ॥ ಇಲ್ಲಿಯ ಸ್ತ್ರೀಯರ ರೂಪಲಾವಣ್ಯವು ಜೋಡಿಲ್ಲದ್ದು. ಗುರ್ಜರ (ಗುಜರಾಥಿ) ದೇಶದ ಹೆಣ್ಣಳ ಮೈಯು ಪುಟಕ್ಕೆ ಹಾಕಿದ ಚಿನ್ನದ ಬಣ್ಣದಂತೆ ಬಣ್ಣ ಉಳ್ಳದ್ದು, ತುಟಿಗಳು ಕೆಂಪು ಮತ್ತು ಕೋಮಲವಾದಂಥವುಗಳು, ಕೈಗಳು ಹೊಸಚಿಗುರಿನ ರೀತಿಯುಳ್ಳಂಥವುಗಳು, ವಾಕ್ಕು ಅಮೃತದ ಧಾರೆಯೂ, ಮುಖವು ನೈದಿಲೆಗೆ ಸಮಾನವಾದದ್ದು, ಕಣ್ಣುಗಳು ಕಮಲದ ಎಸಳುಗಳ ಸುಂದರತ್ವ ಜ್ಞಾಪಕಕ್ಕೆ ತರುವಂಥವುಗಳು. ಈ ಪ್ರಕಾರವಾಗಿ ಗುರ್ಜರ ಹೆಣ್ಗಳ ಯಾವ ಅಂಗ ತರುಣರಿಗೆ ಮರುಳು ಮಾಡುವಂಥಾದ್ದಲ್ಲ? ಪ್ರತ್ಯೇಕ ಅಂಗವು ನೋಡಿದವರಿಗೆ ಸಂತೋಷ ಹುಟ್ಟಿಸುವಂಥಾದ್ದು ಎಂಬ ತಾತ್ಪರ್ಯ.

ಕೃಶಾನುಃ ॥

ಮೂ॥ಸತ್ಯಮೇವಂತಥಾಪ್ಯೈತೇಸಾರವಸ್ತೂಪಭೋಗಚತುರಾಃ॥

ಟೀಕಾ ॥ ಸತ್ಯಮಿತಿ। ಏತೇಗುರ್ಜರದೇಶ್ಯಾಃ ಯುವಾನಃ ಉಪಭೋಗಃ ಅನುಭೋಗಃ ॥

ಅರ್ಥ ॥ ಅಹುದು, ಆದಾಗ್ಯೂ ಯಾವದಾದರೂ ವಸ್ತುವಿನ ಸವಿ ತೆಗದುಕೊಳ್ಳುವ ಜಾಣ್ಮೆ ಈ ಗುರ್ಜರರಿಗಿರುವದಿಲ್ಲವು.

ಮೂ। ಶ್ಲೋ। ವ್ರೀಡಾಮಾರವ್ಯತಿಕರವತೀರ್ವಿದ್ಯುದಾಭಾಃ ಕೃಶಾಂಗೀಃ ಕ್ರೀಡಾಯೋಗ್ಯಾಪ್ಯ ಹಪಸಮಯೇಗೇಹ ಏವತ್ಯಜಂತಃ। ನಿತ್ಯಾಸಕ್ತಾನಿರುಪಮಮಣಿಶ್ರೇಣಿವಾಣಿಜ್ಯ ಲಾಭೇ ಬಂಭ್ರಮ್ಯಂತೆ ಬಹುದಿನಪರಿಪ್ರಾಪ್ಯದೇಶಾಂತರೇಷು॥ ೧೫೧॥

ಟೀಕಾ ॥ ವ್ರೀಡೇತಿ ॥ ನಿರುಪಮಾನಾಂ ಮಣೀನಾಂ ಶ್ರೇಣಿಭಿಃ ರಾಶಿಭಿಃ ಯದ್ವಾಣಿಜ್ಯಂ ಕ್ರಯವಿಕ್ರಯ ವ್ಯಾಪಾರಃ ತಸ್ಮಾಲ್ಲಾಭೆ ಮೂಲಾಧಿಕಧನ ಪ್ರಾಪ್ತಿವಿಷಯೆ–ನಿತ್ಯಾಸಕ್ತಾಃ ಅತಏವವ್ರೀಡಾಮಾರಯೋಃ ಲಜ್ಜಾಮ-ನ್ಮಥಯೋಃ ವ್ಯತಿಕರಃ ಮೇಳನಂತದ್ವತೀಃ–ಮುಗ್ಧಾ ಇತ್ಯರ್ಥಃ–ನತುಗಳಿತಯೌವನಾಃ ವಿದ್ಯುದಾ ಭಾಃ ನತುಕುರೂಪಾಃ–ವಿಶೇಷಣದ್ವಯಂ ಅತ್ಯಾಜ್ಯತಾಂ ಸೂಚಯತಿ–ಗೇಹಏವತ್ಯಜಂತಸ್ಸಂತಃ–ಬಹು ಭಿಃ ನತು ತ್ರಿಚತುರ್ಭಿಃ ದಿನೈಃ ಪ್ರಾಪ್ಯೇಷುದೇಶಾಂತರೇಷ್ವಿತಿ ದೂರೇಷ್ವಿತ್ಯರ್ಥಃ–ಬಂಭ್ರಮ್ಯಂತೆ ಭೃಶಂ ಸಂಚರಂತಿ–ಭ್ರಮತೆರ್ಯಜಿಲಟ್ ॥

ಅರ್ಥ ॥ ಈ ಗುರ್ಜರದೇಶದ ಪುರುಷರು ನಾಣಿಂದಯುಕ್ತವಾದ ಕಾಮಾವಸ್ಥೆಗೆ ಮುಟ್ಟಿದಂಥ ಅಂದರೆ ಉದಯದ್ಯೌವನೆಯರಾದಂಥ, ಮಿಂಚಿನಂತೆ ಕಾಂತಿಯುಳ್ಳಂಥ, ತೆಳ್ಳನೆಮೈಯುಳ್ಳಂಥ ಹೆಂಡತಿಗಳನ್ನು ವಿಲಾಸ ಆಟ ಆಡಲಿಕ್ಕೆ ಯೋಗ್ಯವಾದ ಕಾಲದಲ್ಲಿ ಮನೆಯಲ್ಲೇ ಬಿಟ್ಟು ಬಿಟ್ಟು, ಬಹಳ ಬೆಲೆಯುಳ್ಳ ರತ್ನರಾಶಿಗಳ ಕ್ರಯವಿಕ್ರಯದಿಂದ ಹಣ ಗಳಿಸುವದರಲ್ಲಿ ಹಗಲಿರುಳು ಮನಸ್ಸು ಇಟ್ಟಂಥವರುಗಳಾಗಿ ಬಹಳ ದೂರದೇಶಗಳಲ್ಲಿ ತಿರುಗಾಡುತಿರುತ್ತಾರೆ.

ವಿಶ್ವಾವಸುಃ ॥

ಮೂ । ಮಂದಮನೀಷ ಸವಿಷ ಪುರುಷಾಣಾಂಗುಣ ವಿಶೇಷ ಏವ
ನತುದೋಷಃ ॥ ೧೫೨ ॥

ಟೀಕಾ ॥ ಮಂದೇತಿ । ಸವಿಷಃ ಅರ್ಥಾರ್ಜನಾಯ ದೇಶಾಂತರೇಷು ಭ್ರಮಣಂ ॥

ಅರ್ಥ ॥ ಎಲೈ ಮೂಢಬುದ್ಧಿಯೇ, ಇದು ಆ ಜನರಲ್ಲಿ ಗುಣವೇ ಹೊರತು ಕೊರತೆ ಯಲ್ಲವು; ಯಾಕಂದರೆ:—

ಶ್ಲೋ । ದೇಶೆ ದೇಶೆ ಕಿಮಪಿಕುತುಕಾದದ್ಭುತಂ ಲೋಕಮಾನಾಃ
ಸಂಪಾದ್ಯೈವದ್ರವಿಣ ಮಮಿತಂ ಸದ್ಮಭೂಯೋಽಪ್ಯವಾಪ್ಯ । ಸಂ
ಯುಜ್ಯಂತೆ ಸುಚಿರವಿರಹೋತ್ಕಂಠಿತಾ ಭಿಸ್ಸತೀಭಿ ಸ್ಸೌಖ್ಯಂ ಧ
ನ್ಯಾಃ ಕಿಮಪಿದಧತೆ ಸರ್ವಸಂಪತ್ಸಮೃದ್ಧಾಃ ॥ ೧೫೩ ॥

ಟೀಕಾ ॥ ದೇಶೆದೇಶಇತಿ ॥ ಯತಏತೆ–ದೇಶೇದೇಶೇ–ಕಿಮಪಿ ಮನೋಹರಂ ಅತ್ಯದ್ಭುತಂ ವಸ್ತು–ಲೋಕ ಮಾನಾಃ ಪಶ್ಯಂತಸ್ಸಂತಏವ–ಅಮಿತಂ ದ್ರವಿಣಂ ಧನಂ ಸಂಪಾದ್ಯ–ವಾಣಿಜ್ಯಾದಿತಿಭಾವಃ–ಸದ್ಮಾಪಿ ಗೃಹಂಚ ಭೂಯಃ ಅವಾಪ್ಯ–ಸರ್ವ ಸಂಪತ್ಸಮೃದ್ಧಾಸ್ಸಂತಃ–ಸತೀಭಿಃ ಪತಿವ್ರತಾಭಿಃ–ಅತಏವಸುಚಿರಂ ವಿರಹೇಣ ವಿಯೋಗೇನ ಉತ್ಕಂಠಿತಾಭಿಃ ಇಷ್ಟಾಪ್ರಾಪ್ತಿಜನಿತವೇದನಾಭಿಃ– ಭಾರ್ಯಾಭಿಸ್ಸಹ–ಕಿಮಪಿ ಅನಿ ರ್ವಾಚ್ಯಂ ಸೌಖ್ಯಂದಧತೆ ॥ ॥ ಶ್ಲೋ । ಯದೇವೋಪನ ತಂದುಃಖಾತ್ಸುಖಂತದ್ರಸವತ್ತರಂ । ನಿ ರ್ವಾಣಾಯತರುಚ್ಛಾಯಾತಪ್ತಸ್ಯಹಿ ವಿಶೇಷತ ಇತಿನ್ಯಾಯಾದಿತಿಭಾವಃ ॥

ಅರ್ಥ ॥ ಈ ಗುರ್ಜರರು ಜಿಜ್ಞಾಸುಗಳಾಗಿ ಅಂದರೆ ತಿಳುವಳಿಕೆ ಉಂಟುಮಾಡಿ

ಕೊಳ್ಳ ಬೇಕೆಂಬ ಆಶೆಯಿಂದ ಬೇರೆ ಬೇರೆ ದೇಶಗಳಿಗೆ ಹೋಗಿ ಅಪೂರ್ವವಾದ ಚಮತ್ಕಾರಗಳನ್ನು ನೋಡುತ್ತಾ, ಅಪಾರವಾದ ಹಣವನ್ನು ಘಳಿಸಿಕೊಂಡು ಮನೆಗೆ ಮರಳಿ ಬಂದು, ಬಹಳ ಕಾಲದ ಅಗಲಿಕೆಯಿಂದ ಪತಿಗಳ ಹಂಬಲಿಕೆಯಲ್ಲಿ ಇರುತ್ತಿರುವ ಪತಿವ್ರತೆಗಳಾದ ಹೆಂಡರುಗಳನ್ನು ಕೂಡುತ್ತಾರೆ, ಮತ್ತು ಸಕಲ ಐಶ್ವರ್ಯದಿಂದ ಯುಕ್ತವಾದಂಥವರುಗಳಾಗಿ ಈ ಭಾಗ್ಯವಂತರು ವಾಚಾಮಗೋಚರವಾದ ಸುಖವನ್ನು ಅನುಭವಿಸುತ್ತಾರೆ.

ಮೂ। ಅನೇವಂಭಾವೋಪಿ ಪುರುಷಾಧಮತ್ವ ಮಾವೇದಯತಿ ॥ ೧೫೪ ॥

ಟೀಕಾ ॥ ಅನೇವಮಿತಿ। ಏವಮುಕ್ತವಿಧಃ ಭಾವಃ ಸ್ವಭಾವಃ ದೇಶಾಂತರ ಸಂಚಾರೇಣಧನಾರ್ಜನರೂಪಃ ಸನಭವತೀತ್ಯನೇವಂಭಾವಃ ಗೃಹಏವಸ್ಥಿತಿರಿತ್ಯರ್ಥಃ ॥

ಅರ್ಥ ॥ ಇದಕ್ಕೆ ವಿಪರೀತವಾದ ನಡತೆಯು (ಅಂದರೆ ಮನೆಯಲ್ಲೇ ಸರ್ವದಾ ಕೂತಿರೋಣ) ಮನುಷ್ಯನ ಹೇಡಿತನವನ್ನು ತೋರಿಸುತ್ತದೆ.

ಮೂ। ತಥಾಹಿ।

ಶ್ಲೋ। ಅಕಿಂಚನ್ಯಾದತಿ ಪರಿಚಯಾಜ್ಜಾಯಯೋಪೇಕ್ಷಮಾಣೋ ಭೂಪಾಲಾನಾಮನನುಸರಣಾದ್ಬಿಭ್ಯದೇವಾಖಿಲೇಭ್ಯಃ। ಗೇಹೇತಿಷ್ಠನ್ ಕುಮತಿರಲಸಃ ಕೂಪಕೂರ್ಮ್ಯಃ ಸಧರ್ಮಾಕಿಂಜಾನೀತೇಭುವನ ಚರಿತ್ರಂ ಕಿಂ ಸುಖಂಚೋಪಭುಙ್ತೆ ॥ ೧೫೫ ॥

ಟೀಕಾ ॥ ಅಕಿಂಚನ್ಯಾದಿತಿ ॥ ಅಲಸಃ–ಅತ ಏವ ಗೇಹೆತಿಷ್ಠನ್ ಕೂಪೆ ಕೂರ್ಮ್ಯಸ್ಸಮಾನಃ ಧರ್ಮಃ ಯಸ್ಯಸಃ– ಅತಏವಚ ನಾಸ್ತಿಕಿಂಚನಯಸ್ಯ ತಸ್ಯ ಭಾವಾದಾಕಿಂಚನ್ಯಾ ದ್ದಾರಿದ್ರ್ಯಾತ್– ಅತಿಪರಿಚಯಾಚ್ಚ ಹೇತೋಃ ಜಾಯಯಾ ಭಾರ್ಯಯಾ ಉಪೇಕ್ಷ್ಯಮಾಣಃ–ಕಿಂಚಭೂಪಾಲಾನಾಂ ಅನನುಸರಣಾತ್ ಸಮೀಪ ಸಂಚಾರಾಭಾವಾದ್ಧೇತೋಃ– ಅಖಿಲೇಭ್ಯಃ–ನಶ್ವಧಿಕೃತ ಪುರುಷೇಭ್ಯ ಏವ– ಬಿಭ್ಯತ್ ತ್ರಸ್ಯತ್ಸನ್–ಕುಮತಿಃ ದುರ್ಬುದ್ಧಿಃ ಜನಃ ಕಿಂಭುವನೆ ವರ್ತಮಾನಂ ಚರಿತಂ ವೃತ್ತಾಂತಂ ಜಾನೀತೆ–ಕಿಂ ಸುಖಂವಾಉಪಭುಙ್ತೆ ನೋಭಯ ಮಪೀತ್ಯರ್ಥಃ ॥

ಅರ್ಥ ॥ ಭಾವಿಯೊಳಗಿನ ಆಮೆಯಂತೆ ಮನೆಯಲ್ಲಿ ಕೂತುಕೊಳ್ಳುವ ಸೋಮಾರಿಯು ದರಿದ್ರನಾಗಿ ಆ ಕಾರಣದಿಂದಲೂ ಬಹಳ ಬಳಿಕೆಯ ಕಾರಣದಿಂದಲೂ ಹೆಂಡತಿಯಿಂದ ಅನಾದರಿಸಲ್ಪಡುತ್ತಾನೆ. ಮತ್ತು ಅರಸುಗಳ ಬಳಿಯಲ್ಲಿ ಹೋಗದವರಿಂದ ಸಕಲ ಜನರಿಗೂ ಅಂಜುವಂಥವನಾಗುತ್ತಾನೆ. ಅಂಥವನು ಲೋಕದ ವೃತ್ತಾಂತಯೇನು ಬಲ್ಲನು? ಏನು ಸೌಖ್ಯ ಅನುಭವಿಸ್ಯಾನು? ಎರಡೂ ಇಲ್ಲೆಂಬ ಭಾವವು.

ಮೂ। *ತಥಾಹಿ।

ಶ್ಲೋ।ವ್ಯಾಪಾರಾಂತರ†ಮುದ್ದಿಶ್ಯವೀಕ್ಷಮಾಣೋವಧೂಮುಖಂ।
ಯೋಗೃಹೇಷ್ವೇವನಿದ್ರಾತಿ ದರಿದ್ರಾತಿ ಸದುರ್ಮತಿಃ ॥ ೧೫೬ ॥

ಟೀಕಾ ॥ ವ್ಯಾಪಾರೇತಿ। ಯಃ ಕುಬುದ್ಧಿಃ—ವ್ಯಾಪಾರಾಂತರಂನಿಷ್ಪ್ರಯೋಜನಂ ಉದ್ದಿಶ್ಯ ವ್ಯಾಜೀಕೃತ್ಯ—ವಧ್ವಾಃ ಭಾರ್ಯಾಯಾಃ ಮುಖಂವೀಕ್ಷಮಾಣಸ್ಸನ್ ಗೃಹೇಷು ನಿದ್ರಾತ್ಯೇವ— ಸಃದುರ್ಮತಿಃ ದುರ್ಬುದ್ಧಿಃ—ದರಿದ್ರಾತಿ ಅತಿದರಿದ್ರೋಭವತೀತ್ಯರ್ಥಃ ॥

ಅರ್ಥ ॥ ಯಾವದಾದರೂ ಒಂದು ನಿರರ್ಥಕವಾದ ಕೆಲಸದ ನೆವನಮಾಡಿ ಹೆಂಡತಿಯ ಮೋರೆ ನೋಡುವಂಥಾತನಾಗಿ ಮನೆಯಲ್ಲೇ ಮಲಗುವ ಮೂರ್ಖನು ದರಿದ್ರನಾಗುವನು.

ಮೂ। ಇದಂಚಾವಧೀಯತಾಂ।

ಶ್ಲೋ। ಇಚ್ಛೇದ್ಯಸ್ತು ಸುಖಂ ನಿವಸ್ತುಮವನೌಗಚ್ಛೇತ್ಸರಾಜ್ಞಸ್ಸಭಾಂ ಕಲ್ಯಾಣೀಂಗಿರಮೇವಸಂಸದಿವದೇ‡ತ್ಕಾರ್ಯೇಷು ದದ್ಯಾತ್ಕೃತೀ। ಅಕ್ಲೇಶಾದ್ಧನ ಮರ್ಜಯೇದಧಿಪತೇ ರಾವರ್ಜಯೇದ್ವಲ್ಲಭಾನ್ ಕುರ್ವೀತೋಪಕೃತಿಂಜನಸ್ಯ §ಸಮಯೆ ಕಸ್ಯಾಪಿನಾಪಕ್ರಿಯಾಂ ॥ ೧೫೭ ॥

ಟೀಕಾ ॥ ಇಚ್ಛೇದಿತಿ। ಯಃ ಕೃತೀಕುಶಲಃ—ಅತಏವ ಅವನೌಭುವಿ—ಸುಖಂ ಯಥಾತಥಾ—ನಿವಸ್ತುಂ ಜೀವಿತುಂ—ಇಚ್ಛೇತ್—ಸಕೃತೀ—ರಾಜ್ಞಃ ಸಭಾಂಗಚ್ಛೇತ್— ಸಂಸದಿ ರಾಜಸಭಾಯಾಂ— ಕಲ್ಯಾಣೀಂ ಸ್ವಪರಾನ್ಯತರ ಸುಖಕರೀಂವಾಚಂಗಿರಂವದೇತ್—ಕಾರ್ಯೇಷು ಕಾರ್ಯಕಾಲೇಷು—ದದ್ಯಾತ್ ರಾಜವಲ್ಲಭೇಭ್ಯೋಧನ ವಸ್ತ್ರಾದಿಕಮಿತಿಶೇಷಃ— ತುಷ್ಟೇಪಿರಾಜ್ಞಿ ರಾಜವಲ್ಲಭಾಃ ಅನಾವರ್ಜನೇಕಾರ್ಯಾಣಿ ವಿಘಟಯಂತೀತಿ ಭಾವಃ—ಏವಂ ಸತಿ—ಅಕ್ಲೇಶಾತ್ ಕ್ಲೇಶಂ ವಿನೈವ—ಧನಮರ್ಜಯೇತ್ ಧನಾರ್ಜನಾನಂತರಮಪಿ—ಅಧಿಪತೇಃ ರಾಜ್ಞಃ ವಲ್ಲಭಾನ್ ಪ್ರಿಯಾನ್—ಆವರ್ಜಯೇತ್ ಅನುಕೂಲಾನ್ ಕುರ್ಯಾತ್—ಜನಸ್ಯ ಉಪಕೃತಿಂ ಯಥಾಶಕ್ತಿ ಉಪಕಾರಮೇವ ಕುರ್ವೀತ—ಕಸ್ಯಾಪಿಶತ್ರೋರಪೀತ್ಯರ್ಥಃ—ಅಪಕ್ರಿಯಾಂ ಅಪಕಾರಂನಜನಯೇತ್ ॥

ಅರ್ಥ। ಇದನ್ನು ನಿಧಾನಿಸು : ಧರೆಯಲ್ಲಿ ಸುಖವಾಗಿ ಬಾಳುವೆಮಾಡಬೇಕೆಂಬ ಬಯಕೆಯುಳ್ಳವನು ಅರಸಿನ ಸಭೆಗೆ ಹೋಗಿ, ಸಭೆಯಲ್ಲಿ ತನಗೂ ಅನ್ಯರಿಗೂ ಹಿತಕರವಾದ ಮಾತುಗಳನ್ನಾಡಿ ಕೆಲಸಬಿದ್ದಾಗ್ಯೆ ಅರಸಿನ ಮಿತ್ರರಿಗೆ ದ್ರವ್ಯ ವಸ್ತ್ರಮೊದಲಾದ್ದನ್ನು

---

* ಕಿಂಚೇತಿ ಪಾಠಾಂತರಂ ॥ † ಉತ್ಸೃಜ್ಯ ಇತಿಪಾಠಾಂತರಂ ॥ ‡ ಕಾರ್ಯಂ ವಿದಧ್ಯಾತ್ § ಜನಯೇತ್ ಇತಿಪಾಠಾಂತರೇ ॥

ಕೊಟ್ಟು ಸುಲಭವಾಗಿ ದ್ರವ್ಯಸಂಪಾದಿಸಬೇಕು. ಮತ್ತು ನಂತರ ಸಹ ರಾಜಮಿತ್ರರನ್ನು ಅನುಕೂಲಿಸಿಕೊಳ್ಳಬೇಕು, ವೇಳೆ ಬಿದ್ದಾಗ್ಯೆ ಜನರಿಗೆ ಉಪಕಾರವಮಾಡಬೇಕು ಯಾರಿಗೂ ಅಪಕಾರ ಮಾಡಬಾರದು.

ಮೂ। ಅನ್ಯಚ್ಛೇದಮವಧಾರಣೀಯಂ* ॥

ಶ್ಲೋ। ಅಯುಕ್ತಂ ಯುಕ್ತಂ ವಾಯದಭಿಹಿತಮಜ್ಞೇನ ವಿಭು
ನಾಸ್ತುಯಾದೇತನ್ನಿತ್ಯಂ ಜಡಮಪಿಗುರುಂ ತಸ್ಯವಿನುಯಾತ್।
ವಿವಿತ್ಸುರ್ನೈಸ್ಸ್ಪೃಹ್ಯಂ ಕಥಮಪಿ ಸಭಾಯಾಮಭಿನಯೇತ್ಸ್ವಕಾ
ರ್ಯಂ ಸಂತುಷ್ಟೇ ಕ್ಷಿತಿಭೃತಿರಹಸ್ಯೇವ ಕಥಯೇತ್ ॥ ೧೫೪ ॥

ಟೀಕಾ ॥ ಅನ್ಯದಿತಿ । ಅವಧಾರಣೀಯಂ ಸಾವಧಾನಂ ಶ್ರೋತವ್ಯಂ॥ ಅಯುಕ್ತಮಿತಿ ॥ ಅಜ್ಞೇನ ಸಂಪದುನ್ಮತ್ತೇನ– ಮೌಢ್ಯಂ ರಾಜ್ಞಾಂ ಆಸ್ವಸ್ಟಿನೈಸರ್ಗಿಕ ಮಿತಿಭಾವಃ ವಿಭುನಾರಾಜ್ಞಾ–ಅಯುಕ್ತಂ ಅನುಚಿತಂ ವಾಯುಕ್ತಂ ವಾಯದ್ವಾಕ್ಯಂ–ಅಭಿಹಿತಂ ಉಕ್ತಂ–ತದೇತದ್ವಾಕ್ಯಂ ನಿತ್ಯಂ ಸ್ತುಯಾತ್ ಸಮ್ಯಗುಕ್ತಮಿತಿಶ್ಲಾಘೇತ– ಜಡಮಪಿತಸ್ಯರಾಜ್ಞಃ ಗುರುಂವಿನುಯಾತ್ ಸ್ತುಯಾತ್– ವಿವಿತ್ಸುಃ ರಾಜ್ಞಃ ಅಭಿಪ್ರಾಯಂ ಲಬ್ಧಂ ಅಲಬ್ಧಂ ವಾವೇತ್ತುಮಿಚ್ಛುಸ್ಸನ್–ನಿಸ್ಸ್ಪೃಹಸ್ಯಭಾವಃ ನೈಸ್ಸ್ಪೃಹ್ಯಂ ಕಥಮಪಿ ಸರ್ವಥಾ ಸಭಾಯಾಂ– ಅಭಿನಯೇತ್– ಪ್ರಕಟಯೇತ್– ರಾಜ್ಞಾಂ ಶತ್ರುಪ್ರಾಯತ್ವಾತ್ಪ್ರವೇಶ ಏವ ಅನ್ಯಥಾ ದುರ್ಲಭಸ್ಸ್ಯಾದಿತಿಭಾವಃ–ಕ್ಷಿತಿಭೃತಿರಾಜ್ಞಿ ಸಂತುಷ್ಟೇ ಸತಿ– ಸ್ವಾನುಸರಣೇನೇತಿಶೇಷಃ– ಸ್ವಸ್ಯಕಾರ್ಯಂ ಪ್ರಯೋಜನಂ–ರಹಸ್ಯೇವ ಕಥಯೇತ್– ಕದಾಚಿತ್ಪ್ರತ್ಯಾಖ್ಯಾನೇವಮಾನನಸ್ಯ ಗೋಪ್ಯತ್ವಾದಿತಿಭಾವಃ ॥

ಅರ್ಥ॥ ಮತ್ತು ಹೇಳುತ್ತೇನೆ, ಲಾಲಿಸಿ ಕೇಳು. ತಿಳಿವು ಇಲ್ಲದ ಅರಸನು ಹೇಳಿದ್ದು ಸರಿಯಾಗಲಿ, ತಪ್ಪಾಗಲೀ ಅದನ್ನು—ಬುದ್ಧೀ ಒಡೆಯಾ, ಸನ್ನಿಧಾನದಿಂದ ಹೇಳೋಣಾದಿ ಮಾತು ಯುಕ್ತವೇ ಎಂದು--ಶ್ಲಾಘಿಸತಕ್ಕದ್ದು. ಆ ಅರಸಿನ ಗುರು ಮೂರ್ಖನಾದರು ಅವನನ್ನು ಹೊಗಳಿಕೆ ಮಾಡತಕ್ಕದ್ದು. ಅರಸಿನ ಮನಸ್ಸಿನೊಳಗಿನ ಇಂಗಿತವನ್ನು ತಿಳಿದು ಕೊಳ್ಳಲಪೇಕ್ಷೆಯುಳ್ಳವನು, ತಾನು ನಿಷ್ಕಾಮನಾಗಿ ಬಂದವನೆಂದು ಸಭೆಯಲ್ಲಿ ಯಾವ ತರಪದಿಂದಲಾದರು ಕಾಣಿಸಿ ಕೊಳ್ಳಬೇಕು. ಮತ್ತು ತನ್ನ ಕೆಲಸವನ್ನು ಅರಸಿನ ಒಲವು ಆದ ಮೇಲೆ ಮರೆಯಾಗಿ ಅಂದರೆ ಏಕಾಂತದಲ್ಲಿ ಅರಿಕೆ ಮಾಡಬೇಕು.

ಮೂ। ಇತ್ಯಲಂ ಪ್ರಸಕ್ತಾನು ಪ್ರಸಕ್ತ್ಯೇತಿ ದೂರತೋ ವಿಮಾನ
ಮಾನರ್ಯ ಸಾನಂದಂ ಸಾಂಜಲಿಬಂಧಂ ॥ ೧೫೫ ॥

ಟೀಕಾ ॥ ಇತೀತಿ ॥ ಪ್ರಸಕ್ತಸ್ಯ ಗುರ್ಜರದೇಶಸ್ಯ ದೋಷೋದ್ಧಾರಸ್ಯ ಅನುಪ್ರಸಕ್ತ್ಯಾ– ಮರುಷೋ

---

* ಅವಧಾರ್ಯತಾ ಮಿತಿಪಾಠಾಂತರಂ ॥

ತ್ರಮಾಧಮತ್ವನಿರೂಪಣೇನ–ಅಲಂ ಪರ್ಯಾಪ್ತಮಿತ್ಯರ್ಥಃ ||

ಅರ್ಥ || ಪ್ರಸಂಗಾನುಸಾರವಾಗಿ ಇಷ್ಟು ಹೇಳಿದ್ದು ಸಾಕೆಂದು- ದೂರಕ್ಕೆ ವಿಮಾನ ವನ್ನು ನಡಿಸಿ ಸಂತೋಷಗೊಂಡು ಕೈಜೋಡಿಸಿ ವಿಶ್ವಾವಸು ಹೇಳುತ್ತಾನೆ:

ಮೂ। ಶ್ಲೋ। ಕೃಷ್ಣಾಶ್ಲೇಷವಿಶೇಷಿತಾಸಿತರುಚೆ ಕಾಳಿಂದಿ ತುಭ್ಯಂನಮಃ ಕುಂಜೇಭ್ಯಶ್ಶ್ರಿತತಾವಕಾಂಬುಕಣಿಕಾಪುಂಜೇಭ್ಯ ಏಷೋಂಜಲಿಃ । ಗೋಪೀಭ್ಯಃಪರಿಲಿಪ್ಸಯಾಮುರರಿಪೋಸ್ತೇ ಷುಸ್ಥಿತಾಭ್ಯೋನತಿರ್ನಾಥಾಯಾಭಿರುಪಾಸಿತಾಯಚ ನಮೋವಾ ಕಾನ ಧೀಯೀಮಹಿ || ೧೬೦ ||

ಟೀಕಾ || ಕೃಷ್ಣೇತಿ || ಶ್ರೀ ಕೃಷ್ಣಸ್ಯ ಆಶ್ಲೇಷೇಣ ಜಲಕ್ರೀಡಾ ದೌಸಂಬಂಧೇನ ಆಲಿಂಗನೇನಚ ವಿಶೇಷಿತಾ ಬಹುಳಿತಾ ಅಸಿತಾರುಚಿಃ ಯಸ್ಯಾಸ್ತಸ್ಯಾಸ್ಸಂಬುದ್ಧಿಃ– ಹೇಕಾಳಿಂದಿ ಯಮುನೇ– ಕೃಷ್ಣಾಷ್ಟ ಮಹಿಷೀಣಾಂ ಅನ್ಯತಮೇಚ–ತುಭ್ಯಂ ನಮಃ–ಶ್ರಿತಾಃ ಸಕ್ತಾಃ ತಾವಕಾಂಬುಕಣಿಕಾ ಪುಂಜಾ ಸ್ತ್ವದಿ ಯ ಜಲಕಣರಾಶಯೋಯೈಸ್ತೇಭ್ಯಃ ಕುಂಜೇಭ್ಯಃ–ಏಷಃ ಅಂಜಲಿಃ ನಮಸ್ಕಾರಃ– ಮುರರಿಪೋಃ ಕೃಷ್ಣ ಸ್ಯ ಪರಿಲಿಪ್ಸಯಾ ಆಲಿಂಗನೇಚ್ಛಯಾ–ತೇಷು ಕುಂಜೇಷು ಸ್ಥಿತಾಭ್ಯಃ ಗೋಪೀಭ್ಯಃ ಗೋಪಾಂಗನಾಭ್ಯಃ– ನತಿಃ ನಮಸ್ಕಾರಃ–ಆಭಿಃ ಗೋಪೀಭಿರುಪಾಸಿತಾಯ ಸೇವಿತಾಯ ನಮೋವಾಕಂ– ನಮ ಇತಿವಾಕ್ಯಾನಿ– ಅ ಧೀಯೀಮಹಿ–ಪುನಃ ಪುನರುಚ್ಚರೇಮ ||

ಅರ್ಥ || ಶ್ರೀ ಕೃಷ್ಣನ ಆಲಿಂಗನದಿಂದ ಅಧಿಕವಾದ ಕಪ್ಪು ಬಣ್ಣ ಉಳ್ಳವಳಾದಂಥ ಹೇ ಯಮುನಾ ನದಿಯೇ ನಿನ್ನನ್ನು ನಮಸ್ಕಾರ ಮಾಡುತ್ತೇನೆ. ನಿನ್ನ ನೀರಿನತುಂತುರು ಗಳ ಗುಂಪಿನಿಂದ ಆಶ್ರಯಿಸಲ್ಪಟ್ಟ ಲತಾಗೃಹಗಳಿಗೆ ಕೈಮುಗಿಯುತ್ತೇನೆ. ಆ ಶ್ರೀ ಕೃಷ್ಣನನ್ನು ಅಲಿಂಗಿಸಬೇಕೆಂಬ ಆತುರದಿಂದ ಆ ಲತಾಗೃಹಗಳಲ್ಲಿ ಕೂತಿರುವ ಗೋಪ ಸ್ತ್ರೀಯರನ್ನು ವಂದನೆ ಮಾಡುತ್ತೇನೆ; ಅವರಿಂದ ಸೇವಿಸಲ್ಪಟ್ಟಂಥ ಒಡೆಯ ನನ್ನು ತಿರುತಿರುಗಿ ಶರಣವನ್ನು ಮಾಡುತ್ತೇನೆ.

ಕೃಶಾನುಃ ||

ಮೂ। ಕೃತಂಸಖೇ *ಜಾರಚೋರ ಶಿಖಾಮಣೇಃ ಕೃಷ್ಣಸ್ಯ ಜಗ ದತಿ ಸಂಧಾತುರನುಸಂಧಾನೇನ || ೧೬೧ ||

ಟೀಕಾ || ಕೃತಮಿತಿ || ಜಾರಾಣಾಂ ಚೋರಾಣಾಂಚ ಶಿಖಾಮಣೇಃ ಶ್ರೇಷ್ಠಸ್ಯೇತ್ಯರ್ಥಃ– ಜಗನ್ಮಾತ್ರಸ್ಯ ಅತಿಸಂಧಾತುಃ ವಂಚಕಸ್ಯ– ಅತ್ಯಂತಂ ಸಂಧಾನಂ ಸಂಸೃಷ್ಟಿಃ ಪಾಲನಂಚ ಅತಿಸಂಧಾನಂತಿರೋ ಧಾನಂ ತತ್ತ್ರಯಕರ್ತುಃ– ಅನುಸಂಧಾನೇನ– ಕೃತಂ ಅಲಮಿತ್ಯರ್ಥಃ ||

---

* ಚೋರಜಾರಶಿರೋಮಣೇರಿತಿಪಾಠಾಂತರಂ ||

ಅರ್ಥ ॥ ಮಿತ್ರನೇ ಸಾಕು, ಸಾಕು, ಬಿಡು, ಹಾದರಿಗರಲ್ಲಿ ಮತ್ತು ಕಳ್ಳರಲ್ಲಿ ಹಿರಿಯನಾದ ಇದೀ ಲೋಕಕ್ಕೆ ಠಕ್ಕಿಸಿದ ಶ್ರೀ ಕೃಷ್ಣನ ಸ್ತುತಿ ಮಾಡಿದ್ದು!

ಮೂ । ತಥಾಹಿ। ಶ್ಲೋ। ಲುಂಠಿತ್ವಾನವನೀತಮನ್ಯಸದನೇ ಲೋಲೇಕ್ಷಣೋ ಭಕ್ಷಯನ್ ಗೋಪೀಭಿಃ ಪರಿಕೃಷ್ಯ ಮಾತೃಸವಿಧಂ ನೀತೋಮುಕುಂದಸ್ತಯಾ। ಲುಂಠೀರ್ಮಾನವನೀತಮಿತ್ಯಭಿಹಿತೋಽಪ್ಯೇತದ್ವ್ಯ ಲುಂಠೀಃ ಕಿಮಿತ್ಯುಕ್ತೋ ಮಾನವನೀತ ಮೇವಹೃತ ಮಿತ್ಯಾಗೋಜನ ನ್ಯಾಂನ್ಯಧಾತ್ ॥ ೧೬೭ ॥

ಟೀಕಾ ॥ ಲುಂಠಿತ್ವೇತಿ ॥ ಅನ್ಯಸದನೆ ಪರ ಗೃಹೇ– ನವನೀತಂಲುಂಠಿತ್ವಾ ಮುಷಿತ್ವಾ– ಲೋಲೇಕ್ಷಣಃ ಚೌರ್ಯಾತ್ಚಕಿತರಾಕ್ಷಃ– ಭಕ್ಷಯನ್– ಅತಏವ ಪರಿಕೃಷ್ಯ– ಗೋಪೀಭಿರ್ಮಾತುರ್ಯಶೋದಾಯಾಃ ಸವಿಧಂ ಸಮೀಪಂ ನೀತಃ–ಏಷಃ ಮುಕುಂದಃ ಕೃಷ್ಣಃ–ನವನೀತಂ ಮಾಲುಂಠೀಃ ನಾಪಹರ– ಮಾನವೈರ್ನೀತಂ ನವನೀತಂ ಲುಂಠೀರಿತ್ಯುಕ್ತ ಪ್ರಕಾರಂ ಪೂರ್ವಂ ಅಭಿಹಿತೋಽಪಿ– ಹೇಕೃಷ್ಣ–ತ್ವಂ ಏತನ್ನವನೀತಂ ಕಿಂಕುತಃ ವ್ಯಲುಂಠೀಃ ಹೃತವಾನಸಿ ಇತ್ಯುಕ್ತಪ್ರಕಾರಂ ತಯಾಮಾತ್ರಾ ಉಕ್ತಸ್ಸನ್–ತಾಂ ಪ್ರತಿ–ಮಾನವನೀತ ಮೇವಹೃತಂ–ನವನೀತಂ ಮಾಹೃತಮಿತಿಚ– ಇತ್ಯುಕ್ತ ಪ್ರಕಾರೇಣ ಆಗಃ ಅಪರಾಧಂ–ಜನನ್ಯಾಂ ಮಾತರಿ–ನ್ಯಧಾತ್–ನಿಹಿತವಾನ್ ॥

ಅರ್ಥ ॥ ಹೆರರ ಮನೆಯಲ್ಲಿ ಬೆಂಣೆಯನ್ನು ಕಳವು ಮಾಡಿ ತಿಂದು, ತನ್ನನ್ನು ಯಾರಾದರೂ ನೋಡ್ಯಾರೆಂಬ ಅಂಜಿಕೆಯಿಂದ ಅತ್ತಯಿತ್ತ ಕಣ್ಣು ಆಡಿಸುತಿರುವ ಕೃಷ್ಣನನ್ನು ಗೋಪಾಂಗನೆಯರು ಹಿಡಿದು, ತಾಯಿಯಾದ ಯಶೋದೆಯ ಬಳಿಗೆ ತರಲಾಗಿ (ಲುಂಠೀರ್ಮಾನವನೀತಮಿತಿ ಅಂದರೆ) ಬೆಂಣೆ ಕಳವು ಮಾಡಬೇಡೆಂತಾ ಹೇಳಿದಾಗ್ಯೂ, ಪುನಹಾಕಳವು ಮಾಡಿದಿಯಾ ಇದೇನುಯಂತ ಅವಳು ಕೇಳಲು, ಮಾನವ ನೀತವಂನ್ನೆ (ಅಂದರೆ ಮನುಷ್ಯರು ವಯ್ಯುತಿದದ್ದು) ಕಸಕೊಂಡೆನು ಹೊರತು ನವನೀತ ಕಸಕೊಳ್ಳಲಿಲ್ಲಯಂತ ಉತರ ಕೊಟ್ಟು, ತಪ್ಪು ತಾಯಿಯ ಮೇಲೇ ಇಟ್ಟನು.

ಮೂ । ಕಿಂಚ ।

ಶ್ಲೋ । ಅಂಸೇಸಲೀಲಮಧಿರೋಪ್ಯಶುಕಂ ಸ್ವಹಸ್ತಾದ್ಗೋಪ್ಯಾಭಯಾಕುಲದೃಶಃ ಕುತುಕೀಮುಕುಂದಃ। ಅಂಸಂಗತಂ ಶುಕಮಿಹಾಪನ ಯೇತಿವಾಚಂ ತಸ್ಯಾನಿಶಮ್ಯಸತದಂಶುಕಮಾಚಕರ್ಷ ॥ ೧೬೨ ॥

ಟೀಕಾ ॥ ಅಂಸೇತಿ। ಸಕೃಷ್ಣಃ–ಸ್ವಹಸ್ತಾಚ್ಛುಕಂಕಂಚಿತ್–ಭಯಾಕುಲದೃಶಃ ಗೋಪ್ಯಾಃ ಕಸ್ಯಾಶ್ಚಿದಂಸೆ ಭುಜಾಗ್ರೇ– ಸಲೀಲಂ ಯಥಾತಥಾ– ಅಧಿರೋಪ್ಯನಿಧಾಯ– ಅಂಸಂಭುಜಾಗ್ರಂ ಗತಂಶುಕಂ– ಅಂ– ಇತ್ಯಕ್ಷರೇಣ ಸಂಗತಂ ಶುಕಂ ಅಂಶುಕಂ ವಸ್ತ್ರಂಚ–ಇಹಇದಾನೀಂ ಅಪನಯನಿಸ್ಸಾರಯ–

ಇತ್ಯುಕ್ತಪ್ರಕಾರಃ ತಸ್ಯಾಃ ಗೋಪ್ಯಾಃ ವಾಚಂ ನಿಶಮ್ಯ—ತಥಾಕರೋಮೀತ್ಯುಕ್ತ್ವಾ ತತ್ಪೂರ್ವೋಕ್ತಂ ಅಂಶುಕಂ—ಅಂವಿಷ್ಣಂ ಪ್ರತಿಶುಕಂ—ವಿಷ್ಣುಕೀರ್ತನಶುಕಂಚ— ಆಚಕರ್ಷ—ಅಪಹರತಿಸ್ಮ ||

ಅರ್ಥ || ಈ ಕೃಷ್ಣನು ದುಡುಕುತನದಿಂದ ತನ್ನ ಕೈಯಲ್ಲಿದ್ದ ಒಂದು ಶುಕಂ ಅಂದರೆ ಗಿಳಿಯನ್ನು- ಅಳುಕಿನಿಂದ ಚಲನೆಯುಂಟಾದ ಕಣ್ಣುಗಳುಳ್ಳ ಒಬ್ಬ ಗೊಲ್ಲತಿಯ ತೋಳಿನ ಮೇಲಿಡಲು- ಅಂಸಂಗತಂಶುಕ ಮಿಹಾಪನಯ ಎಂತ ಅವಳು ಉಸುರಿದ ಮಾತು ಕೇಳಿ, ಅವಳ ತೋಳಿನ ಮೇಲಿಂದ ಶೀರೆಯ ಶರಗು ವಾರೆ ಮಾಡಿಬಿಟ್ಟನು. ( ಈ ಶ್ಲೋಕದಲ್ಲಿ ಅಂಸಂಗತಂ ಶುಕಂ ಎಂಬ ಶಬ್ದಕ್ಕೆ ದ್ವ್ಯರ್ಥ ಉಂಟು. ೧ ಅಂಸಂಗತಂಶುಕಂ ಅಂದರೆ ತೋಳಿನ ಮೇಲೆ ಕೂತ ಗಿಳಿಯು. ೨ ಅಂ ಎಂಬ ಅಕ್ಷರದಿಂದ ಸಂಗತಂ ಕೂಡಿರುವ ಶುಕಂ ಅಂದರೆ ಅಂಶುಕಂ ವಸ್ತ್ರವು.)

ಮೂ। ಅಪಿಚ।

ಶ್ಲೋ। ನೀತ್ವಾರಾಧಿಕಯಾನಿಶಾಂ ಮುರರಿಪುಃ ಪ್ರಾತರ್ಗೃಹಾ ನಾಗತಸ್ತ್ವಂಮಾಭೂರಪರಾಧಿಕಃ *ಪುನರಿತಃ ಪ್ರೋಕ್ತೋಪಿ ಪೂರ್ವಂಮಯಾ। ಕಸ್ಮಾದೇವಮಭೂರಿತಿ ಶ್ರಿತರುಷಾ ನಿರ್ಭ ರ್ತ್ಸಿತೋನೀಲಯಾ ತ್ವದ್ವಾಚೈವ ಸರಾಧಿಕೋಹ ಮಿತಿತಾಂ ವ್ಯಾಮೋಹಯನ್ಮಾಯಯಾ || ೧೪೬ ||

ಟೀಕಾ || ನೀತ್ವೇತಿ। ರಾಧಿಕಯಾ ನಾಮಗೋಪ್ಯಾಸಹನಿಶಾಂ ಅತ್ಯಂತ ಸಂಯೋಗೇದ್ವಿತೀಯಾ— ನೀತ್ವಾ—ಯಾವತೀಂ ರಾತ್ರಿಂ ತಾಮುಪಭುಜ್ಯೇತ್ಯರ್ಥಃ—ಪ್ರಾತಃಗೃಹಾನ್ ಪ್ರತ್ಯಾಗತಃ ಗೃಹಾಃ ಪುಂಸಿಚ ಭೂಮ್ನ್ಯೇವೇತ್ಯನುಶಾಸನಾತ್-ಬಹುತ್ವೇಪುಂಸ್ತ್ವಂ—ಮುರರಿಪುಃ ಶ್ರೀಕೃಷ್ಣಃ-ತ್ವಂಪುನಃ—ಅಪರಾಧಃ ಅಸ್ಯಾಸ್ಸಂಭೋಗಃ ಅಸ್ಯಾಸ್ತೀತಿ ಅಪರಾಧಿ—ಸ ಏವ ಅಪರಾಧಿಕಃ— ಅಪಗತಾರಾಧಿಕಾಯಸ್ಮಾತ್ಸಃ ಅಪರಾಧಿಕ ಇತಿಚಮಾಭೂಃ—ಇತ್ಯುಕ್ತಪ್ರಕಾರಂ ಪೂರ್ವಂಮಯಾ ಪ್ರೋಕ್ತೋಪಿಸನ್—ಕಸ್ಮಾತ್ಕಾರಣಾತ್ ಏವಂ ಅಪರಾಧಿಕಃ ಇತ್ಯುಕ್ತ್ವಾ— ಶ್ರಿತರುಷಾಗೃಹೀತಕೋಪಯಾ ನೀಲಯಾ ದೇವ್ಯಾ—ನಿರ್ಭರ್ತ್ಸಿತಃ ತರ್ಜಿತ ಸ್ಸನ್—ಮಾಯಯಾ ಅಘಟಿತಘಟನಾಪಟೀಯಸ್ಯಾ ಉಪಲಕ್ಷಿತಃ— ಹೇನೀಲೇ ತವವಾಚೈವ ಅಪರಾಧಿಕೋಮಾಭೂರಿತ್ಯಾಕಾರಕಯಾ ಅಹಂಸರಾಧಿಕ ಇತಿ— ತಾಂನೀಲಾಂ ವ್ಯಾಮೋಹಯತ್ ||

ಅರ್ಥ || ಒಂದು ರಾತ್ರೆ ರಾಧಿಕಾ ಎಂಬ ಹೆಸರಿನ ಗೊಲ್ಲತಿಯಿಂದ ಪ್ರೈಯಲ್ಪಟ್ಟು, ಬೆಳಿಗ್ಗೆ ಮನೆಗೆ ತಿರಿಗಿ ಬಂದ ಕೃಷ್ಣನಿಗೆ- ಮಾಭೂರಪರಾಧಿಕಃ ಅಂದರೆ- ತಪ್ಪುಗಾರ ನಾಗ ಬೇಡ ಎಂತ ನಿನಗೆ ನಾನು ಹೇಳಿದ್ದಾಗ್ಯೂ, ಪುನಹಾ ಹೀಗ್ಯಾಕೆ ಮಾಡಿದಿ ಎಂತ ಶಿಟ್ಟಿನಿಂದ ನೀಲಾದೇವಿಯು ಗದರಿಸಲಾಗಿ, ಮಾಭೂರಪರಾಧಿಕಃ ಅಂದರೆ ರಾಧೆಯಿಂದ ಅಗಲಿರ ಬೇಡೆಂತ ನೀನು ಹೇಳಿದ ಮಾತಿನ ಪ್ರಕಾರ ನಾನು ಸರಾಧಿಕನಾದೆನು ಎಂದು

---

* ಪುನರಿತೀತಿಪಾಠಾಂತರಂ ||

ವಂಚನೆ ನುಡಿಯಿಂದ ನೀಲಾದೇವಿಯನ್ನು ಮರುಳು ಮಾಡಿದನು.

(ಈ ಶ್ಲೋಕದಲ್ಲಿ ಮಾಭೂರಪರಾಧಿಕಃ ಎಂಬ ವಾಕ್ಯಕ್ಕೆ ಅಪರಾಧಿಕಃ ಅಂದರೆ ತಪ್ಪುಗಾರನಾಗ ಬೇಡಾ--ಎಂಬುವದು ಒಂದು, ರಾಧೆಯಿಂದ ಅಗಲಿದವನಾಗ ಬೇಡ ಎಂಬುವದು ಮತ್ತೊಂದು-- ಹೀಗೆ ಎರಡು ಅರ್ಥಗಳಾಗುತ್ತವೆ.)

## ವಿಶ್ವಾವಸುಃ ||

ಮೂ। ವಯಸ್ಯ ಮೈವಂವಾದೀಃ || ಸಹಿಪರಮಪಾವನಃ ಸಕಲ ಜಗದಂಹಸ್ಸಂ ಹರಣಕೃತೇಕೃತಾವತಾರೋವಂದಾರು ಜನಾನಂದ ನೋಯದುನಂದನಃ ನಿಂದಾಪದ ವೀದವೀಯಾನ್ || ೧೬೫ ||

ಟೀಕಾ || ವಯಸ್ಯೇತಿ। ಹಿಯಸ್ಮಾತ್ಪರಮಪಾವನಃ ಸಕಲಸ್ಯ ಜಗತಃ ಅಂಹಸಾಂ ಪಾಪಾನಾಂ ಸಂಹರಣಕೃತೆ ನಿವಾರಣಾರ್ಥಂ ಕೃತಾವತಾರಃ_ವಂದಾರೂನ್ ನಮಸ್ಕರ್ತ್ರೂನ್ ಜನಾನಾ ನಂದಯತೀತ್ಯಾನಂದನಃ_ತತಃಕಾರಣಾತ್ಸಃ_ನಿಂದಾಯಾ ಏವಪದವ್ಯಾಃ ಮಾರ್ಗಸ್ಯದವೀಯಾನ್ ದೂರೆವರ್ತಮಾನಃ ||

ಅರ್ಥ || ಗೆಳೆಯನೇ ಹೀಗನ್ನ ಬೇಡ. ಆ ಶ್ರೀ ಕೃಷ್ಣನು ಅತಿ ಶುದ್ಧನಾದವನು. ಲೋಕದ ಪಾಪ ನಾಶನ ಮಾಡಲಿಕ್ಕೆ ಅವತಾರ ಧರಿಸಿಕೊಂಡವನು. ಭಕ್ತರುಗಳಿಗೆ ಆನಂದವೆಂದರೆ ಮೋಕ್ಷ ಅಥವಾ ಸಂತೋಷ ಪಾಲಿಸುವವನು. ಇಂಥ ಶ್ರೀ ಯದುಕುಮಾರನು ದೂಷಣೆಯ ದಾರಿಯಿಂದ ಬಹಳ ದೂರನಾಗಿರುವನು.

ಮೂ। ಶ್ಲೋ। ಅಸತ್ಕ್ಷಯಾರ್ಥಾಭ್ಯುದಯಸ್ಯ ಯಸ್ಯ ಜಗುಶ್ಚರಿತ್ರಂ ಜಗತಃ ಪವಿತ್ರಂ। ಪುನಃ ಪರಸ್ಮೈ ಪುರುಷಾಯತಸ್ಮೈ ಸಮಸ್ತನಮ್ಯಾಯನಮಸ್ತನೋಮಿ || ೧೬೬ ||

ಟೀಕಾ || ನನುನವಾಜ್ಮಾತ್ರೇಣಾರ್ಥಸಿದ್ಧಿರತ ಆಹ|| ಅಸದಿತಿ || ಅಸತಾಂ ಪಾಪಾನಾಂ ಕ್ಷಯಾರ್ಥಃ ಅಭ್ಯುದಯಃ ಅವತಾರಃ ಯಸ್ಯತಸ್ಯ ಯಸ್ಯಚರಿತ್ರಂ ಚೌರ್ಯಾದಿ_ಜಗತಃ ಪವಿತ್ರಂ_ಜಗುಃ ಕಥಯಂತಿಸ್ಮ ಪಂಡಿತಾ ಇತಿಶೇಷಃ_ ಸಮಸ್ತೈರ್ನಮ್ಯಾಯನಮಸ್ಕರ್ತುಂ ಮರ್ಹಾಯ_ತಸ್ಮೈಪರಸ್ಮೈ ಪುರುಷಾಯ_ನಮಃ ನತಿಂ ಪುನಃ_ತನೋಮಿಕರೋಮಿ || ಉಪೇಂದ್ರ ||

ಅರ್ಥ || ಪಾಪವನ್ನು ನಿವಾರಣ ಮಾಡಲಿಕ್ಕೆ ಅವತಾರ ಧರಿಸಿದ ಶ್ರೀ ಕೃಷ್ಣನ ಕಥೆಯು ಲೋಕಕ್ಕೆ ಪಾವನ ಮಾಡುವಂಥಾದ್ದೆಂದು ಬಲ್ಲಂಥವರು ಹೇಳುತ್ತಾರೆ. ಸಕಲರಿಂದಲೂ ನಮಸ್ಕರಿಸಲ್ಪಡಲಿಕ್ಕೆ ಯೋಗ್ಯನಾದ ಆ ಪರಮ ಪುರುಷನಿಗೆ ತಿರುಗಿ ನಮಸ್ಕಾರ ಮಾಡುತ್ತೇನೆ.

ಮೂ। ಅಸ್ಯಖಲ್ವತ್ಯದ್ಭುತಂ *ಚಾರಿತ್ರ್ಯ ಮಾಕರ್ಣ್ಯತಾಂ॥
ಶ್ಲೋ। ಚೋರಸ್ಯ ಚೌರ್ಯಂ ಜಗತಿ †ಪ್ರಸಿದ್ಧಂ ಚೌರ್ಯಸ್ಯ ಚೌರ್ಯಂತುನದೃಷ್ಟ ಪೂರ್ವಂ। ‡ಚೌರ್ಯಾಣಿ ಕಾರ್ಯಾಣಿ ಬತೇಶ್ರು ತಾನಿ ಕೃಷ್ಣಸ್ಯ ಮುಷ್ಣಂತಿತಮಾಂತಮಾಂಸಿ ॥ ೧೬೭ ॥

ಟೀಕಾ ॥ ಚೋರಸ್ಯೇತಿ ॥ ಚೌರ್ಯಂ ಜಗತಿ ಚೋರಸ್ಯ ಪ್ರಸಿದ್ಧಂ–ಚೌರ್ಯಸ್ಯ ಚೌರ್ಯಂತು–ನದೃಷ್ಟ ಪೂರ್ವಂ ಪೂರ್ವಂಕದಾಪಿನ ದೃಷ್ಟಮಿತ್ಯರ್ಥಃ– ಕೃಷ್ಣಸ್ಯ ಚೌರ್ಯಾದೀನಿಕಾರ್ಯಾಣಿ ಶ್ರುತಾನಿ ಸಂತ್ಯೇವನತು ದೃಷ್ಟಾನಿ– ತಮಾಂಸಿ ಪಾಪಾನಿ– ಮುಷ್ಣಂತಿತಮಾಂ ಅತಿಶಯೇನ ಚೋರಯಂತಿ–ಬತೇತ್ಯಾಶ್ಚರ್ಯೇ–ಸ್ತೇಯಂ ಹರೇರ್ಹರತಿಯನ್ನವನೀತ ಚೌರ್ಯಮಿತ್ಯಾದ್ಯಾಗ ಮಾದಿತಿಭಾವಃ ॥

ಅರ್ಥ॥ ಆ ಕೃಷ್ಣನ ವೃತ್ತಾಂತ ಸತ್ಯವಾಗಿ ಬಹಳ ಆಶ್ಚರ್ಯಕರವಾದದ್ದು, ಹೇಳುತ್ತೇನೆ, ಆಲೈಸು. ಕಳ್ಳನ ಕಳವು ಎಲ್ಲರಿಗೂ ಗೊತ್ತಿರುವದು. ಆದರೆ ಕಳವಿನ ಕಳವು ಮೊದಲು ಯಾರೂ ನೋಡಲಿಲ್ಲವು, ಅಂದರೆ, ಕಳ್ಳನು ಕಳವು ಮಾಡುವದು ಸಾಧಾರಣವು, ಆದರೆ ಕಳವು ಕಳವು ಮಾಡುವದು ಲೌಕಿಕ ಅನುಭವಕ್ಕೆ ವಿರೋಧವಾಗಿದೆ. ತಥಾಪಿ ಲೋಕದಲ್ಲಿ ಕೇಳಲ್ಪಡುವ ಕೃಷ್ಣನ ಕಳವುಗಳು ( ಅಂದರೆ ಕೃಷ್ಣನು ಮಾಡಿದ ಚೌರ್ಯ ಕೃತ್ಯಗಳ ಕಥೆಗಳು ) ಪಾಪಗಳನ್ನು ಸಮೂಲವಾಗಿ ಕಳವು ಮಾಡುತ್ತವೆ. ಇದೆಷ್ಟು ಆಶ್ಚರ್ಯ!

ಮೂ। ಶ್ಲೋ। ಚಿತ್ರಂ ಚಿತ್ರಂಜೃಂಭಿತೇ ಕೃಷ್ಣಮೇಘೇಕಂಸಂ ಪ್ರಾಪ್ತಾ ಪ್ರಾಕ್ಷುಲೋಪಂ ಸಮೃದ್ಧಿಃ। ಆಸೀದ್ವ್ಯಕ್ತಂ ಹಾನಿದಾಘಪ್ರಶಾಂತಿಃ ಹಂಸೋಹಿಂಸಾ ಮಾನಸೇಕೀರ್ತಿರುತ್ಥಾ ॥ ೧೬೮ ॥

ಟೀಕಾ ॥ ಚಿತ್ರಮಿತಿ ॥ ಕೃಷ್ಣೇ ನೀಲೇಮೇಘೇ ಕೃಷ್ಣ ಏವಮೇಘಃ ತಸ್ಮಿನ್ನಿತಿಚ ಜೃಂಭಿತೇಸತಿ–ಹೇತ್ವಾನಂದಾಭಿಲಾಪಕತ್ವಬ್ಧಃ–ನಿದಾಘಸ್ಯ ಘರ್ಮಸ್ಯ ಗ್ರೀಷ್ಮತೋರ್ವಾ ಪ್ರಕರ್ಷೇಣ ಶಾಂತಿರ್ನಾಶಃ–ಹಾನಿದಸ್ಯ ಅಘಸ್ಯನಾಮಾಸುರಸ್ಯ ಪ್ರಶಾಂತಿಶ್ಚ– ಆಸೀದಿತಿಯುತ್ ಹಂಸಃ ಪಕ್ಷೀ ಅಸುರಶ್ಚ–ಹಿಂಸಾ ಮಾನಸೇ ಪ್ರಾಪ್ತವಾನಿತಿಯುತ್– ವಾರ್ಷಿಕಾವ ಸರಸ್ಯ ಹಂಸ ಹಿಂಸಾಕರಣತ್ವಂ ಪ್ರಸಿದ್ಧಂ–ಕೀರ್ತಿಃ ಪಂಕಃ ಯಶಶ್ಚ– ಕೀರ್ತಿರ್ಯಶಸಿ ಕರ್ದಮ ಇತಿವಿಶ್ವಃ ಉತ್ಥಾಜಾತೇತಿಚಯುತ್– ತತ್ಸರ್ವಂ ಯುಕ್ತಮೇವ–ಕಿಂತು–ಕಂಬುವಕಂ ಸಂಪ್ರಾಪ್ತಾ ಸಮೃದ್ಧಿಃ ಕಂಸಂ ನಾಮಾಸುರಾಂತಂ ರಾಜಾನಂ ಪ್ರಾಪ್ತೇತಿಚ–ಲೋಪಂ ನಾಶಂ ಪ್ರಾಪ್ತೇತಿಚಯುತ್ ತಚ್ಚಿತ್ರಂ ಚಿತ್ರಂ ಅತ್ಯಂತಾಶ್ಚರ್ಯಂ–ಶ್ಲೋಕದ್ವಯೇಪಿ ವಿರೋಧಾಭಾಸಃ ಅತ್ರಶ್ಲೇಷಾನುಪ್ರಾಣಿತ ಇತಿಭೇದಃ ॥

ಅರ್ಥ ॥ ಕೃಷ್ಣನೆಂಬ ಮೇಘನು ವಿಸ್ತರಿಸಲು ಕಂಸಾಸುರನ ಏಳಿಗೆಯು ಅಳಿದು

* ಚರಿತಮ್ † ಪ್ರತೀತಂ ‡ ಚೌರ್ಯಾದ್ಯಕಾರ್ಯಾಣಿ ಇತಿಪಾಠಾಂತರಾಣಿ ॥

ಹೊಯಿತು. ಕೇಡುಗಾರನಾದ ಅಘಾಸುರನೆಂಬ ದೈತ್ಯನ ಬಾಳುವೆ ತೀರಿತು. ಹಂಸನೆಂಬ ಅಸುರನು ಕಡಿದು ಹೋದನು. ಮತ್ತು ಮಹಿಮೆಯ ಜಯೋತ್ಸವವಾಯಿತು.

ಈ ಶ್ಲೋಕಕ್ಕೆ ಇನ್ನೊಂದು ಅರ್ಥವಾಗುತ್ತದೆ, ಏನೆಂದರೆ: ನೀಲವರ್ಣದ ಮೋಡವು ಬೆಳೆಯಲು--ನಿದಾಘ ಅಂದರೆ ಬೇಸಿಗೆಕಾಲ ತಂಪಾಯಿತು. ಹಂಸಪಕ್ಷಿಯು ಕೊಲಿಪಡುವಂಥಾದ್ದಾಯಿತು. ಕೆಸರು ಹೆಚ್ಚಾಯಿತು. ಕಂ ಅಂದರೆ ಜಲಕ್ಕೆ ಪ್ರಾಪ್ತವಾದ ವೃದ್ಧಿಯು ಲೋಪವಾಯಿತು ಅಂದರೆ ನೀರು ಬತ್ತಿ ಹೋಯಿತು.

( ಇದೊಂದು ವಿಪರೀತಾರ್ಥ ಚಮತ್ಕಾರವು. ಇದಕ್ಕೆ ವಿರೋಧಾಭಾಸ ಎಂಬ ಸಂಜ್ಞೆಯುಂಟು. )

*ಮೂ । ಶ್ಲೋ । ಕಂಸಂಧ್ವಂಸಯತೇ ಮುರಂತಿರಯತೇ ಹಂಸಂತಥಾಹಿಂಸತೇ ಬಾಣಂಕ್ಷೀಣಯತೇ †ಬಲಂಲಘಯತೇ ಪೌಂಡ್ರಂ ಪುರಂಲುಂಪತೇ । ಭೌಮಂ ಕ್ಷಾಮಯತೇ ಬಲಾದ್ವಲಭಿದೋ ಗರ್ವಂ ಪರಾಕುರ್ವತೇ ಕ್ಲಿಷ್ಟಂ ಶಿಷ್ಟಗಣಂ ಪ್ರಣಮ್ರಮವತೇ ಕೃಷ್ಣಾಯತುಭ್ಯಂ ನಮಃ ॥ ೧೪೯ ॥

ಟೀಕಾ ॥ ಕಂಸಮಿತಿ । ಕಂಸಾದಿ ಭೌಮಾಂತಾಃ ಅಸುರಾಃ—ಧ್ವಂಸಯತ ಇತ್ಯಾದಿ ಪರಾಕುರ್ವತ ಇತ್ಯಂತಚತುರ್ಥ್ಯಂತಾನಾಂ ನಾಶಯತ ಇತ್ಯರ್ಥಃ—ಭೂಮೇರಪತ್ಯಂ ಭೌಮಃ— ನರಕಾಸುರಃ—ಕ್ಲಿಷ್ಟಂ ದುಷ್ಟೈಃ ಪೀಡಿತಂ—ಪ್ರಣಮ್ರಂ ಪ್ರಣತಂ—ಶಿಷ್ಟಗಣಂ—ಅವತೇ ರಕ್ಷಮಾಣಾಯತುಭ್ಯಂ ನಮಃ ॥

ಅರ್ಥ ॥ ಕಂಸ, ಮುರ, ಹಂಸ, ಬಾಣ, ಬಲ, ಪೌಂಡ್ರ ಮತ್ತು ಭೌಮ ಈ ಅರಸುರುಗಳನ್ನು ಕೊಂದಂಥಾತನಾದ ಇಂದ್ರನ ಹಮ್ಮಿಕೆ ಇಳಿಸಿದಂಥಾತನಾದ ದುಃಖದಿಂದ ಪೀಡಿತರಾಗಿ ಮರೆಹೊಕ್ಕಿದ ಭಕ್ತವೃಂದವನ್ನು ಸಲಹುವಂಥಾತನಾದ ಹೇ ಕೃಷ್ಣನೇ ನಿನಗೆ ಶರಣು.

## ಮಹಾರಾಷ್ಟ್ರ ವರ್ಣನಂ ॥

ಮೂ । ಇತಿವಿಮಾನಂ ಸುದೂರಮಾನರ್ಯ ವನಜನಪದಸರಿದ್ಗಿರಿಪ್ರಭೃತೀನವೇಕ್ಷ್ಯಸವಿಸ್ಮಯಮೀಶ್ವರಮುದ್ದಿಶ್ಯ ॥ ೧೫೦ ॥

ಟೀಕಾ ॥ ಇತೀತಿ ॥ ವನಾನಿದಂಡಕಾದೀನಿಜನಪದಾಃಮಹಾರಾಷ್ಟ್ರದಯಃ— ಸರಿತೋನರ್ಮದಾದಯಃ—ಗಿರಯೋವಿಂಧ್ಯಾದಯಃ—ಈ ಶ್ವರಂ ಸ್ಪಷ್ಟರಂ ॥

* ಪುನಃ ಸಭಕ್ತ್ಯನ್ಯೇಷಂ ಭಗವಂತಮುದ್ದಿಶ್ಯ ಇತ್ಯಧಿಕಂ ಪುಸ್ತಕಾಂತರೇ ॥ † ಬಕಂ ಇತಿ ಪಾಠಾಂತರಂ ॥

ಅರ್ಥ ॥ ಈ ಪ್ರಕಾರವಾಗಿ ಅನುಸಂಧಾನ ಮಾಡಿವಿಮಾನವನ್ನು ಮುಂದರಿಸಿ ದಂಡಕ ಮೊದಲಾದ ಅರಣ್ಯಗಳನ್ನೂ ಮಹಾರಾಷ್ಟ್ರೇ ಮೊದಲಾದ ಜನರುಗಳನ್ನೂ ನರ್ಮದೆಯೇ ಮೊದಲಾದ ನದಿಗಳನ್ನೂ ವಿಂಧ್ಯಾಮಲೆಯೇ ಮೊದಲಾದ ಬೆಟ್ಟಗಳನ್ನೂ ನೋಡಿ, ಆಶ್ಚರ್ಯಗೊಂಡು ಸೃಷ್ಟಿಕರ್ತನಾದ ದೇವರನ್ನು ಕುರಿತು ಸ್ತೋತ್ರವಾಗಿ (ವಿಶ್ವಾವಸು ಹೇಳುತ್ತಾನೆ.)

ಮೂ । ಶ್ಲೋ । ಕತ್ಯೋಷಧೀಃಕತಿತರೂನ್ಕತಿವಾಮಹೀಧ್ರಾನ್ ಕತ್ಯಂಬುಧೀನ್ಕತಿನದೀಃಕತಿಪುಂಸಪಿತಾನ್ । ಕತ್ಯಂಗನಾಸ್ತ್ವಮಸೃಜಃಕತಿನಾಥದೇಶಾನ್ ಮನ್ಯೇತ್ರ ವೈಷಮಹಿಮಾನ ಹಿಮಾತಿಬುದ್ಧ್ಯಾ ॥ ೧೭೧ ॥

ಟೀಕಾ ॥ ಕತೀತಿ ॥ ಹೇ ನಾಥಜಗತ್ಸ್ರಷ್ಟಃ—ತ್ವಂ—ಕತಿಕಿಯತೀಃ—ಓಷಧೀಃ ಲತಾಸಸ್ಯಾದೀಃ ಫಲಪಾಕಾಂತಾಃ—ಅಸೃಜಃ ಸೃಷ್ಟವಾನಸಿ—ಇದಂಪ್ರತಿದ್ವಿತಿಯಾಂತಂ ಯೋಜ್ಯಂ—ಹೇಧಾತಃ ಸ್ರಷ್ಟಃ ಬ್ರಹ್ಮನ್—ತವಸಂಬಂಧೀ—ಏಷಃ ಮಹಿಮಾಸಾಮರ್ಥ್ಯಂ—ಮಮಬುದ್ಧ್ಯಾನಮಾತಿನಮಿಳತಿ—ಹಿಖಲ್ವರ್ಥೇ—ಅಪ್ರಮೇಯತ್ವಾದಿತಿಭಾವಃ ॥

ಅರ್ಥ ॥ ಹೇ ನಾಥ! ಹೇ ಲೋಕದೊಡೆಯನೇ! ನೀನು ಎಷ್ಟು ಗಿಡಮೂಲಿಕೆಗಳನ್ನೂ, ಎಷ್ಟು ಮರಗಳನ್ನೂ, ಎಷ್ಟು ಬೆಟ್ಟಗಳನ್ನೂ, ಎಷ್ಟು ಸಮುದ್ರಗಳನ್ನೂ, ಎಷ್ಟು ನದಿಗಳನ್ನೂ, ಎಷ್ಟು ಪುರುಷರುಗಳನ್ನೂ, ಎಷ್ಟು ಹೆಂಗಸರುಗಳನ್ನೂ, ಮತ್ತು ಎಷ್ಟು ನಾಡುಗಳನ್ನೂ, ನಿರ್ಮಾಣ ಮಾಡಿದ್ದೀಯೋ! ನಿನ್ನ ಸಾಮರ್ಥ್ಯವು ಇಂತಿಷ್ಟೇ ಎಂತ ಗೊತ್ತು ಮಾಡುವದು ನನ್ನ ತಿಳುವಳಿಕೆಗೆ ಅಳವಲ್ಲವು.

ಮೂ । ಇತ್ಯನ್ಯತ್ರೋಗಚ್ಛನ್ಪುರತೋವಲೋಕ್ಯ ಸಬಹುಮಾನಂ ॥

ಮೂ । ಶ್ಲೋ । ಮಹಾರಾಷ್ಟ್ರಾಭಿಖ್ಯೋ ಮಧುರಜಲಸಾಂದ್ರೋನಿರುಪಮಪ್ರಕಾಶೋದೇಶೋಯಂಸುರಪುರ ನಿಕಾಶೋ ವಿಜಯತೇ । ಗೃಹಸ್ಥಾಯತ್ರಾಮೀ ಗುಣಜಲಧಯಃ ಕೇಪಿವಿಭವೈಸ್ಸಮೃದ್ಧಾಶ್ಶ್ರದ್ಧಾತೋಮುಹುರತಿಥಿಪೂಜಾಂ ವಿದಧತೇ ॥ ೧೭೨ ॥

ಟೀಕಾ ॥ ಮಹಾರಾಷ್ಟ್ರೇತಿ ॥ ಮಧುರಜಲಸಾಂದ್ರಃ— ನಿರುಪಮ ಪ್ರಕಾಶಃ— ಅತಏವ— ಸುರಪುರನಿಕಾಶಃ ಸ್ವರ್ಗತುಲ್ಯಃ— ಮಹಾರಾಷ್ಟ್ರಾಭಿಖ್ಯಃ ಅಯಂದೇಶಃ— ಅಭಿಖ್ಯಾನಾಮಶೋಭಯೋರಿ

ಶಿಕೋಽಶಃ_ವಿಜಯತೇ ಸರ್ವೋತ್ಕರ್ಷೇಣ ವರ್ತತೇ_ಯತ್ರ ಮಹಾರಾಷ್ಟ್ರ ) ದೇಶೇ–ವಿಭವೈಸ್ಸಮೃದ್ಧಾಃ– ಗುಣಜಲಧಯಶ್ಚ– ಅತಏವ ಕೇಽಪಿ ಅನಿರ್ವಚನೀಯಮಹಿಮಾನಃ– ಐಶ್ವರ್ಯ ಮತ್ತೇಷು ಗುಣಲೇ ಶಸ್ಯಾಪಿ ಶಶವಿಷಾಣ ಪ್ರಾಯತ್ವಾದಿತಿಭಾವಃ– ಅಮೀ ಗೃಹಸ್ಥಾನಾಮ ಬ್ರಾಹ್ಮಣಾಃ ಮಹಾರಾಷ್ಟ್ರಾಃ ಅತಿಥೀನಾಂ ಪೂಜಾಂ– ಶ್ರದ್ಧಾತಃ– ಶ್ರದ್ಧಯಾ– ಮುಹುರ್ವಿದಧತೇ ಕುರ್ವತೇ ||

ಅರ್ಥ || ಹೀಗೆ ಸ್ತೋತ್ರ ಮಾಡಿ ಮುಂದೆ ಹೋಗಿ ಎದುರಿಗೆ ನೋಡಿ ಮರ್ಯಾದೆಯಿಂದ ( ವಿಶ್ವಾವಸು ಹೇಳುತ್ತಾನೆ ) -ಇದೇ ಮಹಾರಾಷ್ಟ್ರ ದೇಶವು, ಎಲ್ಲಿ ನೋಡಿದರು ಶೀಯೊದ ನೀರು ಹರಿಯುತ್ತದೆ. ಜೋಡಿಲ್ಲದ ಸಂಪತ್ತಿಯಿಂದ ಯುಕ್ತವಾದದ್ದರಿಂದ ಸ್ವರ್ಗಕ್ಕೆ ಸಮಾನವಾಗಿ ಶೋಭಿಸುತ್ತೆ, ಇಲ್ಲಿಯ ಕುಟುಂಬಿಗರು ತುಂಬ ಸಂಪತ್ತಿಯುಳ್ಳವರಾಗಿದ್ದರೂ ಒಳ್ಳೇ ಗುಣಗಳಿಂದ ಪೂರ್ಣರಾಗಿದ್ದು ಊಟದ ವೇಳೆಯಲ್ಲಿ ಆಕಸ್ಮಿತವಾಗಿ ಬಾಗಲಿಗೆ ಬಂದವರನ್ನು ಭಕ್ತಿಯಿಂದ ಸತ್ಕರಿಸುತ್ತಾರೆ.

ಕೃಶಾನುಃ ||

ಮೂ| *ಸಖೇಕಿಂಪ್ರಾಕ್ಕಾಲಿಕಂಚಾರಿತ್ರಮಧುನಾಕಥಯಸಿ| ಅಧುನಾಕಿಲಕಲಿಮಾಲಿನ್ಯಾದೀದೃಶೀರೀತಿರೇತದ್ದೇಶ ವಾಸಿನಾಮಾಸೀತ್ || ೧೨೩ ||

ಟೀಕಾ || ಸಖ ಇತಿ || ಪ್ರಾಕ್ಕಾಲಃ ಕೃತಯುಗಾದಿಃ ತದ್ಭವಂ ಪ್ರಾಕ್ಕಾಲಿಕಂ ||

ಅರ್ಥ || ಮಿತ್ರನೇ ಹಳೇಕಾಲದ ಅಂದರೆ ಕಳದ ಯುಗಾಂತರ ಸಂಬಂಧೀ ಕಾಲದ ಸುದ್ದಿ ಹೇಳುತಿಯಾ? ಈಗ ಕಲಿಕಲ್ಮಷದಿಂದ ಈ ನಾಡಿನ ಜನರುಗಳ ನಡತೆಯು ಬಗೆ ಬೇರಲ್ಲವೇ?

ಮೂ| ತಥಾಹಿ | ಶ್ಲೋ| ಅಪಾರ್ಥೈರ್ವ್ಯಾಪಾರೈರಹರಿಹನಯಂತೋ †ದಶದಿಶಾಸ್ವಥಸ್ನಾತಾಸಂಧ್ಯಾಂವಿದಧತಿನಜಾತುಸ್ವಸಮಯೇ | ತ್ಯಜಂತಸ್ಸ್ವಾಂವೃತ್ತಿಂದ್ವಿಜಕುಲಭವಾಗ್ರಾಮಗಣಕೀಭವಂತೋಽಹಂತಾಮೀಕಥಮಪಿಚ ಜೀವಂತಿ ಬಹವಃ || ೧೨೪ ||

ಟೀಕಾ || ಅಪಾರ್ಥೈರಿತಿ || ಇಹ ಮಹಾರಾಷ್ಟ್ರೇ ಬಹವೋಽಮೀಗೃಹಸ್ಥಾಃ–ಅಪಾರ್ಥೈರನಂತೈರ್ವ್ಯಾಪಾರೈರಾತ್ಮೀಯೈರ್ಗ್ರಾಮೀಣೈಶ್ಚ ದಶದಿಶಾಸುಗ್ರಾಮ್ಯಾಸು– ನತುಗೃಹೇ ಅಹಃ ಅತ್ಯಂತಸಂಯೋಗೇದ್ವಿತೀಯಾ ಸರ್ವಂ ದಿವಸ ಮಿತ್ಯರ್ಥಃ– ನಯಂತಃ ಯಾಪಯಂತಸ್ಸಂತಃ– ಅಥಸಾಯಂಕಾಲೇ– ಸ್ನಾತಾಸ್ಸಂತಃ– ಸಂಧ್ಯಾಃ ತಿಸ್ರಃ ವಿದಧತಿ– ಜಾತುಕದಾಚಿದಪಿ– ಸ್ವಸಮಯೇ ಯಥಾಸಮಯಂ–ಸಂಧ್ಯಾಃ ನವಿದಧತಿ ನಾನುಷ್ಠಾಸ್ಯಂತೀತ್ಯರ್ಥಃ–ಕಿಂಚ–ಸ್ವಾಂಸ್ವೀಯಾಂ ವೃತ್ತಿಂ ಯಾ

---

* ಸಖೇಪ್ರಾಕ್ಕಾಲೀನ ಚರಿತ್ರಮಿತಿಪಾಠಾಂತರಂ || † ಅಶನದಶಾಸು ಇತಿಪುಸ್ತಕಾಂತರೇ ||

ಜನಾಧ್ಯಾಪನಪ್ರತಿಗ್ರಹಾತ್ಮಿಕಾಂ ಜೀವಿಕಾಂ ತ್ಯಜಂತಃ ದ್ವಿಜಕುಲಭವಾ ಅಪಿ ಕೇಚನಾವಿೂ ಗ್ರಾಮೇಷು ಗಣಕೀಭವಂತಃ ಆಯವ್ಯಯಲೇಖಕೀಭವಂತಸ್ಸಂತಃ ಅತಏವ–ಕಥಮಪಿ ಅತಿನೀಚವೃತ್ತ್ಯೇತ್ಯರ್ಥಃ–ಜೀವಂತಿ ||

ಅರ್ಥ ॥ ನೋಡು, ಈ ಮಹಾರಾಷ್ಟ್ರದಲ್ಲಿ ಈ ಗೃಹಸ್ಥರುಗಳನೇಕರು ತಮ್ಮ ಲೆಕ್ಕಿಲ್ಲದ ಕೆಲಸಗಳನ್ನು ನಡಿಸಲಿಕ್ಕೆ ಹಗಲೆಲ್ಲ ಅತ್ತಿತ್ತ ಭ್ರಮಣ ಮಾಡಿ ಕಾಲಕಳೆದು, ಸಂಜೆ ಹೊತ್ತು ಮಿಂದು ಸಂಧ್ಯಾವಂದನೆ ಮಾಡುತ್ತಾರೆ; ಗೊತ್ತಾದ ಕಾಲದಲ್ಲಿ ಯೆಂದಿಗೂ ಸಂಧ್ಯಾವಂದನೆ ಮಾಡುವದಿಲ್ಲವು; ಅವರಲ್ಲಿ ಬಹಳ ಮಂದಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದಂಥಾವರಾದಾಗ್ಯೂ ಬ್ರಾಹ್ಮಣ ಧರ್ಮಕ್ಕೆ ಯೋಗ್ಯವಾದ ಉದ್ಯೋಗ ಬಿಟ್ಟು ಕೊಟ್ಟು, ಗ್ರಾಮಾದಾಯ ವೆಚ್ಚದ ಲೆಕ್ಕ ಬರಿಯುವ ಶಾನಭಾಗರುಗಳಾಗಿ ಹ್ಯಾಗಾದರೂ ಬಾಳುವೆ ಮಾಡುತ್ತಾರೆ. ಇದೆಷ್ಟು ವಿಶಾದಕರವಾದದ್ದು!

ಮೂ । ಕಿಂಚ ॥

ಶ್ಲೋ । ಉಪನಯನ ವಿವಾಹಾ ಉತ್ಸವೈಕಪ್ರಧಾನೌ ಕಲಿವಿಭವತ ಏಷಾಂ ಕಾಲಭೇದಾನಭಿಜ್ಞೌ । ವಿಜಹತಿನಕದಾಚಿದ್ವೇದಪಾಠೈಕಯೋಗ್ಯೇವಯಸಿಚಯವನಾನೀ ವಾಚನಾಭ್ಯಾಸಮೇತೇ ॥ ೧೭೫ ॥

ಟೀಕಾ || ಉಪನಯನೇತಿ || ಕಲೇಃ ಕಲಿಯುಗಸ್ಯವಿಭವತಃ ಮಹಾತ್ಮ್ಯಾತ್-ಉಪನಯನವಿವಾಹೌ-ಕಾಲಸ್ಯಭೇದಃ ವಿಧಿಚೋದಿತಕಾಲಸ್ಯಭೇದಃ ವಿಶೇಷಸ್ತಸ್ಯನ ವಿದ್ಯತೆ ಅಭಿಜ್ಞಾ ವಿಜ್ಞಾ ಸಂಯಮೋಸ್ತ್ಮಿತ್ರಿಚತುರಾದಿವಾರ್ಷಿಕಾವಿತ್ಯರ್ಥಃ–ಅತಏವ ಏಷಾಂಗೃಹಸ್ಥಾನಾಂ–ಉತ್ಸವಃ–ಏಕಂ ಮುಖ್ಯಂ ಪ್ರಧಾನಂ ಪ್ರಯೋಜನಂ ಯಯೊಸ್ತಥೋಕ್ತೌ ಭವತಃ ದ್ವಾವಪಿವಿಧಿವನ್ನಕೃತೌ ಭವತ ಇತಿಯಾವತ್– ಕಿಂಚ್ಯೈತೆವೇದಸ್ಯಪಾಠೆ ಅಧ್ಯಯನೆವಿಷಯೆ ಏಕಂ ಯಥಾತಥಾ–ಯೋಗ್ಯೆ ವಯಸಿಯೌವ್ವನೆ–ಯವನಾಸ್ಯಾಃ ಯವನಾನಾಂ ಲಿಪೇಃ ವಾಚನಸ್ಯ ಅಧ್ಯಯನಸ್ಯ ಅಭ್ಯಾಸಂ ಪೌನಃ ಪುನ್ಯೇನ ಪಠನಂ–ಕದಾಚಿದಪಿ–ನವಿಜಹತಿ ನತ್ಯಜಂತಿ ||

ಅರ್ಥ ॥ ಮೌಂಜಿಬಂಧನ ಮತ್ತು ಮದುವೆ ಸಂಸ್ಕಾರಗಳಿಗೆ ವೇದದಲ್ಲಿ ಗೊತ್ತಾದ ಕಾಲಗಳನ್ನು ಕಲಿದೋಷ ಪ್ರಬಲತೆಯ ಮೂಲವಾಗಿ ಅರಿಯದವರಾದ ಈ ಮಹಾರಾಷ್ಟ್ರ ಬ್ರಾಹ್ಮಣರಿಗೆ ಆ ಎರಡು ಸಂಸ್ಕಾರಗಳ ಕಾಲದಲ್ಲಿ ಹಬ್ಬವೇ ಮುಖ್ಯವಾಗಿರುತ್ತದೆ. ಅಂದರೆ, ಒಂದು ಹಬ್ಬದಂತೆ ತಮಾಶೆಮಾಡಿ ಆ ಸಂಸ್ಕಾರಗಳನ್ನು ಸಾಗಿಸುತ್ತಾರೆ. ಆದದರಿಂದ ಇವರಲ್ಲಿ ಆಗುವ ಉಪನಯನ ವಿವಾಹಗಳು ವಿಧಿಯುಕ್ತವಾಗಿ ಆಗುವದಿಲ್ಲ. ಎಂಬ ತಾತ್ಪರ್ಯ. ಇಷ್ಟೇ ಅಲ್ಲ, ಇವರು ವೇದ ಕಲಿಯಲಿಕ್ಕೆ ತಕ್ಕವಾದ ಪ್ರಾಯದಲ್ಲಿ ಯವನ ಅಂದರೆ ಮುಸಲಮಾನಿ ಭಾಷೆ ಬರಿಯಲಿಕ್ಕೂ ಓದಲಿಕ್ಕೂ ಕಲಿಯುವ ನೇಮ ಪ್ರಾಣ ಹೋದರೂ ಬಿಡುವದಿಲ್ಲವು.

ಮೂ। ಅಪಿಚ।

ಶ್ಲೋ।ಅಜ್ಞಾನಾಮವಿರಾಮಲೌಕಿಕವಚೋಭಾಜಾಮಮೀಷಾಂ ಪುನಃ ಮಂತ್ರೋಚ್ಚಾರಣ ಏವಪರ್ಯವಸಿತಂ ಮೌನವ್ರತಂ ಕರ್ಮಸು। ಗ್ರಾಮಾಯವ್ಯಯಲೇಖನೇನನಯತಾಂ ಕಾಲಾನ ಶೇಷಾನ ಹೋ ಪಾರಂಪರ್ಯತ ಈದೃಶಾಮಿಹನೃಣಾಂಬ್ರಾಹ್ಮಣ್ಯಮನ್ಯಾದೃಶಂ॥ ೧೨೬॥

ಟೀಕಾ॥ ಅಜ್ಞಾನಾಮಿತಿ। ಅಜ್ಞಾನಾಮತಏವ ಅವಿರಾಮಂಯಥಾತಥಾ ಲೌಕಿಕವಚಾಂಸಿ ದೇಶಭಾಷಾವಾಕ್ಯಾನಿಭಜಂತೀತಿ ತದ್ಭಾಜಾಮಮೀಷಾಂ ಗೃಹಸ್ಥಾನಾಂ ಸಂಬಂಧಿಷುಕರ್ಮಸು–ಮೌನವ್ರತಂ–ಮಂತ್ರಸ್ಯ ತತ್ಕರ್ಮಾಂಗಸ್ಯ ಉಚ್ಚಾರಣ ಏವಪರ್ಯವಸಿತಂ–ಸಮಾಹಿತಂ ಅನ್ಯಥಾತದುಚ್ಚಾರಣಾನುಪಪತ್ತೇರಿತಿಭಾವಃ–ಗ್ರಾಮಸ್ಯ ಆಯವ್ಯಯೌ–ಆದಾಯವ್ಯಯೌ ತಯೋರ್ಲೇಖನೇನ– ಅಶೇಷಾನ್ ಕಾಲಾನ್ ನಯತಾಂ ಪಾರಂಪರ್ಯತಃ ವಂಶಾನುಪೂರ್ವೀಶಃ– ಈದೃಶಾಂ ಗ್ರಾಮಗಣಕಾನಾಂ– ಇಹ ಮಹಾರಾಷ್ಟ್ರನೃಣಾಂ ಗೃಹಸ್ಥಾನಾಂ ಬ್ರಾಹ್ಮಣ್ಯಾಂ ಅನ್ಯಾದೃಶಂ ಶೂದ್ರತ್ವಪ್ರಾಯಮೇವೇತ್ಯರ್ಥಃ॥

ಅರ್ಥ॥ ಕರ್ಮಗಳನ್ನು ಮೌನವ್ರತವಾಗಿ ನಡಿಸಬೇಕು, ಅಂದರೆ ಅವುಗಳ ಕಾಲದಲ್ಲಿ ಅನ್ಯಪ್ರಸಂಗ ನಡಿಸಬಾರದೆಂತ ನಿಯಮ ಉಂಟು. ಆದರೆ ತಿಳಿಯದವರಾದದರಿಂದ ಯಾವಾಗಲೂ ವ್ಯವಹಾರಿಕ ಮಾತುಗಳನ್ನೇ ಆಡುತ್ತಾ ಇರುವ ಈ ಮಹಾರಾಷ್ಟ್ರ ಗೃಹಸ್ಥರುಗಳ ಮೌನವ್ರತವು ಮಂತ್ರಗಳ ಮತ್ತು ಅವುಗಳ ಅಂಗಭೂತವಾದ ಕರ್ಮಗಳಲ್ಲೇ ತೀರುತ್ತದೆ. ಅಂದರೆ ಕರ್ಮಾಚರಣೆಯ ಕಾಲದಲ್ಲಿ ಮಂತ್ರಗಳ ಮತ್ತು ತದಂಗಭೂತಕಾರ್ಯಗಳ ಉಚ್ಚಾರಣೆ ಮಹಾರಾಷ್ಟ್ರ ಗೃಹಸ್ಥರ ಕರ್ಮಗಳಲ್ಲಿ ಆಗುವದೇ ಇಲ್ಲ ಎಂಬ ತಾತ್ಪರ್ಯವು. ಇದು ಹೊರತು ಈ ಮಹಾರಾಷ್ಟ್ರರು ವಂಶಪರಂಪರಾಗತವಾಗಿ ಗ್ರಾಮ್ಯ ಜಮಾಖರ್ಚು ಬರಿಯುವದರಲ್ಲಿ ಸಂಪೂರ್ಣ ಕಾಲ ಕಳೆಯುತ್ತಾರೆ. ಅಯ್ಯಾ ಇವರ ಬ್ರಾಹ್ಮಣತ್ವದ ಬಗೆಯೇ ಬೇರೆ; ಅಂದರೆ ಶೂದ್ರತ್ವಕ್ಕೆ ಸಮಾನವಾದದ್ದು ಎಂಬ ಭಾವವು.

ಮೂ। ಅನ್ಯಚ್ಚ।

ಶ್ಲೋ। ಕುಕ್ಷೇಃ ಪೂರ್ತ್ಯೈಯವನನೃ *ಪತೇರ್ಭೃತ್ಯಕೃತ್ಯಾನಿಕರ್ತುಂ ವಿಕ್ರೀಣೀತೇವಪುರಪಿನಿಜಂ ವೇತನೈರೇತದಾಸ್ತಾಂ। ವಿಪ್ರೋಭೂತ್ವಾಪ್ಯಹಹಗಣನಾನ್ನೈಪುಣ್ಯೈರ್ಮಂಚ ಯಿತ್ವಾಸ್ವರ್ಣಸ್ತೇಯಂರಚಯತಿಪುನಃಸ್ವಾಮಿನಾಂಪೋಷಕಾಣಾಂ॥ ೧೨೭॥

---

* ಏತತೇರಿತಿಪಾಠಾಂತರಂ ॥

ಟೀಕಾ ॥ ಕುಕ್ಷೇರಿತಿ ॥ ಅಯಂ ಗೃಹಸ್ಥಃ ವಿಪ್ರೋಭೂತ್ವಾ ಬ್ರಾಹ್ಮಣಸ್ಸನ್ನಪಿ–ಅಹಹೇತ್ಯತಿಖೇದೆ ಕುಕ್ಷೇಃ ಪೂರ್ತ್ಯೈ ಉದರಪೂರಣಾಯ–ಯವನ ನೃಪತೇಃ ಭೃತ್ಯಕೃತ್ಯಾನಿಕರ್ತುಂ–ನಿಜಂ ಸ್ವೀಯಂ ವಪುರಪಿ ಕಿಮುತಾನ್ಯತ್–ವೇತನೈಃ ಭೃತಿಭಿಃ-ವಿಕ್ರೀಣೀತೇ ವಿಕ್ರಯಂ ಕರೋತೀತಿಯತ್–ಏತತ್ ಆಸ್ತಾಂ ತಿಷ್ಠತು–ಗಣನಾನೈಪುಣ್ಯೈಃ ಸಂಖ್ಯಾಯಾಂ ಕೌಶಲ್ಯೈಃ-ವಂಚಯಿತ್ವಾಪ್ರತಾರ್ಯ–ಪೋಷಕಾಣಾಂ-ಕಿಮುತ ಅನ್ಯೇಷಾಂ–ಸ್ವರ್ಣಸ್ಯ ಧನಸ್ಯಸ್ತೇಯಂ– ರಚಯತಿಕರೋತಿ–ಅಹಹ–ಸ್ವಾಮಿದ್ರೋಹಸ್ಯ ಮಹಾ ನರಕ ಹೇತುತ್ವಾದಿತಿಭಾವಃ ॥

ಅರ್ಥ ॥ ಈ ಮಹಾರಾಷ್ಟ್ರ ಗೃಹಸ್ಥನು ಬ್ರಾಹ್ಮಣನಾದಾಗ್ಯೂ, ಹೊಟ್ಟೆ ತುಂಬಿ ಕೊಳ್ಳುವದಕ್ಕೆ ಮುಸಲ್ಮಾನ ಅರಸುಗಳ ಚಾಕರಿ ಮಾಡುವದರಲ್ಲಿ ತನ್ನ ಸ್ವಂತ ಶರೀರ ಕೂಡ ಸಂಬಳಕ್ಕಾಗಿ ಮಾರುತ್ತಾನೆ. ಇದಂತಿರಲಿ. ಲೆಖ್ಖದಲ್ಲಿ ತನ್ನ ಘಟ್ಟಿಗತನ ನಡಿಸಿ ಮೋಸದಿಂದ ತನ್ನನ್ನು ಸಾಕುವ ಒಡಿಯನ ಹಣ ಅಪಹರಿಸಿ, ಸ್ವರ್ಣಸ್ತೇಯ ಪಾತಕವನ್ನು ಆಚರಿಸುತ್ತಾನೆ. ಅಯ್ಯೋ, ಇದೆಷ್ಟು ದುಃಖಕರವಾದದ್ದು!

ಮೂ ॥ ಅಹೋಬತಕಲಿಮಹಿಮ್ನಾಸದಸದ್ವಿವೇಕವೈಧುರ್ಯಮಖಿಲಜನಾನಾಂ ॥ ೧೭೮ ॥

ಟೀಕಾ ॥ ಅಹೋಇತಿ ॥ ವೈಧುರ್ಯಂ ರಾಹಿತ್ಯಂ ॥

ಅರ್ಥ ॥ ಅಕಟಾ! ಕಲಿಯ ಬಲ ಏರಿದರಿಂದ ಸತ್ಯವ್ಯಾವದು ಸುಳ್ಳ್ಯಾವದು ಎಂಬ ಭೇದದ ತಿಳುವಳಿಕೆ ಜನರಿಗೆ ಇಲ್ಲದೆ ಹೋಯಿತಲ್ಲ!

ಮೂ ॥ ಶ್ಲೋ ॥ ಯೇಮುಷ್ಣಂತಿ ನಿಶಿಪ್ರವಿಶ್ಯಭವನಂಯೇವಾಬಲಾತ್ಕಾನನೇ ನೈತೇಸ್ವಾಮಿಧನಂ ಹರಂತಿನನುತಾನ್ನಿಂದಂತಿ ಚೋರಾಇತಿ* । ಸದ್ಯೋಹಂತಹರಂತಿಪೋಷಕಧನಂ ಸಂಖ್ಯಾಂವಿಪರ್ಯಸ್ಯಯೇ ಕಷ್ಟಂತಾನಪಿವಂಚಕಾನಿಹ ಪುರಸ್ಕುರ್ವಂತಿ ಸರ್ವೇಜನಾಃ ॥ ೧೭೮ ॥

ಟೀಕಾ ॥ ಯಇತಿ ॥ ಯೆಜನಾಃ-ನಿಶಿಭವನಂ ಪ್ರವಿಶ್ಯ ಮುಷ್ಣಂತಿ–ಯೇವಾಕಾನನೇ ಬಲಾದ್ವಾಪಿಮುಷ್ಣಂತಿ–ಏತೆಉಭಯೆ ಸ್ವಾಮಿನಃ ಪೋಷಕಸ್ಯ ಧನಂನಹರಂತಿ ನಮುಷ್ಣಂತಿ–ತಥಾಪಿತಾನುಭಯಾನ್ ಚೋರಾಇತಿ ನಿಂದಂತಿ–ನನ್ವಿತಿಪ್ರಶ್ನೆ–ಲೋಕಾಇತಿಶೇಷಃ–ಯೇಮೀಗೃಹಸ್ಥಾಃ–ಸಂಖ್ಯಾಂ ಆಯವ್ಯಯಗಣನಾಂ–ವಿಪರ್ಯಸ್ಯ–ಪೋಷಕಸ್ಯಧನಂ ಸದ್ಯೋಹರಂತಿ– ಹಂತೇತ್ಯಾಶ್ಚರ್ಯೇ ವಂಚಕಾನ್ ಸ್ವಾಮಿದ್ರೋಹಿಣೋಪಿ ತಾನಿಹಲೋಕೇ ಸರ್ವೇಜನಾಃ ಪುರಸ್ಕುರ್ವಂತಿ ಮಾನಯಂತಿ– ಕಷ್ಟಂ ಅನ್ಯಾಯ ಮಿತ್ಯರ್ಥಃ ॥

ಅರ್ಥ ॥ ಯಾವರು ರಾತ್ರಿಕಾಲದಲ್ಲಿ ಮನೆಗಳಿಗೆ ಕನ್ನ ಇಕ್ಕಿ ಕಳವು ಮಾಡುತ್ತಾರೋ,

---

* ಇವ ಇತಿಪಾಠಾಂತರಂ ॥

ಅಥವಾ ಹಗಲು ಹೊತ್ತು ಅಡವಿಯಲ್ಲಿ ಬಲತ್ಕಾರವಾಗಿ ಸುಲಿಗೆ ಮಾಡುತ್ತಾರೋ, ಅವರು ತಮ್ಮ ಒಡೆಯನ ಸೊತ್ತು ಚೋರಿ ಮಾಡುವಂಥವರಾಗುವದಿಲ್ಲವು, ಆದಾಗ್ಯೂ ಜನರು ಅವರಿಗೆ ಕಳ್ಳರೆಂದು ಹೆಸರಿಡುತ್ತಾರೆ. ಆದರೆ ಲೆಕ್ಕದಲ್ಲಿ ಅಂಕೆಗಳನ್ನು ಹೆಚ್ಚು ಕಡಿಮೆಯಾಗಿ ಬರೆದು ತಮ್ಮ ಒಡೆಯರ ಧನವನ್ನು ವಂಚನೆ ಮಾಡುವ ಈ ಮಹಾರಾಷ್ಟ್ರ ಗೃಹಸ್ಥರನ್ನು-- ಲೋಕದಲ್ಲಿ ಎಲ್ಲ ಜನರು ಸನ್ಮಾನಿಸುತ್ತಾರೆ! ಇದೆಷ್ಟು ದುಃಖಕರವು.

ಮೂ। ಅಯಂಖಲು ಅನುಪಮೋದೇಶ ಇತಿತ್ವದುಕ್ತಂ ಯುಕ್ತ ಮೇವ। ಯದತ್ರಸ್ವಲ್ಪೇನಾಪಿ ಯತ್ನೇನ ಮಹತೀ ಪ್ರತಿಷ್ಠಾ ಸಿದ್ಧ್ಯತಿ॥ ೧೭೯ ॥

ಟೀಕಾ॥ ಅಯಮಿತಿ । ಯತ್ನೇನ ಪ್ರಯಾಸೇನ॥

ಅರ್ಥ ॥ ಈ ದೇಶಕ್ಕೆ ಜೋಡಾದ ದೇಶವು ಇಲ್ಲವೆಂದು ನೀನು ಹೇಳಿದ್ದು ಯಥಾರ್ಥವೇ; ಯಾಕೆಂದರೆ ಇಲ್ಲಿ ಅಲ್ಪ ಉದ್ಯೋಗದಿಂದ ಬಹಳ ಕೀರ್ತಿಲಭಿಸುತ್ತದೆ.

ಮೂ।ಶ್ಲೋ। ವೇದವ್ಯಾಸಸ್ಸ *ಇಹದಶಯೋವೇದವೇದಾಕ್ಷರಾಣಿ ಶ್ಲೋಕಂತ್ವೇಕಂ ಪರಿಪಠತಿಯಃ ಸಸ್ಸ್ವಯಂ ಜೀವಏವ। ಆಪಸ್ತಂಬಸ್ಸ ಕಿಲಕಲಯೇತ್ಸಮ್ಯ ಗೌಪಾಸನಂಯಃ ಕಷ್ಟಂ ಶಿಷ್ಟ ಕ್ಷತಿ ಕೃತಿ ಕಲೌಕಾರ್ಶ್ಯಮೃಚ್ಛಂತಿ ವಿದ್ಯಾಃ॥ ೧೮೦॥

ಟೀಕಾ ॥ ವೇದೇತಿ॥ ಇಹದೇಶೇ—ಯೋವಿಪ್ರಃ—ದಶವೇದಾಕ್ಷರಾಣಿ—ವೇದಅಧೀತವಾನ್— ಸವೇದವ್ಯಾಸಏವ—ಭವತೀತಿಪಾದತ್ರಯೇಪಿಯೋಜ್ಯಂ—ಯಸ್ತ್ವೇಕಂ ಶ್ಲೋಕಂ ಪರಿಪಠತಿ—ಸಃ ಸ್ವಯಂ ಸಾಕ್ಷಾತ್ ಜೀವಃ ಬೃಹಸ್ಪತಿರೇವ—ಯಃ ಔಪಾಸನಂ ಅಗ್ನಿಕಾರ್ಯಂ ಸಮ್ಯಕ್ಕಲಯೇತ್—ಸಃ ಆಪಸ್ತಂಬಃ—ಕಿಲೇತ್ಯವಧಾರಣೇ—ಶಿಷ್ಟಾನಾಂ ಕ್ಷತಿಂ ಹಾನಿಂ ಕರೋತೀತಿ ತತ್ಕೃತಿ—ಕಲೌಯುಗೇ—ವಿದ್ಯಾಃ ಕಾರ್ಶ್ಯಂ ಕ್ಷೀಣತ್ವಂ ಮೃಚ್ಛಂತಿ ಪ್ರಾಪ್ನುವಂತಿ ಕಷ್ಟಂ ॥

ಅರ್ಥ ॥ ಈ ಮಹಾರಾಷ್ಟ್ರ ದೇಶದಲ್ಲಿ ಹತ್ತು ವೇದಾಕ್ಷರಗಳು ಬಲ್ಲವನು ವೇದವ್ಯಾಸನೆನ್ನಿಸಿಕೊಳ್ಳುತ್ತಾನೆ. ಒಂದೇ ಶ್ಲೋಕ ಬಾಯಿಪಾಠ ಹೇಳಿದವನು ಪ್ರತ್ಯಕ್ಷ ಬೃಹಸ್ಪತಿಯನ್ನಿಸಿಕೊಳ್ಳುತ್ತಾನೆ. ಅಗ್ನಿ ಕಾರ್ಯ ಸಮನಾಗಿ ಮಾಡಿದವನು ಆಪಸ್ತಂಬ ಋಷಿಗೆ ಸಮಾನನೆನ್ನಿಸಿಕೊಳ್ಳುತ್ತಾನೆ. ಕಷ್ಟವಯ್ಯಾಕಷ್ಟ! ಸಜ್ಜನರನ್ನು ಕುಂದಿಸುವ ಕಲಿಯುಗದಲ್ಲಿ ವಿದ್ಯೆಗಳು ಕ್ಷೀಣತ್ವಕ್ಕೆ ಮುಟ್ಟುತ್ತವೆ.

ವಿಶ್ವಾವಸುಃ॥

ಮೂ । ಕಿಮರೇ ಭೂಸುರೇಷ್ವೇವ ದೋಷಮುದ್ಘೋಷಯಸಿ ॥ ೧೮೧ ॥

---

* ನವದಶ ಇತಿಪಾಠಾಂತರಂ ||

ಅರ್ಥ ॥ ಎಲೆ ನೆಲೆ ಗೆಳೆಯನೇ, ಈ ಪ್ರಕಾರವಾಗಿ ಬ್ರಾಹ್ಮಣರ ದೂಷಣೆಯನ್ನು ಬೈ ಲು ಪಡಿಸುತ್ತೀಯಾ ?

ಮೂ। ಶ್ಲೋ। ಅತ್ರಾಪಿಸಂತಿ ಬಹವಃ ಕಲಿತಾಗ್ನಿ ಹೋತ್ರಾ, ಶ್ಶಾಸ್ತ್ರಾರ್ಥ ಬೋಧಕುಶಲಾಃ ಕಿಲಶಾಂತಿಮಂತಃ । ಅಂತರ್ಮು ಖಾಸ್ಸತತ ಮಾತ್ಮವಿದೋಮಹಾಂತಃ ನಿರ್ಧೂತಬಾಹ್ಯವಿಷ ಯಾ ನಿಗಮಾಧ್ವನಿಷ್ಠಾಃ ॥ ೧೪೨ ॥

ಟೀಕಾ ॥ ಅತ್ರೇತಿ ॥ ಅತ್ರಮಹಾರಾಷ್ಟ್ರೇ ದೇಶೇಪಿ–ಗೃಹಸ್ಥೇಷ್ವಪೀತಿವಾ–ಬಹವೋಬುಧಾಃ– ಶಾಸ್ತ್ರಾಣಾಂ ಕರ್ಮಕಾಂಡಾನಾಂ ಅರ್ಥಬೋಧೇಕುಶಲಾಃ– ಅತಏವನಿಗಮಾಧ್ವನಿ ವೇದೋಕ್ತಕರ್ಮಣಿ ನಿಷ್ಠಾಆಸಕ್ತಿಃ ಯೇಷಾಂತೇ-ಅತಏವ-ಕಲಿತಾಗ್ನಿಹೋತ್ರಾಃ–ಅಗ್ನಿಹೋತ್ರಪದಂದರ್ಶ ಪೂರ್ಣಮಾಸಾದೀನಾಮುಪಲಕ್ಷಕಂ– ಕಿಂಚ– ಅಂತಃದಹರಾಕಾಶಸ್ಥಂಜ್ಯೋತಿಸ್ತತ್ಪ್ರತಿಮುಖಾಃ ಅಭಿಮುಖಾಃ ದಹರೋಪಾಸಕಾ ಇತಿಯಾವತ್–ಅತಏವ–ಸತತಂ ಆತ್ಮಾನಂ ಸ್ವಸ್ವರೂಪಂವಿಂದಂತಿ ಸಾಕ್ಷಾತ್ಕುರ್ವಂತೀತಿತದ್ವಿದಃ–ನಿರ್ಧೂತಬಾಹ್ಯ ವಿಷಯಾಶ್ಶಬ್ದಾದಿ ವಿಷಯವಿರಕ್ತಾಶ್ಚ–ಸಂತಿ–ಕರ್ಮಿಣೋಜ್ಞಾನಿನಶ್ಚ ದ್ವಯೇಪ್ಯತ್ರಸಂತೀತ್ಯರ್ಥಃ ॥

ಅರ್ಥ॥ ಈ ಮಹಾರಾಷ್ಟ್ರ ದೇಶದಲ್ಲಿಯೂ, ಕರ್ಮಾಚರಣ ಸಂಬಂಧೀ ಶಾಸ್ತ್ರಗಳ ಅರ್ಥವನ್ನು ತಿಳಿಸುವದರಲ್ಲಿ ಜಾಣತನ ಉಳ್ಳವರಾಗಿ ಅಗ್ನಿ ಹೋತ್ರವನ್ನಿಟ್ಟ ದರ್ಶಪೂರ್ಣಮಾಸಾದಿ ಯಜ್ಞಗಳನ್ನಾಚರಿಸುವವರಾದಂಥ, ವೈದೀಕ ಮಾರ್ಗದಲ್ಲಿ ಶ್ರದ್ಧೆಯುಳ್ಳ ಹೃದಯಗುಹೆಯಲ್ಲಿರುವ ಜ್ಯೋತಿಯ ಕಡೆಗೆ ದೃಷ್ಟಿ ಮಾಡಿ ಸ್ವಸ್ವರೂಪವನ್ನು ತಿಳಿದು ಕೊಂಡವರಾದಂಥಾ ಬಾಹ್ಯೇಂದ್ರಿಯ ವಿಷಯಗಳ ಲೇಪವನ್ನೂ ತೊಳದವರಾದಂಥ, ಚಿತ್ತ ಸ್ವಾಸ್ಥ್ಯದಿಂದ ಯುಕ್ತರಾದಂಥಾ ಜ್ಞಾನಿಗಳು ಇದ್ದೇ ಇದ್ದಾರೆ.

ಮೂ। ಅನ್ಯಚ್ಚ ।

ಶ್ಲೋ। ಶುಚೀಭೂತಾಸ್ಸ್ನಾನೈಶ್ಶ್ರುತಿಹಿತಪುರಾಣೋಕ್ತನಿಯ ಮಾದಪೂತಾನಾಂಸ್ಪರ್ಶಾನವಹಿತಹೃದೋವಿೂವಿಜಹತಃ ॥ ಸು ರಾಭ್ಯರ್ಚಾಂಕೃತ್ವಾಶುಚಿಕೃತಮದಂತ್ಯನ್ನಮನಘಂ ಮಹಾರಾ ಷ್ಟ್ರೇದೇಶೇವಿಲಸತಿಮಹಾನೇಷಹಿಗುಣಃ ॥ ೧೪೩ ॥

ಟೀಕಾ ॥ ಶುಚೀಭೂತಾ ಇತಿ ॥ಸ್ನಾನೈಃ ಶುಚೀಭೂತಾಃ ಪವಿತ್ರೀಕೃತಾಃ–ಶ್ರುತೀನಾಂ ಹಿತೈಃ ತದುಕ್ತಾರ್ಥಪ್ರತಿ ಪಾದಕೈಃ ಪುರಾಣೈಃ ಶೈವವೈಷ್ಣವೈಃ ಉಕ್ತಾತ್ ನಿಯಮಾತ್ ಆಚಾರಾತ್ಅವಹಿತಹೃದಃ ಅಪ್ರಮತ್ತಚಿತ್ತಾಃ–ಅತಏವ–ಅವಿೂಗೃಹಸ್ಥಾಃ ಅಪೂತಾನಾಂ ಅಸ್ಪೃಶ್ಯಾನಾಂ ಸ್ಪರ್ಶಾನ್ ವಿಜಹತಸ್ಸಂತಃ–ಶುಚಿಭಿಃ ಜನೈಃ ಕೃತಂಪಕ್ವಂ–ಅತಏವ ಅನಘಂ–ಅನ್ನಂ ಸುರಾಣಾಂ ಆದಿತ್ಯಾದೀನಾಂಅಭ್ಯರ್ಚಾಂ ಕೃತ್ವಾ–ದೇವೇಭ್ಯೋನಿವೇದ್ಯೇತ್ಯರ್ಥಃ–ಅದಂತಿಭುಂಜತೇ–ಏಷಉಕ್ತವಿಧಃ–ಮಹಾನ್ ಗುಣಃ–ಮಹಾರಾಷ್ಟ್ರೇದೇಶೇ–ಹಿರೇವಾರ್ಥೇ–ವಿಲಸತಿ–ನಾನ್ಯತ್ರೇತ್ಯರ್ಥಃ ॥

ಅರ್ಥ ॥ ಮತ್ತು ಈ ಮಹಾರಾಷ್ಟ್ರ ಗೃಹಸ್ಥರು ಸ್ನಾನದಿಂದ ನಿರ್ಮಲರಾಗಿ ಶುದ್ಧ ಮನಸ್ಕರಾಗಿ ವೇದಕ್ಕನುಸಾರವಾದ ಪುರಾಣೋಕ್ತ ಕಟ್ಟುಗಳ ಮೇರೆಗೆ ಮುಟ್ಟ ಬಾರದವರನ್ನು ಮುಟ್ಟದೆ, ಶುಚಿಯಾದ ಅಡಿಗೆಯುವರಿಂದ ಬೇಯಿಸಲ್ಪಟ್ಟ ಅನ್ನವನ್ನು ಆದಿತ್ಯಾದಿ ದೇವತೆಗಳಿಗೆ ನೈವೇದ್ಯಮಾಡಿ ಉಣ್ಣುತ್ತಾರೆ. ಈ ಉತ್ತಮವಾದ ಗುಣವು ಮಹಾರಾಷ್ಟ್ರರಲ್ಲಿ ಮಾತ್ರ ಇರುತ್ತದೆ.

ಮೂ। ಕಿಂಚ ॥

ಶ್ಲೋ। ಚಮೂನಿಯಮನೇನ ವಾ ಜನಪದಾಧಿಕಾರೇಣ ವಾ ದ್ವಿಜ
ವ್ರಜ ಉಪವ್ರಜನ್ ಪ್ರಭುಪದಂ ಮಹಾರಾಷ್ಟ್ರಜಃ। ನವೃ
ತ್ತಿಮಿಹಪಾಲಯೇದ್ಯದಿಧರಾಸುರಾಣಾಂತತೋಭವೇದ್ಯವನವೇ
ಷ್ಟಿತಂ ಭುವನಮೇತದಬ್ರಾಹ್ಮಣಮ್ ॥ ೧೮೪ ॥

ಟೀಕಾ ॥ ಚಮ್ವಿತಿ॥ ಮಹಾರಾಷ್ಟ್ರಜಃ–ದ್ವಿಜವ್ರಜಃ ಬ್ರಾಹ್ಮಣ ಸಮೂಹಃ–ಚಮ್ವಾಃ ಸೇನಾಯಾಃ ನಿಯಮನೇನ ಆಧಿಪತ್ಯೇನವಾ–ಜನಪದಸ್ಯ ದೇಶಸ್ಯ ಅಧಿಕಾರೇಣವಾ–ಪ್ರಭುಪದಂ ಪ್ರಭುತ್ವಂ–ಉಪವ್ರಜನ್ ಪ್ರಾಪ್ನುವನ್ ಸನ್–ಧರಾಸುರಾಣಾಂ ಬ್ರಾಹ್ಮಣಾನಾಂ– ವೃತ್ತಿಂ ಬ್ರಾಹ್ಮಣ್ಯಂ–ಇಹಮರ್ತ್ಯಲೋಕೇ– ನಪಾಲಯೇದ್ಯದಿ–ಯವನೈರ್ವೇಷ್ಟಿತಂಉಪಕ್ರಾಂತಂ– ಏತದ್ಭುವನಂ ಮರ್ತ್ಯಲೋಕಃ– ಅಬ್ರಾಹ್ಮಣಂ ಭವೇತ್–ಯವನ ಬ್ರಾಹ್ಮಣ ಯೋರ್ಜನ್ಮ ವಿರೋಧಾದಿತಿಭಾವಃ ॥

ಅರ್ಥ ॥ ಮಹಾರಾಷ್ಟ್ರ ಬ್ರಾಹ್ಮಣರು ಸೇನಾನಾಯಕತನ ಅಥವಾ ದೇಶಾಧಿಕಾರ ನಡಿಸಿ ಅರಸುತನದ ಪದವಿ ಪ್ರಾಪ್ತಮಾಡಿಕೊಂಡು ಬ್ರಾಹ್ಮಣರ ವೃತ್ತಿ ಈ ಲೋಕದಲ್ಲಿ ಸಂರಕ್ಷಿಸದೆ ಇದ್ದರೆ ಇಡೀಜಗತ್ತು ಯವನರಿಂದ ವ್ಯಾಪ್ತವಾಗಿ ಬ್ರಾಹ್ಮಣ ಹೀನವಾಗುತಿತ್ತು.

ಮೂ। ಯಚ್ಚ ದೋಷಾಂತರಂ *ಭಾಷಿತಂ ಭವತಾ ತದಶೇಷಮಪಿ
ಸಾಧುಜನೋಪಕಾರೇಣ †ಪರಿಹಾರ್ಯತೇ ॥ ೧೮೫ ॥

ಟೀಕಾ॥ ಯದಿತಿ॥ ದೋಷಾಂತರಂ ವೇದವಿದ್ಯಾಂ ವಿಹಾಯ ಯವನವಿದ್ಯಾಭ್ಯಾಸಾದಿರೂಪಂ ॥

ಅರ್ಥ ॥ ನಿನ್ನಿಂದ ಹೇಳಲ್ಪಟ್ಟ ಈ ಮಹಾರಾಷ್ಟ್ರರ ಬೇರೆ ಅವಗುಣಗಳಾದರೂ ಸಜ್ಜನರಿಗೆ ಉಪಕಾರ ಮಾಡಿದ್ದರಿಂದ ದೂರವಾಗುವಂಥವುಗಳಾಗಿವೆ.

ಮೂ।ಶ್ಲೋ।ಅಲಮಂಹಸಾಂಸಂಹರ್ತುಮಂಹಸ್ಸಹಸ್ರಂಸಪಿಕೋ
ಪಿ ವಿಪ್ರಪ್ರವೇಕೋಪಕಾರಃ। ಕಠೋರಃಕುಠಾರಃ ಕಿಲೈಕೋಪಿ
ತಿಗ್ಮೋವಿನಿರ್ಭೇತ್ತುಮಿಷ್ಟೇ ವಿಪದ್ರೂನನೇಕಾನ್ ॥ ೧೮೬ ॥

---

* ಭವತಾ ಪರಿಭಾಷಿತಂ † ಪರಿಹೀಯತೇ ಇತಿಪಾಠಾಂತರೇ ॥

ಟೀಕಾ॥ ಅಲಮಿತಿ॥ ಏಕಃ ಪ್ರಸಿದ್ಧಃ ಏಕೋಪಿ—ವಿಪ್ರ ಪ್ರವೇಕಸ್ಯ ಬ್ರಾಹ್ಮಣೋತ್ತಮಸ್ಯ ಉಪಕಾರಃ ಮಹಾರಾಷ್ಟ್ರ ಜಕೃತಃ— ಪ್ರವೇಕಾನುತ್ತಮೋತ್ತಮಾ ಇತಿಕೋಶಃ ಅಂಹಸಾಂ ಸಹಸ್ರಾಂ—ಮಂಕ್ಷುಸತ್ವರಂ—ಸಂಹರ್ತುಂ—ಅಲಂ ಸಮರ್ಥಃ—ಕಠೋರೋರೋದೃಢಃ—ತಿಗ್ಮಃ ತೀಕ್ಷ್ಣಃ—ಏಕೋಪಿಕುಠಾರಃ—ಅನೇಕಾನ್ ವಿಷದ್ರುಮಾನ್—ವಿನಿರ್ಭೇತ್ತುಂ—ಈಷ್ಟೇಶಕ್ನೋತಿಕಿಲ—ಭುಜಂಗಪ್ರಯಾತಂ॥

ಅರ್ಥ॥ ಒಬ್ಬ ಬ್ರಾಹ್ಮಣೋತ್ತಮಗೆ ಮಾಡಿದ ಉಪಕಾರವು, ತತ್ಕಾಲ ಸಾವಿರಾರು ಪಾಪಗಳನ್ನು ನಾಶ ಮಾಡಲಿಕ್ಕೆ ಸಾಕು. ಹದವುಳ್ಳ ಒಂದೇ ಕೊಡಲಿ ಹೇರಳ ನಂಜು ಮರಗಳನ್ನು ಕಡಿಯಲಿಕ್ಕೆ ಶಕ್ಯವಾಗುತ್ತದಲ್ಲವೇ?

ಕೃಶಾನುಃ॥

ಮೂ। ಅಸ್ತ್ವೇವಮಥಾಪಿ ಅತ್ರತ್ಯಾನಾಂ ಆದ್ಯೇತರ *ವರ್ಣಾನಾಂ ಪುನರತಿದುಸ್ಸಹಂ ಚೇಷ್ಟಿತಂ॥ ೧೪೭॥

ಟೀಕಾ॥ ಅಸ್ತ್ವಿತಿ॥ ಅತ್ರತ್ಯಾನಾಂ ಏತದ್ದೇಶ ಭವಾನಾಂ—ಆದ್ಯಾತ್ ಬ್ರಾಹ್ಮಣಕುಲಾದಿತರೇಷಾಂ ವರ್ಣಾನಾಂ ಕ್ಷತ್ರಿಯಾದೀನಾಂ—ಚೇಷ್ಟಿತಂ ಕರ್ಮ—ಅತಿದುಃಸಹಂ ಅತ್ಯಂತ ಲೋಕಪೀಡಾಕರಂ॥

ಅರ್ಥ॥ ಇದಂತಿರಲಿ. ಈ ನಾಡಿನೊಳಗಿನ ಬ್ರಾಹ್ಮಣರ ಹೊರತಾಗಿ ಬೇರೆ ಜ್ಯಾತಿಯ ಜನರ ನಡತೆಯು ಸೈರಿಸ ಕೂಡದಂಥಾದ್ದಾಗಿದೆ.

ಮೂ। ಪುಶ್ಯ। ದೇಶೆದೇಶೆಲಂಪಟಾಃಪರ್ಯಟಂತೋಭಂಜಂಭಂಜಂ ಬ್ರಾಹ್ಮಣಾದೀನಶೇಷಾನ್ । ಹಾರಂಹಾರಂಹಂತಸರ್ವಸ್ವಮೇಷಾಂ ಪಾಪಾಪತೆಸ್ವೋದರಂ ಪೂರಯಂತಿ॥ ೧೪೮॥

ಟೀಕಾ॥ ದೇಶೆದೇಶಇತಿ॥ ಲಂಪಟಾಃ ಪರದ್ರವ್ಯಾಪಹಾರಲಾಲಸಾಃ ಅತಏವ ಪಾಪಾಪತೆ ಅತ್ರತ್ಯಕ್ಷತ್ರಿಯಾದಯಃ—ದೇಶೆದೇಶೇ ಪ್ರತಿದೇಶಂ ಪರ್ಯಟಂತಸ್ಸಂಚರಂತಸ್ಸಂತಃ— ಬ್ರಾಹ್ಮಣಾದೀನ್ ಅಶೇಷಾನ್ಸರ್ವಾನ್—ಭಂಜಂಭಂಜಂ ಭಂಕ್ತ್ವಾ ಭಂಕ್ತ್ವಾ—ಏಷಾಂ ಬ್ರಾಹ್ಮಣಾದೀನಾಂ—ಸರ್ವಸ್ವಂನಿಖಿಲಧನಂ—ಹಾರಂಹಾರಂ ಹೃತ್ವಾಹೃತ್ವಾ—ಸ್ವೇಷಾಂ ಉದರಂ ಪೂರಯಂತಿ— ಹಂತೇತಿಖೇದೆ॥

ಅರ್ಥ॥ ನೋಡು- ಅತ್ಯಾಶೆಯಿಂದ ಹೆರರ ಸೊತ್ತು ಲೂಟಿ ಮಾಡುವದಕ್ಕೆ ಆ ಆ ಊರುಗಳ ಮೇಲೆ ದೌಡು ಮಾಡಿ, ಬ್ರಾಹಣರೇ ಮೊದಲಾದ ಎಲ್ಲ ಜ್ಯಾತೀ ಜನರುಗಳನ್ನು ಹೊಡದು ಬಡದು ಅವರ ಸೊತ್ತೆಲ್ಲ ಕೊಳ್ಳೆ ಮಾಡಿ, ಈ ಮರಾಠಿ ಜನರು ತಮ್ಮ ಹೊಟ್ಟೆ ತುಂಬಿ ಕೊಳ್ಳುತ್ತಾರೆ.

ವಿಶ್ವಾವಸುಃ॥

ಮೂ । ಸತ್ಯಮೇವತಥಾಪ್ಯೇತೇಷಾಂಚೇಷ್ಟಿತಂ †ಸಹನೀಯಂ॥ ೧೪೯॥

ಅರ್ಥ॥ ಅಹುದು! ಆದಾಗ್ಯೂ ಅವರ ನಡತೆಯನ್ನು ಜನರು ಸೈರಿಸತಕ್ಕದ್ದು.

---

* ವರ್ಣಪ್ರಭವಾನಾಮಿತಿಪಾಠಾಂತರಂ॥ † ಮರ್ಷಣೀಯಮಿತಿ ಪಾಠಾಂತರಂ॥

ಮೂ। ತಥಾಹಿ। ಶ್ಲೋ । ಮಾಯಾಚುಂಚುತಯಾಭಯಾವಹ ಗತಿಃಪ್ರತ್ಯರ್ಥಿಪೃಥ್ವೀಭುಜಾಂಮಹಾರಾಷ್ಟ್ರಭಟಚ್ಛಟಾರಣ ಪಟುರ್ನೋಪರ್ಯಟತ್ಯೇವಚೇತ್। ದೇವಬ್ರಾಹ್ಮಣವರ್ಗನಿಗ್ರಹಕೃತೋ ದೇಶಾಂಸ್ತುರುಷ್ಕಾಇಮೇ ನಿಷ್ಪ್ರತ್ಯೂಹಮನೋರಥಾವಿತನುಯುರ್ನಿರ್ದೇವಭೂಮೀಸುರಾನ್ ॥ ೯೦ ॥

ಟೀಕಾ ॥ ಮಾಯೇತಿ। ರಣಪಟುಃ—ಮಹಾರಾಷ್ಟ್ರ ಭಟಾನಾಂ ಮಹಾರಾಷ್ಟ್ರಾಣಾಂ ಭಟಾನಾಂ ಛಟಾಸಮೂಹಃ—ಮಾಯಯಾ ಪ್ರಸಿದ್ಧತ್ವೇನ ಮಾಯಾಚುಂಚುತಯಾ ಹೇತುನಾ—ತೇನವಿತ್ತ ಇತ್ಯಾದಿನಾಚುಂಚುಪ್ರತ್ಯಯಃ—ಪ್ರತ್ಯರ್ಥಿನಾಂ ಶತ್ರೂಣಾಂ ಪೃಥ್ವೀಭುಜಾಂ ತುರುಷ್ಕನೃಪಾಣಾಂ—ಭಯಾವಹಗತಿಸ್ಸತೀ—ನೋಪರ್ಯಟತ್ಯೇವಚೇತ್—ದೇವಾನಾಂ ದೇವಸ್ಥಲಾನಾಂ ಬ್ರಾಹ್ಮಣಾನಾಂಚ ವರ್ಗಸ್ಯನಿಗ್ರಹಂ ಕುರ್ವಂತೀತಿ ತತ್ಕೃತಃ—ಇಮೇತುರುಷ್ಕಾ ನಿಷ್ಪ್ರತ್ಯೂಹಃ ನಿರ್ವಿಘ್ನಃ ಮನೋರಥಃ ವಕ್ಷ್ಯಮಾಣವಿಷಯಕಃ ಯೇಷಾಂತಥೋಕ್ತಾಸ್ಸಂತಃ—ದೇಶಾನ್ ಸರ್ವಾನ್—ನಿರ್ದೇವಭೂಮೀಸುರಾನ್—ವಿತನುಯುಃಕುರ್ಯುರೇವ ॥

ಅರ್ಥ ॥ ಪೋಹ ಹಾಕುವದರಲ್ಲಿ ಅತಿ ಚತುರರಾದ ಮತ್ತು ಯುದ್ಧ ಕುಶಲರಾದ ಈ ಮರಾಠಿ ವೀರರು, ಶತ್ರುಗಳಾದ ಮುಸಲ್ಮಾನ ಅರಸುಗಳಿಗೆ ಭಯಂಕರರಾಗಿ ಸಂಚರಿಸುತ್ತ ಇರದೆ ಇದ್ದರೆ, ದೇವ ಬ್ರಾಹ್ಮಣರನ್ನು ದಂಡಿಸುವಂಥ ಮುಸಲ್ಮಾನರು ತಮ್ಮ ಸಂಕಲ್ಪಗಳನ್ನು ನಿರಾತಂಕವಾಗಿ ನೆರವೇರಿಸಿ ಎಲ್ಲ ದೇಶಗಳನ್ನು ದೇವ ಬ್ರಾಹ್ಮಣ ರಹಿತವಾಗಿ ಮಾಡುತ್ತಿದ್ದರು.

ಮೂ । ತತಶ್ಚ ॥

ಶ್ಲೋ । ದೇವಕ್ಷೋಣೀಸುರಹಿತಕೃತೇದಾರಿತಂಮ್ಲೇಚ್ಛಪುಜ್ಞೈರ್ಮಹ್ಯಾಂಸಹ್ಯಾಕಥಮಪಿ ಮಹಾರಾಷ್ಟ್ರಯೂಥಸ್ಯಚೇಷ್ಟಾ।ವ್ಯಾಧಿವ್ಯೂಹ *ಪ್ರತಿಹತಿಕೃತಾಂವ್ಯಕ್ತಮುಗ್ರೌಷಧಾನಾಂ ಕಾಯಾರೋಗ್ಯಪ್ರಣಯಿಹೃದಯೈಃಕಾಟವಂಮರ್ಷಣೀಯಂ ॥ ೯೧ ॥

ಟೀಕಾ ॥ ತತಃ ಉಕ್ತೋಪಪದ್ಯಾದ್ಧೇತೋಃ ॥ ದೇವೇತಿ ॥ ದೇವಕ್ಷೋಣೀಸುರಾಣಾಂ ಉಭಯೇಷಾಂ ಹಿತಕರಣಾರ್ಥಂ ಹಿತಕೃತೇ ಕೃಚ್ಛ್ರಃ ಭಾವೇಕ್ವಿಬಂತಃ—ದಾರಿತಮ್ಲೇಚ್ಛಪುಜ್ಞೈಃ ಮಹಾರಾಷ್ಟ್ರಯೂಥಸ್ಯ ಚೇಷ್ಟಾ ಕಥಮಪಿ ಅತಿಪ್ರಯಾಸೇನ ಮಹ್ಯಾಂಸಹ್ಯಾ ಸಹನೀಯಾ ಜನೈರಿತಿಶೇಷಃ—ಕಾಯಸ್ಯ ಶರೀರಸ್ಯ ಆರೋಗ್ಯೇ ಪ್ರಣಯಿ ಪ್ರೇಮಯುಕ್ತಂ ಹೃದಯಂ ಯೇಷಾಂತೈಃ ರೋಗಿಭಿಃ ವ್ಯಾಧಿವ್ಯೂಹಸ್ಯ ರೋಗಸಮೂಹಸ್ಯ ಪ್ರತಿಹತಿಕೃತಾಂ ನಾಶಕಾರಿಣಾಂ—ಉಗ್ರಾಣಾಂ ತೀಕ್ಷ್ಣಾನಾಂ ಔಷಧಾನಾಂ—ವ್ಯಕ್ತಂ ಉಲ್ಬಣಂ ಕಾಟವಂ ಕಟುತ್ವಂ—ಮರ್ಷಣೀಯಂ ಸಹನೀಯಂ ॥

---

* ಪ್ರತಿಕೃತಿ ಇತಿಪಾಠಾಂತರಂ ॥

ಅರ್ಥ ॥ ದೇವಬ್ರಾಹ್ಮಣರ ಒಳ್ಳಿತು ಮಾಡುವದಕ್ಕೆ, ಮ್ಲೇಚ್ಛ ಅಂದರೆ ಯವನರ ಸಮೂಹವನ್ನು ನಾಶಪಡಿಸಿದಂಥ ಮಹಾರಾಷ್ಟ್ರ ವೀರರ ಕೃತ್ಯಗಳನ್ನು ಪೃಥ್ವಿಯಲ್ಲಿ ಜನರು ಹ್ಯಾಗಾದರೂ ಮಾಡಿ ಸೈರಿಸತಕ್ಕದ್ದು. ದೇಹವನ್ನು ಆರೋಗ್ಯಸ್ಥಿತಿಯಲ್ಲಿರಿಸಿ ಕೊಳ್ಳಲಿಚ್ಛಿಸುವ ರೋಗಿಗಳು ರೋಗಸಮುದಾಯದ ನಿವಾರಣೆ ಮಾಡುವ ಬಿಗಿಯಾದ ಮದ್ದುಗಳ ಕಠಿಣತ್ವವನ್ನು ಸೈರಿಸತಕ್ಕದ್ದು.

ಮೂ॥ ಇತ್ಯನ್ಯತೋವಿಮಾನಂಗಮಯನ್ನಗ್ರತೋದೃಷ್ಟ್ವಾ ॥

ಅರ್ಥ ॥ ಈ ಪ್ರಕಾರವಾಗಿ ಅನುಸಂಧಾನ ಮಾಡಿ ವಿಮಾನವನ್ನು ಮುಂದಕ್ಕೆ ನಡಿಸಿ ಎದುರಿಗೆ ನೋಡಿ ( ವಿಶ್ವಾವಸು ಹೇಳುತ್ತಾನೆ. )—

ಮೂ। ಕಇಮೇಬಹವಸ್ಸಮವೇತಾವಿಮಾನುಷಾಮಾರ್ಗಾನಶೇಷಾನಪ್ಯಶೂನ್ಯಯಂತಿ ॥ ೧೯೨ ॥

ಟೀಕಾ ॥ ಕಇತಿ ॥ ಸಮವೇತಾಸ್ಸಂಘೀಭೂತಾಸ್ಸಂತಃ—ಅಶೇಷಾನ್ ಸರ್ವದೇಶೀಯಾನ್ ಮಾರ್ಗಾನಪಿ—ಅಶೂನ್ಯಯಂತಿ ಸಂಕಟೀ ಕುರ್ವಂತಿ—ಇಮೇಕೇ ॥

ಅರ್ಥ ॥ ಇವರ್‍ಯಾರಪ್ಪ, ಗುಂಪು ಕೂಡಿ ಮಾರ್ಗಗಳನ್ನೆಲ್ಲಾ ಕಟ್ಟುತ್ತಾರೆ?

ಮೂ। ನಿಪುಣಂನಿರೂಪ್ಯಸಶ್ಲಾಘಂ ॥

ಟೀಕಾ ॥ ನಿಪುಣಮಿತಿ ॥ ನಿರೂಪ್ಯ ಪರೀಕ್ಷ್ಯ ॥

ಅರ್ಥ ॥ ಚನ್ನಾಗಿ ಪರೀಕ್ಷಿಸಿ ವಿಶ್ವಾವಸು ಸ್ತುತಿ ಮಾಡುತ್ತಾನೆ.

ಮೂ। ಶ್ಲೋ। ಅಂಗಾನ್ವಂಗಾನ್ಕಳಿಂಗಾನಥಮಗಧಕುರೂನ್ಕೋಸಲಾನ್ಕೇಕಯಾನ್ವಾ ಕಾಶ್ಮೀರಾನ್ ಕುಂತಲಾನ್ವಾಯವನಜನಪದಾನ್ಕಿಂಚಪಾಂಚಾಲದೇಶಾನ್। ನೇಪಾಳಾನ್ಕೇರಳಾನ್ವಾಕತಿಚನಕೃತಿನಃಪಾಂಡ್ಯತುಂಡೀರ*ದೇಶಾನ್ಕರ್ಣಾಟಾನ್ಗೌಡಲಾಟಾನ್ಪರಗತಿಘಟನಾಲಂಪಟಾಃಪರ್ಯಟಂತೇ ॥ ೧೯೩ ॥

ಟೀಕಾ ॥ ಅಂಗಾನಿತಿ ॥ ಕೃತಿನಃ—ಅತಏವ ಪರಸ್ಮಿನ್ ಲೋಕೇ ಗತೇಸ್ಸಾಖ್ಯಸ್ಯ ಘಟನಾಯಾಂಲಂಪಟಾಃಕತಿಚನಕೇಚಿತ್ಪ್ರೈರಾಗಿಣಃ ಅಂಗಾದಯಃ ದೇಶವಿಶೇಷಾಃ ತಾನ್ ಪರ್ಯಟಂತೇ ॥ ತೀರ್ಥಯಾತ್ರಾರ್ಥಮಿತಿಭಾವಃ। ಸ್ರಗ್ಧರಾ ॥

ಅರ್ಥ ॥ ಇವರು ಅಂಗ, ಕಳಿಂಗ, ಮಗಧ, ಕುರು, ಕೋಸಲ, ಕೇಕಯ, ಕಾಶ್ಮೀರ, ಕುಂತಲ, ಪಾಂಚಾಲ, ನೇಪಾಳ, ಕೇರಳ, ಪಾಂಡ್ಯ, ತುಂಡೀರ, ಕರ್ಣಾಟ

---

* ಚೋಳಾನ್ ಇತಿಪಾಠಾಂತರಂ ॥

ಗೌಡಲಾಟ, ದೇಶದವರಾದ ಕೆಲವು ಪುಣ್ಯವಂತರು, ಮುಕ್ತಿ ಸುಖ ಸಂಪಾದಿಸುವ ಯತ್ನದಲ್ಲಿ ಆಸಕ್ತರಾಗಿ ಸಂಚಾರ ಮಾಡುತ್ತಾರೆ.

ಕೃಶಾನುಃ ॥

ಮೂ। *ಅಯೇಕಿಮೇತಾನ್ನಿಂದನೀಯಾನಭಿನಂದಸಿ ॥

ಅರ್ಥ ॥ ಏನೆಲಾ, ನಿಂದೆಗೆ ಅರ್ಹರಾದ ಇವರ ಹೊಗಳಿಕೆ ಮಾಡುತಿಯಾ ?

ಮೂ। ಶ್ಲೋ।ನಾನಾಜಾತಿಭವಾಇಮೇಕಲಿಬಲಾದೇಕೀಭವಂತೋ
ನರಾಃವೈರಾಗ್ಯಾಭಿನಯಂಚಿರಾದ್ವಿದಧತೋವರ್ಣಾಶ್ರಮತ್ಯಾಗಿನಃ।
ನಿರ್ಧೂತಾನಘವೈದಿಕಪ್ರಣಮನಾನಿಷ್ಕಿಂಚನಾವಂಚನಾದಕ್ಷಾ
ದಿಕ್ಷುವಿದಿಕ್ಷುಕುಕ್ಷಿಭೃತಯೇಭಿಕ್ಷಾಟನಂಕುರ್ವತೇ ॥ ೧೯೪ ॥

ಟೀಕಾ ॥ ನಾನೇತಿ ॥ ನಾನಾ ಜಾತಿಭವಾಅಪಿ–ಕಲೇರ್ಬಲಾನ್ಮಾಹಾತ್ಮ್ಯಾದೇಕೀಭವಂತಃ ಅತಏವ ವರ್ಣಾನಾಂ ಬ್ರಾಹ್ಮಣಾದೀನಾಂ ಕುಲಧರ್ಮಾಣಾಂ ಆಶ್ರಮಾಣಾಂ ಬ್ರಹ್ಮಚರ್ಯಾದ್ಯುಚಿತ ಧರ್ಮಾಣಾಂತ್ಯಾಗಃ ಏಷಾಮಸ್ತೀತಿ ತ್ಯಾಗಿನಃ ಚಿರಾದ್ವೈರಾಗ್ಯಸ್ಯ ಅಭಿನಯಂ ಪ್ರಕಟನಂ ವಿದಧತಃ ಅತಏವ ನಿರ್ಧೂತಂ ತ್ಯಕ್ತಂ ಅನಘಾನಾಂ ವೈದಿಕಾನಾಂ–ಪ್ರಣಮನಂ ನಮಸ್ಕಾರಃ–ಯೈಸ್ತೇ–ನಿಷ್ಕಿಂಚನಾಃ ದರಿದ್ರಾಃ–ಅತಏವ–ಇಮೇನರಾಃ– ವೈರಾಗಿಣಃ–ವಂಚನಾಯಾಂ ಪರಪ್ರತಾರಣಾಯಾಂದಕ್ಷಾಸ್ಸಂತಃ ಕುಕ್ಷೇಃ ಭೃತಯೆ ಪೂರಣಾಯ– ದಿಕ್ಷುವಿದಿಕ್ಷು ಅವಾಂತರದಿಶಾಸುಚ– ಭಿಕ್ಷಾರ್ಥಮಟನಂಕುರ್ವತೇ ॥

ಅರ್ಥ ॥ ಬೇರೆ ಬೇರೆ ಜ್ಯಾತಿ ಕುಲದಲ್ಲಿ ಹುಟ್ಟಿದವರಾದಾಗ್ಯೂ ಇವರು ಕಲಿಯುಗದ ಉತ್ಕರ್ಷದ ಕಾರಣದಿಂದ ಒಂದಾಗಿ ಬ್ರಾಹ್ಮಣ ಕ್ಷತ್ರಿಯ ಮುಂತಾದ ಜ್ಯಾತಿ ಧರ್ಮಗಳನ್ನೂ ಬ್ರಹ್ಮಚರ್ಯಾದಿ ಆಶ್ರಮ ಧರ್ಮಗಳನ್ನೂ ನೀಗಿ, ತಾವು ವೈರಾಗಿಗಳು ಬಹು ಕಾಲದಿಂದ ಪ್ರಪಂಚದಲ್ಲಿ ವಿರಕ್ತಿಯುಳ್ಳವರೆಂದು ತೋರಿಸಿಕೊಂಡು, ಶುದ್ಧರಾದ ವೈದೀಕರುಗಳಿಗೆ ನಮಸ್ಕಾರ ಮಾಡುವದನ್ನು ಬಿಟ್ಟು ಕೊಟ್ಟು, ದರಿದ್ರರಾಗಿ ಹೆರರಿಗೆ ಮೋಸ ಗೊಳಿಸುವದರಲ್ಲಿ ಕುಶಲರಾಗಿ ಹೊಟ್ಟೆ ತುಂಬಿಕೊಳ್ಳುವದಕೋಸ್ಕರ ಆ ಕಡೆ ಈ ಕಡೆ ಭಿಕ್ಷೆ ಬೇಡುವದಕ್ಕೆ ತಿರುಗಾಡುತ್ತಾರೆ.

ಮೂ।ಶ್ಲೋ। ವಿಮಲಚರಿತಾವಿಶ್ವಾಮಿತ್ರಾದಯಃಪುರಮರ್ಷಯೊ
ಬಹುಭಿರತುಲೈರ್ಬ್ರಾಹ್ಮಣ್ಯಂಯತ್ತಪೋಭಿರುಪಾರ್ಜಯನ್ ।
ತದಿಹಜಹತೋಜನ್ಮಪ್ರಾಪ್ತಂತ್ರಯೀವಿಮುಖೇಷ್ವಮೀಷ್ವಹಹ
ಕತಿಚಿತ್ಪಾಷಂಡೇಷುಪ್ರವಿಶ್ಯಹತಾಜನಾಃ ॥ ೧೯೫ ॥

* ಅರೇ ಇತಿಪಾಠಾಂತರಂ ॥

ಟೀಕಾ || ವಿಮಲೇತಿ | ವಿಮಲಚರಿತಾಃ ವಿಶ್ವಾಮಿತ್ರಾದಯಃ— ಪರಮರ್ಷಯಃ ಬಹುಭಿರತುಲೈರ್ದುಷ್ಕರೈಸ್ತಪೋಭಿಃ ಯದ್ಬ್ರಾಹ್ಮಣ್ಯಮುಪಾರ್ಜಯನ್—ಇಹಲೋಕೇ—ಜನ್ಮನೈವನತುತಪೋಭಿಃ ಪ್ರಾಪ್ತಂ—ತದ್ಬ್ರಾಹ್ಮಣ್ಯಂ—ಜಹತಃ—ಕತಿಚಿತ್—ಶ್ರುತಿವಿಮುಖೇಷು ವೇದಬಾಹ್ಯೇಷು—ಪಾಷಂಡೇಷು ಶ್ರಿತಸ್ಮಾರ್ತಭ್ರಷ್ಟೇಷು—ಅವಿಷು ವೈರಾಗಿಷು— ಪ್ರವಿಶ್ಯತೈರೇಕೀ ಭೂಯಇತ್ಯರ್ಥಃ—ಹತಾಃ ಭ್ರಷ್ಟಾಇತ್ಯರ್ಥಃ—ಅಹಹ ||

ಅರ್ಥ || ನಿಷ್ಪಾಪವಾದ ನಡತೆಯುಳ್ಳ ಋಷಿಗಳಲ್ಲಿ ಹಿರಿಯರಾದ ವಿಶ್ವಾಮಿತ್ರನೇ ಮೊದಲಾದ ಋಷಿಗಳು ಕಡುಕಠಿಣವಾದ ಅನೇಕ ತಪಗಳನ್ನು ಮಾಡಿ ಪಡದಂಥ ಬ್ರಾಹ್ಮಣ್ಯವು ಲೋಕದಲ್ಲಿ ಈ ಜನರಿಗೆ ಜನ್ಮವಶಾತ್ ಬಂದಿರಲು, ಅದನ್ನು ಪರಿತ್ಯಾಗ ಮಾಡಿ ವೇದಗಳಿಂದ ಹಿಂತಿರಿಗಿದಂಥಾ ಈ ನಾಸ್ತಿಕರುಗಳ ಸಂಗಡ ಕೂಡಿಕೊಂಡು ಜನರು ಭ್ರಷ್ಟರಾಗುತ್ತಾರಲ್ಲವೇ? ಅಯ್ಯೋ! ಇದೆಷ್ಟು ವಿಷಾದಕರವಾದ ಸಂಗತಿ!

ವಿಶ್ವಾವಸುಃ ||

ಮೂ | ಕಥಮರೇಹರೇರ್ಭಕ್ತೇಷುವಿರಕ್ತೇಷ್ವಪ್ಯಸೂಯಸಿಸನ್ನಹ್ಯಸೀ || ೯೬ ||

ಟೀಕಾ || ಕಥಮಿತಿ | ಸನ್ನಹ್ಯಸಿ ಉದ್ಯುಕ್ತೋಭವಸಿ ದೂಷಯಿತುಮಿತಿಶೇಷಃ ||

ಅರ್ಥ || ಎಲಾ ಮಿತ್ರನೇ! ವೈರಾಗ್ಯಶೀಲರಾದ ವಿಷ್ಣು ದಾಸರನ್ನು ನಿಂದಿಸಲಿಕ್ಕೆ ಸೊಂಟಗಟ್ಟುತ್ತಿಯಾ?

ಮೂ | ಶ್ಲೋ | ದೋಷೇಭ್ಯೋನೈವಭೇತವ್ಯಂದೃಢಾಚೇದ್ಭಕ್ತಿರಚ್ಯುತೇ | ತಿಮಿರೇಭ್ಯೋನಹಿಭಯಂದೀಪಶ್ಚೇಲ್ಲಭ್ಯತೆಮಹಾನ್ || ೯೭ ||

ಟೀಕಾ || ದೋಷೇಭ್ಯಇತಿ || ಅಚ್ಯುತೆಭಗವತಿ ಶ್ರೀಕೃಷ್ಣೆದೃಢಾ ಭಕ್ತಿರಸ್ತಿಚೇತ್—ದೋಷೇಭ್ಯಃ ಉಕ್ತೇಭ್ಯೋನಭೇತವ್ಯಂ ಭಯಂನಕಾರ್ಯಮೇವ— ಮಹಾನ್ದೀಪಃ ಲಭ್ಯತೆಚೇತ್—ತಿಮಿರೇಭ್ಯಃ ಭಯಂ ನಾಸ್ತಿಹಿ—ಪ್ರತಿವಸ್ತೂಪಮಾಲಂಕಾರಃ ||

ಅರ್ಥ || ಶ್ರೀವಿಷ್ಣುವಿನಲ್ಲಿ ಸ್ಥಿರವಾದ ಶ್ರದ್ಧೆ ಇದ್ದರೆ ನಿನ್ನಿಂದ ಈಗ ಪ್ರಕಟಸಲ್ಪಟ್ಟಂಥ ಕೊರತೆಗಳಿಂದೇನು ಭಯವಿಲ್ಲವು. ಪ್ರಕಾಶಮಾನವಾಗಿ ಉರಿಯುವ ದೀಪ ದೊರಕಿದರೆ ಕತ್ತಲೆಯ ಭೀತಿ ಇಲ್ಲವು.

ಮೂ | ಕಿಂಚ |

ಶ್ಲೋ|ದುಃಖಂಚಜನ್ಮದುರಿತಂಚದೃಢಾಮವಿದ್ಯಾಂಹಾಹಂತಹಂತಿಪರಮಾಹರಿಭಕ್ತಿರೇಕಾ |ಏಕೋಪಿರಾಘವಶರಃಕಿಲಸಪ್ತಸಾಲಾನ್ ಶೈಲಂರಸಾತಲಮಪಿತ್ವರಯಾಬಿಭೇದ || ೯೮ ||

* ಸಪ್ತತಾಲಾ ನಿತಿಪಾಠಾಂತರಂ ||

ಟೀಕಾ ॥ ದುಃಖಮಿತಿ ॥ ಪರಮಾದೃಢಾ–ಹರಿಭಕ್ತಿಃ ಏಕೈವ–ಅವಿದ್ಯಾಂ ಅಜ್ಞಾನಂ–ರಾಘವಸ್ಯಶ್ರೀರಾಮಸ್ಯಶರಃ–ಏಕೋಪಿಸನ್–ಸಪ್ತಸಾಲಾನ್–ಶೈಲಂತದಾಶ್ರಯಂ–ರಸಾಯಾಃ ತದಾಶ್ರಯಭೂಮೇಃ ತಲಂ ಪ್ರದೇಶಮಪಿ–ತ್ವರಯಾ ಬಿಭೇದಕಿಲ–ಹಾಹಂತೇತ್ಯಭಯತ್ರಾಶ್ಚರ್ಯೇ ॥

ಅರ್ಥ ॥ ನೋಡು ಇದೆಷ್ಟು ಆಶ್ಚರ್ಯ! ಶ್ರೀವಿಷ್ಣುವಿನಲ್ಲಿ ದೃಢವಾಗಿ ಭಕ್ತಿ ಇದ್ದರೆ ಅದು ಒಂದರಿಂದಲೇ ಕ್ಲೇಶ ಜನ್ಮ ಮರಣ ದುಃಖ ಮತ್ತು ಕಠಿಣವಾದ ಮಾಯೆ ಇವುಗಳೆಲ್ಲ ನಾಶವಾಗಿ ಹೋಗುತ್ತವೆ. ಶ್ರೀರಾಮನ ಒಂದೇ ಬಾಣದಿಂದ ಏಳು ಸಾಲ ವೃಕ್ಷಗಳು ಅವುಗಳಿರುವ ಮಲೆ ಮತ್ತು ಅವುಗಳು ಹುಟ್ಟಿದ ಭೂಮಿ ಈ ಮೂರುಗಳು ನಾಶವಾಗಿ ಹೋಗಲಿಲ್ಲವೋ? ಈ ಅದ್ಭುತ ಪ್ರಸಿದ್ಧವಾಗಿದೆಯಷ್ಟೇ.

ಮೂ ॥ ಅಪಿಚ । ಧುನೋತಿನಿಬಿಡಂತಮಃಪರಿಲುನಾತಿಪಾಪಾಟ
ವೀಂ ತನೋತಿಚಮನೋರಥಾನುಪಚಿನೋತಿನಾನೋತ್ಸವಾನ್ ।
ಅನಕ್ತಿಚಪುನಃಪುನರ್ಮನುಮನಸ್ಸುಧಾನಿರ್ಝರೈರ್ವ್ಯನಕ್ತಿಪ
ರಿಪಕ್ತ್ರಿಮಂವೃಷಗಿರೀಶಭಕ್ತಿಶ್ಶುಭಂ ॥ ೯೯ ॥

ಟೀಕಾ ॥ ಧುನೋತೀತಿ ॥ ವೃಷಗಿರಿಃ ವೇಂಕಟಾಚಲಃ ತಸ್ಯೇಶಃ ಶ್ರೀನಿವಾಸಃ ತಸ್ಮಿನ್ ಭಕ್ತಿಃ– ವೃಷಸ್ಯಗಿರಿಃ ನಂದಿಕೇಶ್ವರಾನುಜಃ ಪರ್ವತಃ ಶ್ರೀಶೈಲಃ ತಸ್ಯೇಶಮಲ್ಲಿಕಾರ್ಜುನೇ ಭಕ್ತಿರಿತಿಚ–ವೃಷಇವಗಿರಿಃ ಧವಳಶೈಲಃ ಕೈಲಾಸಃ–ವೃಷಃ ಗಿರಿರಿವ ಶೈಲೋನ್ನತ ವೃಷಭ ಇತ್ಯಾದಿ ಬಹುಧಾವ್ಯುತ್ಪತ್ತಯಃ ಅಸ್ಮಿನ್ನರ್ಥೇಹ್ಯುಪಪಾದ್ಯಾ ಇತ್ಯಪಿಪ್ರಾಹುಃ–ಭಕ್ತಿಃ ಸರ್ವೇತ್ರಕರ್ತ್ರೀ– ನಿಬಿಡಂತಮಃ ಅಜ್ಞಾನಂಧುನೋತಿವಾರಯತಿಪಾಪಾಟವೀಂ ಪರಿತಸ್ಸಮೂಲಂಲುನಾತಿ ಛಿನತ್ತಿ– ಮನೋರಥಾನ್ ಕಾಮಾನ್– ತನೋತಿ ವಿಸ್ತಾರಯತಿ ನಾನೋತ್ಸವಾನ್ ಉಪಚಿನೋತಿ ವರ್ಧಯತಿ– ಮನಃ–ಸುಧಾನಿರ್ಝರೈರಮೃತಪ್ರವಾಹೈಃ–ಪುನಃ ಪುನಃ–ಅನಕ್ತಿ ಸಂಯೋಜಯತಿ–ಶುಭಂ ಪ್ರಾಕ್ತನಂಕರ್ಮ–ಪರಿಪಕ್ತ್ರಿಮಂ ಫಲಾಭಿಮುಖಂ ವ್ಯನಕ್ತಿ ಸ್ಫುಟಯತಿ–ನನ್ವಿತ್ಯಾಮಂತ್ರಣೇ–ಅತ್ರ ಅನೇಕ ಕ್ರಿಯಾ ಸಮುಚ್ಚಯಾತ್ ಸಮುಚ್ಚಯಾಲಂಕಾರಃ ॥

ಅರ್ಥ ॥ ಐಯ್ಯಾ, ಶ್ರೀ ವೆಂಕಟಾಚಲನಲ್ಲಿ ಅಥವಾ ಮಹಾದೇವನಲ್ಲಿ ಭಕ್ತಿಯಿಟ್ಟರೆ, ದಟ್ಟವಾದ ಅಜ್ಞಾನ ಕತ್ತಲೆಯು ದೂರವಾಗುತ್ತದೆ, ಪಾಪದ ಅಡವಿಯು ಬೇರು ಸಹಿತವಾಗಿ ಉಚ್ಛೇದವಾಗುತ್ತದೆ. ಮನಸ್ಸಿನ ಬಯಕೆಗಳು ಕೈಗೂಡಿ ಬರುತ್ತವೆ; ತರಹಾತರಹಾದ ಆನಂದಗಳು ವೃದ್ಧಿಯಾಗುತ್ತವೆ. ಮನಸ್ಸು ಅಮೃತ ಪ್ರವಾಹಗಳಿಂದ ಕೂಡಲ್ಪಡುತ್ತದೆ, ಮತ್ತು ಹಿಂದಿನ ಜನ್ಮದ ಪುಣ್ಯವು ಹಣ್ಣಾಗಿ ಕಾಯುತ್ತದೆ.

ಮೂ ॥ ಕಿಂಬಹುನಾ ।
ಶ್ಲೋ ॥ ಪೂತಾಂಗಾನಾಂ ಪುಣ್ಯಗಂಗಾದಿಸಿಂಧುಸ್ನಾನಾನ್ನಾನಾ
ಕ್ಷೇತ್ರಯಾತ್ರಾಪರಾಣಾಂ । ದಾರಾಗಾರಾಪತ್ಯವೈರಾಗ್ಯಭಾಜಾಂ
ಸಾರಾಭಿಜ್ಞೈರಾದರಃಕಾವ್ಯಪಿಷಾಂ ॥ ೧೦೦ ॥

ಟೀಕಾ ॥ ಪೂತೇತಿ ॥ ನಾನಾ ಕ್ಷೇತ್ರೇಷು ಕಾಶೀ ರಾಮೇಶ್ವರಾದಿಷು ಯಾತ್ರಾಪರಾಣಾಂ– ಅತಏವಪ್ರನ್ನಾ

ಸು ಗಂಗಾದಿಷು ಸಿಂಧುಷು ನದೀಷುಸ್ನಾನಾತ್– ಪೂತಂಪರಿಶುದ್ಧಿಮತ್–ಅಂಗ ಏಷಾಂ ತೇಷಾಂ– ಪುನಾತೇರ್ಭಾವೇಕ್ತಾಂತಾದರ್ಶ ಆದ್ಯಚ್–ದಾರೇಷು ಭಾರ್ಯಾಯಾಂ ಅಗಾರೆಗೃಹೆ ಇತಿಧನವಾತ್ರೋಃಪಲಕ್ಷಕಂ ಅಪತ್ಯೇಪುತ್ರೇಚ ವೈರಾಗ್ಯಭಾಜಾಂ– ಈಷಣಾತ್ರಯರಹಿತಾನಾಮಿತಿಯಾವತ್– ಏಷಾಂ ವೈರಾಗಿಣಾಂ ಆದರಃ ಏಷುಪ್ರೀತಿರಿತ್ಯರ್ಥಃ–ಸಾರಂ ನಿತ್ಯಾನಿತ್ಯ ವಸ್ತುವಿವೇಕಮಭಿಜಾನಂತೀತ್ಯಭಿಜ್ಞಾಃ ತೈಃ- ಕಾರ್ಯಃ ಕರ್ತವ್ಯಃ ||

ಅರ್ಥ ‖ ಪವಿತ್ರವಾದ ಗಂಗೆಯೇ ಮೊದಲಾದ ನದಿಗಳಲ್ಲಿ ಮತ್ತು ಸಮುದ್ರದಲ್ಲಿ ಸ್ನಾನಗಳನ್ನು ಮಾಡುವದರಿಂದ ಪರಿಶುದ್ಧವಾದ ಶರೀರಗಳುಳ್ಳಂಥಾವರಾದ, ತೀರ್ಥಾಟನೆಯಲ್ಲಿ ರತರಾದಂಥವರಾದ, ಗೃಹ ಪುತ್ರ ಕಳತ್ರಗಳಲ್ಲಿ ಪ್ರೀತಿ ಬಿಟ್ಟುಬಿಟ್ಟಂಥವರಾದ ಈ ವೈರಾಗಿಗಳಿಗೆ ಬುದ್ಧಿವಂತರು ಸನ್ಮಾನ ಮಾಡ ತಕ್ಕದ್ದು.

## ಆಂಧ್ರ ದೇಶವರ್ಣನಂ ||

ಮೂ । ಇತಿವಿಮಾನಮನ್ಯತಸ್ಸಮಾನಯ್ಯನಿಪುಣಂ *ನಿರೂಪ್ಯ ||

ಅರ್ಥ ‖ ಈ ಪ್ರಕಾರವಾಗಿ ಹೇಳಿ ವಿಮಾನವನ್ನು ಬೇರೆ ಕಡೆಗೆ ನಡಿಸಿ ಚನ್ನಾಗಿ ನೋಡಿ (ವಿಶ್ವಾವಸು ಹೇಳುತ್ತಾನೆ)

ಮೂ । ಶ್ಲೋ । ಸುಶೋಭನಕ್ರಮಕರ್ಮೈಸ್ಸೇವಿತೋಜೀವನಾರ್ಥಿಭಿಃ । ಮಧ್ಯಸ್ಥಬಾಡಬೋರಾಜತ್ಯಾಂಧ್ರದೇಶೋನದೇಶವತ್
|| ೨೦೧ ||

ಟೀಕಾ || ಸ್ವಿತಿ || ಜೀವನಂ ವೃತ್ತಿಂ ಉದಕಂಚ ಅರ್ಥಯಂತಿ ಕಾಂಕ್ಷಂತ ಇತಿ ಜೀವನಾರ್ಥಿಭಿಃ– ಅತಏವ–ಸುಶ್ರೇಷ್ಠಾನಿ ಶೋಭನಾನಿಯೇಭ್ಯಸ್ತಾನ್ ಕ್ರಮಾನ್ ಆಚಾರಾನ್ ಕುರ್ವಂತೀತಿ ಸುಶೋಭನ ಕ್ರಮಕರ್ಮೈಃ ಜನೈಃ–ಸುಷ್ಠುಶೋಭಾಯೇಷಾಂತೈಃ ಸುಶೋಭೈಃ ನಕ್ರೈರ್ಮಕರೈಶ್ಚ ಜಲಜಂತುವಿಶೇಷೈಶ್ಚ– ಸೇವಿತಃ ಆಶ್ರಿತಃ– ಮಧ್ಯೇತಿಷ್ಠಂತೀತಿ ಮಧ್ಯಸ್ಥಾಃ ಪೂಜ್ಯಾಃ ಬಾಡಬಾಃ ಬ್ರಾಹ್ಮಣಾಃ ಯಸ್ಮಿನ್‌ಸ್ಥಃ– ಮಧ್ಯಸ್ಥಃ ಬಾಡಬೋನಲಃ ಯಸ್ಯಸ ಇತಿಚ– ಆಂಧ್ರೋನಾಮದೇಶಃ– ನದೇಶವತ್ ಸಮುದ್ರಇವ–ರಾಜತಿ– ಅಥವಾ– ಆಂಧ್ರದೇಶಃ– ದೇಶವತ್–ಅನ್ಯದೇಶಇವನರಾಜತಿ– ಕಿಂತು ಸರ್ವೋತ್ತರಸ್ಸನ್ ಭಾತೀತ್ಯರ್ಥಃ ಇತ್ಯಪಿ ಪ್ರಾಹುಃ– ಶ್ಲಿಷ್ಟೋಪಮಾ ||

ಅರ್ಥ ‖ ಈ ಶ್ಲೋಕಕ್ಕೆ ಎರಡು ಅರ್ಥಗಳವೆ.

೧. ಈ ಆಂಧ್ರದೇಶವು ಶ್ರೇಯಸ್ಕರವಾದ ಕರ್ಮಾಚರಣೆ ಮಾಡಿ ಜೀವನೋಪಾಯ ಹುಡುಕುವಂಥವರಿಂದಲೂ ಮಾನಾರ್ಹರಾದ ಹಾರುವರುಗಳಿಂದಲೂ ನಿವಾಸಿಸಲ್ಪಟ್ಟ ಈ ಆಂಧ್ರದೇಶವು ಬೇರೆ ದೇಶಗಳಿಗಿಂತಲೂ ಶ್ರೇಷ್ಠವಾಗಿ ಶೋಭಿಸುತ್ತದೆ.

೨ ಈ ಆಂಧ್ರದೇಶವು ಶೋಭೆಯುಳ್ಳಂಥ ಮತ್ತು ನೀರಿನ ಆಪೇಕ್ಷೆಯುಳ್ಳಂಥ

---

* ವಿಭಾವ್ಯ ಇತಿಪಾಠಾಂತರಂ ||

ಮೊಸಳೆ ಮುಂತಾದ ಜಲಜಂತುಗಳಿಂದ ಆಶ್ರಯಿಸಲ್ಪಟ್ಟಂಥ ನಡುಮಧ್ಯದಲ್ಲಿ ಬಾಡಬಾನಲ ಎಂಬ ಬೆಂಕಿಯುಳ್ಳಂಥ ಸಮುದ್ರನಂತೆ ಮೆರೆಯುತ್ತೆ.

ಕೃಶಾನುಃ ॥

ಮೂ । ಅಯೇಕಿಂ ಪ್ರಶಂಸಸ್ಯಪಯಾತಮರ್ಯಾದಮಮುಂ ದೇಶಂ ॥ ೨೦೧ ॥

ಟೀಕಾ ॥ ಅಯೇಇತಿ ॥ ಅಪಯಾತ ಮರ್ಯಾದಂತ್ಯಕ್ತವರ್ಣಾಶ್ರಮರೀತಿಂ ॥

ಅರ್ಥ ॥ ಏನೆಲಾ, ವರ್ಣಾಶ್ರಮ ಮಾರ್ಗವನ್ನು ತ್ಯಜಿಸಿದ ಈ ಆಂಧ್ರ ದೇಶವನು ಶ್ಲಾಘಿಸುತಿಯಾ?

ಮೂ। ಶ್ಲೋ। ಗ್ರಾಮೇಗ್ರಾಮೇನಿವಸತಿಚಿರಾತ್ಸ್ವಾಮಿಭಾವೇನ ಶೂದ್ರೋ ಭೃತ್ಯೋಭೂತ್ವಾಪತತಿಗಣನಾಂಬ್ರಾಹ್ಮಣಸ್ತಸ್ಯಪಾರ್ಶ್ವೇ। ವೇದಾಧ್ಯಾಯೀಸರಇವಮರೌಕ್ವಾಪಿಕಶ್ಚಿದ್ಯದಿಸ್ಯಾದತ್ರಾಮತ್ರಪ್ರಕರಕರಣೇವರ್ತತೇಸೌನಿಯುಕ್ತಃ ॥ ೨೦೨ ॥

ಟೀಕಾ ॥ ಗ್ರಾಮಇತಿ ॥ ಶೂದ್ರಃ– ಸ್ವಾಮಿಭಾವೇನ ಪಾರವಶ್ಯೇನ ಉಪಲಕ್ಷಿತಃ–ಗ್ರಾಮೇಗ್ರಾಮೇ–ವೀಪ್ಸಾಯಾಂದ್ವಿರ್ಭಾವಃ– ಚಿರಾತ್ ನಿವಸತಿ– ತಸ್ಯ ಶೂದ್ರಸ್ಯ ಪಾರ್ಶ್ವೇ– ಭೃತ್ಯಃ ಗಣಕ ಸಂಜ್ಞಯಾ ಉಪಲಕ್ಷಿತಃ ಸೇವಕಃ ಭೂತ್ವಾ– ಬ್ರಾಹ್ಮಣಃ– ಗಣನಾಂ ಗ್ರಾಮಾಯವ್ಯಯ ಸಂಖ್ಯಾಂ–ಪತತಿ– ಮರೌದೇಶೇಸರ ಇವ– ಕ್ವಾಪಿಕುತ್ರಾಪಿ–ವೇದಾಧ್ಯಾಯೀ ಕಶ್ಚಿದೇಕಸ್ಸ್ಯಾದ್ಯದಿವರ್ತತೇಚೇತ್–ಅಸೌವೇದಪಾಠಕಃ-- ಅತ್ರಆಂಧ್ರದೇಶೇ-- ಅಮತ್ರಾಣಾಂ ಮಲಿನಪಾತ್ರಾಣಾಂ ಪ್ರಕರೇ ಸಂಕ್ಷಾಳನೇ ಕರಣೇ ಕರ್ಮಣಿ– ನಿಯುಕ್ತಸ್ಸನ್ ವರ್ತತೆ ಅತಿನೀಚವೃತ್ತ್ಯಾಜೀವತೀತ್ಯರ್ಥಃ ॥

ಅರ್ಥ ॥ ಈ ಆಂಧ್ರ ದೇಶದಲ್ಲಿ ಪ್ರತಿ ಗ್ರಾಮದಲ್ಲಿಯೂ ಶೂದ್ರನು ಒಡೆಯ ತನ ಮಾಡುತ್ತಾನೆ, ಅವನ ಬದಿಯಲ್ಲಿ ಬ್ರಾಹ್ಮಣನು ಚಾಕರನಾಗಿ ಜಮಾ ಖರ್ಚುಲೆಕ್ಕ ಬರಿಯುವ ಕೆಲಸ ಮಾಡುತ್ತಾನೆ, ಮಾರವಾಡ ದೇಶದ ಕೊಳದಂತೆ ಎಲ್ಯಾದರೂ ಒಬ್ಬ ವೇದಾಧ್ಯಯನ ಮಾಡಿದವ ಬ್ರಾಹ್ಮಣ ಇದ್ದರೆ ಅವನು ಮುಸುರೆ ಗಡಿಗೆಗಳನ್ನು ತಿಕ್ಕಿ ಹೊಟ್ಟೆತುಂಬಿ ಕೊಳ್ಳುತ್ತಾನೆ.

ಮೂ। ಕಿಂಚ। ಮಹಾರಾಷ್ಟ್ರೇಸುದೃಷ್ಟಾದೋಷಾಅಪ್ಯತ್ರಾತಿದೇಷ್ಟವ್ಯಾಃ ॥ ೨೦೪ ॥

ಅರ್ಥ ॥ ಮಹಾರಾಷ್ಟ್ರ ದೇಶದಲ್ಲಿ ಕಂಡಂಥ ದೋಷಗಳು ಇಲ್ಲಿಯೂ ಇರುತ್ತವೆ.

ವಿಶ್ವಾವಸುಃ ॥

ಮೂ। ವಯಸ್ಯಮೈವಂವಾದೀಃ ॥ ೨೦೫ ॥

ಅರ್ಥ ॥ ಮಿತ್ರನೇ ಹಾಗನ್ನ ಬೇಡಾ.

ಮೂ । ಶ್ಲೋ । ಮಾನಾಮಯಕ್ಷತಮಖೈರನಘೈರಿಹಾಮೀಮಾ ಚಾಧಿಗೀಷತವಚಾಂಸಿಚಿರಂತನಾನಿ । ದೇವೇಷುಭಕ್ತಿರವನೀತ್ರಿದಶೇಷುಚೈಷಾಂವಿಶ್ರಾಣನಂಚವಿವಿಧಾನ್ವಿಧುನೋತಿದೋಷಾನ್ ॥ ೨೦೬ ॥

ಟೀಕಾ ॥ ಮೇತಿ ॥ ಇಹ ಆಂಧ್ರದೇಶೇ ಅಮೀ ಬ್ರಾಹ್ಮಣಾದಯಃ ತ್ರಯೋವರ್ಣಾಃ— ಅನಘೈರ್ಮಖೈರ್ಯಜ್ಞೈರ್ಮಾಯಕ್ಷತನಯಜಂತು— ನಾಮೇತ್ಯನಾದರೇ— ಸರ್ವತ್ರಾತಿಸರ್ಗೇಲೋಟ್— ಕಿಂಚ— ಚಿರಂತನಾನಿ ಪುರಾತನಾನಿ—ವಚಾಂಸಿ ವೇದವಾಕ್ಯಾನಿ— ಮಾಧ್ಯಗೀಷತನಪಠಂತುನಾಮ— ತಥಾಪಿ— ದೇವೇಷು ಆದಿತ್ಯಾದಿಷು ಭಕ್ತಿಃ— ಅವನೀತ್ರಿದಶೇಷು ಬ್ರಾಹ್ಮಣೇಷು ವಿಷಯೇ— ವಿಶ್ರಾಣನಂ ದಾನಂ ಚ ಏಷಾಮಾಂಧ್ರ ದೇಶ್ಯಾನಾಂ— ಸಮಸ್ತಾನ್ ದೋಷಾನ್ ಸರ್ವಾನ್ ಪೂರ್ವೋಕ್ತಾನ್— ವಿಧುನೋತಿವಾರಯತಿ ॥

ಅರ್ಥ ॥ ಈ ಆಂಧ್ರದೇಶದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರು ನಿಷ್ಪಾಪವಾದ ಯಜ್ಞಗಳನ್ನು ಮಾಡದೆಯಿದ್ದರೂ ಚಿಂತಿಲ್ಲ, ಪ್ರಾಚೀನವಾದ ವೇದವಾಕ್ಯಗಳ ಅಧ್ಯಯನ ಮಾಡದೆಯಿದ್ದರೂ ಚಿಂತಿಲ್ಲ, ಅವರು ಆದಿತ್ಯಾದಿ ದೇವತೆಗಳಲ್ಲಿ ಭಕ್ತಿಯುಳ್ಳವರಾದದರಿಂದಲೂ, ಭೂಸುರರಾದ ಬ್ರಾಹ್ಮಣರಲ್ಲಿ ಔದಾರ್ಯ ಉಳ್ಳವರಾಗಿರುವದರಿಂದಲೂ ಮೇಲೆ ಹೇಳಲ್ಪಟ್ಟ ಅವರ ದೋಷಗಳೆಲ್ಲ ಪರಿಹಾರವಾಗುತ್ತವೆ.

ಮೂ । ಪಶ್ಯತಾವದೇತೇಷಾಂಭಾಗ್ಯವತ್ತಾಂ ॥ ೨೦೭ ॥

ಅರ್ಥ ॥ ನೋಡು ಇವರು ಎಷ್ಟು ಭಾಗ್ಯವಂತರು.

ಮೂ । ಶ್ಲೋ । ರೋಮಾವಳ್ಯಾತಪನಸುತಯಾರಮ್ಯಹಾರದ್ಯುನದ್ಯಾಹೃದ್ಯಾಸ್ತುಂಗಸ್ತನಗಿರಿಜುಷೋನಾಭಿವಾಪೀಮನೋಜ್ಞಾಃ । ಭೂಮೇರ್ಮೂರ್ತೀರಿವವಸುಮತೀರ್ಭುಂಜತೆಭಾಗ್ಯವಂತಃ ಕ್ಷೋಣೀಪಾಲಾಇವಯುವಜನಾಃಕಾಮಮಾಂಧ್ರೀಃಪುರಂಧ್ರೀಃ ॥ ೨೦೮ ॥

ಟೀಕಾ ॥ ರೋಮಾವಳ್ಯೇತಿ ॥ ಅತ್ರ ಉಪಮಾಪ್ರಾಯಪಾಠಾತ್ ತಪನಸುತಯಾ ಯಮುನಯೇವೇತಿವ್ಯವಹಿತೋಪಿ ಇವಶಬ್ದೋನುಷಂಜನೀಯಃ— ರೋಮಾವಳ್ಯಾ— ರಮ್ಯೇಣಹಾರೇಣದ್ಯುನದ್ಯಾ ಗಂಗಯೇವೇತ್ಯುಪಮಿತಸಮಾಸಃ— ಏವಮಗ್ರೇಪಿ— ಹೃದ್ಯಾಃ ಮನೋಜ್ಞಾಃ— ತುಂಗೌಸ್ತನೌಗಿರೀ ಇವತೌಜುಷಂತ ಇತಿತಥೋಕ್ತಾಃ— ನಾಭಿರ್ವಾಪೀವತಯಾ ಮನೋಜ್ಞಾಃ ವಸುಃ ಕಾಂತಿರ್ವಸುಧನಂ ಚತದ್ವತೀಃ— ಅತಏವಭೂಮೇಃ ಮೂರ್ತೀರಿವಸ್ಥಿತಾಃ ಆಂಧ್ರೀಃ ಆಂಧ್ರದೇಶಜಾಃ— ಪುರಂಧ್ರೀಃ ಭಾರ್ಯಾಃ— ಕ್ಷೋಣೀಪಾಲಾ ಇವಸ್ಥಿತಾ ಯುವಜನಾಃ ತರುಣಾಃ ಅತ್ರತ್ಯಾಃ— ಕಾಮಂ ಭುಂಜತೆ ಅನುಭವಂತಿ— ಅತ್ರತ್ಯಾನಾಂ ಸ್ತ್ರೀಪುಂಸಾಂ ಸೌಂದರ್ಯಂ ಲೋಕೋತ್ತರಮಿತಿಭಾವಃ— ಉಪಮಾಸಂಕರಃ ॥

ಅರ್ಥ ॥ ರೋಮರಾಜಿಗಳಿಂದ ಯಮುನಾ ನದಿಯಂತೆ ಸುಂದರವಾದ ಮಾಲೆಗಳಿಂದ

ಗಂಗಾನದಿಯಂತೆ ಮನೋಹರವಾಗಿ, ಪರ್ವತಗಳಿಗೆ ಹೋಲುವ ಎತ್ತರವಾದ ಮೊಲೆಗಳುಳ್ಳವರಾಗಿ, ಕೂಪಗಳಿಗೆ ಹೋಲುವ ಆಳವಾದ ಹೊಕ್ಕಳುಗಳಿಂದ ಚಿತ್ತಮೋಹಕವಾಗಿ ಧನಕನಕ ಪದಪಿನಿಂದ ಹೊಳೆಯುವವರಾಗಿ, ಭೂದೇವಿಯ ಮೂರ್ತಿಗೆ ಹೋಲುವ ತೈಲಂಗಹೆಂಡರುಗಳನ್ನು ಶ್ರೀಮಂತರಾದ ತೈಲಂಗತರುಣರು ಅರಸುಗಳಂತೆ ಯಥೇಷ್ಟವಾಗಿ ಅನುಭವಿಸುತ್ತಾರೆ.

ತೈಲಂಗ ದೇಶದ ಸ್ತ್ರೀ ಪುರುಷರ ಸೌಂದರ್ಯ ಶ್ರೇಷ್ಠವಾದದ್ದೆಂಬ ತಾತ್ಪರ್ಯ.

ಮೂ । ಶೃಣ್ವೇತತ್

ಶ್ಲೋ । ಕೋವಾ *ಕಲ್ಪತರೌಗುಣಸ್ಸುಮನಸಾಂಯತ್ಸ್ವಾಶ್ರಿತಾ
†ನಾಮಸೌಸಾರಾಂಶಾನ್ಹರತಃಪ್ರಸಹ್ಯಮಧುಪಾನ್ಧತ್ತೇಮಹಾ
ಮೋದತಃ । ಕರ್ಣೇತ್ವರ್ಜುನಕೀರ್ತಿಹಾನಿಪರತಾಕಾಲಾಂಬುದೇ
ಗರ್ಜನಂನೀರಂಧ್ರಂಪುನರಾಂಧ್ರದೇಶನೃಪತಿಷ್ವಾಸ್ತೇನಘಂಸ್ಪ
ರ್ಶನಂ ॥ ೨೯ ॥

ಟೀಕಾ ॥ ಕಇತಿ ॥ ಅಸೌಕಲ್ಪವೃಕ್ಷಃ– ಸ್ವಮಾತ್ಮಾನಂ– ಆಶ್ರಿತಾನಾಂ– ಸುಮನಸಾಂ ವಿದುಷಾಂ ದೇವಾನಾಂ ಪುಷ್ಪಾಣಾಂಚ–ಸಾರಾನ್ ಶ್ರೇಷ್ಠಾನ್ ಅಂಶಾನ್ ಧನರೂಪಾನ್ ಮಕರಂದ ರೂಪಾಂಶ್ಚ ಭಾಗಾನ್–ಪ್ರಸಹ್ಯಬಲಾತ್ಕೃತ್ಯ–ಹರತಃ–ಮಧುಪಾನ್ ಮದ್ಯಪಾಯಿನಃ ಭೃಂಗಾಂಶ್ಚ–ಮಹಾಮೋದತಃ ಅತಿಸಂತೋಷೇಣ–ಉಪಲಕ್ಷಿತಃ–ಧತ್ತೇ– ಶಿರಸೀತಿಶೇಷಃ– ಸಮ್ಮಾನಯತೀತ್ಯರ್ಥಃ–ಇತಿಯತ್–ಅಸೌಶಿರಸಿಮಧುಪಧಾರಣಂ ಕಲ್ಪತರೌಕೋವಾಗುಣಃ–ನಕೋಪಿ–ಕಿಂತುದೋಷಏವೇತ್ಯರ್ಥಃ–ಸ್ವಸ್ಯೇವಕ್ಕೈಃ ವಿದ್ವದ್ಧನಾಪಹರಣಸ್ಯ ಕಿರಾತರಾಜಪ್ರಾಯತಾಸೂಚಕತ್ವಾದಿತಿಭಾವಃ– ಕರ್ಣೇಸೂರ್ಯಪುತ್ರೇತುದಾತರಿ–ಅರ್ಜುನಾಯಾಃ ಶುಭ್ರಾಯಾಃ ಅರ್ಜುನಸ್ಯ ಪಾರ್ಥಸ್ಯ ಕೀರ್ತೇಃಹಾನೌಪರತಾಆಸಕ್ತಿರಸ್ತಿ–ಅಯಂ ದೋಷಸ್ತಸ್ಮಿನ್ನಾಸ್ತೀತ್ಯರ್ಥಃ–ಏವಮಗ್ರೇಪಿ– ಕಾಲೇಅಂಬುದೇವಾರ್ಷಿಕಮೇಘೇ ಗರ್ಜನಂ ಸ್ವಕತ್ಥನಂಸ್ತನಿತಂಚ–ಅಸ್ತಿ–ಆಂಧ್ರದೇಶನೃಪತಿಷುಪುನಃ–ನೀರಂಧ್ರಂ ಅವಿಚ್ಛಿನ್ನಂ–ಸ್ಪರ್ಶನಂ ದಾನಂ–ಅನಘಂ ಉಕ್ತದೋಷರಹಿತಂ ಸತ್–ಆಸ್ತೇ ಜಾಗರ್ತಿ–ವ್ಯತಿರೇಕಾಲಂಕಾರಃ ॥

ಅರ್ಥ ॥ ಕಲ್ಪವೃಕ್ಷವು ತನ್ನನ್ನು ಆಶ್ರೈಸಿಕೊಂಡಿರುವ ಹೂವುಗಳ ಮಧುರಸ ಬಲತ್ಕಾರದಿಂದ ಅಪಹರಿಸುವ ದುಂಬಿಗಳನ್ನು ಸಂತೋಷದಿಂದ ಹೊತ್ತುಕೊಳ್ಳುತ್ತದೆ. ಇದೇನು ಆ ಕಲ್ಪವೃಕ್ಷದ ಒಳ್ಳೇ ಗುಣವೋ ? ಅಲ್ಲ ಎಂಬ ತಾತ್ಪರ್ಯ. ಕರ್ಣನು ದಾನಶೂರನಾಗಿದ್ದಾಗ್ಯೂ ಅರ್ಜುನನ ಹೆಸರು ವಾಸಿ ಕೆಡಿಸುವವರಲ್ಲಿ ಆಸಕ್ತಿಯುಳ್ಳವನಾಗಿದ್ದನು. ವರ್ಷಗಟ್ಲೆಯ ಮೋಡಗಳಲ್ಲಿ ಸ್ವಂತ ಹೊಗಳಿಕೆಯ ಅಬ್ಬರಿಕೆ ಇರುತ್ತದೆ. ಆದರೆ ಈ ಎಲ್ಲ ಕೊರತೆಗಳಿಲ್ಲದೆ ಆಂಧ್ರ ದೇಶದ ಅರಸುಗಳಲ್ಲಿ ಅಖಂಡವಾದ ಉದಾರತ್ವವು ಜಾಗರುಕವಾಗಿರುತ್ತೆ.

---

* ಕಲ್ಪತರೋಃ † ಅಹೋ ಇತಿಪಾಠಾಂತರೇ ॥

ಮೂ । ಸಮಂತಾದವಲೋಕ್ಯ ॥

ಅರ್ಥ ॥ ಅತ್ತಇತ್ತ ನೋಡಿ ( ವಿಶ್ವಾವಸು ಹೇಳುತ್ತಾನೆ. )

ಮೂ । ವಯಸ್ಯಾತ್ರಗೋದಾವರೀತೀರೇಕೇಷಾಂಚಿದೇಷಾಮ
ವನೀದಿವಿಷದಾಮತಿಶಿವಪೂಜಾಲೋಲುಪತಾಂಪಶ್ಯ ॥ ೨೧೦ ।

ಟೀಕಾ ॥ ವಯಸ್ಯೇತಿ ॥ ಅವನೀದಿವಿಷದಾಂ ಬ್ರಾಹ್ಮಣಾನಾಂ–ಅತ್ಯಂತಂ ಶಿವಪೂಜಾಯಾಂ ಲೋಲುಪತಾಂ ಆಸಕ್ತಿಂ ॥

ಅರ್ಥ । ಗೆಳೆಯನೇ ನೋಡು, ಈ ಗೋದಾವರಿ ನದಿಯ ದಂಡೆಯಲ್ಲಿ ಎಷ್ಟೋ ಮಂದಿ ಬ್ರಾಹ್ಮಣರು ಶಿವಾರ್ಚನೆಯಲ್ಲಿ ತತ್ಪರರಾಗಿರುವರು.

ಮೂ । ಶ್ಲೋ । ಗೋದಾವರೀವಿಮಲತೀರ್ಥಕೃತಾವಗಾಹಾಃಲಿಂ
ಗೇಷುಸೈಕತಮಯೇಷುಶಿವಂವಿಭಾವ್ಯ । ಭಕ್ತ್ಯಾತಿಲಾಕ್ಷತ
ಸುಮೈರಪಿಬಿಲ್ವಪತ್ರೈರರ್ಚಾಮಿಹಾವನಿಸುರಾಃಪರಿಕುರ್ವತೇಮೀ
॥ ೨೧೧ ॥

ಟೀಕಾ ॥ ಗೋದಾವರೀತಿ ॥ ಇಹಗೋದಾವರೀತೀರೇ– ಅಮೀಅವನೀಸುರಾಃ– ಗೋದಾವರ್ಯಾನಾಮನದ್ಯಾಃ ವಿಮಲೇತೀರ್ಥೇ ಜಲೇಕೃತಾವಗಾಹಾಸ್ಸಂತಃ–ಸೈಕತಮಯೇಷು ಸಿಕತಾ ನಿರ್ಮಿತೇಷು ಲಿಂಗೇಷು-ಶಿವಂ ಭಕ್ತಕಲ್ಯಾಣದಾಯಿನಂ–ವಿಭಾವ್ಯಧ್ಯಾತ್ವಾ–ಭಕ್ತ್ಯೋಪಲಕ್ಷಿತಾಃ ತಿಲಮಿಶ್ರೈರಕ್ಷತೈಃಸುಮೈಃ ಪುಷ್ಪೈಃ ಬಿಲ್ವಪತ್ರೈರಪಿಕರಣೈರರ್ಚಾಂಪೂಜಾಂ ಪರಿತಃ ಕುರ್ವತೆ ॥

ಅರ್ಥ ॥ ಈ ಬ್ರಾಹ್ಮಣರು ಶುದ್ಧವಾದ ಗೋದಾವರಿ ನೀರನ್ನು ಮಿಂದು ಮಳಲಿನ ಲಿಂಗಗಳನ್ನು ಮಾಡಿ ಅವುಗಳಲ್ಲಿ ಶಿವನನ್ನು ಭಾವಿಸಿ ಪ್ರೀತಿಯೊಡನೆ ಎಳ್ಳು ಅಕ್ಷತೆಗಳಿಂದಲೂ ಹೂವುಬಿಲ್ವಪತ್ರಗಳಿಂದಲೂ ಪೂಜೆಯನ್ನು ಮಾಡುತ್ತಾರೆ.

ಮೂ। ಸಭಕ್ತ್ಯುದ್ರೇಕಂ॥
ಶ್ಲೋ। ನಮಾಮಿಗಿರಿನಂದನೀರಮಣಪಾದಪೂಜಾಹೃತಾ ಮಿತಾ
ಘನಿಕರಾನ್ಕರಾಂಚಿತಪರಾಕ್ಷಮಾಲಾಂತ್ಸದಾ। ಅನೂನಮಲಚೇ
ತಸಶ್ಶಮದಮಾದಿಯೋಗಾಮರ್ಶ್ರುತೇರ್ಗುಣನಿಕಾನಿಕಾಮಪ
ರಿಪೂತವಕ್ತ್ರಾಂಬುಜಾನ್ ॥ ೨೧೨ ॥

ಟೀಕಾ ॥ ನಮಾಮೀತಿ ॥ ಗಿರಿನಂದನೀರಮಣಸ್ಯಪಾರ್ವತೀಪತೇಃ ಪಾದಯೋಃ ಪೂಜಯಾಹೃತಃ ಅಮಿತಾನಾಂ ಅಪರಿಮಿತಾನಾಂ ಅಘಾನಾಂ ಪಾಪಾನಾಂ ದುಃಖಾನಾಂವಾನಿಕರಃ ರಾಶಿಃ ಯೇಷಾಂತಾನ್– ಸದಾ– ಕರೇಅಂಚಿತಾ ಸಂಗತಾಪರಾಚಅಕ್ಷಮಾಲಾ ಅಕಾರಾದಿಕ್ಷಕಾರಾಂತವರ್ಣ ಪ್ರತಿನಿಧಿಮಾಲಾರುದ್ರಾಕ್ಷಸ್ಫಟಿಕಾದಿನಿರ್ಮಿತಾಯೇಷಾಂತಾನ್–ಶ್ರುತೇರ್ವೇದಸ್ಯ–ಗುಣನಿಕಯಾಽಧ್ಯಯನಾವೃತ್ತ್ಯಾನಿಕಾಮಮತ್ಯಂತಂಪರಿಪೂತಂ ಪವಿತ್ರಿತಂ ವಕ್ತ್ರಾಂಬುಜಂ ಯೇಷಾಂತಾನ್ ಅಮಲಚೇತಸಃ–ಅತಏವಶಮಃ

ಅಂತರಿಂದ್ರಿಯ ನಿಗ್ರಹಃ–ದಮಃ ಬಾಹ್ಯೇಂದ್ರಿಯ ನಿಗ್ರಹಃ ತಾವಾದಿರ್ಯೇಷಾಂತಾದೃಶಾನ್ ಯೋಗೀನ್ ಮುಕ್ತ್ಯುಪಾಯಾನ್ ಆವಹಂತಿ ಸಂಪಾದಯಂತೀತಿ ತಥೋಕ್ತಾನಮೂನ್ ಗೋದಾವರೀತೀರವಾಸಿನಃ– ನಮಾಮಿ ||

ಅರ್ಥ॥ ವಿಕಸಿತವಾದ ಪ್ರೀತಿಯಿಂದ (ವಿಶ್ವಾವಸು ಹೇಳುತ್ತಾನೆ.)- ಪಾರ್ವತಿಪತಿಯ ಚರಣವಂದನದಿಂದ ಅಸಂಖ್ಯಾತವಾದ ಪಾಪಗಳ ರಾಶಿಯನ್ನು ಬಿಡಿಸಿಕೊಂಡಂಥವರಾದ, ಸರ್ವದಾ ಶ್ರೇಷ್ಠವಾದ ರುದ್ರಾಕ್ಷಸರಗಳನ್ನು ಕೈಗಳಲ್ಲಿ ಹಿಡಿದುಕೊಳ್ಳುವಂಥವರಾದ, ನಿರ್ಮಲ ಮನಸ್ಸುಳ್ಳಂಥವರಾದ, ಅಂತರಿಂದ್ರಿಯಗಳ ಮತ್ತು ಬಹಿರಿಂದ್ರಿಯಗಳ ನಿಗ್ರಹ ಮಾಡಿದಂಥವರಾದ ವೇದಪಾಠದಿಂದ ಶುದ್ಧವಾದ ಮುಖಕಮಲಗಳುಳ್ಳಂಥವರಾದ ಈ ಬ್ರಾಹ್ಮಣರನ್ನು ನಮಸ್ಕಾರ ಮಾಡುತ್ತೇನೆ.

ಮೂ । ಅಹೋಕೃಷ್ಣಾಗೋದಾವರೀಮಧ್ಯಮಧ್ಯಾಸೀನಾನಾ ಮಮೀಷಾಂವೈದಿಕಾನಾಮಭಿನಂದನೀಯೋಯಂ *ಸಂಪ್ರದಾಯಃ ॥ ೨೧೩ ॥

ಟೀಕಾ ॥ ಅಹೋಇತಿ । ಸಂಪ್ರದಾಯಃ ಆಚಾರಃ ॥

ಅರ್ಥ ॥ ಇಗೋ ಗೋದಾವರಿ ಮತ್ತು ಕೃಷ್ಣಾತೀರಸ್ಥವೈದೀಕ ಬ್ರಾಹ್ಮಣರ ಈ ಆಚಾರವು ಶ್ಲಾಘನೆಗೆ ಅರ್ಹವಾದದ್ದು:

ಮೂ । ಶ್ಲೋ । ನಿಗಮಪಾಠನಿರಾಕೃತದುಷ್ಕೃತಾನಯವಿದೋಬಹವೋತ್ರಧರಾಸುರಾಃ । ಪ್ರತಿವಸಂತಮುಪಾತ್ತಮಖಾಸ್ಸುಖಂ ಪ್ರತಿವಸಂತಿಮುಕುಂದಪರಾಯಣಾಃ ॥ ೨೧೪ ॥

ಟೀಕಾ ॥ ನಿಗಮೇತಿ । ನಿಗಮಾನಾಂ ವೇದಾನಾಂ ಪಾಠೇನ– ನಿರಾಕೃತದುಷ್ಕೃತಾಃ– ನಯವಿದಃ ಶಾಸ್ತ್ರಜ್ಞಾಃ– ಅತಏವ– ಮುಕುಂದಪರಾಯಣಾಃ–ಬಹವಃ– ಧರಾಸುರಾಃ ಬ್ರಾಹ್ಮಣಾಃ– ಅತ್ರಗೋದಾವರೀ ತೀರೇ– ವಸಂತೇವಸಂತೇ ಋತೌಪ್ರತಿವಸಂತಂ– ಉಪಾತ್ತಮಖಾಃ ಕೃತಯಜ್ಞಾಸ್ಸಂತಃ– ಸುಖಂ ಯಥಾತಥಾ ಪ್ರತಿವಸಂತಿ ॥

ಅರ್ಥ ॥ ವೇದ ಪಾಠದಿಂದ ಪಾಪಗಳನ್ನು ಕಳಕೊಂಡಂಥವರಾದ ನೀತಿ ಶಾಸ್ತ್ರವೇ ಮೊದಲಾದ ಶಾಸ್ತ್ರಗಳನ್ನು ತಿಳಿದಂಥವರಾದ, ಬಹಳ ಬ್ರಾಹ್ಮಣರು ಈ ಗೋದಾವರಿ ತೀರದಲ್ಲಿ ಪ್ರತಿ ವಸಂತ ಋತುವಿನಲ್ಲಿಯೂ ಯಜ್ಞ ಮಾಡುವಂಥವರಾಗಿ, ಕ್ಷೇಮದಿಂದ ವಾಸ ಮಾಡುತ್ತಾರೆ.

ಮೂ । ಅತ್ರತ್ಯಾನಾಮಧಿಕಾರವ್ಯಾಪಾರನಿರತಾನಾಮಪಿಅಯಂ ಖಲ್ವಪಕಳಂಕೋನಿಯಮಃ ॥ ೨೧೫ ॥

ಟೀಕಾ ॥ ಅತ್ರತ್ಯಾನಾಮಿತಿ । ನಿಯಮಃ ವ್ರತನಿಷ್ಠಾ ॥

---

* ಅನಪಾಯ ಇತ್ಯಧಿಕಂ ಪುಸ್ತಕಾಂತರೇ ॥

ಅರ್ಥ॥ ಈ ದೇಶದಲ್ಲಿ ರಾಜಸೇವೆ ಅಥವಾ ವರ್ತಕತನ ಮಾಡುವವರ ಕೆಳಗೆಹೇಳಲ್ಪಡುವ ಕಟ್ಟಳೆಯಾದರೂ ನಿರ್ದೋಷವಾದದ್ದು.

ಮೂ। ಆಶ್ರಯಿತವ್ಯೋನರಪತಿರಾರ್ಜಯಿತವ್ಯಾನಿಭೂರಿವಿತ್ತಾನಿ । ಆರಬ್ಧವ್ಯಂವಿತರಣಮಾನೇತವ್ಯಂಯಶೋದಶಸ್ವಪಿದಿಶಾಸು॥ ೨೧೬॥

ಟೀಕಾ ॥ ಆಶ್ರಯಿತವ್ಯಇತಿ। ನರಪತಿಃ ರಾಜಾ_ಆಶ್ರಯಿತವ್ಯಃ_ ಭೂರೀಣಿವಿತ್ತಾನಿಧನಾನಿ ಆರ್ಜಯಿತವ್ಯಾನಿ_ ವಿತರಣಂ ದಾನಂ_ ಆರಬ್ಧವ್ಯಂ ಕರ್ತವ್ಯಂ_ ಯಶಃ ದಶಸುದಿಶಾಸುಆನೇತವ್ಯಂಪ್ರಾಪಯಿತವ್ಯಂ_ ಇತಿನಿಯಮ ಇತೀಸಂಬಂಧಃ॥

ಅರ್ಥ ॥ ರಾಜಸೇವೆ ಮಾಡ ಬೇಕು. ಹೇರಳ ದ್ರವ್ಯವನ್ನು ಕೂಡಿಸ ಬೇಕು. ದಾನಮಾಡ ಬೇಕು. ಎಲ್ಲ ಕಡೆಯಲ್ಲೂ ಕೀರ್ತಿ ಪಡೆಯಬೇಕು. (ಇದೇ ಮೇಲಿನ ವಾಕ್ಯದಲ್ಲಿ ಸೂಚಿಸಿದ ಕಟ್ಟಳೆಯು)

ಮೂ। ಸಮಂತಾದವಲೋಕ್ಯ ॥

ಕೃಶಾನುಃ ॥

ಮೂ। ಹಂತಸಂತತದುರಿತನಿರತಾಃ ಯವನಾಪವತಾವದಮೀಷುವಿಷಯೇಷುಪ್ರಾಚುರ್ಯತಃಪರ್ಯಟಂತಿಪಶ್ಯಸಖೆ ॥ ೨೧೭ ॥

ಟೀಕಾ ॥ ಹಂತೇತಿ। ದುರಿತೆದೇವ ಬ್ರಾಹ್ಮಣದ್ರೋಹೆ_ ನಿರತಾ ಅತ್ಯಾಸಕ್ತಾಃ_ ವಿಷಯೇಷು ಆಂಧ್ರದೇಶೇಷು_ಪ್ರಾಚುರ್ಯತಃ ಬಾಹುಳ್ಯೇನ॥

ಅರ್ಥ॥ ಅಯ್ಯೋ, ಯಾವಾಗಲೂ ಪಾಪಕರ್ಮದಲ್ಲೇ ಅಂದರೆ ದೇವ ಬ್ರಾಹ್ಮಣರ ದ್ರೋಹ ಮಾಡುವದರಲ್ಲೇ ತತ್ಪರರಾದ ಮುಸಲ್ಮಾನರು ಬಹಳವಾಗಿ ಈಆಂಧ್ರನಾಡಿನಲ್ಲಿ ತಿರುಗಾಡುತ್ತಾರಲ್ಲಾ.

ಮೂ। ಶ್ಲೋ। ಅವನಾವತೀತಜವನಾಶ್ವಶೋಭಿನೋಭವನಾಗಶಾಯಿಭವನಾವಮರ್ದಿನಃ। ಸವನಾದಿಧರ್ಮಲವನಾಯದೀಕ್ಷಿತಾಯವನಾಶ್ಚರಂತಿಭುವನಾತಿಭೀಷಣಾಃ ॥ ೨೧೮ ॥

ಟೀಕಾ ॥ ಅವನಾವಿತಿ। ಅತೀತಃ ವೇಗೇನ ನಿರ್ಜಿತಃ ಜವನಃವಾಯುಃ ಯೈಸ್ತೈರಶ್ವೈಃಶೋಭಂತ ಇತಿಶೋಭಿನಃ_ ಭವಸ್ಯ ಶಿವಸ್ಯ ನಾಗಶಾಯಿನಃ ವಿಷ್ಣೋಃಶ್ಚಭವನಾನಾಂ ಆಲಯಾನಾಂ ಅವಮರ್ದಿನಃ ಪಾತಯಿತಾರಃ_ಸವನಾದೀನಾಂ ಯಜ್ಞಪ್ರಮುಖಾನಾಂ ಧರ್ಮಾಣಾಂ ವರ್ಣಾಶ್ರಮಧರ್ಮಾಣಾಂ ಲವನಾಯನಾಶಾಯ_ದೀಕ್ಷಿತಾಃ ಕ್ಲೃಪ್ತಸಂಕಲ್ಪಾ ಅತಏವ ಭುವನಸ್ಯ ಲೋಕಸ್ಯ ಅತಿಭೀಷಣಾಃ_ ಯವನಾಃ ಮ್ಲೇಚ್ಛಾಃ_ಅವನಾವಾಂಧ್ರ ದೇಶೆಸರ್ವತ್ರಚರಂತಿ ॥

ಅರ್ಥ॥ ಗಾಳಿಯ ಓಡಿಕೆಯನ್ನು ಗೆಲುವಂಥ ಕುದುರೆಗಳ ಮೇಲೆ ಏರಿ ಎಸೆಯುವಂಥ

ಗ್ವರುಗಳಾದ, ಶಿವ ವಿಷ್ಣು ದೇವರುಗಳ ಗುಡಿಗಳನ್ನು ಮುರಿಯುವಂಥವರಾದ ಯಜ್ಞವೇ ಗ ಮೊದಲಾದ ಬ್ರಾಹ್ಮಣ ಧರ್ಮಗಳನ್ನು ಅಳಿಸಿ ಬಿಡುವ ವ್ರತವನ್ನು ಹಿಡಿದವರಾದ, ಜನರಿಗೆ ಅತಿ ಭಯಂಕರರಾದ ಮುಸಲ್ಮಾನರು ಈ ಆಂಧ್ರ ದೇಶದಲ್ಲೆಲ್ಲಕಡೆಯಲ್ಲಿಯೂ ಓಡ್ಯಾಡುತ್ತಾರೆ.

ವಿಶ್ವಾವಸುಃ ॥

ಮೂ । ಸತ್ಯಮೇವತಥಾಪ್ಯೇತೇಷುತುರುಷ್ಕಯವನೇಷುಅನನ್ಯ
ಸಾಧಾರಣವಿಕ್ರಮಗುಣಮಮುಂಗೃಹಾಣ॥ ೨೧೯ ॥

ಟೀಕಾ ॥ ಸತ್ಯಮಿತಿ । ತುರುಷ್ಕಶ್ಚ ಯವನಶ್ಚ ಮ್ಲೇಚ್ಛ ವಿಶೇಷೌ॥

ಅರ್ಥ ॥ ವಿಶ್ವಾವಸು ಹೇಳುತ್ತಾನೆ. ಹೇ ಕೃಶಾನು, ನೀನು ಹೇಳಿದ ಮಾತು ನಿಜವು. ಆದಾಗ್ಯೂ ಹೆರರಲ್ಲಿಲ್ಲದ ಧೈರ್ಯ ಈ ಮುಸಲ್ಮಾನರಲ್ಲಿ ಇದೆ. ಅದನ್ನು ಲಕ್ಷಿಸು.

ಮೂ । ಶ್ಲೋ । ಯುದ್ಧಾಯಪ್ರಮಿಳಂತುಹಂತಪಟವೋಯೋಧಾ
ಸ್ಸಹಸ್ರಾಧಿಕಾ ಯದ್ಯೇಕೋಪಿಬಲಾತ್ತುರುಷ್ಕಯವನೇಷ್ವಾ
ರೂಢಘೋಟೋಭಟಃ । ನಿಸ್ತ್ರಿಂಶಂಪರಿಕಂಪಯನ್ಸ್ವಕಟಕಾ
ನ್ನಿಷ್ಕ್ರಾಮತಿಕ್ರೋಧತಃಸರ್ವೇತೇಕೃಪಣಾಸ್ತೃಣಾನ್ಯಶರಣಾಃ
ಖಾದಂತಿಸೀದಂತಿಚ ॥ ೨೨೦ ॥

ಟೀಕಾ ॥ ಯುದ್ಧಾಯೇತಿ । ಪಟವಃ ರಣೇಸಮರ್ಥಾಃ—ಸಹಸ್ರಾದಧಿಕಾಃ ಪರಸ್ಸಹಸ್ರಂ— ಯೋಧಾಃ ತುರುಷ್ಕಯವನಭಿನ್ನಜಾತೀಯಾಃ—ಯುದ್ಧಾಯಯುದ್ಧಂ ಕರ್ತುಂ—ಕ್ರಿಯಾರ್ಥೇತ್ಯಾದಿನಾಚತುರ್ಥೀ—ಪ್ರಮಿಳಂತುಸಂಗಚ್ಛಂತು—ಅತಿಸರ್ಗೇಲೋಟ್—ಹಂತೇತ್ಯಾಶ್ಚರ್ಯೇ—ತದಾ—ತುರುಷ್ಕೇಷುವಾ ಯವನೇಷುವಾ— ನಿರ್ಧಾರಣಾಸಪ್ತಮೀ—ಏಕೋಪಿ—ಕಿಮುತದ್ವಿತ್ರಾದಯಃ ಭಟಃ ಆರೂಢಃ ಘೋಟಃ ಅಶ್ವಃಯೇನಸತಥೋಕ್ತಸ್ಸನ್— ನಿಸ್ತ್ರಿಂಶಂ ಖಡ್ಗಂ ಪರಿಕಂಪಯಂಶ್ಚಾಲಯನ್ ಸ್ವಕಟಕಾತ್ಸ್ವ ಶಿಬಿರಾತ್—ನಿಷ್ಕ್ರಾಮತಿನಿರ್ಗಚ್ಛತಿಯದಿ—ನಸಂಗಚ್ಛತ್ಯಪಿ—ತದಾತೇಪೂರ್ವೋಕ್ತಾಃ—ಸರ್ವೇಭಟಾಃ—ಅಶರಣಾಃ—ರಕ್ಷಕರಹಿತಾಃ—ಅತಏವಕೃಪಣಾಃ ದೀನಾಶ್ಚಸಂತಃ—ತೃಣಾನಿ—ಖಾದಂತಿ ಭಕ್ಷಯಂತಿ ಸೀದಂತಿ ವಿಷಣ್ಣಾಭವಂತಿಚ—ತೃಣಭಕ್ಷಕಾನ್ ವಲ್ಮೀಕಾರೂಢಾಂಶ್ಚ ವೀರಾಸ್ತ್ಯಜಂತೀತಿ ಪ್ರಸಿದ್ಧಿರಿತಿ ಭಾವಃ ॥

ಅರ್ಥ ॥ ಯುದ್ಧದಲ್ಲಿ ಕಲಿಗಳಾದ ಬೇರೆ ಜಾತಿಯ ವೀರರು ಸಾವಿರ ಗಟ್ಲೆಯಾಗಿ ಕಾದಾಡಲಿಕ್ಕೆ ಮುಂದೆ ಬರಲಿ; ತುರುಕ ಮುಸಲ್ಮಾನರ ದಂಡಿನೊಳಗಿನ ಒಬ್ಬ ಮಾತ್ರ ವೀರನು ಸಿಟ್ಟಿನಿಂದ ಕುದುರೆ ಏರಿ ಕತ್ತಿಯನ್ನು ಆಡಿಸುತ್ತಾ ಹೊರಟರೆ ಸಾಕು, ಆ ಬೇರೆ ಜ್ಯಾತಿಯ ವೀರರೆಲ್ಲ ಗತಿಗೆಟ್ಟು ದೀನರಾಗಿ ಹುಲ್ಲು ತಿನ್ನುತ್ತಾರೆ; ನಡುಗುತ್ತಾರೆ. (ಹುಲ್ಲು ತಿನ್ನುವದು ಸೋಲುವಿಕೆಯ ಅಥವಾ ಹೇಡಿತನದ ಗುರುತುವಂತೆ. ಹುಲ್ಲುಕಡ್ಡಿ ಕಚ್ಚಿದವರ ಮತ್ತು ಹುತ್ತ ಏರಿದವರ ಮೈಮೇಲೆ ವೀರರು ಬೀಳುವದಿಲ್ಲವಂತೆ.)

ಮೂ। ಕಿಂಚ।

ಶ್ಲೋ। ಪಿಬಂತುಮದಿರಾಮಮೀಪರಿತುದಂತುದೇಶಾನಹೋಹರಂ

ತ್ರಿಪುರಸುಂದರೀರಪಲಪಂತುವೇದಾನಪಿ। ತಥಾಪಿಚಮೃಧಾಂಗಣೆ ತೃಣವದೇವಮುಕ್ತ್ವಾತನುಂ ಹಠಾದ್ವಿದಧತೆಮರುತ್ಪುರಕವಾಟಿ ಕೋದ್ಘಾಟನಂ ॥ ೨೨೧ ॥

ಟೀಕಾ। ಪಿಬಂತ್ವಿತಿ। ಯದ್ಯಪಿ ಅಮೀತುರುಷ್ಕಾಯವನಾಶ್ಚ–ಮದಿರಾಂ ಮದ್ಯಂ ಪಿಬಂತು– ದೇಶಾನ್ ಪರಿತುದಂತು ನಾಶಯಂತು–ಪರೇಷಾಂ ಸುಂದರೀಃ ಅಂಗನಾಃ ಹರಂತು–ವೇದಾನ್ ತದುಕ್ತ ಕರ್ಮಾಣಿ– ಅಪಲಪಂತು ದೂಷಯಂತು–ಅಪಿಸ್ಸಮುಚ್ಚಯೆ–ಸರ್ವತ್ರ ಅತಿಸರ್ಗೇ ಲೋಟ್–ಅತಿಸರ್ಗಃ ಕಾಮಚಾರಾನುಜ್ಞಾ-ತಥಾಪಿ-ಮೃಧಾಂಗಣೆಯುದ್ಧದೇಶೆ–ತನುಂಶರೀರಂ–ಚಸ್ತ್ವರ್ಥಃ–ತೃಣಮಿವತೃಣವನ್ಮುಕ್ತ್ವಾ ತ್ಯಕ್ತ್ವಾ–ಹಠಾತ್ ಬಲಾತ್–ಮರುತ್ಪುರಸ್ಯ ಸ್ವರ್ಗಸ್ಯಕವಾಟಿಕಾಯಾಃ ಕವಾಟಸ್ಯ ಉದ್ಘಾಟನಂ–ವಿದಧತೆ ಕುರ್ವಂತ್ಯೇವ– ದ್ವಾವಿಮೌಪುರುಷೌಲೋಕೆ ಇತ್ಯಾದಿನಾ ಅಪರಾವೃತ್ತಯುದ್ಧೆ ಮೃತಾನಾಂ ಸ್ವರ್ಗಸ್ಮರಣಾದಿತಿ ಭಾವಃ ॥

ಅರ್ಥ ॥ ಈ ತುರ್ಕರೂ ಮುಸಲ್ಮಾನರೂ ಸಾರಾಯಿ ಕುಡಿಕರಾದರೆ ಆಗಲೀ, ಊರುಗಳನ್ನು ಹಾಳುಮಾಡುವಂಥಾವರಾದರೆ ಆಗಲೀ, ಹೆರರ ಚಲುವಾದ ಹೆಣ್ಣುಗಳನ್ನು ಎತ್ತಿಕೊಂಡು ಹೋಗುವಂಥವರಾದರೆ ಆಗಲೀ, ವೇದಗಳನ್ನು ದೂಷಿಸುವಂಥವರಾದರೆ ಆಗಲೀ, ಇಷ್ಟಾದರೂ ರಣಾಂಗಣದಲ್ಲಿ ತಮ್ಮ ಶರೀರಗಳನ್ನು ಹುಲ್ಲುಕಡ್ಡಿಯಂತೆ ಅಲ್ಪವಾಗಿ ಎಣಿಸಿ, ಬಲಾತ್ಕಾರದಿಂದ ಸ್ವರ್ಗದ ಬಾಗಿಲವನ್ನು ತೆರಿಯುವಂಥಾವರಾಗುತ್ತಾರೆ.

ಮೂ। ಇತಿವ್ಯೋಮಯಾನಮನ್ವತಃಸ್ಪಂದಯನ್ನಗ್ರತೋದೃಷ್ಟ್ವಾ। ಸಪ್ರತ್ಯಭಿಜ್ಞಾಂ ॥ ೨೨೨ ॥

ಟೀಕಾ। ಇತೀತಿ। ವ್ಯೋಮಯಾನಂ ವಿಮಾನಂ– ಸ್ಪಂದಯನ್ ಗಮಯನ್– ಪ್ರತ್ಯಭಿಜ್ಞಾ ಅನುಭೂತಾರ್ಥಸ್ಮಾರಕ ವಸ್ತುದರ್ಶನಂ ॥

ಅರ್ಥ ॥ ಈ ಮೇರೆಗೆ ಪ್ರಸಂಗಮಾಡಿ ವಿಮಾನವನ್ನು ಮುಂದಕ್ಕೆ ನಡಿಸಿ ಮುಂಚೆ ಇದ್ದ ಗುರುತು ತಿರಿಗಿ ನೆನಪಿಗೆ ಬಂದಂತೆ (ವಿಶ್ವಾಸು ಹೇಳುತ್ತಾನೆ.)

## ಕರ್ಣಾಟದೇಶ ವರ್ಣನಂ ॥

ಮೂ। ಶ್ಲೋ। ಕರ್ಣಾಟದೇಶೋಯಃಪೂರ್ವಂಕರ್ಣದೇಶಮಭೂಷಯತ್। ಸಏಷಸಾಂಪ್ರತಂಪಶ್ಯಚಕ್ಷುಷೋರ್ಭೂಷಣಾಯತೆ ॥ ೨೨೩ ॥

ಟೀಕಾ। ಕರ್ಣಾಟೇತಿ। ಕರ್ಣಾಟೋನಾಮದೇಶಃ–ಪೂರ್ವಂ–ಕರ್ಣದೇಶಂಶ್ರೋತ್ರಭಾಗಂ-ಅಭೂಷಯತ್ ಅಲಂಕೃತವಾನ್–ಶ್ರುತ ಇತ್ಯರ್ಥಃ–ಸಏಷಃ ಕರ್ಣಾಟದೇಶಃ–ಚಕ್ಷುಷೋರ್ಭೂಷಣಾಯತೇ–ದೃಶ್ಯತ ಇತಿಭಾವಃ–ಸಾಂಪ್ರತ ಮಿದಾನೀಂ ಪಶ್ಯ–ತಮಿತಿ ಶೇಷಃ ॥

ಅರ್ಥ ॥ ಇದಕ್ಕೆ ಮೊದಲು ನಮ್ಮ ಶ್ರವಣೇಂದ್ರಿಯವನ್ನು ಅಲಂಕರಿಸಿದಂಥ (ಅಂದರೆ ನಾವು ಕೇಳಿದ) ಕನ್ನಡದೇಶವು ಇದೇ ಈಗ ನಮ್ಮ ಕಣ್ಣುಗಳಿಗೆ ಸೊಬಗು ಉಂಟು ಪಡಿಸುತ್ತದೆ.

ಮೂ । ಲೋಚನಾಸೇಚನಕಂ ಕಿಲದೇಶಸ್ಯಾಸ್ಯರಾಮಣೀಯಕಂ ॥ ೨೨೪ ॥

ಟೀಕಾ ॥ ಲೋಚನೇತಿ । ಆಸೇಚನಕಂ ಚಿರಂದರ್ಶನೇಪಿತೃಪ್ತ್ಯಜನಕಂ—ತದಾಸೇಚನಕಂ ತೃಪ್ತೇರ್ನಾಸ್ತ್ಯಂತೋ ಯಸ್ಯದರ್ಶನಾದಿತ್ಯಮರಃ ॥

ಅರ್ಥ ॥ ನಿಜವಾಗಿಯೂ ಈ ದೇಶದ ಸೊಂಪು ಎಷ್ಟು ನೋಡಿದರೂ ಸಾಲದು.

ಮೂ। ಶ್ಲೋ। ಪ್ರತಿನಗರಮಿಹಾರಾಮಾಃಪ್ರತ್ಯಾರಾಮಂಪಚೇಳಿಮಾಃಕ್ರಮುಕಾಃ । ಪ್ರಸವಾಃಪ್ರತಿಕ್ರಮುಕಮುಪ್ರ್ಯುತ್ಸರ್ಪತಿಮಧುತತಿಃಪ್ರತಿಪ್ರಸವಂ ॥ ೨೨೫ ॥

ಟೀಕಾ । ಪ್ರತಿನಗರಮಿತಿ । ಇಹಕರ್ಣಾಟದೇಶೇ— ನಗರೇನಗರೇಪ್ರತಿನಗರಂ— ವೀಪ್ಸಾಯಾಮವ್ಯಯೀಭಾವಃ— ಏವಮಗ್ರೇಪಿ ಆರಾಮಾಃ ಉದ್ಯಾನಾನಿ— ವಾಕ್ಯತ್ರಯೇಪಿ ವಿಲಸಂತೀತಿಯೋಜ್ಯಂ— ಪಚೇಳಿಮಾಃ ಪಾಕಾಭಿಮುಖಾಃ ಕ್ರಮುಕಾಃ ಪೂಗವೃಕ್ಷಾಃ—ಪ್ರಸವಾಃ ಪುಷ್ಪಾಣಿ—ಮಧುನಃ ಮಕರಂದಸ್ಯತತಿಃ ಬಿಂದುಸಮೂಹಃ ॥

ಅರ್ಥ ॥ ಈ ಕರ್ಣಾಟ ನಾಡಿನಲ್ಲಿ ಪ್ರತಿ ಪಟ್ಟಣದಲ್ಲಿಯೂ ತೋಟಗಳವೆ. ಪ್ರತಿ ತೋಟದಲ್ಲಿ ಮಾಗಲಿಕ್ಕೆ ಸಿದ್ಧವಾದ ಗೊನೆಗಳನ್ನು ತಾಳ್ದ ಅಡಿಕೆಮರಗಳವೆ. ಪ್ರತ್ಯೇಕ ಅಡಿಕೆ ಮರದಲ್ಲಿ ಕೊನಲ್ದ ಹೂಗಳವೆ. ಪ್ರತ್ಯೇಕ ಹೂವಿನಿಂದ ಮಕರಂದವು ಹರಿಯುತ್ತದೆ.

ಮೂ। ಶ್ಲೋ। ಪ್ರತಿಮಧುಬಿಂದುಮಿಳಿಂದಾಃಪ್ರೇಂಖಂತಿಪ್ರತಿಮಿಳಿಂದಮಾರಾವಾಃ। ಪ್ರತ್ಯಾರಾವಂಸುದೃಶಾಂಮುದಾಉದಾರಾಃಪ್ರತಿಮುದಂಮದನಃ ॥ ೨೨೬ ॥

ಟೀಕಾ । ಪ್ರತೀತಿ । ಮಿಳಿಂದಾಃ ಭೃಂಗಾಃ—ಪ್ರೇಂಖಂತಿಭ್ರಮಂತಿ—ಆರಾವಾಃ ಝುಂಕಾರಾಃ—ಪ್ರಭವಂತೀತಿಶೇಷಃ—ಉದಾರಾಃ ಮಹಾಂತಃ—ಮುದಾಃ ವಿಲಾಸಾಃ ॥

ಅರ್ಥ ॥ ಪ್ರತ್ಯೇಕ ಮಕರಂದದ ತಟಕಿನ ಸುತ್ತಲು ದುಂಬಿಗಳು ಹಾರುತ್ತವೆ. ಪ್ರತ್ಯೇಕ ದುಂಬಿಯು ಝುಂಕಾರಗಳನ್ನು ಮಾಡುತ್ತದೆ. ಪ್ರತ್ಯೇಕಝುಂಕಾರವು ಚೆಲ್ವೆಯರ ವಿಲಾಸಗಳನ್ನು ವಿಸ್ತರಿಸುತ್ತದೆ. ಪ್ರತ್ಯೇಕ ವಿಲಾಸವು ಕಾಮನನ್ನು ರೇಗಿಸುತ್ತದೆ.

ಕೃಶಾನುಃ ॥

ಮೂ।ಹಂತಕಥಮಭಿನಂದಸಿನಿಂದನೀಯಮಮುಂದೇಶಂ॥ ೨೨೭॥

ಅರ್ಥ॥ ಅಯ್ಯೊ! ನಿಂದೆಗೆ ಪಾತ್ರವಾದ ಈ ದೇಶವನ್ನು ಹ್ಯಾಗೆ ಶ್ಲಾಘಿಸುತ್ತೀಯಾ ?

ಮೂ। ತಥಾಹಿ ॥

ಶ್ಲೋ । ವೇದವೈದಿಕವಿದ್ವೇಷದೂಷಿತಾಭಸ್ಮರೂಷಿತಾಃ। ಚಂಡಾಸ್ಸಂತ್ಯತ್ರಪಾಷಂಡಾಲಿಂಗಾಲಿಂಗಿತವಕ್ಷಸಃ॥ ೨೨೮ ॥

ಟೀಕಾ ॥ ವೇದೇತಿ । ವೇದೇಷು ವೈದಿಕೇಷು ತದುಕ್ತ ಕರ್ಮಕರೇಷುಚವಿದ್ವೇಷೇಣ ದೂಷಿತಾಃ ಭ್ರಷ್ಟಾಃ—ಭಸ್ಮನಾರೂಷಿತಾಃ ಲಿಪ್ತಾಂಗಾಃ ಚಂಡಾಃ ಭಯಂಕರಾಃ— ಲಿಂಗೈರಾಲಿಂಗಿತಾನಿಸಂಗತಾನಿ ವಕ್ಷಾಂಸಿಯೇಷಾಂತೇ— ಪಾಷಂಡಾಃ ಶ್ರೌತಸ್ಮಾರ್ತದೂರಾಃ ಲಿಂಗಬಲಿಜಾಇತಿಭಾಷಾನಾಮ— ಅತ್ರಕರ್ಣಾಟದೇಶೇ—ಸಂತಿ ॥

ಅರ್ಥ॥ ವೇದಗಳನ್ನೂ ವೇದೋಕ್ತ ಕರ್ಮಗಳನ್ನೂ ಆಚರಿಸುವವರನ್ನು ಹಗೆ ಮಾಡುವಂಥಾವರಾದ, ಮೈಗೆ ಬೂದಿಲೇಪ ಮಾಡಿಕೊಳ್ಳುವಂಥಾವರಾದ, ಎದೆಗಳ ಮೇಲೆ ಲಿಂಗಗಳನ್ನು ಧರಿಸಿಕೊಳ್ಳುವಂಥಾವರಾದ, ಭಯ ಹುಟ್ಟಿಸುವಂಥಾವರಾದ, ಶ್ರುತಿ ಸ್ಮೃತಿಗಳಿಂದ ದೂರರಾದ ಲಿಂಗಾಯತರು ಈ ಕರ್ಣಾಟ ದೇಶದಲ್ಲಿರುತ್ತಾರೆ.

ಮೂ । ಆಕರ್ಣಯತಾವದನ್ಯದಸ್ಯಾಮೀಷಾಮುಪಚರಿತಂ॥೨೪೯॥

ಟೀಕಾ ॥ ಆಕರ್ಣಯೇತಿ । ಅಮೀಷಾಂ ಪಾಷಂಡಾನಾಂ—ಅಪಚರಿತಂ ದುರಾಚಾರಂ ॥

ಅರ್ಥ ॥ ಈ ವೇದಬಾಹ್ಯರ ಬೇರೊಂದು ದುರಾಚಾರವನ್ನು ಹೇಳುತ್ತೇನೆ ಕೇಳು.

ಶ್ಲೋ । ಶಿರಃಪುರಾರೇರ್ದ್ವಿಜರಾಜಪಾದದಿವ್ಯಾಮೃತೈಸ್ಸಿಕ್ತಮಿತೀರ್ಷ್ಯಯೇವ। ಶೂದ್ರಾಇಮೇಲಿಂಗಧರಾಸ್ಸ್ವಯಂತತ್ಸ್ವಪಾದತೋಯೈಸ್ಸ್ನಪಯಂತಿಕಷ್ಟಂ ॥ ೨೫೦ ॥

ಟೀಕಾ॥ ಶಿರ ಇತಿ । ಪುರಾರೇಃ ಶಿವಸ್ಯಶಿರಃ— *ದ್ವಿಜರಾಜಸ್ಯ ಬ್ರಾಹ್ಮಣಶ್ರೇಷ್ಠಸ್ಯ ಪಾದಯೋಃ ಚಂದ್ರಸ್ಯಕಿರಣಾನಾಂಚ ದಿವ್ಯೈರಮೃತೈರ್ಜಲೈಃ ಸುಧಾಭಿಶ್ಚ— ಸಿಕ್ತಮಾದ್ರೀಕೃತಂ— ಇತ್ಯುಕ್ತಪ್ರಕಾರಯಾ ಈರ್ಷ್ಯಯಾ ಅಸಹನೇನೇವೇತ್ಯುತ್ಪ್ರೇಕ್ಷಾ—ಲಿಂಗಧರಾ ಇಮೆಶೂದ್ರಾಃ—ತತ್ ಶಿವಪ್ರತಿಮಾಶಿರಃ—ಸ್ವಪಾದತೋಯೈಃ—ಸ್ವಯಂಸ್ನಪಯಂತಿ— ಕಷ್ಟಂ ಅತ್ಯಂತ ಅನುಚಿತಂ ॥

ಅರ್ಥ ॥ ಪ್ರಾಚೀನ ಕಾಲದಲ್ಲಿ ಶಿವನ ತಲೆಯು ಬ್ರಾಹ್ಮಣರಲ್ಲಿ ಹಿರಿಯನಾದ ಚಂದ್ರನ ಕಿರಣಗಳ ಸುಧಾರಸದಿಂದ ತೋಯಿಸಲ್ಪಟ್ಟಿತು ಎಂಬ ಕಾರಣದಿಂದ ಅಸೂಯೆಯುಳ್ಳವರಾಗಿ ಈ ಶೂದ್ರರಾದ ಲಿಂಗಧಾರಿಗಳು ತಮ್ಮ ಅಡಿನೀರಿನಿಂದ ಶಿವಮೂರ್ತಿಗಳ ಶಿರಸ್ಸುಗಳನ್ನು ಎರೆಯುತ್ತಾರೆ. ಕಷ್ಟವಪ್ಪ- ಕಷ್ಟ !

ವಿಶ್ವಾವಸುಃ ॥

ಮೂ । ಸಖೇಮೈವಂಸಂಗರಿಷ್ಠಾಃಯದಸ್ಮಿನ್ಯದುಶೈಲಪ್ರಭೃತೀನಿದಿವ್ಯಕ್ಷೇತ್ರಾಣಿದೃಶ್ಯಂತೇ ॥ ೨೫೧ ॥

---

* ಅತ್ರಟೀಕಾಕೃತಾ ದ್ವಿಜರಾಜ ಶಬ್ದೇನ ಪಕ್ಷೇ ಬ್ರಾಹ್ಮಣಶ್ರೇಷ್ಠ ಇತ್ಯರ್ಥಃ ಸ್ವೀಕೃತಃ— ಪರಂನ್ವೈಷಸಾಧುರಿತಿ ಪ್ರತಿಭಾತಿ ಗಂಗಾಯಾಃ ಬ್ರಾಹ್ಮಣಪಾದಜಲತ್ವೇನ ಕುತ್ರಾಪಿ ಪ್ರಸಿದ್ಧ್ಯಭಾವಾತ್— ತಸ್ಯಾಶ್ಚ ವಿಷ್ಣುಪದೋದ್ಭೂತತ್ವೇನ ಸರ್ವತ್ರ ಪ್ರಸಿದ್ಧೇಃ ದ್ವಿಜರಾಜ ಶಬ್ದೇನ ವಿಷ್ಣುರೇವ ಗ್ರಾಹ್ಯ ಇತಿ ಅಲಂ ಪಲ್ಲವಿತೇ ॥

ಟೀಕಾ || ಮೇತಿ || ಸಂಗರಿಷ್ಮಾಃ ವದ–ಯದುಶೈಲಃ ಮೇಲುಕೋಟೇತಿ ನಾರಾಯಣಪುರಮಿತಿಚ ಭಾಷಾಷಾಮನಿ ||

ಅರ್ಥ || ಎಲಾ ಮಿತ್ರನೇ, ಹಾಗೆ ಹೇಳಬೇಡ. ಯಾಕೆಂದರೆ ಈ ಕರ್ಣಾಟ ದೇಶದಲ್ಲಿ ಯದುಶೈಲವೇ ಮೊದಲಾದ ಶ್ರೇಷ್ಠವಾದ ಕ್ಷೇತ್ರಗಳಿವೆ. ಯದುಶೈಲವೆಂದು ಮೇಲುಕೋಟೆಗೆನ್ನುತ್ತಾರೆ.

ಮೂ। ಶ್ಲೋ। ದುರಿತಮವನತಾನಾಂದುರ್ನಿರೋಧಂನಿರುಂಧರ್ನ್ ಸಿತಮತಿಭಿರತಂದ್ರೈಸ್ಸೇವ್ಯಮಾನೋಮುನೀಂದ್ರೈಃ। ಯದುಗಿರಿರಯಮಿಂಧೇಯತ್ರನಾರಾಯಣಾತ್ಮಾನಿವಸತಿಕಿಲಹರ್ಷಂನೀಲಮೇಘಃಪ್ರವರ್ಷನ್ ॥ ೨೩೨ ॥

ಟೀಕಾ || ದುರಿತಮಿತಿ || ಅವನತಾನಾಂ ನಮಸ್ಕುರ್ವತಾಂ ಸಂಬಂಧಿ–ದುರ್ನಿವಾರಂ ದುರಿತಂ–ನಿರುಂಧರ್ನ್ ನಾಶಯರ್ನ್-ಅತಏವ–ಸಿತಮತಿಭಿಃ ಶುದ್ಧಚಿತ್ತೈಃ-ಅತಂದ್ರೈಃ ಅಪ್ರಮಾದಿಭಿಃ ಮುನೀಂದ್ರೈಃ–ಸೇವ್ಯಮಾನಃ ಅಯಂ ಯದುಗಿರಿಃ ಇಂಧೇಪ್ರಕಾಶತೇ–ಯತ್ರ ಯದುಶೈಲೇ ನಾರಾಯಣಾತ್ಮಾ ಭಗವತ್ಸ್ವರೂಪಃ–ನೀಲಮೇಘಃ ಹರ್ಷಮಾನಂದಂ–ಪ್ರವರ್ಷನ್–ನಿವಸತಿಕಿಲ–ಸೋಯಮಿತಿಸಂಬಂಧಃ–ಅತ್ರ || ಶ್ಲೋ || ಮೇಘ ಪರ್ವತಯೋರಬ್ಧಿ ಚಂದ್ರಯೋರ್ದೃಷ್ಟಿರಮ್ಯಯೋಃ। ಶಿಖಿತೋಯದಯೋರ್ಲೋಕೇಸಿದ್ಧಾಮೈತ್ರೀನಿಸರ್ಗತಃ ಇತ್ಯುಕ್ತೇರ್ಮೇಘತ್ವರೂಪಣಂ ಭಗವತ ಇತಿಜ್ಞೇಯಂ ||

ಅರ್ಥ || ಇಗೋ, ನೋಡು ಶರಣು ಹೋದವರ ಕಠೋರ ಪಾಪಗಳನ್ನು ನಾಶಮಾಡುವಂಥಾ ಶುದ್ಧಮನಸ್ಸುಳ್ಳವರಿಂದ ಆಶ್ರಯ ಮಾಡಿಕೊಳ್ಳಲ್ಪಟ್ಟಂಥಾ ಈ ಯದುಗಿರಿ ಬೆಟ್ಟವು ಪ್ರಕಾಶಮಾನವಾಗಿನಿಂತಧೆ. ಇದೇ ಯದುಗಿರಿ ಪರ್ವತದ ಮೇಲೆ ಶ್ರೀ ಕೃಷ್ಣನೆಂಬನೀಲಮೇಘನು ಆನಂದವೆಂಬ ಮಳೆಯನ್ನು ಸುರಿಸುವಂಥವನಾಗಿ ವಾಸ್ತವ್ಯ ಮಾಡಿಕೊಂಡಿರುತ್ತಾನೆ.

ಮೂ। ಸುಭಕ್ತ್ಯನ್ಮೇಷಂ ||
ಶ್ಲೋ। ಯದುಗಿರಿತಟಾಗಾರಾಸ್ಸ್ವರಾಜಮೌಳಿಪರಿಸ್ಫುರನ್ಮರಕತಮಹೋಧಾರಾನೀರಾಜಿತಾಂಘ್ರಿಸರೋರುಹಾ । ನವಜಲಧರಾಕಾರಾನಾರಾಯಣಾಖ್ಯಯಭೂಷಿತಾ *ನಿರವಧಿದಯಾಸಾರಾಸಾರಾಜತೇಪರದೇವತಾ ॥ ೨೩೩ ॥

ಟೀಕಾ। ಯದ್ವಿತಿ। ಯದುಗಿರೇಸ್ತಟಂ ಶಿಖರಂ ಅಗಾರಂ ನಿವಾಸಃ ಯಸ್ಯಾಸ್ಸಾ– ಸ್ವಃ ಸ್ವರ್ಗಸ್ಯ ರಾಜಾ ಇಂದ್ರಃ ತಸ್ಯಮೌಳೌ ಕಿರೀಟೇಪರಿಸ್ಫುರತಾಂ ಮರಕತಾನಾಂ ಮಹಾಂಸಿ ತೇಜಾಂಸಿ ತೇಷಾಂ ಧಾರಯಾ ಪರಂಪರಯಾ ನೀರಾಜೀಕೃತನೀರಾಜನೇ ಅಂಘ್ರಿಸರೋರುಹೇಯಸ್ಯಾಸ್ಸಾ– ನಮಸ್ಕಾರ

---

* ನಿರುಪಧಿ ಇತಿಪಾಠಾಂತರಂ ||

ದೇಳ್ಯಾಸ್ತೀತಿಭಾವಃ—ನವಜಲಧರಸ್ಯೇವ ಆಕಾರಃ ರೂಪಂ ಯಸ್ಯಾಸ್ಸಾ— ನಾರಾಯಣ ಇತ್ಯಾಖ್ಯಯೇನ ನಾಮ್ನಾಭೂಷಿತಾ—ಸುಪ್ರಸಿದ್ಧಾ—ನಿರವಧಿದಯಾಸಾರಾ ಅಪಾರಕರುಣಾರಸಾ—ಪರದೇವತಾ—ರಾಜತೇ ||

ಅರ್ಥ || ವಿಕಾಸವಾದ ಭಕ್ತಿಯುಳ್ಳವನಾಗಿ ವಿಶ್ವಾವಸು ಹೇಳುತ್ತಾನೆ: ಸ್ವರ್ಗದ ಅರಸನಾದ ಇಂದ್ರನ ನೆತ್ತಿಯಮೇಲಿನ ಕಿರೀಟದ ಪಚ್ಚೆರತ್ನಗಳೆಂಬ ದೀವಿಗೆಗಳ ಸಾಲಿನಿಂದ ಆರತಿ ಮಾಡಲ್ಪಡುವ ಚರಣಕಮಲಗಳುಳ್ಳಂಥಾ, ನೂತನ ಮೇಘದಂತಿರುವಂಥಾ, ನಾರಾಯಣಯೆಂಬ ಹೆಸರಿನಿಂದ ಖ್ಯಾತಿ ಪಟ್ಟಂಥಾ, ಆ ಪರಬ್ರಹ್ಮಸ್ವರೂಪವಾದ ದೇವತೆಯು ಅಪರಿಮಿತವಾದ ಕರುಣಾರಸದಿಂದ ತುಂಬಿ, ಯದುಗಿರಿಪರ್ವತವನ್ನು ಮನೆಯಾಗಿ ಮಾಡಿಕೊಂಡು ಶೋಭಿಸುತ್ತಾಳೆ. (ಇದು ನಾರಾಯಣ ಸ್ವಾಮಿಯ ವರ್ಣನೆಯೇ ಸರಿ. ಪ್ರಾಸಕ್ಕಾಗಿಸ್ತ್ರೀಲಿಂಗದ ಪ್ರಯೋಗಮಾಡಲ್ಪಟ್ಟಿದೆ.)

ಮೂ। ಪುನಸ್ಸವಿಸ್ಮಯಂ ||

ಶ್ಲೋ। ಯಃಪ್ರಭುರ್ಯಾದವಕ್ಷ್ಮಾಭೃತ್ಪುರಸ್ಕೃತ್ಯಾಪುರಾಬಭೌ।
ಅಧುನಾಯಾದವಕ್ಷ್ಮಾಭೃದಧಃಕೃತ್ಯಾಸಭಾತ್ಯಹೊ || ೨೩೪ ||

ಟೀಕಾ ||ಯಇತಿ|| ಯಃ ಪ್ರಭುಃ ನಾರಾಯಣಃ—ಪುರಾಕೃಷ್ಣಾವತಾರೆ ಯಾದವಕ್ಷ್ಮಾಭೃತಃ ಉಗ್ರಸೇನಸ್ಯ ಪುರಸ್ಕೃತ್ಯಾ ಪೂಜಯಾ ಅಗ್ರಕರಣೇನ ಉಪಲಕ್ಷಿತಃ ಬಭೌ ಯದುವಂಶ್ಯಾನಾಂಯಯಾತಿಶಾಪಾತ್ ಭದ್ರಾಸನಾನರ್ಹತ್ವಾದಿತಿಭಾವಃ—ಸಪ್ರಭುಃ—ಅಧುನಾ—ಯಾದವಕ್ಷ್ಮಾಭೃತಃ ಯದುಶೈಲಸ್ಯಚಅಧಃ ಕೃತ್ಯಾತಿರಸ್ಕರಣೇನ ಅಧೋಭಾಗೆ ಕರಣೇನಚ ಉಪಲಕ್ಷಿತಃ ಭಾತಿ— ಅಹೋ ಇತ್ಯಾಶ್ಚರ್ಯೆ—ಶ್ಲೇಷಾನು ಪ್ರಾಣಿತೋ ವಿರೋಧಾಭಾಸಃ ||

ಅರ್ಥ || ಯಾವ ಸ್ವಾಮಿಯು ಕೃಷ್ಣಾವತಾರದಲ್ಲಿ ಯಾದವಕ್ಷ್ಮಾಭೃತ್ ಅಂದರೆ ಯಾದವರ ನಾಡಿಗೆ ಸ್ವಾಮಿಯಾದ ಉಗ್ರಸೇನನಿಗೆ ಹಿರಿಯತನಕ್ಕೇರಿಸಿ ಶೋಭಿಸಿದನೋ, ಆ ಸ್ವಾಮಿಯು ಈಗ ಯಾದವಕ್ಷ್ಮಾಭೃತ್ ಅಂದರೆ ಯದುಗಿರಿ ಪರ್ವತವನ್ನು ಕೆಳಕ್ಕೆ ಮಾಡಿ ಪ್ರಕಾಶಿಸುತ್ತಾನೆ.

ಮೂ। ಸಶ್ಲಾಘಂ ||

ಶ್ಲೋ। ಭೂಭೃತ್ಯಸ್ಮಿನ್ಪಕ್ಷಿರಾಜೇನಪೂರ್ವಂಶ್ವೇತದ್ವೀಪಾದಾಹೃತಾಂಶ್ವೇತಮೃತ್ಸ್ನಾಂ। ಧನ್ಯಾನಿತ್ಯಂಧಾರಯಂತೋಲಲಾಟೇಮಾಲೀಮಸ್ಯಂ *ಮಾನಸಾನ್ನಿರ್ಮೃಜಂತಿ || ೨೩೫ ||

ಟೀಕಾ || ಭೂಭೃತೀತಿ || ಅಸ್ಮಿನ್ ಭೂಭೃತಿಯದುಶೈಲೇಪೂರ್ವಂ ಕೃತಯುಗೆ—ಶ್ವೇತದ್ವೀಪಾತ್—ಪಕ್ಷಿರಾಜೇನ ಗರುತ್ಮತಾ—ಆಹೃತಾಂ—ಶ್ವೇತಮೃತ್ಸ್ನಾಂ— ತಿರುಮಣಿತಿಭಾಷಾನಾಮ— ಲಲಾಟೇ— ಧಾರಯಂತಃ—ಧನ್ಯಾಃ—ಮಾನಸಾತ್—ಮಾಲೀಮಸ್ಯಂ ಮಾಲಿನ್ಯಂ ಪಾಪಂ—ನಿರ್ಮೃಜಂತಿ ನಿವರ್ತಯಂತಿ ||

---

* ಮಾನಸಮಿತಿ ಪಾಠಾಂತರಂ ||

ಅರ್ಥ ॥ ಕೃತಾಯುಗದಲ್ಲಿ ಗರುಡನು ಶ್ವೇತದ್ವೀಪದಿಂದ ಈ ಯದುಗಿರಿ ಪರ್ವತದ ಮೇಲೆ ತಂದುಹಾಕಿದಂಥಾ ತಿರುಮಣ್ಣಿನ ನಾಮ ಜನರು ಇಟ್ಟುಕೊಂಡು ಪುಣ್ಯವಂತರಾಗಿ ಪಾಪವನ್ನು ಬಿಡಿಸಿ ಕೊಳ್ಳುತ್ತಾರೆ.

ಮೂ । ಶ್ಲೋ । ವಿಷ್ಣುಪದ್ಯಾಃಕನನಯಾವಿಶ್ರುತೋವಿಮಲಾಶ
ಯಃ । ಕಾಸಾರೋತ್ರಹರತ್ಯೇನಃಕವಿಃಕಂಸಾರಿಭಾಗಿವ ॥ ೨೩೬ ॥

ಟೀಕಾ ॥ ವಿಷ್ಣ್ವಿತಿ ॥ ವಿಷ್ಣುಪದ್ಯಾಃ ಗಂಗಾಯಾಃ ವಿಷ್ಣೋಃಸಂಬಂಧಿನಾಂ ಪದ್ಯಾನಾಂ ಆಕಲನಯಾ ಸಾಂಗತ್ಯೇನ—ವಿಶ್ರುತಃ ಪ್ರಸಿದ್ಧಃ ವಿಮಲಃ ನಿರ್ಮಲಃ ಆಶಯಃ ಅಭಿಪ್ರಾಯಃ ಯಸ್ಯ—ಅತ್ರಯದುಶೈಲೆ—ಕಾಸಾರಃ ತೀರ್ಥಂ— ಕಂಸಾರಿಭಾಕ್‌ಹರಿಸೇವಕಃ—ಕವಿರಿವ—ಏನಃ ಪಾಪಂಹರತಿ—ಶ್ಲಿಷ್ಟ ವಿಶೇಷಣೋಯಮುಪಮಾ ॥

ಅರ್ಥ ॥ ಗಂಗಾನದಿಯ ಸಂಗದಿಂದ ಪಾವನವಾಗಿ ಪ್ರಸಿದ್ಧವಾದ ತೀರ್ಥವು ಈ ಯದುಗಿರಿಯಲ್ಲಿರುತ್ತದೆ. ಅದು ಕಂಸಾರಿಭಾಕ್ ಅಂದರೆ ಹರಿಸೇವಕನಂತೆ ಪಾಪವನ್ನು ತೊಳೆಯುತ್ತದೆ.

ಮೂ । ಇತಿವಿಮಾನಮಿತರತ್ರಪರಿಸ್ಪಂದಯಾಸಾನಂದಂ ॥

ಅರ್ಥ ॥ ಈ ಪ್ರಕಾರವಾಗಿ ಹೇಳಿ ವಿಮಾನವನ್ನು ಮುಂದರಿಸಿ ಸಂತೋಷದಿಂದ ವಿಶ್ವಾವಸು ಹೇಳುತ್ತಾನೆ.

ಶ್ಲೋ । ರಜತಪೀಠಪುರಂನನುಕಾಂಚನಶ್ರಿಯಮಿದಂವಹತೇಮಹ
ದದ್ಭುತಂ । ಇಹವಸನ್ *ಶುಭರೀತಿರಹೋಬುಧಃಪರಮಯೋಗತ
ಏವವಿರಾಜತೇ ॥ ೨೩೭ ॥

ಟೀಕಾ ॥ ರಜತೇತಿ ॥ ರಜತ ಪೀಠಂಸಾಮಪ್ರರಂ ಸುವುನೂರಿತಿ ಭಾಷಾನಾಮ—ಕಾಂಚನಸ್ಯ ಶ್ರಿಯಂ ಶೋಭಾಂ—ಕಾಂಚನೇತಿ ಕಾಮಪೀತ್ಯರ್ಥಃ—ವಹತೆ ಇತಿಯತ್—ತದಿದಂ ಮಹದದ್ಭುತಂ— ರಜತಸ್ಯ ಸ್ವರ್ಣ ಶೋಭಾಧಾರಣಂ ಅತ್ಯಾಶ್ಚರ್ಯಕರ ಮಿತ್ಯರ್ಥಃ—ಇಹರಜತಪೀಠಪುರೆ—ವರ್ಸ—ಶುಭಾರೀತಿಃ ಆರಕೂಟಂ ಲೋಹಂ ಶೀಲಂ ಯಸ್ಯಸಃ—ಅಸೌಬುಧಃ ಆನಂದತೀರ್ಥಃ—ಪರಂಅತ್ಯಂತಂ ಅಯಸಿ ಅಶ್ಮಸಾರೆಗತಸ್ಸನ್ನೇವ—ಪರಮೇಣ ಯೋಗೇನ ಉಪಲಕ್ಷಿತ ಏವೇತಿಚ—ಸಾರ್ವವಿಭಕ್ತಿಕಸ್ತಸಿಃ— ವಿರಾಜತೆ—ಶ್ಲೇಷಾನು ಪ್ರಾಣಿತೋ ವಿರೋಧಾಭಾಸಃ ॥

ಅರ್ಥ ॥ ಈ ಸುವುನೂರ ಪಟ್ಟಣವು ಶ್ರೇಷ್ಠವಾದ ಮತ್ತು ಆಶ್ಚರ್ಯಕರವಾದ ಸೌಭಾಗ್ಯದಿಂದ ಯುಕ್ತವಾಗಿದೆ. ಇಲ್ಲಿ ಶುಭರೀತಿ ಅಂದರೆ ಮಂಗಲಕರವಾದ ಆಚರಣೆಯುಳ್ಳಂಥಾ ಜ್ಞಾನಿಗಳಾದ ಆನಂದತೀರ್ಥ ಸ್ವಾಮಿಗಳು ಶ್ರೇಷ್ಠವಾದ ಯೋಗಾಭ್ಯಾಸದಲ್ಲಿ ಆಸಕ್ತರಾಗಿ ಶೋಭಿಸುತ್ತಾರೆ.

ಈ ಶ್ಲೋಕದಲ್ಲಿ ಶ್ಲೇಷಾರ್ಥ ಉಂಟು. ಏನಂದರೆ, ಈ ಬೆಳ್ಳಿಯ ಮಣೆಯು

---

* ಶುಭರೀತಿ ವಹೋ ಇತಿಪಾಠಾಂತರಂ ॥

ಮೇಲೆ ಕುಳ್ಳಿರಿಸಲ್ಪಟ್ಟಿರುವ ಪಟ್ಟಣವು, ಭಂಗಾರದ ಪದಪಿನಿಂದ ಹೊಳೆಯುತ್ತದೆ; ಇಲ್ಲಿ ಹಿತ್ತಾಳಿಯ ಸ್ವಭಾವವುಳ್ಳ ಜ್ಞಾನಿ ಅತ್ಯಂತ ಕಬ್ಬಿಣದ ಸ್ಥಿತಿಯನ್ನು ಹೊಂದಿ ಶೋಭಿಸುತ್ತಾನೆ; ಇದು ಬಹಳ ಆಶ್ಚರ್ಯವು.

ಮೂ। ಪುನಃಸ್ಸಶ್ಲಾಘಂ ॥

ಅರ್ಥ ॥ ಮತ್ತು ಸ್ತುತಿಮಾಡಿ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ। *ಉಚ್ಚೈರ್ದ್ವಿಜೇಂದ್ರೈರಮೃತಾಭಿಲಾಷಾದಾಸೇವಿತೋ ಭುವ್ಯಭಿಜಾತಕೀರ್ತಿಃ । ಆನಂದತೀರ್ಥಾಹ್ವಯಮತ್ರ ಕಶ್ಚಿದನ್ವರ್ಥಯನ್ನಾವಿರಭೂನ್ಮುನೀಂದ್ರಃ ॥ ೨೩೪ ॥

ಟೀಕಾ ॥ ಉಚ್ಚೈರಿತಿ ॥ ದ್ವಿಜೇಂದ್ರೈಃ ಪಕ್ಷಿಶ್ರೇಷ್ಠೈಃ ಬ್ರಾಹ್ಮಣಶ್ರೇಷ್ಠೈಶ್ಚ—ಅಮೃತೇಜಲೇ ಮೋಕ್ಷೇಚ ಅಭಿಲಾಷಾತ್— ಆಸೇವಿತಃ—ಭುವಿ—ಅಭಿಜಾತಾಕೀರ್ತಿಃ ಪಂಕಸ್ಥಲಂಯಶಶ್ಚ ಯಸ್ಯಸಃ—ಅತಏವ ಆನಂದಯತೀತ್ಯಾನಂದಶ್ಚೀರ್ಥಃ ಗುರುರಿತಿಚಯಃಆಹ್ವಯಃ ನಾಮತಮನ್ವರ್ಥಾರ್ಥಯಃ ಯಥಾರ್ಥಂ ಕುರ್ವನ್—ಕಶ್ಚಿನ್ಮುನೀಂದ್ರಃ ಯೋಗೀ—ಆವಿರಭೂತ್ ಆವಿರ್ಬಭೂವ ॥

ಅರ್ಥ ॥ ಮೋಕ್ಷಕಾಂಕ್ಷೆಯುಳ್ಳ ಬ್ರಾಹ್ಮಣ ಶ್ರೇಷ್ಠರಿಂದ ಸೇವಿಸಲ್ಪಟ್ಟ, ಪೃಥ್ವಿಯಲ್ಲಿ ಹೆಸರುವಾಸಿ ಎತ್ತಂಥ ಒಬ್ಬಾನೊಬ್ಬ ಯೋಗಿಯು ಆನಂದ ತೀರ್ಥ ಎಂಬ ಹೆಸರನ್ನು ಯಥಾರ್ಥ ಮಾಡಿದಂಥಾತನಾಗಿ ಈ ಸುವುನೂರು ಪಟ್ಟಣದಲ್ಲಿ ಮೈದೋರಿಕೊಂಡಿರುವನು.

ಕೃಶಾನುಃ ॥

ಮೂ । †ಅಸ್ತುತಾವದೇವಮಥಾಪ್ಯದಸೀಯದರ್ಶನಾನುವರ್ತಿನಾಂಅಧುನಾತನಾನಾಂ ದ್ವಿಜಾನಾಮಪಿಬಹವಆಕರ್ಣ್ಯತಾಮಪಚಾರಾಃ ॥ ೨೩೫ ॥

ಟೀಕಾ ॥ ಅಸ್ತ್ವಿತಿ॥ ಅಮುಷ್ಯ ಆನಂದತೀರ್ಥಸ್ಯ ಸಂಬಂಧಿ ಅದಸೀಯಂ ದರ್ಶನಂ ಶಾಸ್ತ್ರಂ ಅನುವರ್ತಂತ ಇತ್ಯನುವರ್ತಿನಾಂ— ಅಪಚಾರಾಃ ದುರಾಚಾರಾಃ ॥

ಅರ್ಥ ॥ ಅದು ಹಾಗಿರಲೀ, ಈ ಆನಂದ ತೀರ್ಥ ಸ್ವಾಮಿಯ ಮತವನ್ನವಲಂಬಿಸಿ ಕೊಂಡಿರುವ ವರ್ತಮಾನಕಾಲದ ಬ್ರಾಹ್ಮಣರುಗಳ ಕೆಟ್ಟ ನಡತೆಗಳು ಬಹಳ ಅವೆ, ಕೇಳು.

ಮೂ। ಶ್ಲೋ। ಸತತಮಕೃತಸಂಧ್ಯೋಪಾಸ್ತಿರಭ್ಯಸ್ತಶಾಸ್ತ್ರಸ್ಸವಿತರಿಗತಬಾಲ್ಯೈಕಾಲ್ಯಸಂಧ್ಯಾಮುಪಾಸ್ತೇ। ತದಪಿಭುವಿನವಾ

* ಅಚ್ಛೈರಿತಿ ಪಾಠಾಂತರಂ ॥ † ಅಸ್ತು ತಾವದಥಾಪ್ಯದಸೀಯದರ್ಶನಾನುವರ್ತಿನಾಂ ನಾನಾದ್ವಿಜಾನಾಮಪಿಬಹವಆಕರ್ಣ್ಯತಾಮಪಚಾರಾಃ ಇತಿಪಾಠಾಂತರಂ ॥

ನ್ಯಂಮನ್ಯತೇಧನ್ಯಮನ್ಯಂ ತ್ಯಜತಿವಿಹಿತಹಾನಾತ್ಸಾಧ್ವಸಂಮಾಧ್ವ
ಸಂಘಃ ॥ ೨೮೦ ॥

ಟೀಕಾ॥ ಸತತಮಿತಿ ॥ ಮಧ್ವ ಇತ್ಯಾನಂದತೀರ್ಥ ಸ್ಯೈವನಾಮಾಂತರಂ– ತಸ್ಯೇಮೇ ಮಾಧ್ವಾಃ ತೇಷಾಂಸಂಘಃ–ಅಕೃತಾ ಸಂಧ್ಯಾಯಯಾಃ ಪ್ರಾತಸ್ತನ್ಯಾಯಾಃ ಉಪಾಸ್ತಿರನುಷ್ಠಾನಂ ಯೇನಸತಥೋಕ್ತ ಸ್ಸನ್ನೇವ–ಸತತಂ ಪ್ರತಿದಿನಂ ಅಭ್ಯಸ್ತಶಾಸ್ತ್ರಸ್ಸ–ಸವಿತರಿ ಸೂರ್ಯೇ–ಗತಬಾಲ್ಯೇಸತಿ–ಕಾಲೆ ಪ್ರಾತಃ ಉಚಿತಾಂ ಕಾಲ್ಯಾಂ ಸಂಧ್ಯಾಂ ಉಪಾಸ್ತೇ– ತದಪಿ ತಥಾಪಿ–ಅನ್ಯಂಮತಾಂತರಸ್ಥಂ– ಭುವಿ ಧನ್ಯಂ ಬುಧಂಮಾನ್ಯಂ–ನಮನ್ಯತೇನಭಾವಯತಿ ಕಿಂಚ–ವಿಹಿತಸ್ಯ ವೇದಚೋದಿತಸ್ಯ ನೈತ್ಯಕಾಗ್ನಿಹೋತ್ರಾದೇಃ ಹಾನಾತ್ತ್ಯಾಗಾತ್– ಸಾಧ್ವಸಂಪರಲೋಕಭಯಂ ತ್ಯಜತಿ॥

ಅರ್ಥ॥ ಮಧ್ವಾಚಾರ್ಯರ ಅನುಯಾಯಿಗಳು ಪ್ರತಿನಿತ್ಯ ಬೆಳಗಿನ ಹೊತ್ತು ಸಂಧ್ಯಾವಂದನೆ ಮಾಡದೆ, ಶಾಸ್ತ್ರಪಾಠ ಮಾಡುತ್ತಲೇ ಇದ್ದು ಸೂರ್ಯನ ಬಾಲ್ಯತ್ವ ಕಳದು ಹೋದನಂತರ, ಅಂದರೆ ಬಹಳ ಹೊತ್ತೇರಿದ ಮೇಲೆ ಪ್ರಾತಸ್ಸಂಧ್ಯಾ ಮಾಡುತ್ತಾರೆ. ಆದಾಗ್ಯೂ ಲೋಕದಲ್ಲಿ ಬೇರೆ ಮತದ ಶ್ರೇಷ್ಠರುಗಳನ್ನು ಮನ್ನಿಸದೆ ವೇದೋಕ್ತ ಅಂದರೆ ನೈತಿಕ ಅಗ್ನಿಹೋತ್ರಾದಿ ಕರ್ಮಗಳನ್ನು ಬಿಟ್ಟುಗೊಟ್ಟು ಪರಲೋಕದ ಭೀತಿಯಿಲ್ಲದವರಾಗಿರುತ್ತಾರೆ.

ಮೂ । ಕಿಂಚ । ಶ್ಲೋ । ಗಾಯತ್ರೀಂಸಹಸಾಜಹದ್ಭಗವತೀಂ
ಯಜ್ಞೋಪವೀತಂ ತ್ಯಜನ್ಮುಂಚನ್ಕಿಂಚಶಿಖಾಂವಿರಕ್ತಇವ
ಯಸ್ಸಂಪ್ರಾಪ್ತತುರ್ಯಾಶ್ರಮಃ । ಆರೂಢಶ್ಚತುರಂತಯಾನಮಭ
ಯೋಹಾಹಂತದೇಶಾಂತರೇಷ್ವರ್ಥಾನಾಮುಪಸಂಗ್ರಹಾಯವಿಚ
ರತ್ಯೇಷೋಪ್ಯಮೀಷಾಂಗುರುಃ ॥ ೨೮೧ ॥

ಟೀಕಾ॥ ಗಾಯತ್ರೀಮಿತಿ॥ ಯಃಏಷಃ– ಅಮೀಷಾಂ ಮಾಧ್ವಾನಾಂ ಗುರುರಪಿ–ವಿರಕ್ತ ಇವ ನವಸ್ತುತೋವಿರಕ್ತಃ ಸಹಸಾ ಸತ್ವರಂ–ಸನ್ಯಾಸಾಶ್ರಮಾಚಾರಂ ಸುಕರದುಷ್ಕರತ್ವೇನ ಅವಿಚಾರ್ಯೈವ ಪ್ರೈತ್ಯರ್ಥಃ–ಭಗವತೀಂ ಗಾಯತ್ರೀಂ–ಜಹತ್ತ್ಯಜನ್ಸನ್–ಯಜ್ಞೋಪವೀತಂ ತ್ಯಜನ್–ಕಿಂಚ– ಶಿಖಾಂ ಮುಂಚನ್– ಸಂಪ್ರಾಪ್ತಃ ತುರ್ಯಃ ಚತುರ್ಥಃ ಆಶ್ರಮಃ ಸನ್ಯಾಸಃ ಯೇನಸತಥೋಕ್ತಸ್ಸನ್–ಅಭಯಃ ಅತಏವ– ಚತುರಂತಯಾನಂ ಆಂದೋಳಿಕಾಂ– ಆರೂಢಸ್ಸನ್– ಅರ್ಥಾನಾಮುಪಸಂಗ್ರಹಾಯ ಸಂಗ್ರಹಂ ಕರ್ತುಂ–ಕ್ರಿಯಾರ್ಥೇತ್ಯಾದಿನಾಚತುರ್ಥೀ–ಚರತಿ–ಹಾಹಂತೇತ್ಯಾಶ್ಚರ್ಯೇ–ಈದೃಶಾಚಾರಸ್ಯ ಸನ್ಯಾಸಿನಾಂ ಶ್ರುತಿಸ್ಮೃತಿವಿರುದ್ಧತ್ವೇನ ಉಭಯ ಲೋಕಪಾತಹೇತುತ್ವಾದಿತಿಭಾವಃ॥

ಅರ್ಥ । ಇವರ ಗುರುವಾದರೂ ಏನು ಮಾಡುತ್ತಾನೆಂದರೆ: ಕಳ್ಳವೈರಾಗ್ಯದಿಂದ ತ್ವರೆಯಾಗಿ ಅಂದರೆ ಮುಂನೋಟವಿಲ್ಲದೆ ಗಾಯತ್ರಿ ಮಂತ್ರವನ್ನು ಬಿಟ್ಟುಗೊಟ್ಟು ಜನಿವಾರವನ್ನು ಹರದುಹಾಕಿ ತಲೆಬೋಳಿಸಿಕೊಂಡು ಸಂನ್ಯಾಸಿಯ ಆಶ್ರಮವನ್ನು ಸ್ವೀಕರಿಸಿ ಪಾಲಕಿಯನ್ನೇರಿಕೊಂಡು ಹಣಗಳನ್ನು ಒಟ್ಟುಗೂಡಿಸುವದಕ್ಕೆ ಊರು ಊರು ಸಂಚರಿಸುತ್ತಾನೆ, ಐಯ್ಯೋ ಏನು ಆಶ್ಚರ್ಯ!

ಮೂ। ಅಹೋಮಹಾನೇಷವ್ಯಾಮೋಹೋವಿದುಷಾಮಪಿಕಲಿಮ
ಹಾತ್ಮ್ಯಾತ್ ॥ ೨೪೨ ॥

ಅರ್ಥ॥ ಅಹಾ ಕಲಿಬಲದಿಂದ ಬಲ್ಲಂಥಾವರಿಗೆ ಕೂಡ ಇಷ್ಟು ಅತ್ಯಾಶೆಯುಂಟಾಗು ತದಲ್ಲ!

ಶ್ಲೋ।ಯಸ್ಯೈಕ್ವಾಪಿವಿಲೋಕನೇ *ಸವಸನಸ್ನಾನಂಬುಧೈಃಸ್ಮರ್ಯತೆ
ಯಸ್ಯಾನ್ನಗ್ರಹಣೇಚನಿಷ್ಕೃತಿತಯಾಚಾಂದ್ರಾಯಣಂಚೋದಿ
ತಂ । ತಸ್ಯಪ್ರತ್ಯುತವಾಹನಸ್ಥಿತಯತೇರ್ದೃಷ್ಟಿರ್ವಿಮುಕ್ತಿಪ್ರದಾ
ತಸ್ಯಾನ್ನಂಚಸಮಸ್ತಪಾಪಹೃದಿತಿಪ್ರತ್ಯೇತಿವಿದ್ವಾನಪಿ ॥೨೪೩॥

ಟೀಕಾ ॥ ಯಸ್ಯೇತಿ ॥ ಯಸ್ಯ ವಾಹನಸ್ಥಿತಯತೇಃ—ಕ್ವ ಯತ್ರಕುತ್ರಾಪಿ— ವಿಲೋಕನೇ ದರ್ಶನೆ ಸತ್ಯಪಿ—ಸವಸನಂ ಸ್ನಾನಂ ಬುಧೈಃ ಸ್ಮರ್ಯತೆ ಅಭಿಜ್ಞೈರ್ಯತೆ—ಶ್ಲೋ॥ ವಾಹನಸ್ಥಂ ಯತಿಂದೃಷ್ಟ್ವಾಸಚೇಲಂ ಸ್ನಾನಮಾಚರೇದಿತ್ಯಾದಿನೇತಿಭಾವಃ— ಯಸ್ಯೋಕ್ತಯತೇಃ— ಅನ್ನಸ್ಯ ಗ್ರಹಣೆಭಕ್ಷಣೆಚ— ಚಾಂದ್ರಾಯಣಂ ನಿಯತಾಹಾರಕೋವ್ರತವಿಶೇಷಃ—ನಿಷ್ಕೃತಿತಯಾ ಪ್ರಾಯಶ್ಚಿತ್ತತ್ವೇನ— ಚೋದಿತಂ ವಿಹಿತಂ ॥ ಶ್ಲೋ॥ ಬ್ರಹ್ಮಚಾರಿಯತೀನಾಂತುಭುಕ್ತ್ವಾ ಚಾಂದ್ರಾಯಣಂಚರೇದಿತ್ಯಾದಿನೇತಿ— ಪ್ರತ್ಯುತತದ್ವೈಪರೀತ್ಯೇನ— ತಸ್ಯವಾಹನಸ್ಥಿತಯತೇಃ— ದೃಷ್ಟಿರ್ದರ್ಶನಂ— ವಿಮುಕ್ತಿಪ್ರದಾ— ತಸ್ಯಾನ್ನಂ ತದೀಯಾನ್ನಭಕ್ಷಣಂ— ಚಸ್ತ್ವರ್ಥಃ—ಸಮಸ್ತಪಾಪಹೃತ್ ಇತ್ಯುಕ್ತಪ್ರಕಾರಂ— ವಿದ್ವಾನಪಿ— ಕಿಮುತಾನ್ಯಃ— ಪ್ರತ್ಯೇತಿನಿಶ್ಚಿನೋತಿ— ಭ್ರಾಂತೋಭವತೀತಿಯಾವತ್ ॥

ಅರ್ಥ॥ ವಾಹನವನ್ನೇರಿದ ಸಂನ್ಯಾಸಿಯನ್ನು ಕಂಡರೆ ಸಚೇಲಸ್ನಾನ ಮಾಡಬೇಕೆಂತಲೂ, ಸನ್ಯಾಸಿಯ ಅನ್ನ ಸೇವನೆ ಮಾಡಿದರೆ ಚಾಂದ್ರಾಯಣ ವ್ರತದ ಪ್ರಾಯಶ್ಚಿತ್ತ ಆಚರಿಸಬೇಕೆಂತಲೂ ತಿಳಿದವರು ಹೇಳಿದ್ದಾರೆ, ಆದರೆ ಅದಕ್ಕೆ ವಿಪರೀತವಾಗಿ ವಾಹನವನ್ನೇರಿದ ಸಂನ್ಯಾಸಿಯ ದರ್ಶನದಿಂದ ಮೋಕ್ಷಪ್ರಾಪ್ತಿಯಾಗುತ್ತದೆಯೆಂತಲೂ, ಸಂನ್ಯಾಸಿಯ ಅನ್ನ ತಿಂದರೆ ಪಾಪ ಹೋಗುತ್ತದೆಯೆಂತಲೂ, ಪಂಡಿತರು ಕೂಡ ನಂಬುತ್ತಾರೆ.

ಮೂ । ಪಶ್ಯತಾವತ್ಕಲಿಕಾಲನರಪಾಲಸ್ಯಗೃಹಸ್ಥೇಷುವಿದ್ವೇ
ಷಂಭಿಕ್ಷುಷುಪಕ್ಷಪಾತಂಚ ॥ ೨೪೪ ॥

ಟೀಕಾ ॥ ಪಶ್ಯೇತಿ ॥ ಭಿಕ್ಷುಷುಸನ್ಯಾಸಿಷು ॥

ಅರ್ಥ॥ ನೋಡು, ಕಲಿಯುಗದ ಅರಸುಗಳಿಗೆ ಕುಟುಂಬಿಕರಲ್ಲಿ ಹಗೆ ಮತ್ತು ಸಂನ್ಯಾಸಿಗಳಲ್ಲಿ ಅಭಿಮಾನ.

ಶ್ಲೋ।ಭಿಕ್ಷಾಂಕಷ್ಟಮಟಂತಿಕುಕ್ಷಿಭೃತಯೇಪಾದೌಗತೈಃಕ್ಲೇ
ಶಯಂತ್ಯಾಚ್ಛನ್ನಾಶ್ಶಿಥಿಲೈಃಪಟೈಶ್ಚಗೃಹಿಣೋಜೀರ್ಣೇಗೃಹೇ

* ಸವಸನಂ ಸ್ನಾನಮಿತಿ ಪುಸ್ತಕಾಂತರೆ ॥

ಶೇರತೇ। ರಾಜತ್ಸೂಕ್ಷ್ಮಪಟಾಃಪ್ರಶಸ್ತಶಿಬಿಕಾರೂಢಾಗೃಹಿಭ್ಯೋ
ನ್ನದಾಃಗ್ರಾವವ್ಯೂಹದೃಢೇಮಠೇಸ್ಥಿತಿಜುಷೋಧನ್ಯಾಹಿಸನ್ಯಾಸಿ
ನಃ॥೨೪೫॥

ಟೀಕಾ ॥ ಭಿಕ್ಷಾಮಿತಿ ॥ ಗೃಹಿಣೋಗೃಹಸ್ಥಾಃ— ಕುಕ್ಷಿಭೃತಯೇ ಉದರ ಭರಣಾಯ— ಭಿಕ್ಷಾಮಟಂತಿ— ಕಷ್ಟಮಿತಿ ಸರ್ವವಾಕ್ಯಾರ್ಥೈಯೋಜ್ಯಂ— ಪಾದೌ ಗತ್ಯೈರ್ಗಮನೈಃ ಕ್ಲೇಶಯಂತಿ— ಪಾದಚಾರೇಣ ಖಿನ್ನಾಭವಂತೀತ್ಯರ್ಥಃ— ಕಿಂಚ— ಶಿಥಿಲೈಃ ಜೀರ್ಣೈಃ ಪಟೈಃ ಆಚ್ಛನ್ನಾಃ— ಜೀರ್ಣವಸ್ತ್ರಾಣಿಧರಂತೀತ್ಯರ್ಥಃ—ಜೀರ್ಣೇ ಶಿಥಿಲೇ ಗೃಹೇ— ಶೇರತೇ ಶಯನಂಕುರ್ವತೇ—ವಸಂತೀತಿಯಾವತ್— ಗೃಹಿಭ್ಯಃ ಗೃಹಸ್ಥೇಭ್ಯಃ ಅನ್ನದಾಃ— ಪ್ರಶಸ್ತಶಿಬಿಕಾರೂಢಾಃ— ರಾಜತ್ಸೂಕ್ಷ್ಮ ಪಟಾಃ— ಗ್ರಾವ್ಣಾಂ ಪಾಷಾಣಾನಾಂ ವ್ಯೂಹಸ್ಸಮೂಹಃ ತೇನದೃಢೇ ಶಿಲಾನಿರ್ಮಿತ ಇತ್ಯರ್ಥಃ—ಮಠೇ— ಸ್ಥಿತಿಜುಷಃ ನಿವಾಸಿನಃ—ಸಂನ್ಯಾಸಿನಃ ಧನ್ಯಾಹಿ ॥

ಅರ್ಥ ॥ ಧನ್ಯರೈಯ್ಯೋ ಧನ್ಯರು, ಈ ಸನ್ಯಾಸಿಗಳು! ಗೃಹಸ್ಥರು ಹೊಟ್ಟೆ ತುಂಬಿಕೊಳ್ಳಲಿಕ್ಕೆ ಊರು ಊರು ತಿರುಗಾಡಿ ಬಳಲುತ್ತಾರೆ, ಕಾಲುನಡಿಗೆಯಿಂದ ನಡದು ದಣಿಯುತ್ತಾರೆ, ಹರಕುಬಟ್ಟೆಗಳಿಂದ ಮೈಮುಚ್ಚಿಕೊಳ್ಳುತ್ತಾರೆ, ಜರ್ಜರವಾದ ಗುಡಿಸಲುಗಳಲ್ಲಿ ಬಾಳುವೆಮಾಡುತ್ತಾರೆ, ಆದರೆ ಈ ಸನ್ಯಾಸಿಗಳು ಊಚುವಸ್ತ್ರಗಳನ್ನು ತೊಟ್ಟುಕೊಂಡು ಸುಖಕರವಾದ ಪಾಲಕಿಗಳಲ್ಲಿ ಸಂಚರಿಸುವಂಥಾವರುಗಳಾಗಿಯೂ ಕುಟುಂಬಿಕರಿಗೆ ಅನ್ನದಾನ ಮಾಡುವಂಥಾವರಾಗಿಯೂ, ಕಲ್ಲುಗಳಿಂದ ಭದ್ರವಾಗಿ ಕಟ್ಟಲ್ಪಟ್ಟ ಮಠಗಳಲ್ಲಿ ವಾಸಮಾಡುತ್ತಾರೆ.

ಮೂ। ಅನ್ಯಚ್ಚ। ಶ್ಲೋ। ಅನಭ್ಯಸ್ಯವೇದಾನಹೋಶಾಸ್ತ್ರವಾದಾ
ನ್ಪಠಂತಸ್ಸ್ಫುಟಂಯೇಬತೈತನ್ಮತಸ್ಥಾಃ। ಅಧೀಶಾನನಾದೃತ್ಯತದ್ಭ
ಕ್ತಪೂಜಾಪರಾಣಾಂನರಾಣಾಂಪದಂತೇಭಜಂತೇ ॥ ೨೪೬ ॥

ಟೀಕಾ ॥ ಅನಭ್ಯಸ್ಯೇತಿ ॥ ಯೇವೇದಾನನಭ್ಯಸ್ಯ—ಶಾಸ್ತ್ರವಾದಾನ್ಪಠಂತಃ—ತೇಏತನ್ಮತಸ್ಥಾಃ— ಅಧೀಶಾನನಾದೃತ್ಯ ಪ್ರಭುಸೇವಾಮುಪೇಕ್ಷ್ಯ—ತೇಷಾಂ ಯೇಭಕ್ತಾಸ್ಸೇವಕಾಃ ತತ್ಪೂಜಾಪರಾಣಾಂ ನರಾಣಾಂ ಸೇವಕಾಶ್ರಿತಾನಾಂ ಪದಂಸ್ಥಾನಂ— ಲಭಂತೇ— ಸ್ಫುಟಂ—ವೇದಶಾಸ್ತ್ರಯೋಃ ಪ್ರಭುಸೇವಕತುಲ್ಯತಾರತಮ್ಯಾದಿತ್ಯರ್ಥಃ—ಅತಏವಪದಾರ್ಥವೃತ್ತಿನಿದರ್ಶನಾ ॥ ಭುಜಂಗ ಪ್ರಯಾತಂ ॥

ಅರ್ಥ ॥ ಮತ್ತು ಈ ಮಧ್ವಾಚಾರ್ಯರ ಮತದವರು ವೇದಾಭ್ಯಾಸಮಾಡದೆ, ಬುದ್ಧಿಕಲ್ಪಿತ ತರ್ಕಶಾಸ್ತ್ರವಾದಗಳನ್ನು ಮಾತ್ರ ಕಲಿತು, ರಾಜಸೇವೆಯನ್ನು ಅನಾದರಿಸಿ, ರಾಜಸೇವಕರ ಚಾಕರಿಮಾಡುವವರ ಪದವಿಯನ್ನು ಪಡೆಯುತ್ತಾರೆ. ವೇದ ಮತ್ತು ಶಾಸ್ತ್ರಗಳಿಗೆ ಪ್ರಭುಸೇವಕತುಲ್ಯತಾರತಮ್ಯ ಉಂಟು.(ಮಾಧ್ವರು ವೇದಗಳನ್ನು ಬಿಟ್ಟು ಶಾಸ್ತ್ರ ಅಭ್ಯಾಸ ಮಾಡಿದವರ ಶಿಷ್ಯರಾಗುತ್ತಾರೆ ಎಂಬ ತಾತ್ಪರ್ಯವು)

ಶ್ಲೋ। ಏಕಾದಶ್ಯಾಂಕಾಲಯೋರ್ಹೋರ್ನೀಮಹಾನಾದೇಷಾಮಗ್ನಿ

ಲೌಕಿಕತ್ವಂಯದಾಗಾತ್ । ತಸ್ಮಾದೇಷಾಂವ್ಯರ್ಥಹಿಂಸಾನಿವೃತ್ತ್ಯೈಲಸ್ಯಾದುತ್ಕೃಷ್ಟಃಪಿಷ್ಟಪಶ್ವಾದರೋಪಿ ॥ ೨೪೭ ॥

ಟೀಕಾ॥ಏಕಾದಶ್ಯಾಮಿತಿ ॥ ಯದ್ಯಸ್ಮಾದೇಷಾಂ ಮಧ್ವಾಗ್ನಿಹೋತ್ರಿಣಾಂ— ಅಗ್ನಿರಾಹವನೀಯಾದಿಃ— ಏಕಾದಶ್ಯಾಂ ಕಾಲಯೋಃ ಪ್ರಾತಸ್ಸಾಯಂಚ ಹೋಮಸ್ಯ ಅಗ್ನಿಹೋತ್ರ ಕರ್ಮಣಃ ಹಾನಾತ್ತ್ಯಾಗಾದ್ಧೇತೋಃ— ತನ್ಮತೇಸ್ನಾನಸಂಧ್ಯಾ ಹರ್ಯರ್ಚನಾತ್ರಯಾತಿರಿಕ್ತಸ್ಯ ಕರ್ಮಮಾತ್ರಸ್ಯ ತಸ್ಯಾಂ ತ್ಯಾಗ ನಿಯಮಾದಿತಿಭಾವಃ_ಲೌಕಿಕತ್ವಂ ಪ್ರಾಕೃತತ್ವಂ—ಅಗಾತ್‌ಪ್ರಾಪ್ನೋತಿಸ್ಮ—ಏಕಕಾಲ ಹೋಮಾಭಾವೇ ಅಗ್ನೇ ರ್ಲೌಕಿಕತ್ವ ಪ್ರಾಪ್ತಿಸ್ಮರಣಾದಿತಿಭಾವಃ_ತಸ್ಮಾತ್ ಕಾರಣಾತ್_ವ್ಯರ್ಥಹಿಂಸಾಯಾಃ ಪ್ರಾಕೃತಾಗ್ನೌಪಶ್ವಾಲಂಭಸ್ಯದೇವತಾ ನಾಸ್ವಾದ್ಯತ್ವಾನ್ನಿಷ್ಫಲ ವಧಸ್ಯ ನಿವೃತ್ತ್ಯೈ ಏಷಾಂ ಮಾಧ್ವಾನಾಂ—ಪಿಷ್ಟಮಯೇಪಶೌ ಆದರೋಂಗೀಕಾರೋಪಿ_ಉತ್ಕೃಷ್ಟಸ್ಸ್ಯಾದೇವ ॥

ಅರ್ಥ ॥ ಏಕಾದಶಿದಿವಸ ಮಾಧ್ವರಲ್ಲಿ ಅಗ್ನಿಹೋತ್ರಕ್ಕೆ ಸಂಬಂಧವುಳ್ಳ ಪ್ರಾತಃ ಸಾಯಂಕಾಲಹೋಮಗಳನ್ನು ಮಾಡುವದಿಲ್ಲ. ಯಾಕೆಂದರೆ ಆ ದಿವಸ ಸ್ನಾನಸಂಧ್ಯಾ ಮತ್ತು ಹರಿಪೂಜೆ ಈ ಮೂರು ಕರ್ಮಗಳ ಹೊರತಾಗಿ ಉಳಿಕಿ ಕರ್ಮಗಳನ್ನು ಮಾಡಬಾರದೆಂತ ಅವರಲ್ಲಿ ಕಟ್ಟು ಉಂಟು. ಈ ನಿಮಿತ್ತವಾಗಿ ಅವರ ಅಗ್ನಿಗೆ ಲೌಕಿಕತ್ವ ಉಂಟಾಗುತ್ತೆ, ಲೌಕಿಕಾಗ್ನಿಯಲ್ಲಿ ಪಶುಯಜ್ಞ ಮಾಡಿದರೆ ದೇವತೆಗಳಿಗೆ ಇಷ್ಟವಲ್ಲವು. ಅಂಥ ವ್ಯರ್ಥವಾದ ಪಶುಯಜ್ಞದ ನಿವಾರಣಾರ್ಥವಾಗಿ ಮಾಧ್ವರು ಹಿಟ್ಟಿನ ಪಶುಕಲ್ಪಿಸಿ ಮಾಡುವ ಯಜ್ಞವಾದರೂ ಉತ್ತಮವೇ ಸರಿ.

ವಿಶ್ವಾವಸುಃ ॥

ಶ್ಲೋ। ಕಿಮರೇಕೇಶವಭಕ್ತಿಪ್ರಕರ್ಷದೀಪ್ರಾನ್ವಿಪ್ರಾನ್ದೂಷಯಸಿ। ಶುದ್ಧಾಕಿಲಮಧ್ವಸಿದ್ಧಾಂತನಿಷ್ಠಾನಾಮಿಯಂಹೃದಯಂ ಜರೀಹರೀತಿರೀತಿಃ ॥ ೨೪೮ ॥

ಟೀಕಾ ॥ ಕಿಮಿತಿ ॥ ರೀತಿಃ ಆಚಾರಃ ಜರೀಹರೀತಿ ಭೃಶಂಹರತಿ ಹರತೇರ್ಯಙ್ಲುಕಿಲಟಿರೂಪಂ ॥

ಅರ್ಥ ॥ ಏನೆಲಾ, ವಿಷ್ಣುಭಕ್ತಿ ಏಳಿಗೆಯಿಂದ ದೀಪ್ತರಾದ ಈ ಬ್ರಾಹ್ಮಣರನ್ನು ನಿಂದಿಸುತ್ತೀಯಾ? ಮಧ್ವಮತಸ್ಥರ ಶುದ್ಧವಾದ ಆಚಾರವು ಹೃದಯವನ್ನು ಪುನಃ ಪುನಹಾ ಹರಣಮಾಡುತ್ತದೆ.

ಶ್ಲೋ। ಆಬಾಲಸ್ಥವಿರಂಸ್ಥಿರಂಹರಿದಿನೇಶುದ್ಧೋಪವಾಸವ್ರತಂನಿಷ್ಪ್ರತ್ಯೂಹ*ಮಹರ್ದಿವಂಪಿಜಯತೇನಾರಾಯಣಾರಾಧನಂ। ಶ್ಲಾಘ್ಯೈಭಾಗವತೇಷುಭಕ್ತಿ †ರಧಿಕಾಶ್ರದ್ಧಾಚಯೇಷಾಂದೃಢಾಶಾಸ್ತ್ರೇಷ್ವೀಯಗುರೂದಿತೇನಚರಿತಂ ಸಾಧ್ವೀಷುಮಾಧ್ವೇಷು ಕಿಂ ॥ ೨೪೯ ॥

---

* ನಿಶಮಿತಿ ಪಾಠಾಂತರಂ ॥ † ಅಮಿತಾ ಇತಿಪಾಠಾಂತರಂ ॥

ಟೀಕಾ || ಆಬಾಲೇತಿ || ಯೇಷಾಂ ಮಾಧ್ವಾನಾಂ ಆಬಾಲಸ್ಥವಿರಂಬಾಲಾವಧಿವೃದ್ಧಪರ್ಯಂತಂ ಹರಿದಿನೆ–ಸ್ಥಿರಂ ಶುದ್ಧೋಪವಾಸವ್ರತಂ–ಸರ್ವತ್ರವಿಜಯತ ಇತ್ಯನ್ವೀಯತೆ–ಅಹರ್ದಿವಂ ಪ್ರತಿದಿನಂಚ ನಾರಾಯಣಸ್ಯ ಆರಾಧನಂ ಪೂಜನಂ–ನಿಷ್ಪ್ರತ್ಯೂಹಂ ನಿರ್ವಿಘ್ನಂಸತ್–ವಿಜಯತೆ–ಭಾಗವತೇಷು ಭಗದ್ಭಕ್ತೇಷು–ಶ್ಲಾಘಾಭಕ್ತಿಃ ವಿಜಯತೆ–ಸ್ವೀಯಗುರೂದಿತೇಶಾಸ್ತ್ರೆ ಅಧಿಕಾದೃಢಾ ಶ್ರದ್ಧಾಚ ವಿಜಯತೆ–ವಿಷುಮಾಧ್ವೇಷು–ಸಾಧುಚರಿತಂ ನಾಸ್ತಿಕಿಂ ಅಸ್ತ್ಯೇವ ||

ಅರ್ಥ || ಈ ಮಾಧ್ವರಲ್ಲಿ ಏಕಾದಶಿ ದಿನ ಹಿರಿಕಿರಿಯರು ಸೇರಿಕೊಂಡು ಎಲ್ಲರು ಉಪವಾಸ ವ್ರತಮಾಡುತ್ತಾರೆ. ಹಗಲು ರಾತ್ರಿ ಎಡೆಬಿಡದೆ ಹರಿಪೂಜೆ ನಡಿಯುತ್ತದೆ. ಮಾಧ್ವರಿಗೆ ಹರಿಭಕ್ತರಲ್ಲಿ ಸ್ತುತ್ಯವಾದ ಭಕ್ತಿಯು ಅಪರಿಮಿತವಾಗಿರುವದಲ್ಲದೆ ತಮ್ಮ ಗುರುಪ್ರಣೀತವಾದ ಶಾಸ್ತ್ರದಲ್ಲಿ ಸ್ಥಿರವಾದ ವಿಶ್ವಾಸವಿರುತ್ತದೆ. ಇಂಥಾ ಮಾಧ್ವರಲ್ಲಿ ಉತ್ತಮವಾದ ನಡತೆ ಇಲ್ಲವೊ ? ಉಂಟು ಎಂಬ ಭಾವವು.

ಮೂ । ಏತದ್ಗುರೂಣಾಂಪುನರ್ಯತೀನಾಮೇಷಾಮಾಕಲಿತದೋಷವೈಧುರ್ಯಾಶುಭಚರ್ಯಾ || ೨೫೦ ||

ಟೀಕಾ || ಏತದಿತಿ || ಆಕಲಿತಂ ಸಂಗತಂ ದೋಷಾಣಾಂ ಪಾಪಾನಾಂ ವೈಧುರ್ಯಂ ಅಭಾವಃ ಯಸ್ಯಾಂ ತಥೋಕ್ತಾ ||

ಅರ್ಥ || ಹಾಗೆಯೇ ಅವರ ಗುರುಗಳಾದ ಸನ್ಯಾಸಿಗಳ ನಡತೆಯಾದರೂ ಪಾಪದೋಷದಿಂದ ಅಗಲಿರುವದು.

ಶ್ಲೋ । ದನುಜಭಿದಭಿಷೇಕೈಸ್ತತ್ಪುರಾಣಾವಲೋಕೈಃಪುನರಪಹತಮೋಹೈಃಪುಣ್ಯತೀರ್ಥಾವಗಾಹೈಃ । *ಭವಕಥನವಿದೂರೈರ್ಬ್ರಹ್ಮವಿದ್ಯಾವಿಚಾರೈಃಕ್ಷಣಮಿವಯ †ತಿವರ್ಯಾಃಕಾಲಮೇತೇನಯಂತಿ || ೨೫೧ ||

ಟೀಕಾ || ದನುಜೇತಿ || ಅಪಹತಮೋಹೈಃ–ಭವಸ್ಯ ಸಂಸಾರಸ್ಯ ಕಥನೇನ ವಾರ್ತಯಾ ವಿದೂರೈಃ ಶೂನ್ಯೈರಿತಿದ್ವಯಂತ್ರಿತೀಯಾಂತಚತುಷ್ಟಯೇಪಿಯೋಜ್ಯಂ– ದನುಜಭಿತ್ ವಿಷ್ಣುಃ–ತಸ್ಯವಿಷ್ಣೋಃ ಪುರಾಣಾನಿ ಭಾಗವತಾದೀನಿ–ಪುಣ್ಯತೀರ್ಥಾನಿ ಗಂಗಾದೀನಿ–ಬ್ರಹ್ಮವಿದ್ಯಾ ವೇದಾಂತಶಾಸ್ತ್ರಂ–ಕಾಲಂ ಯಾವಜ್ಜೀವಂ–ಕ್ಷಣಮಿವ–ಏತೇಯತಿವರ್ಯಾಃ ಮಾಧ್ವಗುರವಃ–ನಯಂತಿ ಯಾಪಯಂತಿ ||

ಅರ್ಥ || ವಿಷ್ಣುಮೂರ್ತಿಯ ಅಭಿಷೇಕದಿಂದಲೂ ವಿಷ್ಣುಪುರಾಣಗಳ ಓದುವಿಕೆಯಿಂದಲೂ ಕಾಮರಹಿತವಾದ ತೀರ್ಥಸ್ನಾನಗಳಿಂದಲೂ ಸಂಸಾರ ಘಾಳಿಸೋಕದ ವೇದಾಂತಚಿಂತನೆಯಿಂದಲೂ ಈ ಮಾಧ್ವಸನ್ಯಾಸಿಗಳು ವೇಳೆ ನಿಮಿಷದಂತೆ ಕಳೆಯುತ್ತಾರೆ.

ಮೂ । ಯದಪಿತದುಪರಿತ್ವಯಾದೂಷಣಮುಪನ್ಯಸ್ತಂತದಪಿಮ

---

* ಭವಕದನ ಇತಿಪಾಠಾಂತರಂ || † ಶುಭಚಯಾಃ ಇತಿಪಾಠಾಂತರಂ ||

ದಪಿಹಿತಹೃದಯೇಭ್ಯೋಭವಾದೃಶೇಭ್ಯಪಿವರೋಚತೇನತುಗುಣ
ಗ್ರಾಹಿಭ್ಯಃ ॥ ೨೫೨ ॥

ಟೀಕಾ ॥ ಯದಿತಿ ॥ ತದುಪರಿಮಾಧ್ವ ಸನ್ಯಾಸಿನೋಧಿಕೃತ್ಯೇತ್ಯರ್ಥಃ–ಮದಃ ಅಜ್ಞಾನಂ ॥

ಅರ್ಥ ॥ ನೀನು ಅವರ ಮೇಲೆ ಹೊರಿಸಿದ ಬೇರೆ ತಪ್ಪುಗಳಿಗೆ ನಿನ್ನಂಥಾ ಮದಾಂಧ ಹೃದಯ ಉಳ್ಳವರುಮಾತ್ರ ಮೆಚ್ಚುವರು, ಹೊರತು ಗುಣಗಳನ್ನು ಅರಿತವರು ಮೆಚ್ಚರು.

ಮೂ । ಶ್ಲೋ । ತತ್ತದ್ದೇಶನಿವಾಸಿ ಶಿಷ್ಯನಿವಹತ್ರಾಣಾಯ
ಗುರ್ವಾಜ್ಞಯಾಸಂಚಾರಾಕ್ಷಮವಿಪವಿಂದತಿಯತಿಶ್ಚೇದ್ವಾಹನಂ
ಕಾಕ್ಷತಿಃ । ದತ್ತಂವಿತ್ತಮಶೇಷಮಾಸ್ತಿಕಜನೈರ್ದೈವತ್ಯಾರ್ಚಿನಿ
ತ್ಯಾರ್ಚನಾಸಾತ್ಕೃತ್ಯಸ್ವಯಮಸ್ಪೃಶನ್ವಸತಿಚೇನ್ನಿಂದಾಸ್ತಿಕಿಂ
ತಾವತಾ ॥ ೨೫೩ ॥

ಟೀಕಾ ॥ ತತ್ತದಿತಿ । ಸಂಚಾರೇ ಪಾದಚಾರೇ ಅಕ್ಷಮಃ ಅಶಕ್ತಃ ಜರಾದಿನೇತಿ ಭಾವಃ–ಅತಏವ–ಏಷ ಯತಿರ್ಮಾಧ್ವಗುರುಃ–ಗುರೋರಾನಂದತೀರ್ಥಾದೇರಾಜ್ಞಯಾ– ದೇಶಾಂತರಸ್ಥಾನ್ ಮಂತ್ರೋಪದೇಶಾದಿನಾ ಅನುಗೃಹಾಣೇತ್ಯಾದ್ಯಾಕಾರಯಾ– ತೇಷುತೇಷುದೇಶೇಷು ದೂರೇಷು ನಿವಾಸಿನಾಂ ಶಿಷ್ಯಾಣಾಂ ನಿವಹಸ್ಯ ಸಂಘಸ್ಯ ತ್ರಾಣಾಯ ಮಂತ್ರೋಪದೇಶಾದಿನಾ ರಕ್ಷಣಾಯ–ವಾಹನಂ ಆಂದೋಳಿಕಾದಿ– ವಿಂದತಿ ಚೇತ್ ಆರೋಹತಿಯದಿ– ಕ್ಷತಿಃ ಹಾನಿಃಕಾ– ಗುರ್ವಾಜ್ಞಯಾಃ ಪರೋಪಕಾರಸ್ಯಚ ನಿಷಿದ್ಧೇಪಿಪ್ರವರ್ತಕತ್ವಾದಕ್ಷತೇರಿತಿಭಾವಃ– ಆಸ್ತಿಕೈಃಶಿಷ್ಟೈಃ ಜನೈಃ ದತ್ತಂವಿತ್ತಂ– ಅಶೇಷಂ ಯಥಾತಥಾ–ದೈತ್ಯಾರೇರ್ವಿಷ್ಣೋಃ ನಿತ್ಯಾರ್ಚನಾಯಾಃ ಸಾತ್ಕೃತ್ಯ ಅರ್ಪಿತಂಕೃತ್ವಾ– ಸ್ವಯಂ ಅಸ್ಪೃಶನ್ ಸನ್– ವಸತಿಚೇತ್– ತಾವತಾತಾದೃಶೇನೇತ್ಯಾ– ನಿಂದಾಅಸ್ತಿಕಿಂ--ನಾಸ್ತ್ಯೇವೇತ್ಯರ್ಥಃ ॥

ಅರ್ಥ ॥ ಸಂನ್ಯಾಸಿಯು ಗುರುವಿನ ಅಪ್ಪಣೆ ಮೇರೆಗೆ ಬೇರೆ ಬೇರೆ ದೇಶವಲ್ಲಿರುವ ಶಿಷ್ಯವರ್ಗಕ್ಕೆ ಉಪದೇಶ ಮಾಡುವದಕ್ಕೋಸ್ಕರವಾಗಿ, ಸಂಚಾರ ಮಾಡುವಾಗ್ಯೆ, ನಡಿಯುವ ಶಕ್ತಿ ಇಲ್ಲದ್ದರಿಂದ ವಾಹನವನ್ನೇರಿ ಹೋದರೆ ಅದರಲ್ಲಿ ಏನು ಕುಂದು ಉಂಟು? ಭಕ್ತಿಯುಳ್ಳ ಜನರು ಕಾಣಿಕೆಯಾಗಿ ಅರ್ಪಿಸಿದ ಧನವನ್ನು ತಾನು ಮುಟದ್ದೆ ಶ್ರೀವಿಷ್ಣು ಪ್ರೀತ್ಯರ್ಥವಾಗಿ ಪೂಜೆ ಮುಂತಾದ ಕಾರ್ಯಗಳಲ್ಲಿ ವಿನಿಯೋಗಿಸಿದರೆ ಅದರಲ್ಲಿ ಯೇನುಕೊರವು ?

ಶ್ಲೋ। ಸ್ವಾಮಿನಿವಿನಿಯುಕ್ತಾನಾಂಸ್ವತ್ವೇನಾನಧ್ಯವಸ್ಯತಾಂಯ
ತಿನಾ। ಕೃತ್ಯಂಯತ್ಯನ್ನತ್ವಂಪ್ರತ್ಯವಯಂತ್ಯತ್ರತದ್ಭುಜಙ್ಗಕುತಃ
॥ ೨೫೪ ।

ಟೀಕಾ ॥ ಸ್ವಾಮಿನೀತಿ। ಸ್ವತ್ವೇನಸ್ವೀಯತ್ವೇನ ಅನಧ್ಯವಸ್ಯತಾಂ ಅನಿಶ್ಚಯಮಾನಾನಾಂ ಸ್ವಾಮಿನಿ ಭಗವತಿವಿಷಯೇ–ಯತಿನಾ ಮಾಧ್ವಗುರುಣಾ ವಿನಿಯುಕ್ತಾನಾಂ ನಿವೇದಿತಾನಾಂ ಅನ್ನಾನಾಂ-ಯತ್ಯನ್ನತ್ವಂ

ಕ್ಷ್ವತ್ಯಂ ಕುತ್ರಭವತಿ–ನಕುತ್ರಾಪೀತ್ಯರ್ಥಃ–ತದ್ಭಗವನ್ನಿವೇದಿತಾನ್ನಂ ಭುಂಜತೇಇತಿತದ್ಭುಜಃ ಜನಾಶ್ಚ–ಕುತಃ ಪ್ರತ್ಯವಯಂತಿ ನಪ್ರತ್ಯವಯಂತ್ಯೇವೇತ್ಯರ್ಥಃ ॥

ಅರ್ಥ ॥ ಈ ಮಾಧ್ವ ಗುರುಗಳು ತಮ್ಮ ಸೊತ್ತು ಎಂದು ತಿಳುಕೊಳ್ಳದ ಮತ್ತು ಶ್ರೀ ಹರಿ ಪ್ರೀತ್ಯರ್ಥವಾಗಿ ಅರ್ಪಿಸಿದ ಅನ್ನವು ಸಂನ್ಯಾಸಿಯ ಅನ್ನ ಹ್ಯಾಗಾದೀತು? ಆಗಲಿಕ್ಕಿಲ್ಲ. ಅಂಥ ಅನ್ನ ಸೇವಿಸಿದವರು ಯಾಕೆ ದೋಷಿಗಳಾದಾರು? ಆಗಲಿಕ್ಕಿಲ್ಲ.

ಮೂ । ಏತೇನಮತಾಂತರಸ್ಥಾಅಪಿಮಠಾಧಿಪತಯೋವ್ಯಾಖ್ಯಾತಾಃ ॥ ೨೫೫ ॥

ಟೀಕಾ ॥ ಏತೇನೇತಿ । ಮತಾಂತರಸ್ಥಾ ರಾಮಾನುಜೀಯಾದಯಃ ವ್ಯಾಖ್ಯಾತಾನಿರಸ್ತ ದೂಷಣಾಃ ॥

ಅರ್ಥ ॥ ಮೇಲಿನ ಪ್ರಸಂಗದಿಂದ ರಾಮನುಜೀಯರೇ ಮೊದಲಾದ ಬೇರೆ ಮತಗಳ ಸಂನ್ಯಾಸಿಗಳ ಮೇಲಿನ ಅಪವಾದದ ನಿರಾಕರಣವಾಯಿತು.

ಮೂ । ಇದಂಚಾವಧೇಯಂ ॥ ೨೫೬ ॥

ಟೀಕಾ ॥ ನನುಸತತಮಕೃತ ಸಂಧ್ಯೋಪಾಸ್ತಿರಿತ್ಯಾದಿ ಮಾಧ್ವಗೃಹಸ್ಥದೂಷಣಮದ್ಯಾಪಿನೋದ್ಧೃತಮಿತಿಚೇತ್– ಇದಂಚೇತಿ ॥ ವಕ್ಷ್ಯಮಾಣಮಪೀತ್ಯರ್ಥಃ ॥

ಅರ್ಥ ॥ ಇನ್ನು ಹೇಳುತ್ತೇನೆ ಆಲೈಸು.

ಶ್ಲೋ । ಯದಿಕತಿಪಯೇ *ಜಾತ್ವಾಲಸ್ಯಾದ್ಯಥಾಸಮಯಂದ್ವಿಜಾ ಬತನತನುಯುಸ್ಸಂಧ್ಯೋಪಾಸ್ತಿಂಭವಿಷ್ಯತಿಕಿಂತತಃ । ನಿಗಮಚರಿತಾನಂಗೀಕಾರೋಹಿದೂಷಣಮಂಗಿನಾಮಶಕನವಶಾದ್ದೋಷಾಯೈಷಾಂನಜಾತ್ವನನುಷ್ಠಿತಿಃ ॥ ೨೫೭ ॥

ಟೀಕಾ ॥ ಯದೀತಿ ॥ ಕತಿಪಯೇಕೇಚನ– ದ್ವಿಜಾಃ ಮಾಧ್ವಾಃ ಅಲಸಸ್ಯ ಭಾವಾದಾಲಸ್ಯಾತ್ ಅಶಕ್ತೇರ್ಹೇತೋಃ– ಯಥಾಸಮಯಂವಿಹಿತಕಾಲಮತಿಕ್ರಮ್ಯ– ಸಂಧ್ಯೋಪಾಸ್ತಿಂ ಜಾತುನತನುಯುಃ–ನಕುರ್ಯುರ್ಯದಿ–ತತಃ ಯಥಾಕಾಲಂ ಕಾದಾಚಿತ್ಕಸಂಧ್ಯಾನನುಷ್ಠಾನಾತ್ ಕಿಂದೂಷಣಂ ಭವಿಷ್ಯತಿ ನಕಿಮಪಿದೂಷಣಂ ಭವಿಷ್ಯತ್ಯೇವೇತ್ಯರ್ಥಃ– ಹಿಯಸ್ಮಾತ್– ಅಂಗಿನಾಂ ಮನುಷ್ಯಾಣಾಂ– ನಿಗಮಚರಿತಸ್ಯ ಶ್ರೌತಸ್ಮಾರ್ತಕರ್ಮಣಃ ಅನಂಗೀಕಾರಃ–ದೂಷಣಂ ನಾಸ್ತಿಕತ್ವರೂಪಂ–ಭವತಿ– ತತಃ– ಅಶಕನಸ್ಯ ಅಶಕ್ತೇರ್ವಶಾತ್–ಜಾತುಕದಾಚಿತ್ ಅನನುಷ್ಠಿತಿಃ ಯಥಾಕಾಲಂ ಅನನುಷ್ಠಾನಂ ಏಷಾಂ ಮಾಧ್ವಾನಾಂ ದೋಷಾಯನಭವತಿ ॥

ಅರ್ಥ ॥ ಈ ಮಾಧ್ವರಲ್ಲಿ ಯಾರಾದರೂ ಕೆಲವರು ಅಶಕ್ತಿಯಿಂದುಂಟಾಗುವ ಆಲಸ್ಯದ ನಿಮಿತ್ತವಾಗಿ ಯೋಗ್ಯಕಾಲದಲ್ಲಿ ಸಂಧ್ಯಾವಂದನೆ ಮಾಡದೆ ಬಿಟ್ಟರೆ. ಅದರಿಂದ ಏನು ಹಾನಿಯುಂಟು? ಶ್ರೌತಸ್ಮಾರ್ತ ಕರ್ಮ ಬಿಟ್ಟರೆ ಮಾತ್ರ ಮನುಷ್ಯರು ತಪ್ಪುಗಾರರಾಗು

---

* ಜಾತಾಲಸ್ಯಾದಿತಿಪಾಠಾಂತರಂ ॥

ತ್ತಾರೆ. ಒಂದು ವೇಳೆ ಅಸ್ವಸ್ಥತೆಯ ಕಾರಣದಿಂದ ಸಮಯಾತೀತವಾಗಿ ಕರ್ಮಾನುಷ್ಠಾನ ಮಾಡಿದರಿಂದ ಇವರು ಅಪರಾಧಿಗಳಾಗರು.

ಮೂ । ಕಿಂಚ । ಶ್ಲೋ । ಪಂಥಾನಮನುರುಂಧಾನಃಪಿತ್ರಾದೇರ್ನೈವದುಷ್ಯತಿ । ಇತಿಸ್ಮೃತಿಮಧೀಯಾನೈರೇಷಾಂದೋಷೋಹಿದುರ್ವಚಃ ॥ ೨೫೮ ॥

ಟೀಕಾ ॥ ಏಕಾದಶ್ಯಾಂ ಕಾಲಯೋರಿತ್ಯತ್ರಾಹ– ಪಂಥಾನಮಿತಿ ॥ ಪಿತ್ರಾದೇಃ ಪಿತೃಪಿತಾಮಹಪ್ರಪಿತಾಮಹಾದೇಃ– ಪಂಥಾನಮಾಚಾರಮನುರುಂಧಾನಃ ಆಶ್ರಿತಃ– ಜನಃನದುಷ್ಯತಿ– ಇತ್ಯುಕ್ತಾರ್ಥಿಕಾಂ ಸ್ಮೃತಿಂ ಅವಶ್ಯಂ ಪಿತುರಾಚಾರಃ ಗ್ರಾಹ್ಯಃ ಇತ್ಯಾದಿಕಾಮಧೀಯಾನೈರ್ಬುಧೈರೇಷಾಂ ಮಾಧ್ವಾನಾಂ ದೋಷಃ ಏಕಾದಶೀಹೋಮ.ಹಾನಾದಿಃ– ದುರ್ವಚಃ ನವಕ್ತವ್ಯಃ ॥

ಅರ್ಥ ॥ ಹಿರಿಯರ ಆಚಾರ ಅನುಸರಿಸಿ ನಡಕೊಳ್ಳುವವರು ತಪ್ಪುಗಾರರಾಗುವದಿಲ್ಲ ಎಂಬ ಶ್ರುತಿವಾಕ್ಯ ತಿಳಿದ ಜಾಣರು ಈ ಮಾಧ್ವರ ನಿಂದೆ ಮಾಡಬಾರದು.

ಮೂ । ಇತಿವ್ಯೋಮಯಾನಂದೂರತಸ್ಸಮಾನಯ್ಯ *ಪರಿತೋದೃಷ್ಟ್ವಾ ॥

ಅರ್ಥ ॥ ಈ ಪ್ರಕಾರವಾಗಿ ನುಡಿದು ವಿಮಾನವನ್ನು ದೂರಕ್ಕೆ ನಡಿಸಿ ಸುತ್ತಲು ನೋಡಿ ವಿಶ್ವಾವಸು ಹೇಳುತ್ತಾನೆ.

ಮೂ । ಶ್ಲೋ । ಭಾಷಾವೇಷಾಚಾರೈರ್ಭೂಷಾಭಿಃಪೂರುಷಾಶ್ಚಯೋಷಾಶ್ಚ । ವೀಕ್ಷಸ್ವಪ್ರತಿದೇಶಂವಿಲಕ್ಷಣಾಏವಹಂತಲಕ್ಷ್ಯಂತೇ ॥ ೨೫೯ ॥

ಟೀಕಾ ॥ ಭಾಷೇತಿ ॥ ದೇಶೇದೇಶೇಪ್ರತಿದೇಶಂ– ಭಾಷಯಾವೇಷೇಣಾಚಾರೇಣಚತ್ರಿಭಿಃ– ಭೂಷಾಭಿಃ ಕಟಕಕುಂಡಲಾದಿಭಿಶ್ಚ– ವಿಲಕ್ಷಣಾಭಿನ್ನಭಿನ್ನಾಏವ– ಪುರುಷಾಃ ಪುಮಾಂಸಶ್ಚಯೋಷಾಶ್ಚ– ಲಕ್ಷ್ಯಂತೇದೃಶ್ಯಂತೇ– ಹಂತೇತ್ಯಾಶ್ಚರ್ಯೇ– ವೀಕ್ಷಸ್ವಪಶ್ಯ ॥

ಅರ್ಥ ॥ ತಮ್ಮಾ ನೋಡು, ಪ್ರತಿನಾಡಿನಲ್ಲಿಯು ನುಡಿಯಿಂದಲೂ, ಉಡಿಗೆಯಿಂದಲೂ ನಡಿಗೆಯಿಂದಲೂ, ತೊಡಿಗೆಯಿಂದಲೂ, ಜನರು ಬೇರೆ ಬೇರೆಯಾಗಿ ಕಾಣಬರುತ್ತಾರೆ. ಇದೇನು ಆಶ್ಚರ್ಯ!

ಕೃಶಾನುಃ ॥

ಮೂ । ವಯಸ್ಯವೀಕ್ಷಸ್ವೇತಿಮಾವೋಚಃಕಿಂತುಸತ್ವರಮತಿಕ್ರಾಮಸ್ವಕೀಶಕಲ್ಪಜನಾನಿಮಾಞ್ಜನಕುದಾಞ್ ॥ ೨೬೦ ॥

ಟೀಕಾ ॥ ವಯಸ್ಯೇತಿ ॥ ಕೀಶಕಲ್ಪಾವಾನರಪ್ರಾಯಾಜನಾಯೇಷುತಾಞ್ ॥

---

* ಪುರತೋ ಇತಿಪಾಠಾಂತರಂ ॥

ಅರ್ಥ ॥ ಗೆಳೆಯನೇ ನೋಡೆಂದುಸುರದಿರು; ಮಂಗಗಳ ಹೋಲ್ವಿಕೆಯುಳ್ಳ ಜನರುಗಳ ಈ ದೇಶವನ್ನು ಬಿಟ್ಟು ಬೇಗ ನಡಿ.

ಮೂ। ಶ್ಲೋ। ಚಂದ್ರಾಲೋಕಚಯಾಂಧಕಾರಭರಯೋಶ್ಚಾಂಪೇ
ಯಕಿಂ ಪಾಕಯೋರಾಜತ್ಕುಂಡಲಿರಾಜರಾಜಿಲಕಯೋರಾಜೀವಧ
ತ್ತೂರಯೋಃ । ಖೇಲತ್ಕೋಕಿಲಲೋಕಕಾಕಕುಲಯೋಃಕ್ಷೀ
ರಾರ್ಣವಾಂಧ್ವೋರಿವವ್ಯಕ್ತಂಪಂಡಿತಮೂರ್ಖಯೋಸ್ಸಮದೃ
ಶೋವ್ರಾತ್ಯಾಇಹತ್ಯಾಅಮೀ ॥ ೨೬೧ ॥

ಟೀಕಾ ॥ ಚಂದ್ರೇತಿ ॥ ಚಂದ್ರಾಲೋಕಚಯಸ್ಯ ಚಂದ್ರಿಕಾಪುಂಜಸ್ಯ ಅಂಧಕಾರಭರಸ್ಯ ತಮಃ ಪಟಲಸ್ಯ ಚದ್ವಯೋಃ— ಚಾಂಪೇಯಕಿಂಪಾಕಯೋಃ ಕೇಸರವಿಷವೃಕ್ಷಯೋಃ— ರಾಜತಃ ಕುಂಡಲಿರಾಜಸ್ಯ ರಾಜಿಲಕಸ್ಯ ತುಚ್ಛಸರ್ಪಸ್ಯಚ—ರಾಜೀವಸ್ಯ ಪದ್ಮಸ್ಯ ಧತ್ತೂರಸ್ಯ ಉನ್ಮತ್ತಪುಷ್ಪಸ್ಯಚ— ಖೇಲತಃ ಕ್ರೀಡತಃ ಕೋಕಿಲಾನಾಂ ಲೋಕಸ್ಯ ಕುಲಸ್ಯ ಕಾಕಕುಲಸ್ಯಚ— ಕ್ಷೀರಾರ್ಣವಸ್ಯ ಅಂಧೋಃ ಕ್ಷುದ್ರಕೂಪಸ್ಯಚದ್ವಯೋಃ ಪರಸ್ಪರಮಿವೇತಿಸರ್ವತ್ರಯೋಜ್ಯಂ ಪಂಡಿತಸ್ಯಚ ಮೂರ್ಖಸ್ಯಚ--ಸಮಂಸಾಮ್ಯಂ ತಾರತಮ್ಯರಾಹಿತ್ಯರೂಪಂ ಪಶ್ಯಂತೀತಿತದೃಶಃ-- ಇಹತ್ಯಾಃ-- ಅಮೀಜನಾಃ-- ವ್ರಾತ್ಯಾಃ ಗುಣಾಗುಣವಿವೇಕರೂಪಸಂಸ್ಕಾರ ಶೂನ್ಯಾ ಇತ್ಯರ್ಥಃ ॥

ಅರ್ಥ ॥ ಬೆಳದಿಂಗಳು ಮತ್ತು ಕರುಗತ್ತಲೆ, ಸಂಪಿಗೆಮರ ಮತ್ತು ನಂಜುಮರ, ರಾಜಸರ್ಪ ಮತ್ತು ಕೀಳುಹಾವು, ತಾವರೆ ಮತ್ತು ಉಮ್ಮತ್ತ ಹೂವು, ಕ್ರೀಡಿಸುವ ಕೋಕಿಲೆ ಪಕ್ಷಿಗಳ ಗುಂಪು ಮತ್ತು ಕಾಗೆಗಳ ಗುಂಪು, ಹಾಲ್ಗಡಲು ಮತ್ತು ಹಾಳು ಭಾವಿ, ಜಾಣ ಮತ್ತು ತಿಳಿಗೇಡಿ ಸಮಾನರೆಂದೆಣಿಸುವ ಈ ನಾಡಿನ ಜನರಿಗೆ ಮೇಲುಕೀಳೆಂಬ ತಿಳುಹು ಇಲ್ಲವೇ ಇಲ್ಲ.

ವಿಶ್ವಾವಸುಃ ॥

ಮೂ। ಓಮಿತ್ಯಗ್ರೇವಿಮಾನಮಾನಯ್ಯಸಾನಂದಂಸಾಂಜಲಿಬಂ
ಧಂ॥

ಟೀಕಾ ॥ ಓಮಿತ್ಯಂಗೀಕಾರೇ ॥

ಅರ್ಥ ॥ ಓಮ್ ಎಂಬ ಒಪ್ಪಿಗೆ ಸೂಚಕವಾದ ಶಬ್ದ ಉಸುರಿ ವಿಮಾನವನ್ನು ಮುಂದಕ್ಕೆ ನಡಿಸಿ ವಿಶ್ವಾವಸುವು ಹರ್ಷದಿಂದ ಕೈ ಜೋಡಿಸಿ ಹೇಳುತ್ತಾನೆ.

ವೇಂಕಟಗಿರಿ ವರ್ಣನಂ ॥

ಮೂ। ಸುರಭಿತಮತ್ತಮಾಲಸ್ತೋಮಃಪುಷ್ಯದ್ರಸಾಲಪ್ರಕರತಿಲ
ಕಸಾಲಪ್ರಸ್ಮಸುಪ್ಟದ್ರುಜಾಲಃ । ಶ್ರಿತಸಮವನಶೀಲಃಶ್ರೀಶಲೀ
ಲಾನುಕೂಲಶ್ಶಿಥಿಲಿತಭವಮಾಲಸ್ಸೇವ್ಯತಾಂಶೇಷಶೈಲಃ॥೨೬೨॥

ಟೀಕಾ ॥ ಸುರಭಿತಮೇತಿ ॥ ಸುರಭಿತಮಾನಾಂ ಅತಿಸೌರಭಾಣಾಂ ತಮಾಲಾನಾಂಸ್ತೋಮಃ ತಾಪಿಂಛಸಮೂಹಃ ಪುಷ್ಯತ್ ವರ್ಧಮಾನಃ ರಸಾಲಾನಾಂಪ್ರಕರಃ ಚೂತಸಮೂಹಃ ತಿಲಕಾಃ ಕ್ಷುರಕಾಃ

ಸಾಲಾಸ್ಸರ್ಜಾಶ್ಚ ಪ್ರಷ್ಠಾಃ ಪ್ರಮುಖಾಯೇಷಾಂ ತಾದೃಶಾನಿಸುಷ್ಟುನಿಚದ್ರೂಣಾಂ ವೃಕ್ಷಾಣಾಂ ಜಾಲಾನಿ ಯಸ್ಮಿನ್ ಸಃ_ಶ್ರಿತಾನಾಂ ಭಕ್ತಾನಾಂ ಸವ್ಯಗವನಂ ಶೀಲಂ ಯಸ್ಯತಸ್ಯ ಶ್ರೀತಸ್ಯ ಶ್ರೀನಿವಾಸಸ್ಯ ಲೀಲಾನಾಂ ಕ್ರೀಡಾನಾಂ ಅನುಕೂಲಃ_ಅತಏವ_ಶಿಥಿಲಿತಂ ನಾಶಿತಂ ಭವಸ್ಯಸಂಸಾರಸ್ಯಮೂಲಂ ಅಜ್ಞಾನಂ ಯೇನ ಸಃ_ವಿಷಶೇಷಶೈಲಃ ವೇಂಕಟಾಚಲಃ ಸೇವ್ಯತಾಂ ತ್ವಯೇತಿಶೇಷಃ ||

ಅರ್ಥ ॥ ಶ್ರೇಷ್ಠವಾದ ಪರಿಮಳ ಉಳ್ಳ ಕದ್ದಾಳಿ ಗಿಡಗಳು, ಬಲಿತಪೂಮರಗಳು, ಎಳ್ಳ ಗಿಡಗಳು, ತೇಗಿನ ಮರಗಳು ಇವುಗಳೇ ಮುಖ್ಯವಾಗಿರುವ ಮಲೆಯುಳ್ಳ, ಶರಣು ಬಂದ ದಾಸರನ್ನು ಸಲಹುವ ಸ್ವಭಾವವುಳ್ಳ, ಶ್ರೀ ಶ್ರೀನಿವಾಸ ದೇವರ ಕ್ರೀಡೆಗಳಿಗೆ ಯೋಗ್ಯ ಸ್ಥಾನವಾಗಿರುವ, ಸಂಸಾರಬೇರು ಕೀಳ್ದು ಹಾಕುವ ಶ್ರೇಷ್ಠ ಬೆಟ್ಟವು (ಹೇ ಕೃಶಾನು ವೇ) ನಿನ್ನಿಂದ ಪೂಜಿಸಲ್ಪಡಲಿ.

ಮೂ। ಪುನಸ್ಸಹರ್ಷಂ

ಅರ್ಥ ॥ ಮತ್ತು ಸಂತೋಷದೊಡನೆ:

ಮೂ। ಶ್ಲೋ। ಪನ್ನಗೇಷುಚನಗೇಷುಖಗೇಷುದ್ವೀಪಿರಾಜಿಷು
ಪೃಷತ್ಸ್ವದೃಷತ್ಸು । ವಲ್ಲರೀಷುಚದರೀಷುಝರೀಷುಪ್ರಾರ್ಥ
ಯಂತಿಜನಿಮತ್ರಮುನೀಂದ್ರಾಃ ॥ ೨೬೩ ॥

ಟೀಕಾ ॥ ಪನ್ನಗೇಷ್ವಿತಿ ॥ ಮುನೀಂದ್ರಾಃ ಅನ್ಯದೇಶವಾಸಿನಃ_ಅತ್ರಶೇಷ ಶೈಲೇ_ಸರ್ಪವೃಕ್ಷ ಪಕ್ಷಿವ್ಯಾಘ್ರ ಹರಿಣ ಪಾಷಾಣ ಲತಾಗುಹಾನಿರ್ಝರೇಷು ಜನ್ಮಪ್ರಾರ್ಥಯಂತಿ_ ತದಾತ್ಮನಾಪಿವಾಸ್ಮಾಕಂ ಜನ್ಮಾತ್ರಭೂಯಾದಿತಿ ವಾಂಛಂತೀತಿ ವಸ್ತುನಾ ಕಿಮುತ ಮನುಷ್ಯತ್ವಾದಿನೇತಿಪ್ರತೀತೇರ್ವಸ್ತುನಾಲಂಕಾರಧ್ವನಿಃ_ ಮೂಲಂತುಸಾರ್ವತ್ರಿಕ ಭಗವತ್ಸಾನ್ನಿಧ್ಯಲಾಭಃ ||

ಅರ್ಥ ॥ ಸರ್ಪಗಳಾಗಿಯಾಗಲೀ ಗಿಡಗಳಾಗಿಯಾಗಲೀ ಪಕ್ಷಿಗಳಾಗಿಯಾಗಲೀ ಹುಲಿಗಳಾಗಿಯಾಗಲೀ ಜಿಂಕೆಗಳಾಗಿಯಾಗಲೀ ಶಿಲೆಗಳಾಗಿಯಾಗಲೀ ಬಳ್ಳಿಗಳಾಗಿಯಾಗಲೀ ನೀರಿನ ಒರವುಗಳಾಗಿಯಾಗಲೀ ತಮಗೆ ಈ ಬೆಟ್ಟದ ಮೇಲೆ ಜನ್ಮ ಬರಲೆಂದು ಋಷಿಗಳು ಬೇಡಿಕೊಳ್ಳುತ್ತಾರೆ.

ಮೂ। ಅಹೋಮಹೋನ್ನತಾಖಲ್ವಸ್ಯಶೈಲಸ್ಯಧನ್ಯತಾ॥೨೬೪॥

ಅರ್ಥ ॥ ಅಯ್ಯಾ, ನಿಶ್ಚಯವಾಗಿಯೂ ಈ ಮಲೆಯ ಪುಣ್ಯವು ಬಹಳ ಹಿರಿದಾದದ್ದು.

ಮೂ। ಯತಃ। ಶ್ಲೋ। ವೈಕುಂಠೇಪಿನಿರುತ್ಕಂಠಮಕುಂಠವಿಭವಂ
ಮಹಃ।ತದತ್ರಚಿತ್ರಚಾರಿತ್ರಂರಮತೇರಮಯಾಸಮಮ್॥೨೬೫॥

ಟೀಕಾ ॥ ವೈಕುಂಠಇತಿ ॥ ಅಕುಂಠಃಅಪ್ರತಿಹತಃ ವಿಭವಃ ಸಾಮರ್ಥ್ಯಂ ಐಶ್ವರ್ಯಂವಾ ಯಸ್ಯತತ್_ಅತಏವ_ಚಿತ್ರಂಚಾರಿತ್ರಂ_ತತ್ಪ್ರಸಿದ್ಧಂ_ಮಹಃ ವೈಷ್ಣವಂತೇಜಃ_ವೈಕುಂಠೇಪಿ_ನಿರುತ್ಕಂಠಂ ಅನುತ್ಸುಕಂ ಸತ್_ಅತ್ರಶೈಲೇ_ರಮಯಾಅಲರ್ಮೇಲ್ಮಂಗಾಖ್ಯಯಾ_ಸಮಂಸಹ_ರಮತೇಕ್ರೀಡತಿ ||

ಅರ್ಥ ॥ ಕುಂದಿಲ್ಲದ ಸಾಮ್ರಾಜ್ಯವುಳ್ಳ ಪ್ರಸಿದ್ಧವಾದ ವಿಷ್ಣುತೇಜವು ವೈಕುಂಠದಲ್ಲಿ

ಕೂಡ ಉತ್ಸಾಹ ಇಲ್ಲದ್ದಾಗಿ ಈ ಮಲೆಯನ್ನು ಕುರಿತು ಬಂದು ಅಲಮೇಲ್ಮಂಗಾ ಎಂಬ ಹೆಸರು ಪಡೆದ ಲಕ್ಷ್ಮೀಯನ್ನು ಕೂಡಿಕೊಂಡು ಕ್ರೀಡೆ ಮಾಡುತ್ತದೆ.

ಶ್ಲೋ॥ ವಿವಿಧನಿಗಮಸಾರೇವಿಶ್ವರಕ್ಷೈಕಧೀರೇವೃಷಶಿಖರಿವಿಹಾರೇ
ವಕ್ಷಸಾಶ್ಲಿಷ್ಟದಾರೆ। ಭಗವತಿಯದುವೀರೇಭಕ್ತಬುದ್ಧೇರದೂರೇ
ಭವತುಚಿರಮುದಾರೇಭಾವನಾನಿರ್ವಿಕಾರೇ ॥ ೨೬೬ ॥

ಟೀಕಾ ॥ ವಿವಿಧೇತಿ । ರೇಫಾಂತಾಷ್ಟಕಂ ಭಗವತಿವಿಶೇಷಣಂ– ಅದೂರೇಸನ್ನಿಹಿತೆ– ಭಾವನಾ ಧ್ಯಾನಂ– ಚಿರಂ– ಭವತು ॥

ಅರ್ಥ ॥ ನಾನಾ ವೇದಗಳ ತತ್ವವಾದ, ಜಗತ್ತುವನ್ನು ರಕ್ಷಿಸುವದರಲ್ಲಿ ಅದ್ವಿತೀಯ ಶೂರನಾದಂಥಾತನಾದ, ತಿರುಪತಿ ಬೆಟ್ಟದ ತಲೆಯ ಮೇಲೆ ಕ್ರೀಡೆ ಮಾಡುವಂಥಾತನಾದ ಹೆಂಡತಿಯಿಂದ ಆಲಿಂಗಿತವಾದ ವಕ್ಷ ಸ್ಥಳ ಉಳ್ಳಂಥಾತನಾದ, ಯಾದವರಲ್ಲಿ ಕಲಿಯಾದಂಥಾವನಾದ, ಶರಣರ ಬುದ್ಧಿಗೆ ಸಮೀಪವಾಗಿರುವಂಥಾತನಾದ, ಔದಾರ್ಯ ಉಳ್ಳಂಥಾತನಾದ, ಬದಲಾಗದಂಥಾತನಾದ ಶ್ರೀ ಭಗವಂತನಲ್ಲಿ (ಜನರ) ಧ್ಯಾನವು ಸ್ಥಿರವಾಗಿರಲೀ.

ಮೂ । ಇತಿಸಾನಂದಂಧ್ಯಾಯತಿ ॥

ಅರ್ಥ ॥ ಈಪ್ರಕಾರವಾಗಿ ತುಂಬ ಹರ್ಷ ಉಳ್ಳವನಾಗಿ ವಿಶ್ವಾವಸುವು ಧ್ಯಾನ ಮಾಡುತ್ತಾನೆ.

ಕೃಶಾನುಃ ॥

ಮೂ। ಹಂತವ್ಯಪೇತವಿಷಯಾಂತರವ್ಯಾಸಂಗಂತ್ವದಂತರಂಗಂದೇ
ವಏವಾಸ್ಮಿನ್ನನುಭವತಿದೃಢಸಂಗಂ ॥ ೨೬೭ ॥

ಟೀಕಾ ॥ ಹಂತೇತಿ ॥ ವಿಷಯಾಂತರೇ ಭಗವದನ್ಯಸ್ಮಿನ್ವಸ್ತುನಿ ವ್ಯಾಸಂಗಃ ಸಂಕಲ್ಪಃ ವ್ಯಪೇತಃ ಗತಃ ಯಸ್ಯತಥೋಕ್ತಂ–ಅಂತರಂಗಂ ಮನಃ–ದೃಢಸಂಗಂ ಭಾವನಾಂ ॥

ಅರ್ಥ ॥ ಇದೇನು ಆಶ್ಚರ್ಯ! ಗೆಳೆಯನೇ, ನಿನ್ನ ಮನಸ್ಸು ಬೇರೆ ವಿಶಿಷ್ಟ ಪದಾರ್ಥಗಳ ಸಂಕಲ್ಪಗಳನ್ನೂ ಬಿಟ್ಟುಗೊಟ್ಟು, ಈ ದೇವನಲ್ಲಿ ಸ್ಥಿರವಾಗಿ ಕೂಡಿಕೊಂಡಿದೆ.

ವಿಶ್ವಾವಸುಃ ॥

ಮೂ। ಸಖೆಸತ್ಯಮೇವ *ವಿದಿತಂಭವತಾ॥ ೨೬೮ ॥

ಅರ್ಥ॥ ಗೆಳೆಯನೇ, ಸರಿಯೇ ನೀನು ತಿಳುಕೊಂಡದ್ದು.

ಶ್ಲೋ। ದಧತೀಚಿರಾಯಸುದತೀಮುರಃಸ್ಥಲೇತದತೀತಸೀಮುದದ
ತೀಸುಖಂಸತಾಂ। ರಸಿಕಸ್ಯಚಿತ್ತಮಿಹಕಸ್ಯದೇವತಾಪ್ರತಿಪನ್ನ
ಪನ್ನಗನಗಾನಗಾಹತೆ ॥ ೨೬೯ ॥

---

* ಉದಿತ ಮಿತಿಪಾಠಾಂತರಂ ॥

ಟೀಕಾ || ದಧತೀತಿ|| ಉರಃಸ್ಥಲೇ ಸುದತೀಂ ಲಕ್ಷ್ಮೀಂ ದಧತೀ—ಅತೀತಸೀಮ ನಿರವಧಿ—ಸುಖಂಬ್ರಹ್ಮಾನಂದಂ ದಧತೀಅರ್ಪಯಂತೀ—ಚಿರಾಯ—ಪ್ರತಿಪನ್ನಃ ಪ್ರಾಪ್ತಃ ಪನ್ನಗನಗಃ ಶೇಷಶೈಲಃ ಯಯಾಸಾ ದೇವತಾಶ್ರೀನಿವಾಸಾಖ್ಯಾ ಇಹಲೋಕೇ ರಸಂ ಬ್ರಹ್ಮವೇತ್ತೀತಿ ರಸಿಕಸ್ಯಕಸ್ಯಚಿತ್ತಂ ನಗಾಹತೇ ನಪ್ರವಿಶತೀತಿಕಾಕುಃ ಸರ್ವಮನೋಹರೇತ್ಯರ್ಥಃ ||

ಅರ್ಥ|| ವಕ್ಷಸ್ಥಳದ ಮೇಲೆ ಲಕ್ಷ್ಮೀದೇವಿಯನ್ನು ಹೊತ್ತುಕೊಂಡಿರುವಂಥಾ, ಸಜ್ಜನರಿಗೆ ಅಪರಿಮಿತ ಆನಂದ ಕೊಡುವಂಥಾ, ವೆಂಕಟಗಿರಿಯ ಮೇಲೆ ಬಂದು ವಸತಿ ಮಾಡಿರುವಂಥಾ ಈ ಶ್ರೀನಿವಾಸ ದೇವರು ಯಾವ ತಿಳಿದವನ ಮನಸ್ಸಿನಲ್ಲಿ ಪ್ರವೇಶಿಸಲಿಕ್ಕಿಲ್ಲ? ತಿಳಿದವರೆಲ್ಲರ ಮನಸ್ಸಿನಲ್ಲಿ ಪ್ರವೇಶಿಸುವನೆಂಬ ತಾತ್ಪರ್ಯ.

ಕೃಶಾನುಃ ||

ಮೂ । ಕಿಮರೇಕೇವಲಮರ್ಥಪರಮಮುಂದೇವಮನುಸಂಧತ್ಸೇ || ೨೭೦ ||

ಟೀಕಾ || ಕಿಮಿತಿ || ಅನುಸಂಧತ್ಸೆಧ್ಯಾಯಸಿ ||

ಅರ್ಥ || ಏನೆಲಾ, ಶುದ್ಧ ಧನಲೋಭಿಯಾದ ಈ ದೇವರನ್ನು ಹೊಗಳುತಿಯಾ ?

ಶ್ಲೋ। ಇಷ್ಟಪ್ರಾಪ್ತಿಮನಿಷ್ಟಭಂಗಮಪಿವಾಸಂಪ್ರಾರ್ಥ್ಯಭಕ್ತ್ಯಾಜನೈರ್ಯದ್ದಾತವ್ಯಮಿತಿಪ್ರತಿಶ್ರುತಮಭೂದತ್ಯಂತದಾಪ್ತೇಫಲೇ। ತೇದಾಸ್ಯಂತಿನಚೇತ್ಸ್ವಯಂಭಯಮಸಾವುತ್ಪಾದ್ಯತೇಷಾಂಪುನಃಕೃತ್ಸ್ನಂಸಾರ್ಥಹಿರಣ್ಯಹೃತ್ಪದಇದಂಗೃಹ್ಣಾತಿವೃದ್ಧ್ಯಾಸಮಂ|| ೨೭೧ ||

ಟೀಕಾ || ಇಷ್ಟೇತಿ || ಇಷ್ಟಸ್ಯ ವಸ್ತುನಃ ಪ್ರಾಪ್ತಿಂವಾ—ಅನಿಷ್ಟಸ್ಯ ಭಂಗಮಪಿವಾ—ಸಂಪ್ರಾರ್ಥ್ಯ—ಜನೈಃ ಯದ್ಧನಂದಾತವ್ಯಮಿತಿ ಭಕ್ತ್ಯಾಪ್ರತಿಶ್ರುತಂ ಪ್ರತಿಜ್ಞಾತಂ ಅಭೂತ್—ಅಥ ಫಲೇ ಉಕ್ತಾನ್ಯ ಶರಸ್ಮಿನ್ ಆಪ್ತೆಪ್ರಾಪ್ತೆಸತಿ—ಸ್ವಾನುಗ್ರಹೇಣೇತಿಭಾವಃ—ತತ್ಪ್ರತಿ ಶ್ರುತಂ ದ್ರವ್ಯಂತೇ ಸ್ವಯಮಾತ್ಮನಾ ನದಾಸ್ಯಂತಿ ಚೇತ್—ತದಾ—ಸಾರ್ಥಂ ಯಥಾರ್ಥಂ ಹಿರಣ್ಯಂ ಧನಂಸಾಮ್ಯೈಕ ದೇಶಗ್ರಹಣಾತ್ ಹಿರಣ್ಯಕಶಿಪುಂಚ ಹರತಿಗೃಹ್ಣಾತೀತಿ ನಾಶಯತೀತಿ ಹಿರಣ್ಯಹೃದಿತಿಪದಂಸಂಜ್ಞಾ ಶಬ್ದಃ ಯಸ್ಯಸಃ— ಅಸೌವೇಂಕಟೇಶಃ— ತೇಷಾಂ ಜನಾನಾಂ ಕೃತ್ಸ್ನಂ ಪ್ರತಿಜ್ಞಾತಾರ್ಥದನ್ಯಾಸಂ— ಇದಂ ದ್ರವ್ಯಂ ವೃದ್ಧ್ಯಾಸಮಂ— ಅಧಮರ್ಣದೇಯಮೂಲಾಧಿಕ ದ್ರವ್ಯೇಣ ಸಹ ಗೃಹ್ಣಾತಿ ||

ಅರ್ಥ || ಬೇಕಾದ್ದು ಸಿಗಬೇಕು, ಬೇಡಾದ್ದು ಹೋಗಬೇಕೆಂದು ಬೇಡಿಕೊಂಡ ಜನರು ನಂಬಿಕೆಯಿಂದ ಹರಿಕೆ ಹೊತ್ತ ಹಣವನ್ನು ಮನೋರಥ ಪೂರ್ಣವಾದ ಬಳಿಕಕೊಡದೆ ಇದ್ದರೆ, ಹಿರಣ್ಯಹೃತ್ ಅಂದರೆ ದ್ರವ್ಯ ಹರಣ ಮಾಡುವವನೆಂಬ ಬಿರುದು ಉಳ್ಳಂಥಾವನಾದ ಈ ದೇವರು ಅವರಿಗೆ ಭಯ ಹುಟ್ಟಿಸಿ ಅವರಿಂದ ಬಡ್ಡಿಯ ಸಹಿತವಾಗಿ ಗಂಟು ಸಾಧಿಸಿ ಕೊಳ್ಳುತ್ತಾನೆ.

ಶ್ಲೋ॥ತಾತೇತ್ಯಾಮಂತ್ರ್ಯ ಕಂಚಿದ್ವನಭುವಿ ತೃಷಿತಸ್ತೋಯಬಿಂದುಂ ಯಯಾಚೇ ಕಸ್ಯಾಪ್ಯುಚ್ಚೈಸ್ತಟಾಕಂ ಖನತ ಇಹ ಗಿರೌ ಹಂತ ಮೃದ್ಭಾರಮೂಹೇ। ದತ್ತಾಂ ಕೇನಾಪಿ ಸೂನಾವಳಿಮಧಿಮುಕುಟಂ ಮೃನ್ಮಯೀಂ ಮೇ ವದಧ್ರೇ ಸೋಯಂ ಭೂಯಶ್ಚ ತ್ರಿಜ್ಞೈರ್ಭುವನಪತಿರಿತಿ ಶ್ರೂಯತೇ ಧ್ಯಾಯತೇ ಚ॥ ೨೭೨ ॥

ಟೀಕಾ ॥ ತಾತೇತಿ ॥ ಯೋ ವೇಂಕಟೇಶಃ– ವನಭುವಿ ವೇಂಕಟಾಚಲಾರಣ್ಯದೇಶೇ– ತೃಷಿತಸ್ಸನ್– ಕಂಚಿತ್ಪುರುಷಂ– ತೋಯಬಿಂದುಂ– ನತ್ತೋಯಂ– ಯಯಾಚೇ ಯಾಚಿತವಾನ್– ಕಿಂಚ– ಇಹ ಗಿರೌ ಶೇಷಶೈಲೇ– ತಟಾಕಂ– ಖನತಃ ನಿರ್ಮಾಪಯತಃ– ಕಸ್ಯಾಪಿ ಪುರುಷಸ್ಯ ಸಂಬಂಧಿ– ಉಚ್ಚೈರತ್ಯಧಿಕಂ– ಮೃದ್ಭಾರಮೂಹೇ ಊಢವಾನ್– ಕೇನಾಪ್ಯಜ್ಞಾತ ಕುಲಗೋತ್ರೇಣ– ದತ್ತಾಂ– ಮೃನ್ಮಯೀಂ– ಸೂನಾವಳೀಂ ಪುಷ್ಪಮಾಲಾಂ– ಅಧಿಮುಕುಟಂ ಮಣಿಮಯ ಕಿರೀಟ ಇವ– ದಧ್ರೇ ಧೃತವಾನ್– ಭೂಯಃ ಪುನ್ಸ್ಯತ– ಸೋಯಂ ವೇಂಕಟೇಶಃ– ಶ್ರುತಿಜ್ಞೈರ್ನ್ನತು ಪಾಮರೈಃ– ಭುವನಾನಾಂ ಪತಿರಿತಿ ಸ್ತೂಯತೇ– ಧ್ಯಾಯತೇ ಚ ಪಾದತ್ರಯಾರ್ಥಸ್ಯ ಪರಮದಾರಿದ್ರ್ಯಸಾಮಾನಾಧಿಕರಣ್ಯಾದಿತಿ ಭಾವಃ– ಕಥಾತ್ರಯಂ ವೇಂಕಟಾಚಲಮಾಹಾತ್ಮ್ಯೇ ಪ್ರಸಿದ್ಧಂ– ಅತ್ರ ವಾಚ್ಯಯಾ ನಿಂದಯಾ ಪರಮಕಾರುಣಿಕೋಯಮಿತಿ ಸ್ತುತಿ ಪ್ರತೀತೇರ್ವ್ಯಾಜಸ್ತುತ್ಯಲಂಕಾರಃ ॥

ಅರ್ಥ ॥ ಈ ವೆಂಕಟೇಶನು ವೆಂಕಟಾಚಲ ಅಡವಿಯಲ್ಲಿ ನೀರಡಿಕೆಯಿಂದ ಒಬ್ಬ ಮನುಷ್ಯನನ್ನು ಅಪ್ಪಯಂತ ಕರದು ಒಂದು ತಟಕು ನೀರು ಕೊಡುತಿಯಾಯಂತ ಬೇಡುವಂಥವನಾದನು; ಯಾರೋ ಒಬ್ಬ ಮನುಷ್ಯನು ಕೆರೆತೋಡುತ್ತಿದ್ದನು ಅದರ ಹೇರಳ ಮಣ್ಣು ಹೊರುವಂಥವನಾದನು; ಒಬ್ಬಾನೊಬ್ಬನು ಕೊಟ್ಟ ಮಣ್ಣಿನ ಹೂವುಗಳ ಮಾಲೆಯನ್ನು ರತ್ನ ಖಚಿತವಾದ ಕಿರೀಟದಲ್ಲಿ ತೊಟ್ಟುಕೊಳ್ಳುವಂಥಾತನಾದನು; ಆದಾಗ್ಯೂ ( ಅಂದರೆ ಈ ವೆಂಕಟೇಶನು ಇಷ್ಟು ದರಿದ್ರನಾದಾಗ್ಯೂ ) ಅವನು ಬಲ್ಲವರಿಂದ ಲೋಕ ದೊಡೆಯನೆಂದು ಕೊಂಡಾಡಲ್ಪಡುತ್ತಾನೆ.

ವಿಶ್ವಾವಸುಃ ॥

ಮೂ । ಕಿಮರೇ ಕರುಣಾನೀರನಿಧಯೇ ವೇಂಕಟಪತಯೇಽಪ್ಯಸೂಯಸಿ ಶೃಣು ತಾವತ್ ॥ ೨೭೩ ॥

ಟೀಕಾ ॥ ಕಿಮಿತಿ ॥ ಅಸೂಯಸಿ ಗುಣಾನಪಿ ದೋಷತ್ವೇನ ಆರೋಪಯಸೀತ್ಯರ್ಥಃ ॥

ಅರ್ಥ ॥ ಏನೆಲಾ, ದಯಾರಸದ ಸಮುದ್ರನಾದ ವೆಂಕಟಪತಿಯಲ್ಲಿ ಕೂಡ ಮತ್ಸರ ಮಾಡುತ್ತೀಯಾ ? ಕೇಳು ಹೇಳುತ್ತೇನೆ.

ಶ್ಲೋ॥ನಿಯಂತಾ ಜಂತೂನಾಂ ನಿಖಿಲಜಗದುತ್ಪತ್ತಿವಿಭವಪ್ರತಿಕ್ಷೇಪೈಃ ಕ್ರೀಡನ್ ಪರಮಪುರುಷಃ ಪನ್ನಗನಗೇ। ಪರತ್ವೇ ಸೌಲಭ್ಯಪ್ರಕಟನಕೃತೇ ವೇಂಕಟಪತಿಃ ಕೃಪಾಸಿಂಧುಃ ಕಾಂ ಕಾಂ *ವಿಹಮನುಜಲೀಲಾಂ ನತನುತೇ ॥ ೨೭೪ ॥

* ನನು ಇತಿ ಪಾಠಾಂತರಂ ॥

ಟೀಕಾ|| ನಿಯಂತೇತಿ|| ಜಂತೂನಾಂ ಪ್ರಾಣಿನಾಂ— ನಿಯಂತಾ ಅಂತರ್ಯಾಮೀ— ನಿಖಿಲಸ್ಯ ಜಗತಃ ಉತ್ಪತ್ತ್ಯಾ ವಿಭವೇನ ಪಾಲನೇನ ಪ್ರತಿಕ್ಷೇಪೇಣಲಯೇನಚ ತ್ರಿಭಿರ್ವ್ಯಾಪಾರೈಃ— ಕ್ರೀಡನ್ ಪರಮ ಪುರುಷಃ ಕೃಪಾಸಿಂಧುಃ ವೇಂಕಟಪತಿಃ ಭಗವಾನ್— ಪರತ್ವೇವಾಚಾಮಗೋಚರೇ ಸತ್ಯಪಿಸರ್ವೋತ್ತಮತ್ವೇವಾ—ಸೌಲಭ್ಯಸ್ಯ ಸುಲಭತ್ವಸ್ಯ ಪ್ರಕಟನಕೃತೇ—ಇಹಪನ್ನಗನಗೇ ಶೇಷಶೈಲೇ—ಕಾಂ ಕಾಂ ಮನುಜಲೀಲಾಂ ಮನುಷ್ಯಚೇಷ್ಟಾಂ— ನತನುತೇ ನಕರೋತಿ||

ಅರ್ಥ॥ ಪರಬ್ರಹ್ಮ ಸ್ವರೂಪನಾದ ದಯಾಸಮುದ್ರನಾದ ಈ ವೇಂಕಟಪತಿಯು ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿದ್ದು, ಸಕಲ ವಿಶ್ವದ ಸೃಷ್ಟಿ ಸ್ಥಿತಿಲಯ ರೂಪವಾದ ಕಾರ್ಯಗಳಿಂದ ವಿನೋದ ಮಾಡುವಂಥಾವನಾಗಿ, ವರ್ಣಿಸಲಶಕ್ಯವಾದ ಮಹಿಮೆಯನ್ನು ಸುಲಭವಾಗಿ ತಿಳಿಯ ಪಡಿಸುವ ಈ ಶೇಷಗಿರಿಯಲ್ಲಿ, ಮನುಷ್ಯರಂತೆ ನಡದ ಯಾವ ಆಟ ಆಡುವದಿಲ್ಲವು? ಮನುಷ್ಯರ ಎಲ್ಲ ಆಟಗಳನ್ನಾಡುತಾನೆ ಎಂಬ ತಾತ್ಪರ್ಯವು.

ಶ್ಲೋ। ಕಿಮುಪ್ಯುಪಾದಾಯದಿಶನ್ನಭೀಷ್ಟಂಕೃತ್ಸ್ನಂಜನೇ
ಭ್ಯಃಪತಿರಂಜನಾದ್ರೇಃ। ಕೃಷ್ಣಾವತಾರೀಯಕುಚೇಲಸಂಪ
ತ್ಪ್ರದಾನರೀತಿಂವಿವರೀವರೀತಿ ॥ ೨೭೫ ॥

ಟೀಕಾ|| ಇಷ್ಟ ಪ್ರಾಪ್ತಿಮಿತ್ಯಾದಿದೂಷಣಂ ನಿರಸ್ಯತಿ|| ಕಿಮಿತಿ|| ಅಂಜನಾದ್ರಿರಿತಿಶೇಷಶೈಲಸ್ಯ ಯುಗಾಂತರನಾಮ—ತಸ್ಯ ಪತಿರ್ವೇಂಕಟೇಶಃ—ಜನೇಭ್ಯಃ ಕಿಮಪಿ ಅಸಾರಂಕಿಂಚಿದ್ವಸ್ತು ಉಪಾದಾಯ—ತೇಭ್ಯಃ—ಕೃತ್ಸ್ನಂ ಅಭೀಷ್ಟಂಕಾಂಕ್ಷಿತಂ ಸರ್ವಂ—ದಿಶನ್ ದದನ್ಸನ್—ಕೃಷ್ಣಾವತಾರೇ ಭವಾ ಕೃಷ್ಣಾವತಾರೀಯಾ—ಕುಚೇಲೋನಾಮ ಮುನಿಸ್ತಸ್ಮೈಸಂಪದಃ ಪ್ರದಾನಸ್ಯ ಯಾರೀತಿಃ ಧಾನಾಮುಷ್ಟಿಂಗೃಹೀತ್ವಾತ್ವೈಂದ್ರೈಶ್ವರ್ಯ ಪ್ರದಾನರೂಪಾ— ತಾಂ— ವಿವರೀವರೀತಿ ಭೃಶಂ ಪ್ರಕಟಯತಿ— ವಿವೃಞ್ವರ್ಣೇ ಇತ್ಯಸ್ಮಾದ್ಧಾತೋಃ ಯಙ್‌ಲುಕಿಲಟಿರೂಪಂ ||

ಅರ್ಥ॥ ಈ ವೆಂಕಟೇಶ ಸ್ವಾಮಿಯು ಜನರಿಂದ ಯೇನಾದರೂ ಸ್ವಲ್ಪ ತೆಗದುಕೊಂಡು ಅವರಿಗೆ ಬೇಕಾದನ್ನೆಲ್ಲ ಕೊಟ್ಟು ಕೃಷ್ಣಾವತಾರದಲ್ಲಿ ಸುದಾಮನೆಂಬ ದರಿದ್ರನಿಗೆ ಒಂದು ಮುಷ್ಟಿ ಅವಲು ತೆಗದುಕೊಂಡು ಅದಕ್ಕೆ ಬದಲಾಗಿ ಇಂದ್ರನ ಸಂಪತ್ತಿಗೆ ತುಲ್ಯವಾದ ಐಶ್ವರ್ಯ ಪಾಲಿಸಿದ ರೀತಿಯನ್ನು ತಿರಿತಿರಿಗಿ ಪ್ರಕಟಿಸುತ್ತಾನೆ.

ಶ್ಲೋ। ಪ್ರಿಯಸಹಚರೀಲಕ್ಷ್ಮೀಃಸ್ಥಾನಂಸಹಸ್ರವಸುಸ್ಸ್ವ
ಯಂಕುವಲಯಪತಿಃಶ್ಯಾಲೋರತ್ನಾಕರಶ್ಶ್ವಶುರೋಹರೇಃ। ತದ
ಪಿಹರತಿದ್ರವ್ಯಂಪೂರ್ಣೋಜಗತ್ಪತಿರೇಷಯತ್ತದಿಹಭಜತಾಂಕ
ರ್ತುಂನ್ನೃಣಾಮುದಗ್ರಮನುಗ್ರಹಂ ॥ ೨೭೬ ॥

ಟೀಕಾ || ಉಕ್ತಾರ್ಥಂದೃಢಯತಿ || ಪ್ರಿಯೇತಿ || ಯಸ್ಯಹರೇರ್ವೇಂಕಟೇಶಸ್ಯ— ಪ್ರಿಯ ಸಹಚರೀಭಾರ್ಯಾ ಸ್ವಯಂ ಸಾಕ್ಷಾಲ್ಲಕ್ಷ್ಮೀಃ ಯಸ್ಯಸ್ಥಾನಂ ನಿವಾಸಃ ಸಹಸ್ರಾಣಿವಸೂನಿಧನಾನಿ ವಸವಃ ಕಿರಣಾಶ್ಚ ಯಸ್ಯಸಃ ಸ್ವಯಂ ಸೂರ್ಯಃ—ಯಸ್ಯಶ್ಯಾಲಃ ಭಾರ್ಯಾನುಜಃ ಕುವಲಯಸ್ಯ ಭೂಮಂಡಲಸ್ಯಪತಿಃ ಸಾರ್ವಭೌ

ಮಃ ಕುವಲಯಾನಾಂ ಉತ್ಪಲಾನಾಂಪತಿಶ್ಚಂದ್ರಶ್ಚ— ಶ್ವಶುರಃ ಪತ್ನೀಪಿತಾರತ್ನಾಕರಃಸಮುದ್ರಶ್ಚ—ಭವ ತೀತಿ ಸರ್ವತ್ರಯೋಜ್ಯಂ—ತದಪಿತಥಾಪಿ— ಪೂರ್ಣಸ್ಸಮೃದ್ಧೋಪಿ ವಿಷಜಗತ್ಪತಿಃ— ದ್ರವ್ಯಂಹರತೀತಿಯ ತ್—ತದ್ದ್ರವ್ಯಗ್ರಹಣಂ ಇಹಲೋಕೇ—ಭಜತಾಂ ನೃಣಾಂ--ಉದಗ್ರಂಮಹಾಂತಂ—ಅನುಗ್ರಹಂ--ಕರ್ತುಮೇ ವ—ಅತ್ರ—ಯಸ್ಯಾನುಗ್ರಹ ಮಿಚ್ಛಾಮಿತಸ್ಯವಿತ್ತಂ ಹರಾಮ್ಯಹಮಿತ್ಯಾದ್ಯಾಗಮಾರ್ಥೋನುಸಂಧೇಯಃ ||

ಅರ್ಥ ॥ ಈ ವೆಂಕಟೇಶ ಸ್ವಾಮಿಗೆ ಪ್ರತ್ಯಕ್ಷ ಲಕ್ಷ್ಮಿಯೇ ಹೆಂಡತಿ, ಸಹಸ್ರಾವಧಿ ಧ ನಗಳು ಅಥವಾ ಸಹಸ್ರಾವಧಿ ಕಿರಣಗಳುಳ್ಳ ಸೂರ್ಯನೇ ಮನೆ, ಭೂಮಂಡಲದ ಒ ಡೆಯನು ಅಥವಾ ಚಂದ್ರನೇ ಮೈದುನನು, ಸಮುದ್ರನೇ ಮಾವನು, ಈ ಪ್ರಕಾರವಾಗಿ ತುಂಬ ಐಶ್ವರ್ಯ ಉಳ್ಳವನಾದಾಗ್ಯೂ ಜನರ ಧನವನ್ನು ಅಪಹರಿಸುತ್ತಾನೆ ಎಂಬುವದು ಭಕ್ತರ ಮೇಲೆ ದೊಡ್ಡ ಉಪಕಾರ ಮಾಡುವದಕ್ಕೆ ಹೊರತು ಬೇರೊಂದು ಇಲ್ಲವು.

ಮೂ। ಅಖಿಲಹೇಯಪ್ರತ್ಯನೀಕಾನಂತಕಲ್ಯಾಣಗುಣೈಕತಾನಸ್ಯ
*ವಿಶ್ವನಿದಾನಸ್ಯಶ್ರೀನಿವಾಸಾಭಿಧಾನಸ್ಯಪರಬ್ರಹ್ಮಣೋಗುಣಾ
ರ್ಣವಾಮೃತಕಣಾನಾಂ †ವರ್ಣನೇಅನಿಪುಣಧಿಷಣಾಧಿಷಣಾದ
ಯೋಪಿ ॥ ೩೭೭ ॥

ಟೀಕಾ || ಅಖಿಲೇತಿ || ಹೇಯಪ್ರತ್ಯನೀಕಾಃ ದೋಷವಿರುದ್ಧಾಃ—ಏಕತಾನೋ ಮುಖ್ಯ ವೃತ್ತಿಃ—ನಿದಾನಂ ಮುಖ್ಯಕಾರಣಂ— ಧಿಷಣಾದಯಃ ಬೃಹಸ್ಪತ್ಯಾದಯೋಪಿ ಅನಿಪುಣಧಿಷಣಾಃ ಅಕುಶಲಬುದ್ಧಯಃ ||

ಅರ್ಥ ॥ ಎಲ್ಲ ದೋಷಗಳಿಗೆ ಪ್ರತಿಕೂಲವಾದ ಅಂದರೆ ಯಾವದೊಂದೂ ದೋಷವಿಲ್ಲ ದ, ಅಮಿತ ಮಂಗಲಕರ ಗುಣಗಳಿಗೆ ಆಶ್ರಯವಾದ, ಸೃಷ್ಟಿಗೆ ಆದಿಮೂಲವಾದ, ಶ್ರೀನಿ ವಾಸನೆಂಬ ಹೆಸರು ಪಡೆದ, ಈ ಪರಬ್ರಹ್ಮನ ಗುಣ ಸಮುದ್ರದೊಳಗಿನ ಬಿಂದುಗಳನ್ನು ಬಣ್ಣಿಸುವದು ಬೃಹಸ್ಪತಿಯೇ ಮೊದಲಾದ ಬುದ್ಧಿವಂತರಿಗೆ ಕೂಡ ಅಳವಲ್ಲವು.

ಶ್ಲೋ। ಗಾಂಭೀರ್ಯೈಕಾವಲಂಬೇಗರಿಮನಿವಸತೌಕಾಂತಿಕು
ಲ್ಯಾತಟಾಕೇ ಕಲ್ಯಾಣಾಂಭೋಜಕಲ್ಯೇನಿರವಧಿಕರುಣಾಸಾರಕ
ಲ್ಲೋಲರಾಶೌ। ಚಾತುರ್ಯೌದಾರ್ಯಲಕ್ಷ್ಮೀವಿಹರಣಶರಣೇಸ
ದ್ಗುಣೌಘೇ ‡ಬಭೂವೇದೇವೇಶ್ರೀವೇಂಕಟೇಶೇನಜಿಗಣಯಿಷು
ತಾಕೇನವಾಗ್ಮಾನವಾಚಾ ॥ ೩೭೮ ॥

ಟೀಕಾ || ಗಾಂಭೀರೇತಿ || ಗಾಂಭೀರ್ಯಂ ಸುಖದುಃಖಯೋರವಿಕೃತಚಿತ್ತತ್ವಂ ತಸ್ಯಏಕಾವಲಂಬೇ ಮು ಖ್ಯಾಧಾರೇ—ಗರಿಮ್ಣಃ ಗೌರವಸ್ಯನಿವಸತೌ—ಕಾಂತಿರೇವ ಕುಲ್ಯಾ ಕೃತ್ರಿಮಾ ಅಲ್ಪಸರಿತ್ತಸ್ಯಾಃ ತಟಾಕೇಸರ ಸೀ—ಕಲ್ಯಾಣಾನ್ಯೇವ ಅಂಭೋಜಾನಿತೇಷಾಂ ಕಲ್ಯೇ ಪ್ರಾತಃಕಾಲೇ—ನಿರವಧೇಃ ಕರುಣಾ ಸಾರಸ್ಯ ಕಲ್ಲೋ ಲರಾಶೌ ಸಮುದ್ರೇ—ಚಾತುರ್ಯಂಕೃತ್ಯವಸ್ತುಷುಕೌಶಲಂ ಔದಾರ್ಯಂ ದಾತೃತ್ವಂತಯೋಲಕ್ಷ್ಮ್ಯಾಃಸಮ್ಪ

* ವಿಶ್ವನಾಥಸ್ಯ † ಗಣನಾಯಾ ಮಿತಿಪಾಠಾಂತರೆ || ‡ ದಧಾನೇತಿ ಪಾಠೆಬಭೂವೇತ ದ್ಧ್ಯಾಹರ್ತವ್ಯಂ ||

ದ್ಧೀವಿವಶ್ರಿಯೌ ಇತಿಶ್ಲಿಷ್ಟರೂಪಕಂ ತಯೋರ್ವಿಹರಣಾರ್ಥಂ ಶರಣೇಗೃಹೇ-ದೇವೆಸ್ವಪ್ರಕಾಶೇ-ಶ್ರೀವೇಂಕಟೇಶೇ-ಸತಾಂಗುಣಾನಾವೋಘೇ-ಜಿಗಣಯಿಷತಾಗಣಿತುಮಿಚ್ಛತಾ-ಕೇನವಾಜನೇನ-ಗ್ಲಾನವಾಚಾಶ್ರಾಂತವಾಗಿಂದ್ರಿಯೇಣ-ನಬಭೂವೇಸರ್ವೋಪಿಗ್ಲಾನವಾಗ್ಬಭೂವ ಭವತೇರ್ಭಾವೇಲಿಟ್ ಸ್ರಗ್ಧರಾ ||

ಅರ್ಥ॥ ಸುಖದಲ್ಲಿ ಹಿಗ್ಗುವದು, ದುಃಖದಲ್ಲಿ ಕುಗ್ಗುವದು ಈ ವಿಕಾರ ರಹಿತವಾದ ಸ್ಥಿತಿಗೆ ಗಾಂಭೀರ್ಯವೆನ್ನುತ್ತಾರೆ. ಅಂಥಾ ಗಾಂಭೀರ್ಯಕ್ಕೆ ಮುಖ್ಯ ನೆಲೆಯಾದಂಥಾವನಾದ, ದೊಡ್ಡಸ್ಥಿಕೆಗೆ ವಾಸಸ್ಥಾನವಾದಂಥಾವನಾದ, ತೇಜಪೆಂಬ ಕಾಲಿವೆಗೆ ಕೆರೆಯಾದಂಥಾವನಾದ, ಮಂಗಲಪೆಂಬ ಕಮಲಗಳಿಗೆ ಪ್ರಾತಃಕಾಲದಂತೆಯಾಗಿರುವಂಥಾವನಾದ, ಅಪರಿಮಿತದಯಾರಸದ ಸಮುದ್ರವಾದಂಥಾವನಾದ, ಜಾಣತನ ಮತ್ತು ದಾತೃತ್ವಗಳೆಂಬಸಂಪತ್ತು ಕ್ರೀಡೆಮಾಡುವ ಸ್ಥಾನವಾದಂಥಾವನಾದ, ಸ್ವಯಂಪ್ರಕಾಶನಾದ ಈ ವೆಂಕಟೇಶ ಸ್ವಾಮಿಯ ಗುಣಸಮೂಹವನ್ನು ಲೆಕ್ಕ ಮಾಡಲಿಕ್ಕೆ ಇಚ್ಛಿಸುವವರಲ್ಲಿ ಯಾರ ವಾಕ್ಕು ದಣಿಯಲಿಲ್ಲ ? ಎಲ್ಲವರ ವಾಕ್ಕು ದಣಿದು ಹೋಯಿತು ಎಂಬ ತಾತ್ಪರ್ಯ.

ಕಿಂಚ । ಶ್ಲೋ । ಸಮಗ್ರಾಹಿಹರೇರ್ವೇದೈಃಸಮಗ್ರಾಹಿಗುಣಾವಳಿಃ। ಪ್ರತ್ಯಕ್ಷೇಪಿಕುರತ್ವೇಸ್ಯಾಪ್ರತ್ಯಕ್ಷೇಪಿಚಸಂಶಯಃ ॥ ೨೭೯ ॥

ಟೀಕಾ || ಸಮಗ್ರೇತಿ || ಸಮಗ್ರಾಸಂಪೂರ್ಣಾ-ಹರೇರ್ಗುಣಾನಾಮಾವಳಿಃಪಙ್ತಿಃ ವೇದೈಸ್ಸಮ್ಯಕ್ ಅಗ್ರಾಹಿಗೃಹೀತಾ-ಅಸ್ಯಪ್ರತ್ಯಕ್ಷೇದರ್ಶನೇಸತಿಪರಶ್ವೋ ಅಪ್ರತ್ಯಕ್ಷೇವಿಷಯೇ ಸಂಶಯೋಯಂಪರೋವಾ ಪ್ರತ್ಯಕ್ಷೋವೇತ್ಯಾತ್ಮಕೋಪಿ- ಪ್ರತ್ಯಕ್ಷೇಪಿ ನಿರಸ್ತಃ-ಹಿರೇವಾರ್ಥೇ- ಪೂರ್ವತ್ರಪ್ರತಿ ಪೂರ್ವಾದ್ಗ್ರಹ್ಣಾತೇರುತ್ತರತ್ರ ಪ್ರತಿಪೂರ್ವಾತ್ ಕ್ಷಿಪತೇಶ್ಚಕರ್ಮಣಿಲುಙ್ ||

ಅರ್ಥ ॥ ಶ್ರೀ ಹರಿಯ ಗುಣಗಳೆಲ್ಲ ಸಂಪೂರ್ಣವಾಗಿ ವೇದಗಳಿಗೆ ಮಾತ್ರ ಗೋಚರವಾಗಿವೆ. ಈ ಶ್ರೀಹರಿಯ ಸ್ವರೂಪ ದೃಷ್ಟಿಗೋಚರವಾಗಲು ಅವನ ಅಪ್ರತ್ಯಕ್ಷವಾದ ಅಂದರೆ ಕಣ್ಣಿಗೆ ಬೀಳದ ರೂಪವನ್ನು ಕುರಿತು ಇರುವ ಸಂದೇಹವು ದೂರವಾಗುತ್ತದೆ.

ಮೂ। ಅಹೋಮಹೋನ್ನತಸ್ಯಾಪ್ಯಸ್ಯಸೌಲಭ್ಯಂಕನಕಕುಸುಮಸ್ಯ ಸೌರಭ್ಯಮಿವರಸಿಕೇಭ್ಯಸ್ಸ್ವದತೇ ॥ ೨೮೦ ॥

ಟೀಕಾ || ಅಹೋ ಇತಿ|| ಮಹೋನ್ನತಸ್ಯ ಸರ್ವೋನ್ನತಸ್ಯಾಪಿ-ಅಸ್ಯವೇಂಕಟೇಶ್ವರಸ್ಯ-ಸೌಲಭ್ಯಂ ಸುಲಭತ್ವಂ- ಕನಕಮಯಸ್ಯ ಕುಸುಮಸ್ಯ-ಸ್ವದತೆರೋಚತೆ ||

ಅರ್ಥ ॥ ಕೇಳಿರೈಯಾ, ಇವನು ಮಹಾ ದೊಡ್ಡವನಾದಾಗ್ಯೂ ಇವನ ಸುಗಮತ್ವವು ಸ್ವರ್ಣಪುಷ್ಪದ ಸುಗಂಧದೋಪಾದಿ ಗುಣಗ್ರಾಹಿಗಳಿಗೆ ಸವಿಯಾಗಿದೆ.

ಶ್ಲೋ । ಪ್ರಚಂಡವಿಶ್ವಕಂಟಕಪ್ರಖಂಡನೈಕಪಂಡಿತಃಪತಂಗಮಂಡಲೇವಸನ್ಯಪಿಪ್ರಶಾಂತವಪ್ರಿಯಃ। ಅಕುಂಠರೀತಿಕಃಪ್ರಸನ್ನಪುಂಡರೀಕಲೋಚನಃಸಕುಂಡಲೀಂದ್ರಭೂಧರಪ್ರಕಾಂಡಮಂಡನಾಯತೆ ॥ ೨೮೧ ॥

ಟೀಕಾ ॥ ಪ್ರಚಂಡೇತಿ ॥ ಪ್ರಚಂಡಾನಾಂ ದಾರುಣಾನಾಂ ವಿಶ್ವಕಂಟಕಾನಾಂ ಜಗಚ್ಛತ್ರೂಣಾಂ ಪ್ರಖಂಡನೇ ಏಕಂ ಕೇವಲಂ—ಪಂಡಿತಃ ನಿಪುಣಃ—ಯುವಿಷಃ ಪಾಂಡವಪ್ರಿಯಃ ಭಗವಾನ್ ಪತಂಗಮಂಡಲೇ ಸೂರ್ಯಬಿಂಬೇ—ವರ್ಸ್ ಪ್ರಕಾಶತ ಇತಿಶೇಷಃ—ಅಖಂಡರೀತಿಕಃ ಸ್ಥಿರ ಮರ್ಯಾದಃ ಪ್ರಸನ್ನೈ ಪ್ರಸಾದಾನ್ವಿತೇ ಪುಂಡರೀಕೇ ಶ್ವೇತಪದ್ಮೇ ಇವಲೋಚನೇಯಸ್ಯ— ಸಭಗವಾನ್— ಕುಂಡಲೀಂದ್ರ ಭೂಧರಪ್ರಕಾಂಡಸ್ಯ ಶೇಷಶೈಲ ಶ್ರೇಷ್ಠಸ್ಯ ಮಂಡನಾಯತೇ ಭೂಷಣಮಿವ ಆಚರತಿತತ್ರವಸತೀತ್ಯರ್ಥಃ ॥ ಪಂಚಚಾಮರಂ ವೃತ್ತಂ ॥ ಲಘುರ್ಗುರುನಿರಂತರಂ ಭಜೇತಪಂಚ ಚಾಮರಂ ॥

ಅರ್ಥ॥ ಭಯಂಕರವಾದ ಲೋಕಶತ್ರುಗಳನ್ನು ಹನನ ಮಾಡುವದರಲ್ಲಿ ಅದ್ವಿತೀಯ ಜಾಣತನ ಉಳ್ಳಂಥಾವನಾದ, ಸೂರ್ಯಬಿಂಬದಲ್ಲಿ ಇಂಬುಗೊಂಡು ಹೊಳೆಯುವಂಥಾವನಾದ, ಪಾಂಡವರ ಮಿತ್ರನಾದ, ಎಂದಿಗೂ ಮರ್ಯಾದೆ ಮುರಿಯದಂಥಾವನಾದ, ಕಮಲದಂತೆ ಒಲುಮೆಯುಳ್ಳ ಕಣ್ಣುಗಳುಳ್ಳಂಥಾವನಾದ ಭಗವಂತನು ಈ ಶ್ರೇಷ್ಠವಾದ ಶೇಷಾಚಲ ಬೆಟ್ಟವನ್ನು ಅಲಂಕರಿಸಿ ಅದರ ಮೇಲೆ ವಾಸಮಾಡುತ್ತಾನೆ.

ಮೂ । ಅವಲೋಕಯತಾವದುರಗವರಧರಣೀಧರಶಿರೋಮಣೇ
ಶ್ಚಕ್ರಪಾಣೇ *ರನಿತರಸುಕರವರನಿಕರವಿತರಣಕೌಶಲಮತಿಪೇಶ
ಲಂ॥ ೨೮೨ ॥

ಟೀಕಾ ॥ ಅವಲೋಕಯೇತಿ ॥ ಉರಗವರಧರಣೀಧರಶಿರೋಮಣೇಃ ಶೇಷಶೈಲಭೂಷಣಸ್ಯ— ಅತಿಪೇಶಲಂ ಭೃಶಂ ಮೃದು ಇತರೈರ್ದೇವೈಃ ಅಸುಕರಸ್ಯ ಅನಿತರಸುಕರಸ್ಯ ವರನಿಕರಸ್ಯ ವಿತರಣೆ ಕೌಶಲಂ ನಿಪುಣತ್ವಂ ॥

ಅರ್ಥ ॥ ನೋಡು ಈ ಶೇಷಾಚಲ ಪರ್ವತಶಿಖರಕ್ಕೆ ರತ್ನವಾದಂಥ ಈ ಚಕ್ರಪಾಣಿಯು ವರಗಳನ್ನು ಕೊಡುವದರಲ್ಲಿ ಎಷ್ಟು ಮೃದುವಾದ ಔದಾರ್ಯ ಉಳ್ಳವನು! ಅಂಥ ಔದಾರ್ಯವು ಇತರ ದೇವತೆಗಳಿಗೆ ಸಾಧ್ಯವಲ್ಲವು.

ಶ್ಲೋ । ಮೂಕಾರಬ್ಧಂಕವಮಪಿಬಧಿರಾಃಶ್ಲೋಕಮಾಕರ್ಣಯಂ
ತಿಶ್ರದ್ಧಾಳುಸ್ತಂವಿಲಿಖತಿಕುಣಿಃಶ್ಲಾಘಯಾವೀಕ್ಷತೇಂಧಃ । ಅ
ಧ್ಯಾರೋಹತ್ಯಹಹಸಹಸಾಪಂಗುರಪ್ಯದ್ರಿಶೃಂಗಂ †ಸಾಂದ್ರಾ
ಲಸ್ಯಾಶಿಶುಭರಣತೋಮಂದಮಾಯಾತಿವಂಧ್ಯಾ ॥ ೨೮೩ ॥

ಟೀಕಾ ॥ ಮೂಕೇತಿ ॥ ಬಧಿರಾಃಶ್ರೋತ್ರವಿಕಲಾಃ ಮೂಕೇನ ವಾಗ್ವಿಕಲೇನ ಆರಬ್ಧಂ ನಿರ್ಮಿತಂ ಕವ

* ಅತಿತರ ಇತಿಪಾಠಾಂತರಂ ॥ † ಸಾಂದ್ರಾಲಸ್ಯಾಃ ಶಿಶುಭರಣಾತ್ತೊ ಮಂದಮಂದಂತಿವಂಧ್ಯಾಃ ಇತಿಪಾಠಾಂತರಂ ॥ ಏತದೇವಯುಕ್ತಮಿತಿಪ್ರತಿಭಾತಿಯದ್ಯಪಿಟೀಕಾಕೃತಾ "ಮಂದಮಾಯತಿ" ಇತಿಪಾಠಮಾಶ್ರಿತ್ಯವ್ಯಾಖ್ಯಾನಂ ಕೃತಂತಥಾಪಿ ಸಾಂದ್ರಾಲಸ್ಯಾಃ ವಂಧ್ಯಾಃ ಶಿಶು ಭರಣಾತಃ ಬಹೂನಾಂ ಶಿಶೂನಾಂ ಪೋಷಣಾತಃ ಮಂದಮಂದಂತಿ ಮಂದಾಭವಂತಿ ಇತ್ಯಾಸ್ಯೈವಸ್ವಾರಸ್ಯಾತ್ ಇತಿ ಸುಧಿಯೋವಿದಾಂ ಕುರ್ವಂತು ॥

ಪಿಪಿಕಂ-ಶ್ಲೋಕಂಪದ್ಯಂ–ಆಕರ್ಣಯಂತಿ–ತಂಶ್ಲೋಕಂ--ಕುಣಿರ್ಹಸ್ತವಿಕಲಃ–ಶ್ರದ್ಧಾಳುಃ ಶ್ರದ್ಧಾನ್ವಿತಸ್ಸ–ವಿಲಿಖತಿ–ತಂಚ–ಅಂಧಃ ಶ್ಲಾಘಯಾಉಪಲಕ್ಷಿತಃ ವೀಕ್ಷತೇ–ಕಿಂಚ–ಪಂಗುಃ ಪಾದವಿಕಲೋಪಿ–ಅದ್ರೇಶ್ಶೇಷಶೈಲಸ್ಯಶೃಂಗಂ ಶಿಖರಂ–ಸಹಸಾ–ಅಧ್ಯಾರೋಹತಿ–ವಂಧ್ಯಾತುಶಿಶುಭರಣಾತಃ ಸಾಂದ್ರಾಲಸ್ಯಾಸತೀ–ಮಂದಂಶನೈಃ–ಅದ್ರಿಶೃಂಗಂ ಅಧ್ಯಾರೋಹತಿ–ಅಹಹೇತಿ ಸರ್ವತ್ರಯೋಜ್ಯಂ– ಮೂಕಾದಯಸ್ತ್ವಭೀಷ್ಟಮರ್ಥಂ ಭಗವತ್ಪ್ರಸಾದಾಲ್ಲಬ್ಧ್ವಾತಥಾತಥಾ ಚಕ್ರುರಿತಿಕಥಾಃ ಪುರಾಣೇ ಪ್ರಸಿದ್ಧಾಃ ||

ಅರ್ಥ || ಈ ವೆಂಕಟೇಶ ಸ್ವಾಮಿಯ ಅನುಗ್ರಹದಿಂದ ಮೂಕನೆಂದರೆ ವಾಚಹೀನನು ರಚಿಸಿದ ಒಂದು ಶ್ಲೋಕವನ್ನು ಕಿವುಡರು ಕೇಳುತ್ತಾರೆ, ಆ ಶ್ಲೋಕವನ್ನು ಕೈ ಇಲ್ಲದವನು ಬರೆಯುತ್ತಾನೆ. ಕುರುಡನು ಹೊಗಳಿಕೆಯಾಗಿ ನೋಡುತ್ತಾನೆ; ಕುಂಟನು ಬಲದಿಂದ ಬೆಟ್ಟದ ಶಿಖರವನ್ನೇರುತ್ತಾನೆ; ಬಂಜೆಯು ಶಿಶುವಿನ ಭಾರ ಹೊತ್ತು ಕೊಂಡು ಅಲಸಿಕೆಯಿಂದ ಮೆಲ್ಲ ಮೆಲ್ಲನೆ ಹೆಜ್ಜೆಗಳಿಡುತ್ತಾ ಪರ್ವತದ ಮೇಲೆ ಬರುತ್ತಾಳೆ.

ಮೂ | ಸರ್ವತಃಪರ್ವತಮವಲೋಕ್ಯಸಶ್ಲಾಘಂ ||

ಅರ್ಥ || ಎಲ್ಲ ಕಡೆಯಿಂದಲೂ ಬೆಟ್ಟವನ್ನು ನೋಡಿ ಸ್ತುತಿಪರವಾಗಿ ( ವಿಶ್ವಾವಸು ) ಹೇಳುತ್ತಾನೆ.

ಶ್ಲೋ|ಸರ್ವೋತ್ತುಂಗಶ್ಶ್ರಿತಶುಭಗುಹಸ್ಸಾಧ್ವಭಿಖ್ಯಾತ *ಸೀತೋ
ಭಾಸ್ವದ್ವಂಶೋಪಚಯಜನಕಸ್ಸಾನುಜಸ್ಫೂರ್ತಿಕೋಯಃ† |
‡ಏನಂನೂನಂಕ್ಷಿತಿಭೃತಂ §ಮಿಯಂಜಾನತೀಜಾನಕೀಶಂಕೀಶಶ್ರೇ
ಣೀಕಲಯಶರಣೀಕುರ್ವತೀವರ್ವರೀತಿ || ೨೭೪ ||

ಟೀಕಾ || ಸರ್ವೇತಿ || ಯತಃ –ಯಃಶೇಷಶೈಲಃ–ಸರ್ವೇಭ್ಯಃ ಉತ್ತುಂಗಃ ಉನ್ನತಃ– ಶ್ರಿತಃ ಶುಭಃ ಗುಹಃ ನಿಷಾದಾಧಿಪಃ ಶ್ರಿತಾಶ್ಶುಭಾಗುಹಾಶ್ಚಯಸ್ಮಿನ್ ಸಃ– ಸಾಧುಭಿರಭಿಖ್ಯಾತಾ ಶ್ಲಾಘಿತಾಸೀತಾ ಜಾನಕೀಲತಾ ವಿಶೇಷಶ್ಚಯಸ್ಮಿನ್ ಸಃ– ಸೀತಾಲತಾಸುರನದೀ ಜಾನಕೀಹಲವರ್ತ್ಮಸು ಇತಿಕೋಶಃ–ಭಾಸತಃ ಸೂರ್ಯಸ್ಯ ವಂಶಸ್ಯ ಕುಲಸ್ಯ– ಭಾಸ್ವತಾಂ ಕಾಂತಿಮತಾಂ ವಂಶಾನಾಂ ವೇಣೂನಾಂ ಉಪಚಯಜನಕಃ ವೃದ್ಧಿಕಾರಕಃ– ಅನುಜಾನಾಂ ಭರತಾದೀನಾಂ ಸ್ಫೂರ್ತ್ಯಾ ಪ್ರಕಾಶನೇನ ಸಹಿತಃ ಸಾನುಜಸ್ಫೂರ್ತಿಃ ಸಾನುಭ್ಯೋಜಾತಾಪ್ರಸ್ಥಸಂಭವಾ ಸ್ಫೂರ್ತಿರ್ಯಸ್ಯೇತಿಚ– ತತಃಕಪ್ರತ್ಯಯಃ– ತತಸ್ತಂ ಏನಂ ಕ್ಷಿತಿಭೃತಂ ರಾಜಾನಂ ಪರ್ವತಂಚ– ಜಾನಕೀಶಂ ಶ್ರೀರಾಮಂ ಜಾನತೀ ಅತಏವ ಇಯಂಕೀಶಶ್ರೇಣೀವಾನರಪಂಕ್ತಿಃ ಶರಣೀಕುರ್ವತೀ ರಕ್ಷಕಂ ಕುರ್ವತೀ ನಿವಾಸಂಕುರ್ವತೀಸತಿ–ವರ್ವರೀತಿ ಭೃಶಂ ಆ ವೃಣೋತಿ–ವೃಣೋತೇರ್ಯಙ್ಲುಕ್–ಕಲಯ ಪಶ್ಯ ||

ಈ ಶ್ಲೋಕಕ್ಕೆರಡು ಅರ್ಥಗಳು.

ಅರ್ಥ || ೧. ಈ ಶೇಷಾಚಲ ಪರ್ವತವು ಎಲ್ಲಕ್ಕಿಂತಲೂ ಶ್ರೇಷ್ಠವಾದದ್ದು. ಶ್ರಿತ ಶುಭ ಗುಹಃ ಅಂದರೆ ಕಲ್ಯಾಣಕರವಾದ ಗುಹೆಗಳಿಂದ ಆಶ್ರಯಿಸಲ್ಪಟ್ಟಂಥಾದ್ದು. ಸಾಧ್ವಭಿ

* ಶೀಲ † ಅಯಮ್ ‡ ಏವಮ್ § ಅಮುಮ್ ಇತಿಪಾಠಾಂತರಾಣಿ ||

ಖ್ಯಾತಸೀತಃ ಅಂದರೆ ಸಾಧುಗಳಿಂದ ಶ್ಲಾಘಿಸಲ್ಪಡುವ ಸೀತಾ ಒಂದು ಜ್ಯಾತಿಯ ಬಳ್ಳಿಗಳಿರುವಂಥಾದ್ದು. ಭಾಸ್ವದ್ವಂಶೋಪಚಯಜನಕಃ ಅಂದರೆ ಶೋಭಾಯಮಾನವಾದ ವೇಣುಗಳ ವೃದ್ಧಿಯನ್ನು ಮಾಡುವಂಥಾದ್ದು, ಸಾನುಜಸ್ಫೂರ್ತಿಕಃ ಅಂದರೆ ಶಿಖರದ ಮೇಲಿನ ಶಿಲೆಗಳ ಹೊಳೆಯುವಿಕೆಯಿಂದ ಎಸೆಯುವಂಥಾದ್ದು, ಆದದರಿಂದ ಈ ಪರ್ವತವನ್ನು ಅರಸು ಎಂದು ತಿಳಿದು ಮಂಗಗಳ ವರ್ಗವು ಅದಕ್ಕೆ ಮರೆ ಹೊಕ್ಕು ಪುನಃ ಪುನಃ ಆವರಿಸುತ್ತದೆ.

೨. ಈ ಶೇಷಾಚಲನು ಎಲ್ಲಕ್ಕಿಂತಲೂ ಉನ್ನತವಾದವನು; ಶ್ರಿತಶುಭಗುಹಃ ಅಂದರೆ ಪಾವನನಾದ ಬ್ಯಾಡರ ಅರಸು ಗುಹನಿಂದ ಆಶ್ರಯಿಸಲ್ಪಟ್ಟವನು; ಸಾಧ್ವಭಿಖ್ಯಾತಸೀತಃ ಅಂದರೆ ಸಾಧುಗಳಿಂದ ಸ್ತುತಿಸಲ್ಪಟ್ಟ ಸೀತಾದೇವಿಯಿಂದ ಯುಕ್ತನು; ಭಾಸ್ವದ್ವಂಶೋಪಚಯಜನಕಃ ಅಂದರೆ ಸೂರ್ಯವಂಶದ ವೃದ್ಧಿಗೆ ಹೇತುವಾದವನು; ಸಾನುಜಸ್ಫೂರ್ತಿಕಃ ಅಂದರೆ ತಮ್ಮಂದಿರರುಗಳಾದ ಭರತಲಕ್ಷ್ಮಣರೇ ಮೊದಲಾದವರ ಪ್ರಕಾಶದಿಂದ ಕೂಡಿರುವವನು; ಆದದರಿಂದ ಇವನು ಜಾನಕಿ ಪತಿ ಎಂದು ತಿಳಿದು ಕಪಿಗಳೆಲ್ಲ ಇವನ ಮರೆಹೊಕ್ಕು ಯಾವಾಗಲೂ ಇವನನ್ನು ಆವರಿಸಿ ಕೊಂಡಿರುವರು.

ಶ್ಲೋ। ಪ್ರಕಾಶಬಹುಪಾದವತ್ಯಪಿಫಣಿಕ್ಷಮಾಭೃತ್ಯ *ತ್ರಃಪ್ರಕಾ
ಮಮುಪಲೋಕ್ಯತೇಪರಮಮನ್ಯದತ್ಯದ್ಭುತಂ । ನಿಜೋರಸಿ †ಪ
ಯೋಧರಶ್ಚಿರಮಚಂಚಲಾಂವಿದ್ಯುತಂಪಯೋಧರಮುರಸ್ಯಸಾವ
ಪಿಬಿಭರ್ತಿನಿತ್ಯಂನಿಜೇ॥ ೨೪೫॥

ಟೀಕಾ॥ ಪ್ರಕಾಶೇತಿ॥ ಪ್ರಕಾಶಾಃ ಬಹವಃ ಪಾದಾಃ ಪ್ರತ್ಯಂತಪರ್ವತಾಶ್ಚ ತದ್ವತಿ–ಫಣಿಕ್ಷಮಾಭೃತಿ ಸರ್ಪರಾಜೇ ಶೇಷಶೈಲೇಚ–ಅತಃ ಪೂರ್ವೋಕ್ತಾತ್-ಅಥವಾ ಅತಃ ಗೂಢಪಾದಸ್ಯ ಪ್ರಕಾಶ ಪಾದತ್ವಾದ್ವ್ಯಸ್ತಾದನ್ಯದಿತರತ್ ಪರಮಂ ಅತ್ಯದ್ಭುತಂ–ಪ್ರಕಾಮಮುಪಲೋಕ್ಯತೇ–ತತ್ಕಿಮಿತಿಚೇತ್-ಪಯೋಧರಃ ಮೇಘಃ–ನಿಜೇಉರಸಿ–ಅಚಂಚಲಾಂವಿದ್ಯುದ್ವಿನ್ಯಾಮಿತಿಚ ವಿದ್ಯುತಂಚಿರಂಬಿಭರ್ತಿ–ಸೇಯಂ ವಿದ್ಯುದಪಿ–ನಿಜೇಉರಸಿ–ಪಯೋಧರಂ-ಬಿಭರ್ತಿ–ಅತ್ರಮೇಘೌ ವಿಷ್ಣೋರ್ಲಕ್ಷ್ಮೀ ವಿದ್ಯುತೋಶ್ಚ ಪದದ್ವಯೇನ ವಿಷಯನಿಗರಣಾಂ ಮೇಘಸ್ತನಾನಾಂಚಶ್ಲೇಷ ಭಿತ್ತಿಕಾಭೇದಾಧ್ಯವಸಾಯಶ್ಚ ಕ್ರಮೇಣಬೋಧ್ಯಂ–ವಿರೋಧಾಭಾಸ ಸಜಾತಿಯ ಸಂಸೃಷ್ಟಿಃ॥

ಅರ್ಥ॥ ಸಮೀಪ ಬಹಳ ಗುಡ್ಡಗಳುಳ್ಳ ಈ ಶೇಷಾಚಲ ಪರ್ವತದ ಮೇಲೆ ಮತ್ತೊಂದು ಅತಿ ವಿಸ್ಮಯಕರವಾದದ್ದು ನೋಡುವಿಕೆಯಲ್ಲಿ ಬರುತ್ತದೆ. ಅದೇನೆಂದರೆ: ಪಯೋಧರನು ಅಂದರೆ ಮೇಘನು ತನ್ನ ಎದೆಯ ಮೇಲೆ ಅಚಂಚಲಾಂ ಅಂದರೆ ಚಪಲತ್ವ ಇಲ್ಲದ ವಿದ್ಯುಲ್ಲತೆ ಹೊತ್ತುಕೊಂಡಿರುತ್ತಾನೆ. ವಿದ್ಯುಲ್ಲತೆ ತನ್ನ ಎದೆಯ ಮೇಲೆ ಪಯೋಧರವನ್ನೂ ಹೊತ್ತುಕೊಂಡಿರುತ್ತದೆ. ಶೇಷಾಚಲ ಪರ್ವತದ ಮೇಲೆ ಶ್ರೀವಿಷ್ಣುವು ಲಕ್ಷ್ಮಿಯನ್ನು ವಕ್ಷಸ್ಥಳದಲ್ಲಿ ಸ್ಥಿರವಾಗಿ ಧರಿಸಿಕೊಂಡು ಇರುತ್ತಾನೆ ಎಂಬ ತಾತ್ಪರ್ಯವು.

---

* ಅದಂ † ಪಯೋಧರಮ್॥

ಮೂ॥ಇತಿವಿಮಾನಂದಕ್ಷಿಣತಸ್ಸಮಾನಯನ್ಸಾನಂದಂ। ವಿಲೋಕಯಸಖೇ ವಿಪಿನಾನಾಮಮೀಷಾಂ ಪರಮಂರಾಮಣೀಯಕಂ ॥ ೨೮೬ ॥

ಟೀಕಾ ॥ ಇತೀತಿ ॥ ವಿಪಿನಾನಾಂ ಅರಣ್ಯಾನಾಂ—ರಾಮಣೀಯಕಂ ಸೌಂದರ್ಯಂ ॥

ಅರ್ಥ ॥ ಈ ಪ್ರಕಾರ ವರ್ಣನೆ ಮಾಡಿ ವಿಮಾನವನ್ನು ತೆಂಕ ದಿಕ್ಕಿಗೆ ನಡಿಸಿ ಸಂತೋಷದಿಂದ ವಿಶ್ವಾವಸು ಹೇಳುತ್ತಾನೆ. ಎಲಾ ಮಿತ್ರನೇ ಈ ಅಡವಿಗಳು ಎಷ್ಟು ಸೊಗಸಾಗಿವೆ !

ಶ್ಲೋ। ಪುರಃಪುರೋಘನಂವನಂವನೇವನೇಮಹಾಗಿರಿಃಮಹಾಗಿರೌಮಹಾಗಿರೌವಿರಾಜತೇಗುಹಾಗೃಹಂ।ಗುಹಾಗೃಹೇಗುಹಾಗೃಹೇವಿಹಾರತತ್ಪರೋಹರಿಃ ಹರೌಹರೌನಿರಂಕುಶಃ ಕೃತೇಭಸಾಧ್ವಸೊಧ್ವನಿಃ ॥೨೮೭॥

ಟೀಕಾ ॥ ಪುರಇತಿ॥ ಪುರಃ ಪುರಃ ಅಗ್ರೇಅಗ್ರೇ—ಘನಂ—ವನಂ ಅರಣ್ಯಂ—ವಿರಾಜತಇತಿಸರ್ವತ್ರಯೋಜ್ಯಂ—ವನೇವನೇಪ್ರತಿವನಂ—ಮಹಾಪರ್ವತಃ—ಏವಮುಗ್ರೇಽಪಿ—ಗುಹಾಗೃಹಮಿವ— ವಿಹಾರೇಕ್ರೀಡಾಯಾಂತತ್ಪರಃ ಆಸಕ್ತಃ—ಹರಿಸ್ಸಿಂಹಃ—ನಿರಂಕುಶಃ ಅಪ್ರತಿಹತಃ—ಕೃತಂಇಭಾನಾಂಗಜಾನಾಂ ಸಾಧ್ವಸಂ ಭಯಂ ಏನಸಃ—ಧ್ವನಿಃ ॥

ಅರ್ಥ ॥ ಎದುರು ಎದುರಿಗೆ ದಟ್ಟವಾದ ಕಾಡುಗಳು, ಪ್ರತ್ಯೇಕ ಕಾಡಿನಲ್ಲಿ ದೊಡ್ಡ ದೊಡ್ಡ ಬೆಟ್ಟಗಳು, ಪ್ರತ್ಯೇಕ ಬೆಟ್ಟದಲ್ಲಿ ಮನೆಗಳಂತೆ ಗುಹೆಗಳು, ಪ್ರತ್ಯೇಕ ಗುಹೆಯಲ್ಲಿ ಎದುರಾಡುವವರಿಲ್ಲದ ಮತ್ತು ಗಜಗಳಿಗೆ ದಿಗಲು ಪಡಿಸುವಂಥಾ ಗರ್ಜನೆ ಮಾಡುವ ಸಿಂಹಗಳು ಕ್ರೀಡಾಸಕ್ತವಾಗಿ ಶೋಭಿಸುತ್ತವೆ.

ಕೃಶಾನುಃ ॥

ಮೂ। ಕಿಮರೇವರ್ಣಯಸ್ಯ *ಚಕ್ಷುಷ್ಯಾಣಿಮನುಷ್ಯಾಂಗಕಬಳನಚಪಲಚಂಡಪುಂಡರೀಕಾನನಾನಿಕಾನನಾನಿ ॥ ೨೮೮ ॥

ಟೀಕಾ ॥ ಕಿಮಿತಿ ॥ ಮನುಷ್ಯಾನಾಂ ಅಂಗಾನಾಂ ಕಬಳನಾರ್ಥಂಚಪಲಾನಿಸ್ಫುರಂತಿಚಂಡಾನಿ ಉಗ್ರಾಣಿ ಪುಂಡರೀಕಾಣಾಂ ವ್ಯಾಘ್ರಾಣಾಂ ಆನನಾನಿ ವಕ್ತ್ರಾಣಿ ಯೇಷುತಾನಿ—ಅತಏವಅಸ್ಮಿನ್ ಅಚಕ್ಷುಷ್ಯಾಣಿ ಅದರ್ಶನೀಯಾನಿ ॥

ಅರ್ಥ ॥ ಎಲಾ ಮಿತ್ರನೇ! ಮನುಷ್ಯರ ಶರೀರಗಳನ್ನು ನುಂಗಿಬಿಡುವ ಇಚ್ಛೆಯಿಂದ ಬಾಯಿಗಳನ್ನು ಕಳೆದು ಇರುವ ಹುಲಿಗಳುಳ್ಳಂಥಾ ಮತ್ತು ನೋಡಲಿಕ್ಕೆ ಅಯೋಗ್ಯವಾದಂಥಾ ಕಾಡುಗಳನ್ನು ಏನೆಂತ ಹೊಗಳುತ್ತೀ?

---

* ಅಚಾಕ್ಷುಷ್ಯಾಣೀತಿ ಪಾಠಾಂತರಂ ॥

ಶ್ಲೋ । ಇತಸ್ತಾವದ್ಗ್ರಾವವ್ಯತಿಕರಇತಸ್ಸಂತ್ಯಜಗರಾಇತೋ
ಲುಂಟಾಕಾನಾಂಸಮುದಯಇತಃಕಂಟಕಚಯಾಃ । ಇತೋವ್ಯಾ
ಘ್ರಾಉಗ್ರಾಜ್ವಲನಜನಕಾವೇಣವಇತೋವನಂಸಂಲಕ್ಷ್ಯೈತನ್ಮ
ನಇದಮಹೋಮೋಹಮಯತೇ ॥ ೨೪೯ ॥

ಟೀಕಾ ॥ ಇತಇತಿ ॥ ಇತಃ ಏತಸ್ಮಿನ್ ಪ್ರದೇಶೇ ಸಾರ್ವವಿಭಕ್ತಿಕಸ್ತಸಿಲ್—ಏವಮಗ್ರೇಪಿ-ತಾವಚ್ಛಬ್ದೋ ವಾಕ್ಯಾಲಂಕಾರೇ-ಗ್ರಾವ್ಣಾಂ ಪಾಷಾಣಾನಾಂ ವ್ಯತಿಕರಃ ರಾಶಿಃ ಸಂತೀತಿಯಥಾಯೋಗಂ ಸರ್ವತ್ರಯೋಜ್ಯಂ-ಅಜಗರಾಸ್ಸರ್ಪಭೇದಾಃ ಲುಂಟಾಕಾನಾಂ ಸಮುದಯಃ ಚೋರಸಮೂಹಃ ಕಂಟಕಾಸ್ತೀಕ್ಷ್ಣಾಗ್ರವೃಕ್ಷಾಂಗಾನಿ ಜ್ವಲನಜನಕಾಃ ಪರಸ್ಪರಘರ್ಷಣಾದ್ದಾವಾಗ್ನ್ಯುತ್ಪಾದಕಾಃ ಯತಸ್ತತಃ ಏತದ್ವನಂ ಸಂಲಕ್ಷ್ಯದೃಷ್ಟ್ವಾ—ಇದಂಮದೀಯಂಮನಃ—ಮೋಹಂಭಯಜನ್ಯಂ—ಅಯತೇಪ್ರಾಪ್ನೋತೀತಿ ॥

ಅರ್ಥ ॥ ಈ ಕಡೆಯಲ್ಲಿ ಕಲ್ಲುರಾಶಿಗಳು, ಆ ಕಡೆಯಲ್ಲಿ ಹೆಬ್ಬಾವುಗಳು, ಇಲ್ಲಿ ಕಳ್ಳರ ಹಿಂಡು, ಅಲ್ಲಿ ಮುಳ್ಳು ಮುಂತಾದವುಗಳು, ಇಲ್ಲಿ ಹುಲಿಗಳು, ಅಲ್ಲಿ ಕಾಡುಗಿಚ್ಚು ಹುಟ್ಟಿಸುವ ಬಿದರುಗಳು ಈ ಪ್ರಕಾರವಾಗಿರುವ ಈ ಅಡವಿಯನ್ನು ನೋಡಿ ನನ್ನ ಮನಸ್ಸು ದಿಗಲುಪಡುತ್ತದೆ.

ವಿಶ್ವಾವಸುಃ ॥

ಮೂ । ಸಖೆನಿಪುಣ *ನಿರೂಪಣತಏತೇಷಾಂ †ಗುಣಮಪಿಗೃಹಾಣ ॥ ೨೫೦ ॥

ಟೀಕಾ ॥ ಸಖಇತಿ ॥ ನಿಪುಣನಿರೂಪಣಾತಃ ಸಾರವಸ್ತುನಿವರ್ಣನಾದ್ಧೇತೋಃ ಏತೇಷಾಮರಣ್ಯಾನಾಂ ॥

ಅರ್ಥ ॥ ಗೆಳೆಯನೇ, ಸಾರಾ ಸಾರವಸ್ತು ನಿರೂಪಣದಿಂದ ಈ ಅಡವಿಗಳ ಗುಣಗಳನ್ನು ಕೂಡ ಎಣಿಸು.

ಶ್ಲೋ । ಅನಾಯಾಸಗ್ರಾಹ್ಯಾಣ್ಯವನಿಪತಿಭೋಗ್ಯಾನ್ಯಪಿಫಲಾ
ನ್ಯಯತ್ನೇನಪ್ರಾಪ್ಯಾಸ್ತ್ವ ‡ಪಿಸುದೃಗವೇಕ್ಷ್ಯಾಸ್ಸುಮನಸಃ ।
ಅಸೂರ್ಯಂ ಪಶ್ಯಾನ್ಯಪ್ಯಹಹಸುಲಭಾನ್ಯಶ್ಮಭವನಾನ್ಯರಣ್ಯಾನೀ
ಭಾಜಾಮತಿಪತತಿಭಾಗ್ಯಂಕಿಲಗಿರಃ ॥ ೨೫೧ ॥

ಟೀಕಾ ॥ ಅನಾಯಾಸೇತಿ ॥ ಅವನಿಪತಿಭಿಃ ನತುಸರ್ವೈರ್ಭೋಗ್ಯಾನ್ಯಪಿ ಫಲಾನಿಚೂತಪನಸಾದೀನಿ ಅನಾಯಾಸಂ ಅರ್ಥವ್ಯಯಂವಿನಾಪಿಗ್ರಾಹ್ಯಾಣಿಲಬ್ಧುಂಶಕ್ಯಾನಿ ಸುದೃಗ್ಭಿಃ ವಿಶಾಲಲೋಚನಾಭಿಃ ಅವೇಕ್ಷ್ಯಾದರ್ಶನೀಯಾ ಇತಿಮನೋಜ್ಞತ್ವಾತಿಶಯೋಕ್ತಿಃ ಅಪೇಕ್ಷ್ಯಾ ಇತಿಪಾಠೇ ಕಾಂಕ್ಷಣೀಯಾ ಇತ್ಯರ್ಥಃ ಸುಮನಸಃ ಪುಷ್ಪಾಣಿತು ಅಯತ್ನೇನಾಪಿಪ್ರಾಪ್ಯಾಃ ಅಸೂರ್ಯಂ ಪಶ್ಯಾನಿ ಅದೃಷ್ಟಸೂರ್ಯರಶ್ಮೀನಿ ಅಶ್ಮಭವನಾನಿ ಶಿಲಾಗೃಹಾಣಿ ಸುಲಭಾನಿ ಅಹಹೇತಿಸರ್ವತ್ರಯೋಜ್ಯಂ ಯತಸ್ತತಃ ಅರಣ್ಯಾನೀಭಾಜಾಂ ಮಹಾರಣ್ಯವಾಸಿನಾಂ ಭಾಗ್ಯಂಗಿರಃ ವಚಾಂಸಿ ಅತಿಪತತಿ ಅತಿಕ್ರಾಮತಿಕಿಲ ॥

---

* ನಿರೂಪಣೇನ † ಗುಣಾನಪಿ ಇತಿಪಾಠಾಂತರೆ॥ ‡ ನೃಪಸುದೃಗಪೇಕ್ಷ್ಯಾಃ ಇತಿಪಾಠಾಂತರಂ॥

ಅರ್ಥ ॥ ಈ ಅರಣ್ಯದಲ್ಲಿ ಅರಸುಗಳಿಂದ ಉಪಭೋಗಿಸಲ್ಪಡಲಿಕ್ಕೆ ಯೋಗ್ಯವಾದ ಹಣ್ಣುಗಳು ದುಡ್ಡುಕೊಡದೆ ದೊರೆಯುತ್ತವೆ. ವಿಶಾಲಲೋಚನೆಗಳುಳ್ಳ ಸ್ತ್ರೀಯರುಗಳಿಂದ ನೋಡಲಿಕ್ಕೆ, ಅಥವಾ ಅಪೇಕ್ಷಿಸಲ್ಪಡಲಿಕ್ಕೆ ಯೋಗ್ಯವಾದ ಹೂಗಳು ಸುಲಭವಾಗಿ ಶಿಗುತ್ತವೆ. ಸೂರ್ಯಕಿರಣಗಳು ಹೊಗದ ಶಿಲಾಗೃಹಗಳು ಸುಲಭವಾಗಿ ಅಂದರೆ ಬಾಡಿಗೆಯಿಲ್ಲದೆ ಲಭ್ಯವಾಗುತ್ತವೆ. ಅಹಹ! ಈ ಅರಣ್ಯದಲ್ಲಿ ಒಕ್ಕಲಾಗಿರುವವರ ಪುಣ್ಯವು ಹೇಳಲಳವಲ್ಲವು.

ಮೂ । ಅಪಿಚ । ಶ್ಲೋ । ಗಹನಗುಹಾವಿಹಾರಿಹರಿಪಾಣಿರುಹಾಭಿಹತದ್ವಿರದಶಿರಸ್ತಟೋದ್ಗಳಿತಮೌಕ್ತಿಕಸಂಹತಿಭಿಃ । ಅಹಹವಿಭೂಷಿತೈರಿಹಗಿ *ರೌವಿಹರಂತಿಸುಖಂಸಮಮಬಲಾಜನೈರತಿವಿಲಾಸಪರಾಶ್ಶಬರಾಃ ॥ ೫೨ ॥

ಟೀಕಾ ॥ ಗಹನೇತಿ ॥ ರತಿವಿಲಾಸೇಷುಪರಾಃ ಆಸಕ್ತಾಃ ಅತಏವಶಬರಾಃ ಮ್ಲೇಚ್ಛವಿಶೇಷಾಃ ವನಚರಾಃ_ಗಹನಗುಹಾಸು ವಿಹಾರಿಣಾಂ ಅಥವಾ ಗಹನೇಷು ಅರಣ್ಯೇಷು ಗುಹಾಸುಚವಿಹಾರಿಣಾಂ ಹರೀಣಾಂ ಸಿಂಹಾನಾಂ ಪಾಣಿರುಹೈಃ ನಖೈಃ ಅಭಿಹತಾನಾಂ ವಿದಾರಿತಾನಾಂ ದ್ವಿರದಾನಾಂ ಗಜಾನಾಂ ಶಿರಸ್ತಟಾತ್ ಕುಂಭಸ್ಥಲಾತ್ ಉದ್ಗಳಿತಾನಾಂ ಚ್ಯುತಾನಾಂ ಮೌಕ್ತಿಕಾನಾಂ ಮುಕ್ತಾಫಲಾನಾಂ ಸಂಹತಿಭಿಃ ರಾಶಿಭಿಃ_ವಿಭೂಷಿತೈರಲಂಕೃತೈರಬಲಾಜನೈಸ್ಸಮಂ_ಇಹಗಿರೌ ಶೇಷಶೈಲೇ_ವಿಹರಂತಿಕ್ರೀಡಂತಿ ॥

ಅರ್ಥ ॥ ಅಪ್ರವೇಶ್ಯವಾದ ಗುಹೆಗಳಲ್ಲಿ ಕ್ರೀಡಿಸುವ ಸಿಂಹಗಳ ಉಗುರುಗಳಿಂದ ಶೀಳಲ್ಪಟ್ಟ ಆನೆಗಳ ಕುಂಭಸ್ಥಳಗಳಿಂದ ಸೋರ್ದ ಮುತ್ತುಗಳ ರಾಶಿಗಳಿಂದ ಅಲಂಕೃತರಾದ ಹೆಂಣ್ಗಳಿಂದೊಡಗೂಡಿ ಅತ್ಯಂತ ಕ್ರೀಡಾಸಕ್ತರಾದ ಬ್ಯಾಡರು ಈ ಮಲೆಯಲ್ಲಿ ನಿರ್ಭಯವಾಗಿ ವಿನೋದದಿಂದ ಹೊತ್ತುಗಳೆಯುತ್ತಾರೆ.

ಮೂ । ಇತಿಪ್ರೇಮಯಾನಂದಕ್ಷಿಣತಃಪ್ರಾಪಯ್ಯಪುರತೋ ನಿರ್ದಿಶ್ಯ ॥

ಅರ್ಥ ॥ ಇಂತೆಂದು ವಿಮಾನವನ್ನು ದಕ್ಷಿಣದಿಕ್ಕಿಗೆ ನಡಿಸಿ ಸಂತೋಷದಿಂದ ಕೈಗಳನ್ನು ಜೋಡಿಸಿ ( ವಿಶ್ವಾವಸು ನುಡಿಯುತ್ತಾನೆ. )

ಶ್ಲೋ । ಕಂಠೋಪರಿಕಂಠೀರವಶುಚಿದಂಷ್ಟ್ರಾರುಚಿವಿಚಿತ್ರಚಂದ್ರಿಕಯಾ । ಸ್ಫಟಿಕಾಚಲಇವನಯನೇಘಟಿಕಾಚಲ ಏಷಸಂಪ್ರತಿಧಿನೋತಿ ॥ ೫೩ ॥

ಟೀಕಾ ॥ ಕಂಠೇತಿ ॥ ಕಂಠಸ್ಯ ಉಪರಿಕಂಠೀರವಸ್ಯ ಸಿಂಹರೂಪಸ್ಯ ಸಂಬಂಧಿನೀನಾಂ ಶುಚೀನಾಂ

* ಚಿರಂ ಇತಿಪಾಠಾಂತರಂ ॥

ಧವಳಾನಾಂ ದಂಷ್ಟ್ರಾಣಾಂ ಸ್ಥೂಲಾಯತದಂತಾನಾಂ ರಜ್ಯಾ ಕಾಂತ್ಯೈವ ವಿಚಿತ್ರಯಾ ಅದ್ಭುತಯಾ ಚಂದ್ರಿಕಯಾ–ಸ್ಫಟಿಕ ಮಯಾಚಲ ಇವಸ್ಥಿತ ಏಷಘಟಿಕಾಚಲಃ ನೃಸಿಂಹನಿವಾಸಃ–ಭಾಷಾಯಾಂ ಚೋಳಂಗಿವರ ನಾಮಾ–ನಯನೇ ಸಂಪ್ರತಿ ಧಿನೋತಿ ಸಂತೋಷಯತಿ ||

ಅರ್ಥ || ಕೊರಳಿನ ಮೇಲೆ ಸಿಂಹರೂಪದ ಬಿಳೀ ಕೋರೆ ದಾಡಿಗಳ ಹೊಳಪೆಂಬ ಬೆಳದಿಂಗಳಿಂದ ಈ ಸಮಯದಲ್ಲಿ ಈ ಘಟಿಕಾಚಲ ಪರ್ವತವು ಸ್ಫಟಿಕಾಚಲದಂತೆ ಕಣ್ಣುಗಳಿಗೆ ಸುಖಕೊಡುತ್ತೆ.

ಮೂ । ಸಭಕ್ತಿಪ್ರಕರ್ಷಮಂಜಲಿಂಬಧ್ವಾ ॥

ಅರ್ಥ || ಅರಳಿದ್ದ ಪ್ರೀತಿಯಿಂದ ಕೈಗಳನ್ನು ಜೋಡಿಸಿ, ವಿಶ್ವಾವಸು ಹೇಳುತ್ತಾನೆ.

ಶ್ಲೋ । ವರಕೇತುಸ್ಥತಾರ್ಕ್ಷ್ಯಾಯಸ್ಮರಕೇಳಿಪುಷೇಶ್ರಿಯಃ । ನರಕೇಕ್ಷಣವಿಘ್ನಾಯನರಕೇಸರಿಣೇನಮಃ ॥ ೭೯ ॥

ಟೀಕಾ || ವರೇತಿ || ವರೇ ಕೇತೌ ತಿಷ್ಠತೀತಿಸ್ಥಃ ತಾರ್ಕ್ಷ್ಯಃ ಗರುತ್ಮಾನ್ಯಸ್ಯ ತಸ್ಮೈ– ಶ್ರಿಯಃ ಸ್ಮರಕೇಳಿಪುಷೇ ಲಕ್ಷ್ಮೀಸಂಭೋಗವರ್ಧನಾಯ– ನರಕಸ್ಯ ಈಕ್ಷಣೇ ವಿಘ್ನಾಯ ಪ್ರತಿಬಂಧಕಾಯ ತದ್ಭಕ್ತಾನಾಂ ನರಕದರ್ಶನಂ ನಾಸ್ತೀತಿಭಾವಃ ನರಕೇಸರಿಣೇ ನೃಸಿಂಹಾಯ–ನಮಃ ಅಸ್ತು ||

ಅರ್ಥ || ಯಾವಾತನ ಶ್ರೇಷ್ಠವಾದ ಬಾವಟೆಯ ಮೇಲೆ ಗರುಡನಿರುತ್ತಾನೋ, ಯಾವಾತನಿಂದ ಶ್ರೀ ಲಕ್ಷ್ಮೀದೇವಿಯ ರತಿಸುಖವೃದ್ಧಿ ಬಡುತ್ತದೆಯೋ, ಯಾವಾತನು ತನ್ನ ಭಕ್ತರು ನರಕ ನೋಡದಂತೆ ಮಾಡುತ್ತಾನೋ, ಅಂಥಾ ನರಸಿಂಹ ಸ್ವಾಮಿಗೆ ನಮಸ್ಕಾರವಿರಲಿ.

ಮೂ।ಕಿಂಚ। ಶ್ಲೋ। ಸ್ಥಿರಶಂಖಾದಿಚಿಹ್ನಾಯಸುರಸಂಘಾರ್ಚಿತಾಂಘ್ರಯೇ। ಪುರಸಂಹಾರದಕ್ಷಾಯನರಸಿಂಹಾಯಮಂಗಳಂ॥೮೦॥

ಟೀಕಾ || ಸ್ಥಿರೇತಿ|| ಸ್ಥಿರಶಂಖಾದಿಚಿಹ್ನಾಯ ಸುರಸಂಘಾರ್ಚಿತಾಂಘ್ರಯೇ–ಅತಏವ–ಪರೇಷಾಂ ಶತ್ರೂಣಾಂ ಸಂಹಾರೇದಕ್ಷಾಯಸಮರ್ಥಾಯ–ನರಸಿಂಹಾಯಮಂಗಳಂ ||

ಅರ್ಥ || ಸ್ಥಿರವಾದ ಶಂಖಚಕ್ರಾದಿ ಗುರುತುಗಳುಳ್ಳ ದೇವಸಮುದಾಯದಿಂದ ಪೂಜಿಸಲ್ಪಡುವ ಅಡಿಗಳುಳ್ಳ, ಶತ್ರುಗಳನ್ನು ನಾಶಪಡಿಸುವದರಲ್ಲಿ ಸಮರ್ಥನಾದ ಶ್ರೀ ನರಸಿಂಹ ಸ್ವಾಮಿಗೆ ಜಯವಿರಲಿ.

ಶ್ಲೋ। ಜಂಭದಂಭಹರಕ್ಷೇಮಾರಂಭಲಂಭಕಮೂರ್ತಯೇ। ಶಂಭುಸಂಭಾವನೀಯಾಯಸ್ತಂಭಡಿಂಭಾಯಮಂಗಳಂ ॥ ೮೧ ॥

ಟೀಕಾ || ಜಂಭೇತಿ|| ಜಂಭಸ್ಯರಕ್ಷಸಃ ದಂಭಂಗರ್ವಂ ಹರತೀತಿ ಜಂಭಹರಸ್ಯ ಇಂದ್ರಸ್ಯಕ್ಷೇಮಸ್ಯ ಆರಂಭಾಣಾಂ ಕರ್ಮಣಾಂ ಲಂಭಕಾಸಂಪಾದಿಕಾ ಮೂರ್ತಿಶ್ಶರೀರಂ ಯಸ್ಯತಸ್ಮೈ– ಹಿರಣ್ಯಕಶಿಪುಮಾರಣೇನಮಧ್ಯಮಲೋಕೇಯಜ್ವನಾಂ ಕರ್ಮಪ್ರವೃತ್ತೇಃ ಇಂದ್ರಸ್ಯಕ್ಷೇಮಮಿತಿಭಾವಃ–ಶಂಭೋಃಸಂಭಾವನೀಯಾಯಪೂಜ್ಯಾಯ– ಸ್ತಂಭಸ್ಯ ಡಿಂಭಾಯಶಿಶವೇತತ್ರೋತ್ಪನ್ನಾಯೇತ್ಯರ್ಥಃ ಮಂಗಳಂ||

ಅರ್ಥ॥ ಜಂಭನೆಂಬ ರಾಕ್ಷಸನನ್ನು ಗೆದ್ದವನ ಅಂದರೆ ಇಂದ್ರನ ಕಲ್ಯಾಣ ಉಂಟು ಪಡಿಸುವಂಥಾ ಕೆಲಸಗಳನ್ನು ಸಾಧಿಸಿದ ಮೂರ್ತಿಯಾದ, ಶಿವನಿಂದ ಸನ್ಮಾನಿಸಲ್ಪಡಲಿಕ್ಕೆ ಯೋಗ್ಯನಾದ, ಪ್ರಹ್ಲಾದನ ರಕ್ಷಣಾರ್ಥವಾಗಿ ಕಂಭದಲ್ಲಿ ಪ್ರಕಟನಾದ ಈ ನರಸಿಂಹ ಸ್ವಾಮಿಗೆ ಮಂಗಳವಿರಲಿ.

ಕೃಶಾನುಃ॥

ಮೂ। ಕಿಮುರೆಕೋಧಮಯೇಪಿನರಮೃಗೇಂದ್ರೆಸ್ತವವಚನಂವಿರಚಯಸಿ॥ ೨೯೭॥

ಟೀಕಾ॥ ಕಿಮಿತಿ॥ ನರಮೃಗೇಂದ್ರೇನರಸಿಂಹ ವಿಷಯೇ– ಸ್ತವವಚನಂ ಸ್ತೋತ್ರವಾಕ್ಯಂ॥

ಅರ್ಥ॥ ಏನೆಲಾ? ಕಿಡಿಕೋಪಿಯಾದ ನರಸಿಂಹನ ಶ್ಲಾಘನೆ ಮಾಡುತ್ತೀಯಾ?

ಶ್ಲೋ। ಪ್ರಲ್ಹಾದಮಾಲ್ಹಾದಯಿತುಂತಮೇಕಂಸರ್ವಸ್ಯಕುರ್ವನ್ಭುವನಸ್ಯಭೀತಿಂ। ಸೈಂಹಂದಧೆಸಂಹನನಂಪುರಾಯಸ್ತವಸ್ತವಸ್ತತ್ರಕಥಂಪ್ರವೃತ್ತಃ॥ ೨೯೮॥

ಟೀಕಾ॥ ಪ್ರಲ್ಹಾದಮಿತಿ॥ ಯೋನರಸಿಂಹಃ– ತಂಪ್ರಸಿದ್ಧಂ–ಏಕಂ ಪ್ರಲ್ಹಾದಂ ಹಿರಣ್ಯಕಶಿಪುಪುತ್ರಂ ಭಕ್ತಂ– ಆಹ್ಲಾದಯಿತುಂ ಸಂತೋಷಯಿತುಂ– ಸರ್ವಸ್ಯಭುವನಸ್ಯಭೀತಿಂ ಕುರ್ವನ್ಸನ್– ಸೈಂಹಂ ಸಿಂಹಸಂಬಂಧಿ ಸಂಹನನಂ ಶರೀರಂ–ಪುರಾ–ದಧೆಧೃತವಾನ್ ತತ್ರನರಸಿಂಹೇವಿಷಯೆ ತವಸ್ತವಃ ಕಥಂ ಪ್ರವೃತ್ತಃ ಜಾತಃ॥

ಅರ್ಥ॥ ಹಿಂದೆ ಒಬ್ಬ ಪ್ರಲ್ಹಾದನಿಗೆ ಸಂತೋಷ ಪಡಿಸುವದಕ್ಕಾಗಿ ಸಿಂಹ ಶರೀದರವನ್ನು ಧರಿಸಿ ಇಡೀ ಲೋಕಕ್ಕೆ ದಿಗಲು ಹುಟ್ಟಿಸಿದಂಥಾತನಾದ ಈ ನರಸಿಂಹನನ್ನು ಹೊಗಳಿಸುವದಕ್ಕೆ ಹ್ಯಾಗೆ ನಿನಗೆ ಮನಸ್ಸಾಯಿತು?

ವಿಶ್ವಾವಸುಃ॥

ಮೂ। ವಯಸ್ಯಮೈವಂವಾದೀಃಯತಃ॥ ೨೯೯॥

ಅರ್ಥ॥ ಎಲಾ ಮಿತ್ರನೇ, ಹಾಗನ್ನಬೇಡ.

ಶ್ಲೋ।ಅಪುಣ್ಯಧೌರೇಯಹಿರಣ್ಯದೂನತ್ರಿಲೋಕಶೋಕಕ್ಷಪಣಾಯಶೌರಿಃ। ಕಾಯಾಧವಾಯಾಸರಾನಿಸ *ದಂಭಾತ್ಸ್ತಂಭಾದಿಹಾಜೃಂಭತಸಂಭ್ರಮೇಣ॥ ೩೦೦॥

ಟೀಕಾ॥ ಅಪುಣ್ಯೇತಿ॥ ಶೌರಿರ್ವಿಷ್ಣುಃ–ಅಪುಣ್ಯಾನಾಂ ಪಾಪಾತ್ಮನಾಂ ಧೌರೇಯೇಣ ಪ್ರಧಾನೇನ ಹಿರಣ್ಯೇನಹಿರಣ್ಯಕಶಿಪುನಾದೂನಾನಾಂ ದುಃಖಿತಾನಾಂ ತ್ರಿಲೋಕಾನಾಂ ಶೋಕಸ್ಯಕ್ಷಪಣಾಯನಾಶಂ ಕರ್ತುಂ– ಶುಮರ್ಥಾಣ್ಯೇತ್ಯಾದಿನಾಚತುರ್ಥೀ–ಕಾಯಾಧವಸ್ಯಕಯಾಧುಸುತಸ್ಯ ವಿಗತದೇಹಾಭಿಮಾನಸ್ಯವಾಪ್ರಹ್ಲಾದ

* ದಂಭಸ್ತಂಭಾದಿಹೋಜೃಂಭತ ಇತಿಪಾಠಾಂತರಂ॥

ಸ್ಯ ಆಯಾಸಸ್ಯಪಿತೃಕೃತಸ್ಯ ನಿರಾಸದಂಭಾತ್ ನಿವಾರಣವ್ಯಾಜಾತ್–ಸಂಭ್ರಮೇಣ–ಇಹಲೋಕೇ–ಸ್ತಂಭಾತ್ ಅಜೃಂಭತ ಆವಿರ್ಬಭೂವ– ತಥಾಚಸರ್ವಭುವನಸಂತೋಷಣ ಏವಾಯಂನತದ್ವಿಷಣಇತಿಭಾವಃ– ಪ್ರಹ್ಲಾದೋಹವೈಕಾಯಾಧವಇತಿಶ್ರುತಿಃ ||

ಅರ್ಥ ॥ ೧. ಪಾಪಿಗಳಲ್ಲಿ ಮೊದಲನೆಯವನಾದ ಹಿರಣ್ಯಕಶಿಪುವಿನಿಂದ ಬಾಧೆ ಪಡುತ್ತಿರುವ ಮೂಜಗತ್ತಿನ ದುಃಖವನ್ನು ಇಲ್ಲಪಡಿಸುವದಕ್ಕಾಗಿ ಶ್ರೀವಿಷ್ಣುವು ಪ್ರಲ್ಹಾದನ ಕಷ್ಟಗಳನ್ನು ಪರಿಹರಿಸುವ ನೆವನದಿಂದ ಸಂಭ್ರಮದೊಡನೆ ಕಂಭದೊಳಗಿಂದ ಪ್ರೈದೋರಿಕೊಂಡನು.

೨. ಪಾಪಗಳಲ್ಲಿ ಮೊದಲನೇದು ಹಣವು. ಅದರಿಂದ ದುಃಖಗೊಳುತ್ತಿದ್ದ ಮೂರುಲೋಕದ ವ್ಯಥೆಯನ್ನು ಪರಿಹರಿಸುವದಕ್ಕೆ ದೇಹಾಭಿಮಾನ ಬಿಟ್ಟಂಥ ವಿರಕ್ತನ ಕಷ್ಟಗಳನ್ನು ನಿವಾರಣಮಾಡುವ ನಿಮಿತ್ತದಿಂದ ಶ್ರೀವಿಷ್ಣುವು ಕಂಭದೊಳಗಿಂದ ಪ್ರಕಟನಾದನು.

ಮೂ। ಇದಂಚಾವ *ಧೀಯತಾಂ ॥ ೨೦೧ ॥

ಅರ್ಥ ॥ ಮತ್ತು ಹೇಳುತ್ತೇನೆ ಕೇಳು;

ಶ್ಲೋ। ಮನುಷ್ಯತಿರ್ಯಕ್ತ್ವಮುಪೇತ್ಯಸದ್ಯೋದೇವಸ್ಸ್ವಯಂಸ್ಥಾವರತೋಽಭ್ಯುದಂಚನ್। ವಿಚಿತ್ರಶಕ್ತ್ಯನ್ವಯಮತ್ರವೇದ್ಯೈಃಪ್ರತ್ಯಾಯ್ಯಮಾನಂಪ್ರಕಟೀಕರೋತಿ ॥ ೨೦೨ ॥

ಟೀಕಾ ॥ ಮನುಷ್ಯೇತಿ ॥ ದೇವಃ ಭಗವಾನ್–ಮನುಷ್ಯತ್ವಂತಿರ್ಯಕ್ತ್ವಂ ಸಿಹಂತ್ವಂಚ–ನತ್ವೇಕಮೇವ–ಉಪೇತ್ಯಸ್ವೀಕೃತ್ಯ–ಸ್ಥಾವರತಃ ಸ್ತಂಭಾತ್-ನತುಮಾತೃತಃ–ಸದ್ಯಃ ನನವಮಾಸಾನಂತರಂ–ಅಭ್ಯುದಂಚನ್ ಆವಿರ್ಭವನ್ ಸನ್ ವೇದ್ಯೈಃಪ್ರತ್ಯಾಯ್ಯಮಾನಂ ಪ್ರಕಟೀಕ್ರಿಯಮಾಣಂ–ವಿಚಿತ್ರಾಯಾಃ ಅಘಟನಘಟನಾಪಟೀಯಸ್ತ್ವೇನ ಆಶ್ಚರ್ಯಕರಾಯಾಃ ಶಕ್ತೇಃಸಾಮರ್ಥ್ಯಸ್ಯ ಅನ್ವಯಂ ಸಂಬಂಧಂ–ಅತ್ರಲೋಕೇ ಪಾಮರಪ್ರಚುರೇ–ಪ್ರಕಟೀಕರೋತಿ–ಪ್ರತ್ಯಕ್ಷಸ್ಯ ಸರ್ವಸಂಪ್ರತಿಪನ್ನತ್ವಾದಿತಿಭಾವಃ ||

ಅರ್ಥ॥ ದೇವರು ಮನುಷ್ಯ ರೂಪವನ್ನೂ ಮೃಗ ರೂಪವನ್ನೂ ತಾಳಿಕೊಂಡು, ಕಂಭದೊಳಗಿಂದ ಕೂಡಲೇ ಪ್ರಗಟನಾಗಿ ವೇದಗಳಿಂದ ಹೇಳಲ್ಪಡುವ ತನ್ನ ಅಲೌಕಿಕವಾದ ಸಾಮರ್ಥ್ಯವನ್ನು ಈ ಲೋಕದಲ್ಲಿ ಜನರಿಗೆ ತೋರಿಸುತ್ತಾನೆ.

ಮೂ। ಪುನಸ್ಸವಿಸ್ರಂಭಂ ॥

ಅರ್ಥ ॥ ಮತ್ತು ಭಕ್ತಿಯಿಂದ (ವಿಶ್ವಾವಸು ಹೇಳುತ್ತಾನೆ.)

ಶ್ಲೋ। †ಘಟಿಕಾಚಲಂವಪುರವೇತ್ಯತತ್ತ್ವತೋಘಟಿಕಾಚಲಂಸಮಧಿರುಹ್ಯಭಕ್ತಿತಃ। ನರಕೇಸರೀಂದ್ರಚರಣೌವಿಲೋಕಯನ್ನರಕೇಸರಿಷ್ಯತಿನಜಾತುಮಾನವಃ ॥ ೨೦೩ ॥

---

* ಅವಧಾರ್ಯತಾಮಿತಿಪಾಠಾಂತರಂ ॥ † ಘಟಿಕಾಚಲವಪುರವೇಕ್ಷ್ಯೇತಿಪಾಠಾಂತರಂ ॥

ಟೀಕಾ ॥ ಘಟಿಕೇತಿ ॥ ಮಾನವಃ—ಮನುಜಃ—ತತ್ತ್ವತಃ ಸ್ವಭಾವಾತ್ ಘಟಿಕಾಯಾಂ ಯಾಮಾರ್ಧಭಾಗೇಪಿ ಚಲಂ ನಶ್ವರಂ—ಅವೇತ್ಯ ಜ್ಞಾತ್ವಾ—ಘಟಿಕಾಸಾಮಾನಂ ಅಚಲಂ ಸಮಧಿರುಹ್ಯ—ಭಕ್ತಿತಃ ನರಕೇಸರೀಂದ್ರಸ್ಯ ಚರಣೌ ವಿಲೋಕಯೇತ್ ಸಃ—ಜಾತು ನರಕೆ ನ ಸರಿಷ್ಯತಿ ನ ಪತಿಷ್ಯತಿ ॥

ಅರ್ಥ ॥ ಮನುಷ್ಯನು ತನ್ನ ಶರೀರವು ಕ್ಷಣಭಂಗುರವಾದ ಸ್ವಭಾವ ಉಳ್ಳದ್ದೆಂದು ತಿಳದು, ಘಟಿಕಾಚಲ ಬೆಟ್ಟವನ್ನೇರಿ ಪ್ರೀತಿಯಿಂದ ನರಸಿಂಹ ದೇವರ ಅಡಿಗಳನ್ನು ನೋಡಿದರೆ ಎಂದಿಗೂ ನರಕದಲ್ಲಿ ಬೀಳನು.

ಮೂ॥ ಇತಿ ವ್ಯೋಮಯಾನಮನ್ಯತ್ರ ಸ್ವಂ *ಚೋದಯನ್ಸಹರ್ಷಃ ।

ಅರ್ಥ ॥ ಇಂತೆಂದು ವಿಮಾನವನ್ನು ಬೇರೆ ಕಡೆಗೆ ನಡಿಸಿ ಸಂತೋಷಯುಕ್ತನಾಗಿ ವಿಶ್ವಾವಸು ಹೇಳುತ್ತಾನೆ.

ಶ್ಲೋ। ವೀಕ್ಷಾರಣ್ಯಮಿದಂವದಂತಿಸರಸೀಹೃತ್ತಾಪನಾಶಿನ್ಯಸಾ
ವಸ್ಯಾರೋಧಸಿವೀರರಾಘವಇತಿಪ್ರಖ್ಯಾತನಾಮಾಹರಿಃ। ವ್ಯಕ್ತಂ
ರಾಜತಿವೀತಿಹೋತ್ರಇವಯೋವಿಸ್ತೀರ್ಣಹೇತಿದ್ಯುತಿಃ ಕ್ಷೇತ್ರಂ
ಪ್ರಾಪ್ತ †ಕುಶಸ್ಥಲೀಪ್ರಭಜತಿಶ್ರೀಶಾಲಿಹೋತ್ರಾಂಚಿತಂ॥ ೨೦೪॥

ಟೀಕಾ ॥ ವೀಕ್ಷೇತಿ ॥ ಇದಂಪುರೋವರ್ತಿ ಕ್ಷೇತ್ರಂ ವೀಕ್ಷಾರಣ್ಯಂ ತತ್ಸಂಜ್ಞಂ ವದಂತಿ—ಜನಾಃ ಇತಿ ಶೇಷಃ ಅಸೌ ಸರಸೀ ತೀರ್ಥಂ—ಹೃತ್ತಾಪನಾಶಿನೀ—ಅಸ್ಯಾಃ ಹೃತ್ತಾಪನಾಶಿನ್ಯಾಃ—ರೋಧಸಿ ತೀರೆ—ವೀರರಾಘವ ಇತಿ ಪ್ರಖ್ಯಾತನಾಮಾ ಹರಿಃ ವ್ಯಕ್ತಂ ರಾಜತಿ—ವಿಸ್ತೀರ್ಣಾ ಹೇತೀನಾಂ ಚಕ್ರಾದ್ಯಾಯುಧಾನಾಂ ಜ್ವಾಲಾನಾಂ ಚ ದ್ಯುತಿರ್ಯಸ್ಯ ಸಃ— ಅತ ಏವ—ವೀತಿಹೋತ್ರಃ ಅಗ್ನಿರಿವ ಸ್ಥಿತ ಇತ್ಯುಪಮಾ—ಯೋ ಹರಿಃ— ಶ್ರೀಯುಕ್ತೇನ ಶಾಲಿಹೋತ್ರೇಣ ಮುನಿನಾ ಅಂಚಿತಂ ಪೂಜಿತಂ—ಪ್ರಾಪ್ತಾ ಕುಶಸ್ಥಲೀ ನಾಮ ನದೀ ಯೇನ ತತ್— ತತ್ತೀರಸ್ಥಿತಂ—ಕ್ಷೇತ್ರಂ ಪ್ರಭಜತಿ ಆಶ್ರಯತಿ—ಸ ಹರಿರಿತಿ ಸಂಬಂಧಃ ॥

ಅರ್ಥ॥ ಇದೇ ನೋಡು ನಮ್ಮ ಎದುರಿಗೆ ಕಾಣಬರುವ ಕ್ಷೇತ್ರವು. ಇದಕ್ಕೆ ವೀಕ್ಷಾರಣ್ಯವೆಂದು ಜನರು ಹೇಳುತ್ತಾರೆ. ಇದೇ ಹೃತ್ತಾಪನಾಶಿನಿ ಎಂಬ ತೀರ್ಥವು; ಈ ತೀರ್ಥದ ದಂಡೆಯಲ್ಲಿ ಚಕ್ರಾದಿ ಆಯುಧಗಳನ್ನು ಧರಿಸಿಕೊಂಡು ಅವುಗಳ ಕಾಂತಿಯಿಂದ ಅಗ್ನಿಯಂತೆ ಪ್ರಕಾಶಮಾನನಾಗಿ ಶ್ರೀ ಹರಿಯು ವೀರರಾಘವನೆಂಬ ಹೆಸರಿನಿಂದ ಶೋಭಿಸುತ್ತಾನೆ. ಆ ಶ್ರೀ ಹರಿಯೇ ಶ್ರೀಯುಕ್ತನಾದ ಶಾಲಿಹೋತ್ರ ಮುನಿಯಿಂದ ಪೂಜಿಸಲ್ಪಟ್ಟಂಥಾ ಮತ್ತು ಕುಶಸ್ಥಲೀ ಎಂಬ ಹೊಳೆಯ ತೀರದಲ್ಲಿರುವಂಥಾ ಈ ಕ್ಷೇತ್ರವನ್ನು ಆಶ್ರಯಿಸಿಕೊಂಡಿದ್ದಾನೆ.

ಮೂ। ಆಕಲಯತುಭವಾನತ್ರ ‡ದಂಚಮತ್ಕಾರಂ ॥ ೨೦೫ ॥

ಅರ್ಥ ॥ ಈ ಆಶ್ಚರ್ಯವನ್ನು ಕೇಳು:

---

* ಸಂಚಾರಯನ್ನಿತಿಪಾಠಾಂತರಂ ॥ † ಕುಶಸ್ಥಲಮಿತಿಪಾಠಾಂತರಂ ॥ ‡ ಇದಮಿತಿ ಪಾಠಾಂತರಂ ॥

ಶ್ಲೋ। ದ್ವಿರೇಫವರ್ಣಾಂಸುಮನೋರಮಾಂತನುಂಬಿಭರ್ತಿಸಂ
ಜ್ಞಾಮಿವವೀರರಾಘವಃ। ಸುಪರ್ವರಾಜೇನಯದೀಯಮಂಚಿತಂ
ಮುಖಂಪದದ್ವಂದ್ವಮಿವೋಪಶೋಭತೆ॥ ೨೦೬ ॥

ಟೀಕಾ ॥ ದ್ವಿರೇಫೇತಿ ॥ ವೀರರಾಘವಃ ಭಗವಾನ್– ದ್ವಿರೇಫಸ್ಯ ಭೃಂಗಸ್ಯೇವವರ್ಣಃ ನೀಲರೂಪಂ ದ್ವೌರೇಫವರ್ಣೌಚ–ಯಸ್ಯಾಂತಾಂ–ಅತಏವ ಸುಷ್ಠುಮನಸ್ಸು ಸುಮನಸ್ಸು ಪುಷ್ಪೇಷುಚ ರಮತಇತಿ ಸುಮನೋರಮಾಂ–ತನುಂ ಶರೀರಂ–ಸಂಜ್ಞಾಂ ವೀರರಾಘವೇತ್ಯಾಖ್ಯಾಮಿವ–ಬಿಭರ್ತಿಶೋಭನೇವರ್ಣೌ ಪೂರ್ಣಿಮಾಯಾಂ–ರಾಜಾಚಂದ್ರಃ ಸುಪರ್ವಣಾಂ ದೇವಾನಾಂ ರಾಜಾಇಂದ್ರಶ್ಚ–ತೇನ–ಅಂಚಿತಂ ಯದೀಯಂ ಮುಖಂ–ಪದದ್ವಂದ್ವಮಿವ–ಉಪಶೋಭತೇ ॥

ಅರ್ಥ ॥ ಸುಪರ್ವ ರಾಜೇನ ಅಂದರೆ ಚಂದ್ರನಿಂದ ಅಥವಾ ಇಂದ್ರನಿಂದ ಪೂಜಿಸಲ್ಪಟ್ಟ ಈ ದೇವರ ಮುಖವು ಎರಡು ಪದಗಳಂತೆ ಅಂದರೆ ಎರಡು ಸ್ಥಾನಗಳಂತೆ ಶೋಭಿಸುತ್ತೆ.

ಕೃಶಾನುಃ ॥

ಮೂ। ವಯಸ್ಯಕಿಂಸನ್ನಹ್ಯಪಿವೀರರಾಘವಸ್ತವನೇಯದಸ್ಮಿನ್ನ
ಪಿಪನ್ನಗನಗನಾಥಇವಪರಧನಗ್ರಹಣಪರತ್ವಾದಯೋದೋಷಾಃ
ಪಾದುಷ್ಯಂತಿ॥ ೨೦೭ ॥

ಅರ್ಥ ॥ ಎಲಾ ಗೆಳೆಯನೇ, ವೀರ ರಾಘವ ದೇವರ ಸ್ತುತಿಮಾಡುತ್ತೀಯಾ? ಇವನಲ್ಲಿ ಕೂಡ ವೇಂಕಟೇಶದೇವರಂತೆ ಹೆರರ ಹಣ ಎತ್ತಿ ಹಾಕುವದೇ ಮಾಡಲಾದ ದೋಷಗಳು ಕಾಣ ಬರುತ್ತವೆ.

ವಿಶ್ವಾವಸುಃ ॥

ಮೂ। ತತ್ರಾಸ್ಮದುಕ್ತೇನ ತತ್ಸಮಾಧಾನೇನೈವಪುನರತ್ರಾಪಿ
ಸಂತೋಷ್ಟವ್ಯಮಾಯುಷ್ಮತಾಭವತಾ। ಪಾಮರಮತೇನರಮ
ತೇಕಸ್ಯಮನೋವೀರರಾಘವೇದೇವೇ ॥ ೨೦೮ ॥

ಟೀಕಾ॥ ತತ್ರೇತಿ ॥ ಆಯುಷ್ಮತಾಭವತಾ– ಹೇಪಾಮರಮತೇ ಮೂಢಬುದ್ಧೇ–ನರಮತೆ ನಸಂತುಷ್ಯತಿ॥

ಅರ್ಥ॥ ಹಾಗಾದರೆ ವೇಂಕಟೇಶ ದೇವರನ್ನು ಕುರಿತು ನಾನು ಹೇಳಿದ ಆ ಉದಾಹರಣೆಗಳಿಂದಲೇ ಈ ವೀರರಾಘವ ದೇವರನ್ನು ಕುರಿತು ನೀನು ಮನದಟ್ಟ ಮಾಡಿಕೊಳ್ಳಬೇಕು. ಎಲಾ ಹುಚ್ಚುಬುದ್ಧಿಯೇ! ವೀರರಾಘವ ದೇವರಲ್ಲಿ ಯಾರಮನಸ್ಸು ಸಂತೋಷ ಪಡದು? ಎಲ್ಲವರ ಮನಸ್ಸು ಸಂತೋಷ ಪಡುವದು ಎಂಬ ತಾತ್ಪರ್ಯವು.

ಶ್ಲೋ। ಸ್ವೇಕ್ಷಾಸಾಧ್ಯ ಜಗಜ್ಜನಿಸ್ಸ್ವತನುಪಲಾಕ್ಷಾಂಕಿತೋರಃ

ಸ್ಥಲ ಸ್ಸಾಕ್ಷಾದೇವ* ಪರಃ ಪುಮಾನ್ ಕೃತನುತಿರ್ದಾಕ್ಷಾಯಣೀಶಾದಿಭಿಃ। ವೀಕ್ಷಾರಣ್ಯಪತಿರ್ವಿರಾಜತಿಗತಿರ್ದ್ರಾಕ್ಷಾಸದೃಕ್ಸಾಹಿತೀಧೀಕ್ಷಾಂತ್ಯಾಯುರರೋಗತಾಧನಯಶೋಮೋಕ್ಷಾದ್ಯಪೇಕ್ಷಾವತಾಂ ॥ ೨೦೯ ॥

ಟೀಕಾ ॥ ಸ್ವೇತಿ ॥ ಸ್ವಸ್ಯವೀಕ್ಷಯಾ ಅವಲೋಕನೇನ ಸಾಧ್ಯಾಜಗತೋ ಜನಿಃ ಸೃಷ್ಟಿಃ ಯಸ್ಯಸಃ ಸುತನೋಃ ಲಕ್ಷ್ಮ್ಯಾಃ ಪಲ್ಲಾಕ್ಷಯಾ ಪಾದಲಾಕ್ಷಕೇಣ ಅಂಕಿತೋರಃಸ್ಥಲಃ—ತಸ್ಯಾಸ್ತತ್ರ ನಿವಾಸಾದಿತಿಭಾವಃ— ದಾಕ್ಷಾಯಣೀಶಾದಿಭಿಃ ಶಿವಪ್ರಮುಖೈಃ ಕೃತನುತಿಃ— ದ್ರಾಕ್ಷಯಾಸದೃಶೀಸಾಹಿತೀಧೀಃ ಬುದ್ಧಿಃ ಕ್ಷಾಂತಿಃ ಕ್ಷಮಾ— ಅಯುಃ— ಅರೋಗತಾ ಆರೋಗ್ಯಂ— ಧನಂ—ಯಶೋಮೋಕ್ಷಶ್ಚಾದಿಃ ಯೇಷು ತೇಷು ಅಪೇಕ್ಷಾವತಾಂ—ಗತಿಃ ತದ್ದಾಯಕ ಇತ್ಯರ್ಥಃ—ಅತಏವ—ಪರಃ ಅಪ್ರತ್ಯಕ್ಷೋಽಪಿ ಪುಮಾನ್ ಭಗವಾನ್ ಸಾಕ್ಷಾತ್ ವೀಕ್ಷಾರಣ್ಯಪತಿಃ ವೀರರಾಘವಸ್ಸನ್— ವಿರಾಜತಿ— ಅತ್ರಭಕ್ತಕಾಮಿತಪ್ರದಾನಸ್ಯವೀರರಾಘವರೂಪಸ್ವೀಕಾರ ಹೇತುತ್ವಾತ್ಪದಾರ್ಥಹೇತುಕಂ ಕಾವ್ಯಲಿಂಗಂ।

ಅರ್ಥ ॥ ತನ್ನ ಕಣ್ಣಾಜ್ಞೆಯಿಂದ ಇಡಿ ಜಗತ್ತನ್ನು ಹುಟ್ಟಿಸಿದಂಥವನಾದ, ಲಕ್ಷ್ಮೀದೇವಿಯ ಅಡಿಗಳಲ್ಲಿರುವ ಅರಗಿನ ಬಣ್ಣದಿಂದ ಗುರ್ತಾದ ಎದೆಯುಳ್ಳಂಥಾವನಾದ, ಪಾರ್ವತಿ ಪತಿಯೇ ಮೊದಲಾದ ದೇವರುಗಳಿಂದ ವಂದಿತನಾದಂಥಾವನಾದ, ಪರಪುರುಷನೆಂದರೆ ದೃಷ್ಟಿಗೆ ಅಗೋಚರನಾದಂಥಾವನಾದ ಪರಮೇಶ್ವರನು ಬೇಡುವವರಿಗೆ ಸರಸವಾದ ಬುದ್ಧಿ, ಕ್ಷಮೆ, ಆಯುಷ್ಯ, ಆರೋಗ್ಯ, ಕೀರ್ತಿ, ಮೋಕ್ಷ ಮೊದಲಾದ ಸುಖಗಳನ್ನು ಕೊಡಲಿಕ್ಕೆ ವೀರರಾಘವ ರೂಪದಿಂದ ಪ್ರತ್ಯಕ್ಷನಾಗಿ ಒಪ್ಪುತ್ತಾನೆ.

ಶ್ಲೋ । ಉಪೇತ್ಯವೀಕ್ಷಾವನಮುನ್ನತಸ್ಸದಾಸುವರ್ಣವಲ್ಲ್ಯಾಸುಮನಃಪುಷಾಶ್ರಿತಃ। ಅಹೀನಸೇವ್ಯೋಹರಿಚಂದನಸ್ತನೋತ್ಯುಪಾಶ್ರಿತಾನಾಮುಚಿತಾಂಸುವಾಸನಾಂ ॥ ೨೧೦ ॥

ಟೀಕಾ ॥ ಉಪೇತ್ಯೇತಿ ॥ ಸದಾ—ಸುಮನಸಃ ಪುಷ್ಪಾಣಿ ವಿಬುಧಾಶ್ಚ ಪುಷ್ಣಾತೀತಿತತ್ಪುಷಾ— ಸುವರ್ಣವಲ್ಲ್ಯಾಚಂಪಕಲತಯಾ ತನ್ನಾಮ್ನ್ಯಾ ಶ್ರಿಯಾಚ ಶ್ರಿತಃ ಶ್ಲಿಷ್ಟಃ— ಉನ್ನತಃ— ಅಹೀನಾಮಿನ್ದ್ರೈಸ್ಸರ್ಪಶ್ರೇಷ್ಠೈಃ ಹೀನಾನಭವಂತೀತ್ಯಹೀನೈರುತ್ತಮೈಶ್ಚ ಸೇವ್ಯಃ— ಹರಿರೇವ ಚಂದನಃ ವೃಕ್ಷಃ— ವೀಕ್ಷಾವನಮುಪೇತ್ಯ ಉಪಸಮೀಪೇ ಆಶ್ರಿತಾನಾಂ— ಉಚಿತಾಂ— ಸುಷ್ಠುವಾಸನಾಂ ಭಾವನಾಮೇವ ಸೌರಭ್ಯಂ—ತನೋತೀತಿ ॥

ಅರ್ಥ ॥ ೧. ವೀರರಾಘವ ಪರ ಅರ್ಥ ॥ ಶ್ರೇಷ್ಠನಾದಂಥವನಾದ, ದೇವರುಗಳ ಕಾಪಾಡಕನಾದ, ಸುವರ್ಣವಲ್ಲಿ ಎಂಬ ಹೆಸರುಳ್ಳ ಲಕ್ಷ್ಮಿಯಿಂದ ಆಲಿಂಗಿಸಲ್ಪಟ್ಟಂಥವನಾದ, ಉತ್ತಮರಿಂದ ಪೂಜಿಸಲ್ಪಡುವಂಥವನಾದ, ವೀರರಾಘವ ದೇವರು ವೀಕ್ಷಾವನವನ್ನು ಕುರಿತು ಬಂದು ಸಮೀಪವಾಸ ಮಾಡುವವರಿಗೆ ಒಳ್ಳೇ ವಾಸನೆಗಳನ್ನು ಕೊಡುತ್ತಾನೆ.

---

* ಏಷ ಇತಿಪಾಠಾಂತರಂ ॥

೯. ಎತ್ತರವಾದ ಹರಿಚಂದನ ಮರವು ಈ ವೀಕ್ಷಾರಣ್ಯಕ್ಕೆ ಬಂದು ನಿರಂತರವಾಗಿ ಸಂಪಿಗೆ ಬಳ್ಳಿಯು ಮತ್ತು ಹೂಗಳ ಶೋಭೆಯಿಂದಲೂ ಅಹಿಯೆಂಬ ಸರ್ಪಗಳಿಂದಲೂ ಆಶ್ರಯಿಸಲ್ಪಟ್ಟಂಥಾದ್ದಾಗಿ ಸಮೀಪ ಇರುವಂಥವರಿಗೆ ಸುಗಂಧವನ್ನು ಕೊಡುತ್ತದೆ.

ಮೂ। ಇತ್ಯನ್ಯತೋವಿಮಾನಂಪ್ರೇಂಖಯನ್ನಗ್ರತೋವಿಶ್ವಸಪ್ರತ್ಯಭಿಜ್ಞಾಂ ॥ ೩೧೧ ॥

ಟೀಕಾ ॥ ಇವೇತಿ ॥ ಪ್ರೇಂಖಯನ್ ಗಮಯನ್ ॥

ಅರ್ಥ ॥ ಇಂತೆಂದು ವಿಮಾನವನ್ನು ಮುಂದಕ್ಕೆ ನಡಿಸಿ, ಮೊದಲು ನೋಡಿದ ಗುರುತು ನೆನಪಿಗೆ ತಂದು (ವಿಶ್ವಾವಸು ಹೇಳುತ್ತಾನೆ.)

ಶ್ಲೋ। ಏಷಾಭೂತಪುರೀನಿರೀಕ್ಷಿತಚರೀದೋಷಾಪಹಂತ್ರೀ ಮಯಾಶ್ರೀಮಾನತ್ರಗುಣಾಬ್ಧಿರಾವಿರಭವದ್ರಾಮಾನುಜಾರ್ಯೋ ಮುನಿಃ। ತ್ರಯ್ಯಂತಾಮೃತಸಿಂಧುಮಂಥನಭವದ್ಧಯ್ಯಂಗವೀನಾತ್ಮಕಂ ವಿಜ್ಞಾನಂಯದುಪಜ್ಞಮೇವವಿದುಷಾಮದ್ಯಾಪಿವಿದ್ಯೋತತೇ ॥ ೩೧೨ ॥

ಟೀಕಾ ॥ ಏಷೇತಿ ॥ ದೋಷಾಪಹಂತ್ರೀ— ಅತಏವ—ಏಷಾ ಭೂತಪುರೀಶ್ರೀಪೇರುಂಬೂದೂರ್ಇತಿ ಭಾಷಾನಾಮ— ಮಯಾನಿರೀಕ್ಷಿತಚರೀಪೂರ್ವಂ ದೃಷ್ಟಾ— ತ್ರಯ್ಯಂತಾ ಉಪನಿಷದ ಏವ ಅಮೃತ ಸಿಂಧುಃ ಕ್ಷೀರಾರ್ಣವಸ್ತಸ್ಯ ಮಂಥನೇನ ಆಲೋಡನೇನ ಭವತಃ ಹಯ್ಯಂಗವೀನಸ್ಯ ಘೃತ ವಿಶೇಷಸ್ಯ ಆತ್ಮಾಸ್ವರೂಪಂ ಯಸ್ಯತತ್ತಂ— ವಿಜ್ಞಾನಂ ವೈಷ್ಣವ ವಿಶಿಷ್ಟಾದ್ವೈತಶಾರೀರಕಭಾಷ್ಯಂ— ವಿದುಷಾಂ ಮಧ್ಯೇ— ಯಃ ರಾಮಾನುಜಃ ಉಪಜ್ಞಾ ಆದ್ಯ ಇತಿಜ್ಞಾನಂ ಯಸ್ಯತಥೋಕ್ತಂ ಯತ್ಕರ್ತೃಕಮೇವ— ಅದ್ಯಾಪಿ— ವಿದ್ಯೋತತೇ— ಸಗುಣಾಬ್ಧಿಃ ಶ್ರೀಮಾನ್ ರಾಮಾನುಜಾರ್ಯಃ ಮುನಿಃ— ಅತ್ರಮಯರ್ಾಂ— ಆವಿರಭವತ್ ॥

ಅರ್ಥ ॥ ಇದೇ ಪಾಪ ಪರಿಹಾರಕವಾದ, ನಾನು ಇದಕ್ಕೆ ಮೊದಲು ನೋಡಿದ ಶ್ರೀ ಪೆರುಂಬೂದೂರು ಪಟ್ಟಣವು. ವೇದಾಂತವೆಂಬ ಅಮೃತದ ಕಡಲುವನ್ನು ಕಡೆದು ಹುಟ್ಟಿದ ತುಪ್ಪದಂತಿರುವ ಜ್ಞಾನ ಯಾರಿಂದ ಉಂಟಾಯಿತೋ ಆ ಶ್ರೀ ರಾಮಾನುಜಾಚಾರ್ಯರು ಹುಟ್ಟಿದ ಸ್ಥಳವು ಇದೇ. ಆ ಜ್ಞಾನವು (ವಿಶಿಷ್ಟಾದ್ವೈತ ಬ್ರಹ್ಮಸೂತ್ರ ಭಾಷ್ಯವು) ಇದುವರಿಗೂ ವಿದ್ವಾಂಸರನ್ನು ಪ್ರಕಾಶಗೊಳಿಸುತ್ತದೆ.

ಮೂ। ಕಿಂಚ। ಶ್ಲೋ। ಕಾಮಾದಿವೈರಿಗಣಭೀಮಾನವದ್ಯನಿಜನಾಮಾಭಿಲಾಪಗರಿಮಾ ವೈಮಾನಿಕಾರ್ಯಸಮಭೂಮಾವನೌವಚನಸೀಮಾತಿಲಂಘಿಮಹಿಮಾ। ಶ್ರೀಮಾನನೂನಕಲಸೋಮಾನನೋವಿಮಲಧಾಮಾವಮಾನಿತರವಿಃ ಕ್ಷೇಮಾಣಿಜೃಂಭಯತುಭೂಮಾವಮುತ್ರಚಸರಾಮಾನುಜೋಯತಿಪತಿಃ ॥ ೩೧೩ ॥

ಟೀಕಾ॥ ಕಾಮೇತಿ॥ ಕಾಮಾದೀನಾಂ ವೈರಿಣಾಂ ಅಂತಶ್ಶತ್ರೂಣಾಂ ಗಣಸ್ಯ ಭೀಮಃ ಅನವದ್ಯಃ ನಿಜಸ್ಯ ನಾಮ್ನಃ ಅಭಿಲಾಪಗರಿಮಾ ಕೀರ್ತನ ಸಾಮರ್ಥ್ಯಂ ಯಸ್ಯಸಃ– ಅವನೌಭುವಿ–ವೈಮಾನಿಕಾಯೇಸ್ಯ ದೇವಗುರೋಸ್ಸಮಭೂಮಾ– ವಕ್ತೃತ್ವ ಇತಿಭಾವಃ– ವಚನಸೀಮಾತಿಲಂಘೀ ಮಹಿಮಾ ಯಸ್ಯಸಃ– ಅನೂನಕಳಃ ಸೋಮ ಇವ ಆನನಂಯಸ್ಯಸಃ–ವಿಮಲೇನಧಾಮ್ನಾಕಾಂತ್ಯಾ ಅವಮಾನಿತರವಿಃ–ಶ್ರೀಮಾನ್ ಸರಾಮಾನುಜಃ ಯತಿಪತಿಃ–ಭೂಮೌ ಅಮುತ್ರ ಪರಲೋಕೇಚ–ಕ್ಷೇಮಾಣಿ– ಜೃಂಭಯತು ವರ್ಧಯತು– ಅಸ್ಮಾಕಮಿತಿಶೇಷಃ॥

ಅರ್ಥ॥ ಸನ್ಯಾಸಿಗಳಲ್ಲಿ ಹಿರಿಯನಾದ ಶ್ರೀರಾಮಾನುಜನು ಕಾಮ ಕ್ರೋಧ ಮೊದಲಾದ ಷಡ್ವೈರಿಗಳನ್ನು ಗೆದ್ದವನು. ಅವನ ಉತ್ತಮವಾದ ಹೆಸರ ಕೀರ್ತನವು ಬಹಳ ಶ್ರೇಷ್ಠವಾದದ್ದು. ಪೃಥ್ವಿಯಲ್ಲಿ ದೇವ ಗುರುವಾದ ಬೃಹಸ್ಪತಿಗೆ ಸಮಾನವಾಗಿ ವಾಕ್ಶಕ್ತಿಯುಳ್ಳವನು. ಅವನ ಮಹಿಮೆಯನ್ನು ವರ್ಣಿಸುವದು ಯಾರಿಗೂ ಅಳವಲ್ಲವು. ಅವನ ಮುಖವು ಸಂಪೂರ್ಣ ಕಲಾಯುಕ್ತವಾದ ಚಂದ್ರನಂತಿರುವದು. ಅವನನಿಷ್ಕಳಂಕವಾದ ಕಾಂತಿಯು ಸೂರ್ಯನಿಗೆ ಲಜ್ಜೆಯುಂಟುಪಡಿಸುವದು. ಇಂಥ ಶ್ರೀಯಿಂದ ಯುಕ್ತನಾಗಿರುವ ರಾಮಾನುಜನು ನಮಗೆ ಈ ಲೋಕದಲ್ಲಿಯೂ ಆ ಲೋಕದಲ್ಲಿಯೂ ಕಲ್ಯಾಣಾಭಿವೃದ್ಧಿಯನ್ನು ಮಾಡಲಿ.

ಮೂ। ಅಪಿಚ। ಶ್ಲೋ। ಸಜಯತಿರಾಮಾನುಜಯತಿರಜಯತಿ
ಪರವಾದಿನಂಯದೀಯೋಕ್ತಿಃ। ಸಂಜಯತಿಬೋಧಮನಘಂರಂ
ಜಯತಿಬುಧಾನ್ವ್ಯಥಾಂಚಭಂಜಯತಿ ॥ ೩೧೪ ॥

ಟೀಕಾ॥ ಸಇತಿ॥ ಯಸ್ಯರಾಮಾನುಜಸ್ಯೇಯಂ ಯದೀಯಾ ಉಕ್ತಿಃ ಭಾಷ್ಯಂ– ಪರವಾದಿನಂ– ಅಜಯತಿ ನಿರಸ್ಯತಿ–ಸ್ವಾರ್ಥೇಕೋಣಿಚ್–ಯದ್ವಾ–ಅಜಮಿವ ಛಾಗಮಿವ ಕರೋತಿ–ದುರ್ಬಲೀಕರೋತೀತ್ಯರ್ಥಃ–ಅನಘಂ–ಬೋಧಂ ವಿಜ್ಞಾನಂ ಸಂಜಯತಿ ಯೋಜಯತಿ–ಬುಧಾನ್ ರಾಮಾನುಜೀಯಾನ್ ರಂಜಯತಿ–ವ್ಯಥಾಂಚತದೀಯಾಂ–ಭಂಜಯತಿ॥

ಅರ್ಥ॥ ಆರಾಮಾನುಜನ ನುಡಿಯು ಬೇರೆ ಸಮಯದವರನ್ನು ಅಜಯತಿ ಅಂದರೆ ಕುರಿಯಾಗಿ ಮಾಡುತ್ತದೆ; ಅಂದರೆ ಬಲಹೀನ ಮಾಡುತ್ತದೆ. ಶ್ರೇಷ್ಠವಾದ ತಿಳುವಳಿಕೆ ಕೂಡಿಸುತ್ತದೆ; ತಿಳಿದಂಥವರನ್ನು ಸಂತೋಷಿಸುತ್ತದೆ; ದುಃಖವನ್ನು ನಾಶಪಡಿಸುತ್ತದೆ. ಇಂಥ ರಾಮಾನುಜನು ಲೋಕದಲ್ಲಿ ಉತ್ಕರ್ಷಪಡುತ್ತಾನೆ.

ಮೂ। ಅನ್ಯಚ। ಶ್ಲೋ। ತೇಮೀಮಾಂಸಾಶಾಸ್ತ್ರಪ್ರಮಥನಪ
ರಿಕಲಿತಬುಧಜನಾನಂದಾಃ। ಲಕ್ಷ್ಮಣಮುನೇಃಪ್ರಬಂಧಾಃಲಕ್ಷ್ಮಣ
ಪೂರ್ವಜಶರಾಇವಜಯಂತಿ॥ ೩೧೫ ॥

ಟೀಕಾ॥ ತಇತಿ॥ ಮೀಮಾಂಸಾ ಶಾಸ್ತ್ರಸ್ಯ ಪ್ರಮಥನೇನ ನ್ಯಾಯಮೇಳನೇನ–ಶೇಅವಿರಾಇತಿಛೇದಃ–ಮಾಂಸಾಶಾನಾಂ ರಕ್ಷಸಾಂ–ಅಸ್ತ್ರೈಃ ಕರಸ್ತೈಃ–ಪ್ರಮಥನೇನ ನಾಶನೇನ–ಪರಿಕಲಿತಃ ಘಟಿತಃ–ಬುಧ

ಜನಸ್ಯ ವಿದ್ವಜ್ಜನಸ್ಯ ಜೀವಸಮೂಹಸ್ಯಚ—ಆನಂದಃ ಯೈಸ್ತೇ—ಲಕ್ಷ್ಮಣಮುನೇಃ ರಾಮಾನುಜಸ್ಯ—ತೇಪ್ರಬಂಧಾಃ—ಲಕ್ಷ್ಮಣಪೂರ್ವಜಸ್ಯ ಶ್ರೀರಾಮಸ್ಯಶರಾ ಇವಜಯಂತಿ ||

ಅರ್ಥ॥ ಲಕ್ಷ್ಮಣ ಮುನಿಯೆಂದರೆ ರಾಮಾನುಜಾಚಾರ್ಯನು ಮೀಮಾಂಸಾ ಶಾಸ್ತ್ರವನ್ನು ಆರಿಸಿ ರಚಿಸಿದಂಥ, ತಿಳಿದವರಿಗೆ ಸಂತೋಷ ಉಂಟುಪಡಿಸುವಂಥ ಗ್ರಂಥಗಳು ಶ್ರೀರಾಮನ ಬಾಣಗಳು ರಾಕ್ಷಸರನ್ನು ಜಯಿಸಿದಂತೆ ಜಯ ಮಾಡುತ್ತವೆ.

ಮೂ। ಅತ್ರಕಶ್ಚಿದಪಶ್ಚಿಮೋವಿಪಶ್ಚಿತಾಮಿತ್ಥಮೇನಮನುದಿನಂ ಪ್ರಣಮತಿ ॥ ೨೧೬ ॥

ಅರ್ಥ ॥ ಇಲ್ಲಿ ತಿಳಿದವರಲ್ಲಿ ಭಾವಿಕನೆಂದೆಣಿಸಲ್ಪಟ್ಟ ಒಬ್ಬಾನೊಬ್ಬನು ಸ್ತೋತ್ರಮಾಡುತ್ತಾನೆ:

ಶ್ಲೋ। ರಾಮಾನುಜಾಯಗುರವೇನರವೇಷಭಾಜೆಶೇಷಾಯಧೂತಕಲಯೇಕಲಯೆಪ್ರಣಾಮಾನ್ । ಯೋಮಾದೃಶಾನಪಿಕೃಶಾನ್ಪರಿಪಾತುಕಾಮೋ ಭೂಮಾವವಾತರದುದಂಚಿತಬೋಧಭೂಮಾ ॥ ೨೧೭ ॥

ಟೀಕಾ || ರಾಮಾನು ಜಾಯೇತಿ || ನರವೇಷಭಾಜೆ— ಶೇಷಾಯ—ರಾಮಾನುಜಸಂಜ್ಞಾಯ—ಧೂತಕಲಯೇ ಅಪಹತಪಾಪಾಯ— ಗುರವೇ— ಪ್ರಣಾಮಾನ್ ಕಲಯೇ— ಮಾದೃಶಾನಪೀತಿಅತ್ಯಂತಾಶರಣತ್ವಸೂಚನಂ— ಕೃಶಾನ್ ದೀನಾನ್—ಪರಿಪಾತುಂ ಕಾಮಃ ಯಸ್ಯಸಃ—ಅತಏವ ಉದಂಚಿತಃ ಪ್ರಕಟಿತಃ ಬೋಧಭೂಮಾಜ್ಞಾನಾತಿಶಯೋ ಯೇನಸಃ- ಯಃ ರಾಮಾನುಜಃ— ಭೂಮೌ—ಅವಾತರತ್ ಆವಿರಭವತ್ ||

ಅರ್ಥ ॥ ಮನುಷ್ಯ ರೂಪವನ್ನು ಧರಿಸಿಕೊಂಡಂಥಾ, ಮಹಾ ಶೇಷನ ಅವತಾರವಾದಂಥಾ, ಪಾಪವಿರಹಿತನಾದಂಥ ರಾಮಾನುಜ ಗುರುವಿಗೆ ನಮಸ್ಕಾರ ಮಾಡುತ್ತೇನೆ. ಅತ್ಯಂತ ದೀನರಾದಂಥವರನ್ನು ಸಂರಕ್ಷಿಸುವ ಇಚ್ಛೆಯಿಂದ ಆ ರಾಮಾನುಜಗುರುವು ಶ್ರೇಷ್ಠವಾದ ಜ್ಞಾನವನ್ನು ಬೆಳಗಿಸುವಂಥಾವನಾಗಿ ಪೃಥ್ವಿಯಲ್ಲಿ ಕಾಣಿಸಿಕೊಂಡನು.

ಮೂ। ಇತಿಪಿತ್ರಚ್ಛಾಕರ್ಣ್ಯತಾಂ ॥

ಅರ್ಥ ॥ ಇದನ್ನು ಕೇಳು;

ಶ್ಲೋ । ರಾಮಾನುಜೌಯಾಮುನತೀರ್ಥಸೇವಾಪರಾವುದೀತೌನರಕಂನಿರೋದ್ಧುಂ। ತಯೋಃಪುರಾಣಃಪ್ರಣಿನಾಯಗೀತಾಂತಸ್ತ್ಯಾನವೀನಸ್ತುತತಾನಟೀಕಾಂ ॥ ೨೧೮ ॥

ಟೀಕಾ || ರಾಮೇತಿ|| ಯಮುನಾಯಾ ಇದಂತೀರ್ಥಂ ಯಾಮುನಂ ಜಲಂತಸ್ಯ—ಯಾಮುನತೀರ್ಥಸ್ಯ ಯಾಮುನಗುರೋಶ್ಚ ಸೇವಾಪರೌ—ರಾಮಸ್ಯ ಅನುಜಃ ಕೃಷ್ಣಃ ಲಕ್ಷ್ಮಣಾರ್ಯಶ್ಚ ದ್ವೌ- ನರಕಂ ರಾಕ್ಷಸಂ

ನಿರಯಂಚನಿರೋದ್ಧುಂ—ಉದಿತೌಆವಿರಭೂತಾಂ—ತಯೋರ್ದ್ವಯೋಃ—ಪುರಾಣಃ ಪೂರ್ವಃ ಕೃಷ್ಣಃ—ಗೀತಾಂ ಭಾಗವತೀಂ—ಪ್ರಣಿನಾಯ ನಿರ್ಮಿತವಾನ್ ನವೀನಃ ಲಕ್ಷ್ಮಣಾರ್ಯಸ್ತು—ತಸ್ಯಾಃ ಗೀತಾಯಾಃ—ಟೀಕಾಂ ವ್ಯಾಖ್ಯಾಂ—ತಥಾ ನ ಕೃತವಾನ್ ॥

ಅರ್ಥ ॥ ಇಬ್ಬರು ರಾಮಾನುಜರು. ಅವರುಗಳಲ್ಲಿ ಒಬ್ಬನು ಯಮುನಾನದಿ ಎಂಬ ತೀರ್ಥದ ಸೇವಾಪರನಾಗಿ ನರಕಾಸುರನೆಂಬ ರಾಕ್ಷಸನನ್ನು ಕೊಲ್ಲುವಂಥಾವನಾದನು. ಇನ್ನೊಬ್ಬನು ಯಾಮುನ ತೀರ್ಥರೆಂಬ ಆಚಾರ್ಯರ ಸೇವಾಪರನಾಗಿ ಪಾಪಕ್ಕೆ ಕಟ್ಟು ಹಾಕುವಂಥಾವನಾದನು. ಆ ಇಬ್ಬರು ರಾಮಾನುಜರುಗಳಲ್ಲಿ ಹಿರಿಯನು ಅಂದರೆ ಕೃಷ್ಣನು ಗೀತೆ ಹೇಳಿದನು. ಚಿಕ್ಕವನು ಆ ಗೀತೆಯ ಟೀಕೆ ಮಾಡಿದನು.

ಕೃಶಾನುಃ ॥

ಶ್ಲೋ। *ಸತ್ಯಮೇವತಥಾಪಿತತ್ಪಥಾ †ನುಧಾವಿನಾಂಮೇಧಾವಿನಾ
ಮಪಿಪರಾವಮಂತೃತ್ವಾದಯೋದೋಷಾಃಪ್ರಸಿದ್ಧಾಃ ॥ ೩೧೯ ॥

ಟೀಕಾ ॥ ಸತ್ಯಮಿತಿ ॥ ತಸ್ಯರಾಮಾನುಜಸ್ಯ ಪಂಥಾನಮನುಸರಂತೀತಿ ತತ್ಪಥಾನುಧಾವಿನಾಂ—ಪರೇಷಾಂ ಅವಮಂತೃತ್ವಂ ಅವಮಾನಃ॥

ಅರ್ಥ ॥ ನೀನು ಹೇಳುವದು ಸರಿಯೇ. ಆದಾಗ್ಯೂ ಆ ರಾಮಾನುಜರ ಮಾರ್ಗ ಹಿಡಿದು ಓಡುವವರಲ್ಲಿ ಜಾಣರು ಕೂಡಾ ಪರರನ್ನು ಅವಮಾನ ಮಾಡುತ್ತಾರೆ. ಇದೇ ಮೊದಲಾದ ದೋಷಗಳು ಅವರಲ್ಲಿರುವದು ಸಕಲರಿಗೂ ತಿಳಿದು ಇಧೆ.

ಮೂ। ತಥಾಹಿ। ಶ್ಲೋ। ಶ್ರೀರಾಮಾನುಜದರ್ಶನೈಕರಸಿಕಃಶಿ
ಷ್ಟಪ್ರಕೃಷ್ಟೈರ್ಗುಣೈಃಪೂರ್ಣಾನಾಂವಿದುಷಾಂಮತಾಂತರಜು
ಷಾಂಪಜ್ಙ್ತೌನಭುಙ್ತೇಕ್ವಚಿತ್। ಹಾಹಂತೇದನಮಂತತಶ್ಶುಚಿ
ತಮಂತದ್ದೃಷ್ಟಮಾಶುತ್ಯಜತ್ಯಾಸ್ತಾಂತತ್ಸ್ವಮತಸ್ಥಿತೈರಪಿಸ
ಮಂಪ್ರಾಯೇಣನಾಶ್ನಾತ್ಯಸೌ ॥ ೩೨೦ ॥

ಟೀಕಾ ॥ ಶ್ರೀರಾಮೇತಿ ॥ ಶ್ರೀರಾಮಾನುಜಸ್ಯ ದರ್ಶನೇ ಶಾಸ್ತ್ರೇ ಏಕಂ ಕೇವಲಂ ರಸಿಕಃ ಅನುರಕ್ತಃ—ಶಿಷ್ಟೇಷುಪ್ರಕೃಷ್ಟೈರ್ಗುಣೈಃ— ಸ್ನಾನಸಂಧ್ಯಾಜಪಾಧ್ಯಯನಾದಿಭಿಃ— ಪೂರ್ಣಾನಾಂ— ಮತಾಂತರಜುಷಾಂ—ವಿದುಷಾಂ—ಪಙ್ತೌ—ಕ್ವಚಿತ್ ಕುತ್ರಾಪಿ— ನಭುಙ್ತೇ—ಅಂತತಃ— ಶ್ರೈವರ್ಣಾಂತರಸ್ಥೈಃ ದೃಷ್ಟಂ— ಅತಏವ— ಶುಚಿತಮಮಪಿ ಓದನಂ ಅಸೌರಾಮಾನುಜೀಯಃ— ಆಶುತ್ಯಜತೀತಿಯತ್ತದಾಸ್ತಾಂ—ಸ್ವಮತಸ್ಥಿತೈರಪಿಸಮಂ ಪ್ರಾಯೇಣನಾಶ್ನಾತಿ—ಹಾಹಂತೇತ್ಯಾಶ್ಚರ್ಯೇ ॥

ಅರ್ಥ ॥ ಶ್ರೀರಾಮಾನುಜರ ಶಾಸ್ತ್ರದಲ್ಲೇ ಮನಸ್ಸು ಹಾಕಿರುವವನು ಪ್ರತಿಷ್ಠಿತರಾದ ಬೇರೆ ಮತದವರಲ್ಲಿ ಸ್ನಾನ ಸಂಧ್ಯಾಜಪತಪ ಮುಂತಾದ ಗುಣಗಳಿಂದ ಸಂಪನ್ನರಾ

---

* ಸತ್ಯಮೇವಮ್ † ಅನುವಿಧಾಯಿನಾಮಿತಿಪಾಠಾಂತರೇ ॥

ದವರ ಸಾಲಿನಲ್ಲಿ ಕೂಡ ಕುಳಿತುಕೊಂಡು ಎಲ್ಲರ್‍ಯೂ ಊಟ ಮಾಡಸು. ಕಡೆಗೂ ಶುದ್ಧವಾಗಿರುವ ಅನ್ನ ಅವರು ನೋಡಿದರೆ ಅದನ್ನು ಕೂಡಲೆ ಬಿಸಾಟ ಬಿಡುತ್ತಾನೆ. ಇದಂತಿರಲಿ. ತನ್ನ ಸ್ವಂತ ಮತದವರ ಸಂಗಡ ಕೂಡ ಬಹಳಮಾಡಿ ಉಂಣುವದಿಲ್ಲವು. ಇದೇನು ಆಶ್ಚರ್ಯವು!

ಮೂ। ಶ್ಲೋ। *ನೈಷಾಂನ್ಯಾಯ್ಯಇಹದ್ವಿಜಾನ್ವಯಜುಷಾಂಭಾಷಾಪ್ರಬಂಧಶ್ರಮೋವೇದೇವಿಶ್ವಪುಮರ್ಥಸಾಧನವಿಧೌಬದ್ಧಾದರೇಜಾಗ್ರತಿ। ತೀರಂಕ್ಷೀರಪಯೋನಿಧೇರುಪಗತೋದೈತ್ಯಾರಿದೀಪ್ತ್ಯಾವೃತಂಕೋವಾಧಾವತಿದುಗ್ಧಲಬ್ಧಿಚಪಲೋಗೋಪಾಲಕಸ್ಯಾಲಯಂ ॥ ೩೨೧ ॥

ಟೀಕಾ ॥ ನೇತಿ ॥ ದ್ವಿಜಾನ್ವಯಜುಷಾಂ ಬ್ರಹ್ಮಕುಲಜಾನಾಂ— ಏಷಾಂರಾಮಾನುಜೀಯಾನಾಂ— ವಿಶ್ವೇಷಾಂ ಪುಮರ್ಥಾನಾಂ ಸಕಲಪುರುಷಾರ್ಥಾನಾಂ ಸಾಧನೇವಿಧೌಕರ್ಮಣಿ— ಬದ್ಧಾದರೇಕ್ಲೃಪ್ತದೀಕ್ಷೇವೇದೇ ಜಾಗ್ರತಿಸತ್ಯಪಿ— ಭಾಷಯಾದ್ರಾವಿಡ್ಯಾನಿರ್ಮಿತೆಪ್ರಬಂಧೆಶ್ರಮಃ ಅಭ್ಯಾಸಜನ್ಯಃ— ಇಹಲೋಕೇ— ನನ್ಯಾಯ್ಯಃ ನೋಚಿತಃ— ಅನುಚಿತತ್ವೇವೈಧರ್ಮ್ಯೇಣದೃಷ್ಟಾಂತಮಾಹ— ದೈತ್ಯಾರಿದೀಪ್ತ್ಯಾಆವೃತಂಕ್ಷೀರಪಯೋನಿಧೇಸ್ತೀರಮುಪಗತಃ ಕೋವಾಜನಃ— ದುಗ್ಧಲಬ್ಧೌಕ್ಷೀರಲಾಭೇಚಪಲಃ ಆಸಕ್ತಸ್ಸನ್— ಗೋಪಾಲಕಸ್ಯಕ್ಷುದ್ರಗೋಪಸ್ಯ— ಅಲ್ಪಾರ್ಥೇಕರ್ಣ— ಆಲಯಂಪ್ರತಿಧಾವತಿ— ನಕೋಪೀತ್ಯರ್ಥಃ ॥

ಅರ್ಥ॥ ಸಕಲ ಜನರಿಗೂ ಧರ್ಮ, ಅರ್ಥ, ಕಾಮಮೋಕ್ಷವೆಂಬ ನಾಲುಗು ಪುರುಷಾರ್ಥಗಳನ್ನು ಸಾಧಿಸಿಕೊಳ್ಳುವದಕ್ಕೆ ಮಾಡಬೇಕಾದ ಕರ್ತವ್ಯ ಕರ್ಮಗಳನ್ನು ತೋರಿಸಿ ಕೊಡುವ ವೇದವು ಎಚ್ಚರಿಕೆಯಾಗಿರಲು, ಬ್ರಾಹ್ಮಣಕುಲದಲ್ಲಿ ಹುಟ್ಟಿದ ರಾಮಾನುಜರಿಗೆ ಅರವು ಭಾಷೆಯಲ್ಲಿ ಬರೆದಿರುವ ಪ್ರಬಂಧಗಳನ್ನು ಪಾಠ ಮಾಡುವದರಲ್ಲಿ ಆಯಾಸಬಡುವದು ಸರಿಯಲ್ಲವು. ಶ್ರೀ ವಿಷ್ಣುವಿನ ಕಾಂತಿಯಿಂದ ವ್ಯಾಪಕವಾದ ಹಾಲು ಕಡಲಿನ ದಂಡೆಗೆ ಹೋದವನು ಹಾಲು ಬೇಕೆಂತಾ ಗೊಲ್ಲರ ಮನೆಗೆ ಓಡ್ಯಾನೋ? ಓಡಲಿಕಿಲ್ಲೆಂಬ ಭಾವವು.

ಮೂ। ಕಿಂಚ। ತನ್ಮತಾನುವರ್ತಿನಾಂಕೇಷಾಂಚಿದೇಷಾಚೇಷ್ಟಾನೇಷ್ಟಾವೈದಿಕಾನಾಂ ॥ ೩೨೨ ॥

ಟೀಕಾ ॥ ತದಿತಿ ॥ ಕೇಷಾಂಚಿದೇಕದೇಶಿನಾಂ ಭಾಷಯಾತೆಂಗಳಾಖ್ಯಾನಾಂವಾರ್ಜಾಲಕಿಶೋರನ್ಯಾಯವಾದಿನಾಂ— ಚೇಷ್ಟಾಆಚಾರಃ— ವೈದಿಕಾನಾಂ ವೇದೋಕ್ತಕರ್ಮಾನುಷ್ಠಾತೄಣಾಂ ॥

ಅರ್ಥ ॥ ಈ ರಾಮಾನುಜ ಮತದವರಲ್ಲಿ ಕೆಲವರ ಆಚಾರವು ವೈದಿಕರ ಮನಸ್ಸಿಗೆ ಬರುವದಿಲ್ಲವು. ಅದೇನೆಂದರೆ—

---

* ಕೇಷಾಂ ಇತಿಪಾಠಾಂತರಂ ॥

ಮೂ। ಪಶ್ಯ। ಶ್ಲೋ। ಮುಂಚಂತಃಪಂಚಯಜ್ಞಾನ್ದ್ರವಿಡಭಣಿತಿಭಿರ್ಮೋಹಯಂತೋನಭಿಜ್ಞಾನ್ ನಿಂದಂತೋಹಂತಯಜ್ಞಾನಸಕೃದಪಿಹರೇರ್ವಂದನಂವಾರಯಂತಃ । ಸದ್ವೇಷಂಧಾರಯಂತಃ ಕತಿಚಿದವಿಹಿತೈಸ್ಸಂಕ್ಷಿಪಂತ್ಯೇವಕಾಲಂಲುಂಪಂತಃ ಶ್ರಾದ್ಧಚರ್ಯಾಂಯತಿಮಪಿಗೃಹಿಣಾಂವಂದನಂಕಾರಯಂತಃ ॥ ೩೨೩ ॥

ಟೀಕಾ ॥ ಮುಂಚಂತ ಇತಿ ॥ ಪಂಚಯಜ್ಞಾನ್ ಬ್ರಹ್ಮಯಜ್ಞೌಪಾಸನಾತಿಥಿಪೂಜಾ— ದೇವರ್ಷಿಪಿತೃತರ್ಪಣವೈಶ್ವದೇವಾಖ್ಯಾನ್ ಮುಂಚಂತಃ—ದ್ರವಿಡಭಣಿತಿಭಿಃ ಭಾಷಾಪ್ರಬಂಧವಾಕ್ಯೈರನಭಿಜ್ಞಾನ್ ಅಜ್ಞಾತವೇದಶಾಸ್ತ್ರಾರ್ಥಾನ್—ಮೋಹಯಂತಃ ಸ್ವಮತೇಭ್ರಾಮಯಂತಃ—ಯಜ್ಞಾನ್ ಜ್ಯೋತಿಷ್ಟೋಮಾದೀನ್ ನಿಂದಂತಃ ಕಾಮ್ಯಾ ಇತಿಗರ್ಹಯಂತಃ— ಹರೇರಪಿವಂದನಂ ಅಸಕೃತ್ ವಾರಯಂತಃ ನಿಷಿಧ್ಯಂತಃ— ಸತ್ಸುದ್ವೇಷಂಧಾರಯಂತಃ—ಯತಿಂಸ್ವಮತಸಂನ್ಯಾಸಿನಮಪಿ—ಗೃಹಿಣಾಂವಂದನಂಕಾರಯಂತಃ-ಶ್ರಾದ್ಧಸ್ಯಚರ್ಯಾಂವಿಧಿವದನುಷ್ಠಾನಂ—ಲುಂಪಂತಃ ತ್ಯಜಂತಃ—ಕತಿಚಿತ್ ರಾಮಾನುಜೀಯಾಃ— ಅವಿಹಿತೈಃ ಶ್ರುತಿಸ್ಮೃತಿದೂರೈಃ ಕರ್ಮಭಿರೇವ— ಕಾಲಂಸರ್ವಂ— ಸಂಕ್ಷಿಪಂತಿಗಮಯಂತಿ ॥

ಅರ್ಥ। ರಾಮಾನುಜರಲ್ಲಿ ಕೆಲಬರು ಬ್ರಹ್ಮಯಜ್ಞ, ಔಪಾಸನ, ಅತಿಥಿ ಪೂಜೆ, ದೇವಋಷಿಪಿತೃತರ್ಪಣ ಮತ್ತು ವೈಶ್ವದೇವ ಎಂಬ ಐದು ಯಜ್ಞಗಳನ್ನು ಬಿಟ್ಟುಕೊಟ್ಟಂಥಾವರಾಗಿಯೂ, ಅರವು ಭಾಷೆಪ್ರಬಂಧಗಳನ್ನು ಹೇಳಿ ಅರಿಯದವರಿಗೆ ಮರುಳು ಮಾಡುವಂಥಾವರಾಗಿಯೂ, ಜ್ಯೋತಿಷ್ಟೋಮಾದಿ ಯಜ್ಞಗಳನ್ನು ದೂಷಿಸುವಂಥಾವರಾಗಿಯೂ, ಹರಿಗೆ ನಮಸ್ಕಾರ ಮಾಡಬಾರದೆಂತ ಯಾವಾಗಲೂ ಹೇಳುವಂಥಾವರಾಗಿಯೂ, ಸಜ್ಜನರಲ್ಲಿ ಹಗೆಯುಳ್ಳಂಥಾವರಾಗಿಯೂ, ಶ್ರಾದ್ಧಕರ್ಮಗಳನ್ನು ವಿಧಿಪೂರ್ವಕ ಮಾಡದಂಥಾವರಾಗಿಯೂ, ಸಂನ್ಯಾಸಿಗಳಿಂದ ಗೃಹಸ್ಥರಿಗೆ ನಮಸ್ಕಾರ ಮಾಡಿಸುವಂಥಾವರಾಗಿಯೂ ಈ ತರದ ಅನೇಕ ವೇದ ವಿರುದ್ಧಕರ್ಮಗಳನ್ನು ಮಾಡುವಂಥಾವರಾಗಿಯೂ ಕಾಲಹರಣ ಮಾಡುತ್ತಾರೆ.

ಮೂ। ಕಿಂಚ। ಶ್ಲೋ। ಘಂಟಾಘೋಷಂತ್ಯಜಂತೋಹರಿಪರಿಚರಣೇಸರ್ವಲೋಕಾವಿಗೀತಂ ಖ್ಯಾತಂತ್ರೈಲೋಕ್ಯಮಾತುಃಶ್ರುತಿಭಿರಭಿಹಿತಂವೈಭವಂಖಂಡಯಂತಃ । ಸಂಕೇತಃಶ್ರದ್ಧಯೈವಸ್ವಚರಣಸಲಿಲಂಸ್ವೀಯಗೋಷ್ಠ್ಯಾಂಪಿಬಂತಃ ಕೇಚಿದ್ವಿಪ್ಲಾವಯಂತೇಜಗದಭಿದಧತಃಕೇಶವಂದೋಷಭೋಗ್ಯಂ ॥ ೩೨೪ ॥

ಟೀಕಾ ॥ ಘಂಟೇತಿ ॥ ಸರ್ವಸ್ಮಿನ್ ಲೋಕೇ ಅವಿಗೀತಂಪ್ರಶಸ್ತಂ—ಘಂಟಾಘೋಷಂ— ಹರಿಪರಿಚರಣೇ ವಿಷ್ಣ್ವರ್ಚನಾಯಾಂ—ತ್ಯಜಂತಃ—ಶ್ರುತಿಭಿಃ—ಸಾಹಸ್ರೀರಮೃತಾಸತಾಂ ಇತ್ಯಾದಿಭಿಃ ಅಭಿಹಿತಂ ಪ್ರಕಟಿತಂ ಅತಏವಖ್ಯಾತಂ ಲೋಕತ್ರಯಪ್ರಸಿದ್ಧಂ—ತ್ರೈಲೋಕ್ಯಮಾತುರ್ಲಕ್ಷ್ಮ್ಯಾಃ—ವೈಭವಂ ಸ್ವಾತಂತ್ರ್ಯಂ ಖಂಡಯಂತಃ ದೂಷಯಂತಃ—ಲಕ್ಷ್ಮೀರಪಿಭಗವತಶ್ಶೇಷಭೂತೇತಿವದಂತಃ—ಸ್ವೀಯಾನಾಂ ಸ್ವಮತಸ್ಥಾನಾಂ ಗೋಷ್ಠ್ಯಾಂಸಭಾಯಾಂ—ಸಂಕೇತಸ್ವೀಯ ಕಲ್ಪಿತವ್ಯವಸ್ಥಾಯಾಂ ಶ್ರದ್ಧಯಾನಿರ್ವಹಣಾಭಿನಿವೇಶೇನಸ್ವ

ಚರಣಸಲಿಲ ಮೇವ—ಪಿಬಂತಿ—ತೇಹಿಸರ್ವೇಸ್ವಚರಣ ಸಲಿಲ ಮೇಕಸ್ಮಿನ್ಪಾತ್ರೇ ಗೃಹೀತ್ವಾತತಸ್ತತ್ಪಿಬಂತೀ ತಿತನ್ಮತರಹಸ್ಯಂ—ಕೇಶವಂ ದೋಷಭೋಗ್ಯಂ ನಿಯಮ್ಯ—ಕೃತಿನಾಂ ದೋಷಾಣಾಂ ನಿಯಾಮಕತ್ವೇನ ಭೋಕ್ತಾರಮಭಿದಧತಃ ವದಂತಃ ಕೇಚಿತ್‌ಪೂರ್ವೋಕ್ತಾಃ— ಜಗತ್ ಶನ್ಮರ್ಯಾದಾಮಿತ್ಯರ್ಥಃ ವಿಪ್ಲಾವಯಂತೇವಿಪರ್ಯಾಸಯಂತಿ ||

ಅರ್ಥ || ಇವರು ಲೋಕದಲ್ಲೆಲ್ಲಾ ಪ್ರಶಸ್ತವೆಂದೆಣಿಸಲ್ಪಡುವ ಘಂಟಾನಾದವನ್ನು ದೇವರ ಪೂಜೆ ವೇಳೆಯಲ್ಲಿ ಮಾಡುವದಿಲ್ಲವು. ವೇದಗಳಲ್ಲಿ ಹೇಳಲ್ಪಟ್ಟ ಶ್ರೀಲಕ್ಷ್ಮಿದೇವಿಯ ಐಶ್ವರ್ಯವನ್ನು ಅಂಗೀಕರಿಸುವದಿಲ್ಲವು. ಅಂದರೆ ಲಕ್ಷ್ಮಿಯೆಂದರೆ ವಿಷ್ಣುವಿನ ಒಂದು ವಿಶೇಷಣ ರೂಪವಾದ ಅಂಶವೆಂಥೇಳುತ್ತಾರೆ. ತಾವೇ ಕಲ್ಪಿಸಿದ ಗುರುತುಗಳಲ್ಲಿ ನಂಬಿಕೆಯಿಂದ ತಮ್ಮ ಮತಸ್ಥರ ಕೂಟದಲ್ಲಿ ತಮ್ಮ ಸ್ವಂತ ಪಾದೋದಕವನ್ನು ಕುಡಿಯುತ್ತಾರೆ. ಪ್ರಾಣಿಗಳು ಮಾಡುವ ತಪ್ಪುಗಳು ದೇವರ ಪ್ರೇರೇಪಣೆಯಿಂದ ಆಗುವದರಿಂದ ದೇವರೇ ಅವುಗಳ ಫಲ ಅನುಭವಿಸುವವನು ಎಂತ ಹೇಳುತ್ತಾರೆ. ಈ ಪ್ರಕಾರವಾಗಿ ಮೇಲೆ ಹೇಳಲ್ಪಟ್ಟಿರುವ ಕೆಲವರು ಲೋಕಮರ್ಯಾದೆ ಮೀರಿ ನಡೆಯುತ್ತಾರೆ.

ಮೂ। ಶ್ಲೋ। ಯಜ್ಞಾಃಪಂಚಮಹತ್ಪದೇನಸಹಿತಾಃಯೇಚಾ
ಪರೇವಿಶ್ರುತಾಃಯತ್ಕರ್ಮಗ್ರಹಸಂಕ್ರಮಾದಿಸಮಯೇಸರ್ವೇ
ಬುಧಾಃಕುರ್ವತೇ। ತತ್ಸರ್ವಂವಿಸೃಜಂತಿಕಾಮ್ಯಮಿತಿಯೇತ್ರಯ್ಯ
ಧ್ವವಿಧ್ವಂಸಕಾಃತೈರ್ದ್ವೇನಿತ್ಯತಯಾಶ್ರಿತೇಯದಶನಂಯಾಚವ್ಯ
ವಾಯಕ್ರಿಯಾ || ೩೨೫ ||

ಟೀಕಾ || ಯಜ್ಞಾ ಇತಿ || ಯೇಪಂಚ ಯಜ್ಞಾಃ ಬ್ರಹ್ಮಯಜ್ಞಾದಯಃ—ಮಹತ್ ಇತಿಪದೇನಸಹಿತಾಃ ಮಹಾಯಜ್ಞಾ ಇತ್ಯರ್ಥಃ—ಯೇತ್ವಪರೇಯಜ್ಞಾಃ ಜ್ಯೋತಿಷ್ಟೋಮಾದಯಃ—ವಿಶ್ರುತಾಃ ಪ್ರಸಿದ್ಧಾಃ— ಇದಂಪೂರ್ವತಾಪ್ರಿಯೋಜ್ಯಂ—ಚಸ್ತ್ವರ್ಥಃ—ಸರ್ವೇಬುಧಾಃ ಶ್ರುತಿಸ್ಮೃತಿಜ್ಞಾಃ—ಗ್ರಹಃ ಚಂದ್ರಸೂ ರ್ಯೋಪರಾಗಃ—ಸಂಕ್ರಮಃ ರವೇರ್ಮೇಷಾದಿಪ್ರವೇಶಃ ತದಾದೌಸಮಯೇ ಯತ್ಕರ್ಮಪಿತ್ರ್ಯಂ ಕುರ್ವತೇ— ತತ್ಸರ್ವಂ ನಿತ್ಯಂ ನೈಮಿತ್ತಿಕಂಚಕರ್ಮ—ಕಾಮ್ಯಂ ಕಾಮಹೇತುರಿತಿ—ಅಪಲಪ್ಯೇತಿಶೇಷಃ—ಯೇತ್ರಯ್ಯಧ್ವನಃ ವೇದಮಾರ್ಗಸ್ಯವಿಧ್ವಂಸಕಾಃ ಅಮೀ—ವಿಸೃಜಂತಿ ಮುಂಚಂತಿ—ತೈರ್ದುಷ್ಪಕ್ಷೈಃ—ಅಶನಂ ಭಕ್ಷಣಂ ಯತ್— ವ್ಯವಾಯಕ್ರಿಯಾ ಮೈಥುನಂಚಯಾ— ಅಸ್ತೀತ್ಯುಭಯತ್ರಯೋಜ್ಯಂ— ತೇದ್ವೇಕರ್ಮಣೀ— ನಿತ್ಯತಯಾನಿತ್ಯಕರ್ಮತ್ವೇನ—ಆಶ್ರಿತೇ ಅಂಗೀಕೃತೇ—ಶಿಶ್ನೋದರ ಮಾತ್ರಪರಾಯಣಾ ಏತ ಇತ್ಯರ್ಥಃ ||

ಅರ್ಥ || ಪಂಚ ಮಹಾ ಯಜ್ಞಗಳನ್ನೂ ಬೇರೆ ಪ್ರಸಿದ್ಧವಾದ ಯಜ್ಞಗಳನ್ನೂ ಸೂರ್ಯನೇ ಮೊದಲಾದ ಗ್ರಹಗಳು ಒಂದು ರಾಶಿ ಬಿಟ್ಟು ಇನ್ನೊಂದು ರಾಶಿಯಲ್ಲಿ ಪ್ರವೇಶವಾಗುವಾಗ್ಯೆ ಬಲ್ಲಂಥವರೆಲ್ಲರು ಮಾಡುವ ಕರ್ಮಗಳನ್ನೂ ಸಕಾಮವಾದವುಗಳೆಂದು ದೂಷಿಸಿ ಬಿಟ್ಟು ಬಿಡುತ್ತಾರೆ. ಈ ಪ್ರಕಾರವಾಗಿ ಇವರು ವೇದ ಮಾರ್ಗಕ್ಕೆ ನೀರು ಬಿಟ್ಟು ತಿಂಡಿ ತಿನ್ನುವದು ಮತ್ತು ಹೆಂಗಸರ ಸಂಭೋಗ ಮಾಡುವದು ಎರಡು ಕೆಲಸಗಳಲ್ಲಿ ಆಸಕ್ತರಾಗಿರುತ್ತಾರೆ.

ಮೂ। ಶ್ಲೋ। ವಿದುಷಾಮಪಿಮೋಹಮಾವಹಂತೋವಿತಥೈತಿ
ಹ್ಯಸಹಸ್ರವರ್ಣನೇನ। ವಿನಯಾಭಿನಯಾತ್ಖಲಾಃಕಿಲಾಮೀವಿಜ
ಯಂತೇಕಪಟಾಲಯಾಜಗಂತಿ ॥ ೩೨೬ ॥

ಟೀಕಾ॥ ವಿದುಷಾಮಿತಿ॥ ವಿತಥಾನಾಮಸತ್ಯಾನಾಂ ಐತಿಹ್ಯಾನಾಂ ಕಲ್ಪಿತ ಪೂರ್ವತನ ವೃಷಾವಾದಾನಾಂ ಏತನ್ಮತಂ ಪರಿಗೃಹ್ಯಕೇಕೃತಾರ್ಥಾಃ ಏತೇಚ ಕೃತಾರ್ಥಾ ಅಭವನ್ನಿತ್ಯಾದಿ ರೂಪಾಣಾಂ ಸಹಸ್ರಸ್ಯವರ್ಣನೇನ ಕಥನೇನ– ವಿದುಷಾಮಪಿಕಿಮುತಾಜ್ಞಾನಾಂ– ಮೋಹಂ ಸ್ವಮತಾಭಿನಿವೇಶಂ– ಆವಹಂತಃ ಕುರ್ವಂತಃ ಖಲಾಃ ಪಾಪಾಃ– ಕಪಟಾಲಯಾಃ ಡಾಂಭಿಕಾಃ– ಅತಏವ ಅಮೀತೇಂಗಲಾಖ್ಯಾಃ– ವಿನಯಸ್ಯ ಆರೋಪಿತಸ್ಯ ಅಭಿನಯಾತ್ ಪ್ರಕಟನಾದ್ಧೇತೋಃಜಗಂತಿ– ವಿಜಯಂತೆ ಕಿಲ– ಔಪಚ್ಛಂದಸಿಕಂ॥

ಅರ್ಥ॥ ಕಳ್ಳ ನಮ್ರತೆಯಿಂದ ಸಾವಿರಗಟ್ಲೆ ಕಟ್ಟು ಕಥೆಗಳನ್ನು ಹೇಳಿ ಜಾಣರಿಗೆ ಕೂಡ ಮರಳು ಮಾಡುವ ಈ ದುಷ್ಟ ಮೋಸಗಾರರು ಲೋಕವನ್ನು ಜಯಿಸುತ್ತಾರಲ್ಲವೇ.

ಮೂ। ಕಿಂಚ। ಶ್ಲೋ। ಯಸ್ಯಾಂನಾಸ್ತಿಪುರಸ್ಕೃತಿರ್ನಯವಿದಾಂ
ಯಜ್ವಾತ್ರಹಾಸಾಸ್ಪದಂ ಪೂಜ್ಯಂತೇಚನಿರಕ್ಷರಾಃ ಪುನರಮೀ
ಸಾಂಕೇತಿಕಾಚಾರ್ಯಕಾಃ।ವೇದಾನಾಮವಹೇಳನಂವ್ಯತಿಹತಾವ
ರ್ಣಾಶ್ರಮಪ್ರಕ್ರಿಯಾಗೋಷ್ಠ್ಯೈದುಷ್ಕಲಿಪುಷ್ಕಲೀಕೃತಿಪು
ಷೇಕಸ್ಯೈಚಿದಸ್ಯೈನಮಃ ॥ ೩೨೭ ॥

ಟೀಕಾ॥ ಯಸ್ಯಾಮಿತಿ॥ ಯಸ್ಯಾಂ ಗೋಷ್ಠ್ಯಾಂ– ಇದಂ ಸರ್ವತ್ರಯೋಜ್ಯಂ– ನಯವಿದಾಂ ಶಾಸ್ತ್ರಜ್ಞಾನಾಂ– ಪುರಸ್ಕೃತಿಃ ನಾಸ್ತಿ ಯಜ್ವಾವಿಧಿನೇಷ್ಟವಾನ್ ಹಾಸಾಸ್ಪದಂ–ನಿರಕ್ಷರಾಃ ವೇದ ಶಾಸ್ತ್ರ ಗ್ರಂಥಾನಭಿಜ್ಞಾಃ–ಅಮೀ–ಸಾಂಕೇತಿಕಾಃ ಸಂಕೇತಸಿದ್ಧಃ ಆಚಾರ್ಯ ಇತಿಸಂಜ್ಞಾಯೇಷಾಂ ತತ್ಯಾಃ ಆಚಾರ್ಯ ಪುರುಷಾಶ್ಚ ಪುನಃ ಪೂಜ್ಯಂತೆ–ವೇದಾನಾಮವಹೇಳನಂ ಕಾವ್ಯ ಕರ್ಮಾನುಷ್ಠಾಪಕಾ ಇತ್ಯವಮಾನನಂ ಭವತಿ–ವರ್ಣಾನಾಮಾಶ್ರಮಾಣಾಂಚ ಪ್ರಕ್ರಿಯಾ ಆಚಾರಃ– ವ್ಯತಿಹತಾಧ್ವಸ್ತಾ– ದುಷ್ಟಸ್ಯಕಲೇಃ ಪಾಪಸ್ಯ ಪುಷ್ಕಲೀಕೃತಿಂ ವರ್ಧನಂ ಪುಷ್ಣಾತೀತಿ ತತ್ಪುಷೇ ಕಸ್ಯೈಚಿದಸ್ಯೈಗೋಷ್ಠ್ಯೈತೇಂಗಲೀಯಾಯೈನಮಃ– ಸರ್ವಥಾತ್ಯಾಜ್ಯಾಗೋಷ್ಠೀಯ ಮಿತ್ಯರ್ಥಃ॥

ಅರ್ಥ॥ ಇವರ ಕೂಟದಲ್ಲಿ ಶಾಸ್ತ್ರ ತಿಳಿದವರಿಗೆ ಸನ್ಮಾನ ಇಲ್ಲವು. ವೈದಿಕ ಕಟ್ಟಳೆಗಳ ಮೇರಿಗೆ ಯಜ್ಞ ಮಾಡುವವರು ನಗೆಗೆ ಪಾತ್ರರಾಗುತ್ತಾರೆ. ವೇದಶಾಸ್ತ್ರ ತಿಳಿಯದ ಹೆಸರಿನ ಆಚಾರ್ಯರು ಮನ್ನಿಸಲ್ಪಡುತ್ತಾರೆ. ವೇದಗಳು ನಿಂದಿಸಲ್ಪಡುತ್ತವೆ. ವರ್ಣಾಶ್ರಮ ಧರ್ಮಗಳು ನಾಶಪಡುತ್ತವೆ. ಈ ಪ್ರಕಾರವಾಗಿ ಪಾಪದ ಬೆಳೆಯುವಿಕೆಯನ್ನು ಸಾಕುವ ಈ ತೆಂಗಲೆ ವೈಷ್ಣವರ ಕೂಟಕ್ಕೆ ನಮಸ್ಕಾರವಿರಲಿ; ಅಂದರೆ ಇವರ ಕೂಟದ ತಳ್ಳಿ ಬೇಡ ಎಂಬತಾತ್ಪರ್ಯವು.

ಮೂ। ಕಿಂಚ। ಶ್ಲೋ। ಪ್ರಾಯೋಯೇಷಾಂಸಕೃದಕರಣೇಪ್ರ

ತ್ಯವಾಯೋಸ್ತಿಭೂಯಾನ್ಯಜ್ಞಾದೀಂಸ್ತಾನಿಹವಿಜಹತಿಸ್ಪಷ್ಟ
ವೇದೋಪದಿಷ್ಟಾನ್। ಕರ್ಮೈತಾನಿವಿದಧತಿಜಡಾಃಕಿಂತುಸಂ
ಕೇತಸಿದ್ಧಂಕಷ್ಟಂಕಷ್ಟಂಬತಹತಕಲೇಃಕಶ್ಚಿದುನ್ಮೇಷಏಷಃ
॥ ೩೨೮ ॥

ಟೀಕಾ॥ ಪ್ರಾಯ ಇತಿ॥ ಯೇಷಾಂ ಯಜ್ಞಾದೀನಾಂ ಸಕೃದೇಕವಾರ್ಯಕರಣೇ ಅನನುಷ್ಠಾನೇ ಸತಿ ಭೂಯಾನ್ ಪ್ರತ್ಯವಾಯಃ ಪಾಪಮಸ್ತಿ ಭವತಿ–ಸ್ಪಷ್ಟಂ ವೇದೈರುಪದಿಷ್ಟಾನ್ ಚೋದಿತಾನ್ ಯಜ್ಞಾದೀನ್ ಬ್ರಹ್ಮಯಜ್ಞಪ್ರಮುಖಾನ್– ಇಹಲೋಕೇ ವಿಜಹತಿ ತ್ಯಜಂತಿ– ಅಮೀ ಇತಿಯೋಜ್ಯಂ ಜಡಾ ಮೂರ್ಖಾಃ ಅತಏವ ಅಮೀಸಂಕೇತಸಿದ್ಧಂ ಕರ್ಮ–ಏವಕಾರೇಣ ಶ್ರೌತಸ್ಮಾರ್ತ ವ್ಯವಚ್ಛೇದಃ–ವಿದಧತಿಕುರ್ವಂತಿ–ಕಷ್ಟಂ ಕಷ್ಟಮನ್ಯಾಯ್ಯ ಮನ್ಯಾಯ್ಯಂ– ಬತೇತಿಖೇದೇ– ಏಷಃ ವಿಹಿತತ್ಯಾಗಃ ಅವಿಹಿತಾನುಷ್ಠಾನಂಚ–ಹತಕಲೇಸ್ಸಂಬಂಧೀಕಶ್ಚಿದನಿರ್ವಾಚ್ಯಃ ಉನ್ಮೇಷಃ ಪ್ರಭಾವಏವ॥

ಅರ್ಥ ॥ ಯಾವ ಯಜ್ಞಗಳೇ ಮೊದಲಾದ ಕರ್ಮಗಳನ್ನು ಒಂದು ಸಾರಿಯಾದರೂ ಮಾಡದೆ ಇದ್ದರೆ ಪಾಪ ಉಂಟಾಗುತ್ತದೋ, ಅಂಥ ವೇದಗಳಲ್ಲಿ ವ್ಯಕ್ತವಾಗಿ ಹೇಳಲ್ಪಟ್ಟಿರುವಂಥಾ ಕರ್ಮಗಳನ್ನು ಬಿಟ್ಟು ಬಿಟ್ಟು, ಬರಿಸಂನೆಗಳಿಂದ ಏರ್ಪಾಡು ಪಟ್ಟಂಥಾ ಕರ್ಮಗಳನ್ನು ಈ ಮೂರ್ಖರು ಮಾಡುತ್ತಾರೆ. ಕಷ್ಟವಯ್ಯಾ ಕಷ್ಟ! ಇದೊಂದು ಕೆಟ್ಟ ಕಲಿಯ ಹೆಚ್ಚಳಿಕೆಯೇ ಸರಿ.

ಮೂ। ಕಿಂಚ। ಶ್ಲೋ। ನಗಾಹಂತೇಗಂಗಾಮಪಿನಟಜಟಾಸಾರ
ಇತಿಯೇನಮಜ್ಜಂತ್ಯಂಭೋಧೌಲವಣರಸವೇಶಂತಕಇತಿ। ನಪಂ
ಚೈವಂಗವ್ಯಾನ್ಯಪಿಪಶುಶಕೃತ್ಸಾರಇತಿಹಾಪಿಬಂತ್ಯೇಷಾಂದೋ
ಷಾನ್ಕಇಹನಿಪುಣಸ್ಸ್ಯಾದ್ಗಣಯಿತುಂ॥ ೩೨೯ ॥

ಟೀಕಾ॥ ನೇತಿ॥ ಯೇತೇಂಗಲಾಖ್ಯಾಃ–ಗಂಗಾಮಪಿಲೋಕ ಪಾವನೀಂ–ನಟಸ್ಯ ನರ್ತಕಸ್ಯ ಶಿವಸ್ಯ ಜಟಾನಾಂ ಆಸಾರಃ ವರ್ಷಮಿತಿ–ವಿಗರ್ಹ್ಯೇತಿಶೇಷಃ–ನಗಾಹಂತೇ ನಸ್ನಾಂತಿ ಅಂಭೋಧೌ–ಲವಣರಸಃ ಕ್ಷಾರಜಲಃ ವೇಶಂತಕಃ ಪಲ್ವಲಮಿತಿ–ನಮಜ್ಜಂತಿನಸ್ನಾಂತಿ–ಏವಂ ಪಂಚಗವ್ಯಾನ್ಯಪಿ–ಪಶೋಃ ಶಕೃತ್ಸಾರಃ ಪುರೀಷಭಾಗ ಇತಿನಪಿಬಂತಿ–ತೇಷಾಂ ಏಷಾಂ ದೋಷಾನ್ ಗಣಯಿತುಂ ಇಹಕಃ ನಿಪುಣಸ್ಸ್ಯಾತ್–ನ ಕೋಪೀತ್ಯರ್ಥಃ ॥

ಅರ್ಥ ॥ ಈ ತೆಂಗಲೆಯರು ಗಂಗೆಯನ್ನು ಶಿವನಜಡೆಯೊಳಗಿಂದ ಹರದು ಬಂದ ನೀರೆಂದು ಹಿಯ್ಯಾಳಿಸಿ ಗಂಗೆಯಲ್ಲಿಯೂ, ಸಮುದ್ರವು ಉಪ್ಪು ನೀರಿನ ಒಂದು ಸಣ್ಣ ಕೊಳ ಎಂದು ದೂಷಿಸಿ ಸಮುದ್ರದಲ್ಲಿಯೂ, ಸ್ನಾನ ಮಾಡುವದಿಲ್ಲವು. ಪಂಚಗವ್ಯವು ಆಕಳ ಸಗಣಿಯ ಭಾಗವೆಂಥೇಳಿ ಅದನ್ನು ಕುಡಿಯುವದಿಲ್ಲವು. ಈ ತೆಂಗಲೆಯರ ಕೊರತೆಗಳು ಇಷ್ಟೆಂದು ಯಾರಿಂದಲೂ ಲೆಕ್ಕಿಸಲಿಕ್ಕೆ ಶಕ್ಯವು.

ವಿಶ್ವಾವಸುಃ ॥

ಮೂ। ಕಿಮರೇಕಳಂಕಲೇಶರಹಿತೇಷುರಾಮಾನುಜದರ್ಶನನಿಷ್ಠೇ

ಪುಗರಿಷ್ಠೇಷ್ವಪಿಸನ್ನಹ್ಯಸಿ । ಅಥವಾಭವಾದೃಶಾನಾಂಕೃಶವಿವೇಕಾನಾಂಕಾನಾಮಮರ್ಯಾದಾ ॥ ೨೨೦ ॥

ಟೀಕಾ ॥ ಕಿಮಿತಿ ॥ ಕಳಂಕಸ್ಯ ಅಪವಾದಸ್ಯಲೇಶೇನರಹಿತೇಷು ॥

ಅರ್ಥ ॥ ಏನೆಲಾ, ಮೈಲಿಗೆಯ ಲವಲೇಶವಾದರೂ ಇಲ್ಲದ ಶ್ರೇಷ್ಠರಾದ ರಾಮಾನುಜ ಮತದವರನ್ನು ಕೂಡ ನಿಂದಿಸಲಿಕ್ಕೆ ಸೊಂಟ ಕಟ್ಟುತ್ತೀಯಾ ? ಒಳ್ಳೇದ್ಯಾವದು ಕೆಡಕ್ಯಾವದು ಎಂಬ ತಿಳುಹುವಿಲ್ಲದ ನಿನ್ನಂಥವರು ಮರ್ಯಾದೆಗೇಡಿಗಳು ಸರಿಯೆ.

ಮೂ। ಉಕ್ತಂಹಿ । ಶ್ಲೋ । ಅನಲ್ಪಕಂಧರಾಯಾಂಹಿಸರ್ವಜ್ಞಸ್ಯಾಪಿದಾರುಣಾಃ ।ಆರೋಪಯಂತಿಮಾಲಿನ್ಯಂಕಾಕೋಲಾಇವತೇಖಲಾಃ ॥ ೨೨೧ ॥

ಟೀಕಾ ॥ ಅನಲ್ಪಕಮಿತಿ ॥ ಧರಾಯಾಂ ಲೋಕೇ—ತೇಖಲಾಃ—ಕಾಕೋಲಾ ದ್ರೋಣಕಾಕಾ ಇವಸರ್ವಜ್ಞಸ್ಯಾಪಿ ಅನಲ್ಪಕಂ—ಮಾಲಿನ್ಯಂ ದೋಷಮಶುದ್ಧಿಂಚ—ಆರೋಪಯಂತಿ ಪ್ರಾಪಯಂತಿಹಿ—ಸರ್ವಜ್ಞಸ್ಯ ಶಿವಸ್ಯಾಪಿ ಅನಲ್ಪಾಯಾಂ ಕಂಧರಾಯಾಂ ಗ್ರೀವಾಯಾಂ—ಮಾಲಿನ್ಯಂ ನೈಲ್ಯಂ—ಕಾಕೋಲಾಃ ಕಾಲಕೂಟಾ ಇವ ॥

ಅರ್ಥ ॥ ಕೋಲಾಹಲವೆಂಬ ನಂಜು ಸರ್ವಜ್ಞನಾದ ಶಿವನ ಕೊರಳನ್ನು ಕಪ್ಪಾಗಿ ಮಾಡಿದಂತೆ ಭಯಂಕರರಾದ ದುಷ್ಟರು ಲೋಕದಲ್ಲಿ ತಿಳಿವಿನಿಂದ ಹಿರಿಯನಾದವನ ಮೇಲೆ ಕೂಡ ದೊಡ್ಡ ದೋಷವನ್ನು ಹೊರಿಸುತ್ತಾರೆ.

ಮೂ।ಇತಿಪಶ್ಯತಾವದೇತೇಷಾಂಪವಿತ್ರತಮಂಚರಿತ್ರಂ॥೨೨೨॥

ಅರ್ಥ ॥ ನೋಡು ಆ ರಾಮಾನುಜ ಮತದವರ ಅತಿ ಶುದ್ಧವಾದ ನಡವಳಿಕೆ.

ಶ್ಲೋ । ಉಚ್ಛಿಷ್ಟಾನ್ಯತಿದೂರತಃಪರಿಹರಂತ್ಯುಜ್ಝಂತ್ಯಸತ್ಸಂಗತಿಂ ಪ್ರಾಣಾಪತ್ಸ್ವಪಿಬಾಂಧವೇತರಗೃಹೇಪ್ರಾಶ್ನಂತಿನಾಪೋಪ್ಯಮೀ । ಕಾಮ್ಯಂನಿರ್ಮಿಮತೇನಕರ್ಮಭಗವತ್ಕೈಂಕರ್ಯಮವಸ್ಥಿತಾ ಸ್ಸತ್ವಸ್ಥೈಃ ಸ್ಪೃಹಣೀಯಏಷಜಯತಿಶ್ರೀವೈಷ್ಣವಾನಾಂಕ್ರಮಃ ॥ ೨೨೩ ॥

ಟೀಕಾ ॥ ತತ್ರಾದ್ಯಂ ಶಿಷ್ಟವರ್ಜಿತಾವಭುಕ್ತಿದೋಷಮನೂದ್ಯಾಹ ಉಚ್ಛಿಷ್ಟಾನೀತಿ ॥ ಅಮೀರಾಮಾನುಜೀಯಾಃ—ಉಚ್ಛಿಷ್ಟಾನ್ಯನ್ನಾನಿ—ಅತಿದೂರತಃ ಪರಿಹರಂತಿ—ಅಸದ್ಭಿಸ್ಸಂಗತಿಂ ಸಹಭೋಜನಾದಿಕಂಉಜ್ಝಂತಿತ್ಯಜಂತಿ— ಪ್ರಾಣಾಪತ್ಸು ಸತೀಷ್ವಪಿ—ಬಾಂಧವೇತರಗೃಹೇ—ಅಪೋಪಿನಪ್ರಾಶ್ನಂತಿ ಕಾಮ್ಯಂಸ್ವರ್ಗಾದಿ ಹೇತುಂಕರ್ಮ— ನನಿರ್ಮಿಮತೆ ನಕುರ್ವಂತಿ— ಭಗವತ್ಕೈಂಕರ್ಯೇ ಪೂಜಾಯಾಮೇವಸ್ಥಿತಾಃ ಏಷಃ ಉಕ್ತವಿಧಃ—ಶ್ರೀವೈಷ್ಣವಾನಾಂ ಕ್ರಮಃ ರೀತಿಃ—ಸತ್ವಸ್ಥೈಃ ಸಾತ್ವಿಕೈಃ—ಸ್ಪೃಹಣೀಯಃ ಕಾಮನೀಯಸ್ಸನ್ಜಯತಿ ॥

ಅರ್ಥ॥ ಈ ಶ್ರೀ ವೈಷ್ಣವರು ಎಂಜಲನ್ನವನ್ನು ದೂರದಿಂದ ತಪ್ಪಿಸಿಕೊಳ್ಳುತ್ತಾರೆ. ಕೀ

ಳು ಜನರ ಜೊತೆ ಬಿಟ್ಟು ಬಿಡುತ್ತಾರೆ. ಜೀವ ಹೋಗುವ ವೇಳೆ ಬಂದರೂ, ನೆಂಟರಿಷ್ಟರ ಮನೆಗಳಲ್ಲಿ ಹೊರತು ಬೇರೆ ಮನೆಗಳಲ್ಲಿ ನೀರು ಕೂಡ ಕುಡಿಯುವದಿಲ್ಲವು. ಫಲ ಇಚ್ಛೆ ಯಿಂದ ಯಾವದೊಂದೂ ಕರ್ಮ ಮಾಡದೆ ಸರ್ವದಾ ವಿಷ್ಣು ಸೇವೆಯಲ್ಲೇ ಆಸಕ್ತರಾಗಿ ರುತ್ತಾರೆ. ಒಳ್ಳೇ ಜನರಿಂದ ಬಯಸಲ್ಪಡಲಿಕ್ಕೆ ಯೋಗ್ಯವಾದ ಈ ಶ್ರೀ ವೈಷ್ಣವರ ರೀತಿಯು ಉತ್ಕರ್ಷದಿಂದ ನಡಿಯುತ್ತೆ.

ಮೂ। ಕಿಂಚ। ಶ್ಲೋ। ಭಾಲೇಶುದ್ಧಮೃದೂರ್ಧ್ವಪುಂಡ್ರತಿಲಕಃ ಪದ್ಮಾಕ್ಷಮಾಲಾಗಲೇದಿವ್ಯಂಶಂಖರಥಾಂಗಚಿಹ್ನಮನಿಶಂದೀಪ್ತಂ ಭುಜಾಮೂಲಯೋಃ। ವಕ್ತ್ರೇಶೌರಿಗುಣೈಕವರ್ಣನಪರಾವಾಚ ಸ್ಸದೇನೋ *ಮುಚಾ ಮೇತೇಷಾಂ ಹರಿಭಕ್ತಿತುಂದಿಲಹೃದಾಂ ವೀಕ್ಷಾಪಿಮೋಕ್ಷಾವಹಾ ॥ ೩೩೪ ॥

ಟೀಕಾ ॥ ಭಾಲಇತಿ ॥ ಯಸ್ಮಾ ದೇತೇಷಾಂ ಭಾಲೇಶುದ್ಧಮೃದಾಶ್ವೇತ ಮೃತ್ತಿಕಯಾ ಊರ್ಧ್ವ ಪುಂಡ್ರಾತ್ಮಕಃ ತಿಲಕಃ—ಗಲೇ ಪದ್ಮ ಬೀಜಮಯೀಅಕ್ಷಮಾಲಾ— ಭುಜಾಮೂಲಯೋರ್ಬಾಹ್ವಗ್ರಯೋಃ ಅನಿಶಂದಿವ್ಯಂದೀಪ್ತಂ ಶಂಖಸ್ಯರಥಾಂಗಸ್ಯ ಚಕ್ರಸ್ಯ ಚಿಹ್ನಂ—ವಕ್ತ್ರೇಶೌರಿಗುಣೈಕವರ್ಣನಪರಾಃ ವಾಚಃ— ಸರ್ವತ್ರ ಯಥಾಯೋಗಮಸ್ತೀತಿಯೋಜ್ಯಂ ತತ್ತಸ್ಮಾತ್—ಹರಿಭಕ್ತಿತುಂದಿಲ ಹೃದಾಂ ಏನೋ ಮುಚಾಂ ನಿಷ್ಪಾಪಾನಾಮೇತೇಷಾಂ ವೀಕ್ಷಾದರ್ಶನಮಪಿಮೋಕ್ಷಾವಹಾ ॥

ಅರ್ಥ॥ ಈ ಶ್ರೀವೈಷ್ಣವರ ಹಣೆಯಲ್ಲಿ ತಿರುಮಣಿನ ಮೂರು ನಾಮಗಳು; ಕೊರಳಿನಲ್ಲಿ ಪದ್ಮ ಮಣಿಗಳ ಸರ; ತೋಳು ಮೂಲದಲ್ಲಿ ರಾತ್ರಿ ಹಗಲು ಹೊಳೆಯುವ ಶಂಖ ಚಕ್ರಗಳ ಗುರುತುಗಳು; ಬಾಯಿಯಲ್ಲಿ ಹರಿಗುಣ ಹಾಡುವಂಥಾ ವಾಕ್ಕು,ಈ ಪ್ರಕಾರವಾಗಿ ವಿಷ್ಣು ಭಕ್ತಿಯಿಂದ ಉಬ್ಬಿದ ಹೃದಯವುಳ್ಳಂಥಾವರಾದ ಪಾಪ ಮುಕ್ತರಾದಂಥಾವರಾದ ಈ ಶ್ರೀ ವೈಷ್ಣವರನ್ನು ನೋಡಿದರೆ ಸಾಕು, ಮೋಕ್ಷ ದೊರಿಯುವದು.

ಮೂ । ದೋಷಾರೋಪಣಂಚೈತೇಷುತ್ವದೀಯಮುಪಹಾಸ್ಯಂ ॥ ೩೩೫ ॥

ಟೀಕಾ ॥ ದೋಷೇತಿ ॥ ಅಪಹಸಿತುಂ ಯೋಗ್ಯಂ ಅಪಹಾಸ್ಯಂ ॥

ಅರ್ಥ ॥ ಇವರಲ್ಲಿ ನೀನು ಇಟ್ಟ ದೋಷಗಳು ನಗಲಿಕ್ಕೆ ಯೋಗ್ಯವಾದವುಗಳು.

ಶ್ಲೋ। ಇಷ್ಟಾತ್ಸ್ವಬಾಂಧವಜನಾದಿತರೈರದೃಷ್ಟಂಯದ್ಭುಂಜತೇ ನ್ನಮಿಹಲಕ್ಷ್ಮಣಪಕ್ಷನಿಷ್ಠಾಃ । ದೋಷಃಕಿಮೇಷದುರಿತಾಪಹ ರೋಗುಣೋವೇತ್ಯೇವಂವಿವಿಚ್ಯಪರಿಪೃಚ್ಛಗುಣಾಗುಣಜ್ಞಾನ್ ॥ ೩೩೬ ॥

---

* ಮುಷಾ ಮಿತಿಪಾಠಾಂತರಂ ॥

ಟೀಕಾ|| ಇಷ್ಟಾದಿತಿ|| ಇಹ– ಲಕ್ಷ್ಮಣ ಪಕ್ಷೇ ರಾಮಾನುಜ ಮತೀನಿಷ್ಠಾಃ– ಇಷ್ಟಾತ್ ಸ್ವಮತ ಸ್ಥಾತ್-- ಸ್ವಬಾಂಧವಜನಾತ್– ಇತರೈಃ ಮತಾಂತರಸ್ಥೈಃ ಅಬಾಂಧವೈರದೃಷ್ಟಮನ್ನಂ– ಭುಂಜತ ಇತಿಯತ್ ಏಷ ಉಕ್ತವಿಧಾನ್ನ ಭೋಜನಾ ವಿಧೇಯಪ್ರಾಧಾನ್ಯಾತ್ಪುಂಸ್ತ್ವಂ ದೋಷಃ– ಕಿಂತ ಬ್ಧೋವಾಕ್ಯಾರ್ಥೇ– ದುರಿತಾವಹಾರೋಗುಣೋವಾ– ಇತ್ಯುಕ್ತಪ್ರಕಾರಂ ವಿವಿಚ್ಯ ಆಲೋಚ್ಯ– ಗುಣಾ ನಗುಣಾರ್ ದೋಷಾಂಶ್ಚ ಜಾನಂತೀತಿತತ್ಜ್ಞಾನ್–ಪರಿಪೃಚ್ಛ||

ಅರ್ಥ || ಈ ರಾಮಾನುಜ ಮತದವರು ತಮ್ಮ ಮತಸ್ಥರಾದ ನೆಂಟರಿಷ್ಟರಲ್ಲದವರ ದೃಷ್ಟಿ ಬೀಳದಿದ್ದ ಅನ್ನ ಮಾತ್ರ ಉಣ್ಣುತ್ತಾರಷ್ಟೆ. ಇದು ಅವರ ತಪ್ಪೋ ಅಥವಾ ಪಾಪ ಪರಿಹಾರಕವಾದ ಗುಣವೋಯೆಂಬುವದನ್ನು ಪರೀಕ್ಷಿಸಿ ನೋಡಿ ಗುಣ ಮತ್ತು ಅವಗು ಣಗಳನ್ನು ತಿಳಿದ ಬುದ್ಧಿವಂತರಿಗೆ ಕೇಳು.

ಮೂ। ಕಿಂಚ । ಶ್ಲೋ। ದೃಷ್ಟಂಬಂಧ್ವಿತರೈಸ್ಸತಾಮನದತಾಂ ದೋಷೋಯಏಷೋಽಪರೈಶ್ಶಿಷ್ಟೈಃ ಸ್ಪೃಷ್ಟಮನಶ್ನತಾಮಿ ಹಮಹಾರಾಷ್ಟ್ರಾದಿಕಾನಾಂಸಮಃ । ಯೇಷಾಂದೂಷಯಿತಾನ ಕೋಽಪಿನಿಯತಾಹಾರಃಪರಂತುದ್ವಿಜ ಸ್ಸರ್ವಾಶೀನತುದೂಷಣಂಹಿ ತಭುಜಾಂತೇಷಾಮಿದಂ ಭೂಷಣಂ || ೩೩೭ ||

ಟೀಕಾ || ಏವಮಪಿ ಶ್ರೋತ್ರಿಯಾನ್ನತ್ಯಾಗಾದಿ ದೂಷಣಾಂ ಚೋದ್ಧೃತಮಿತ್ಯತ ಆಹ–ದೃಷ್ಟಮಿತಿ|| ಬಂಧ್ವಿತರೈರ್ದೃಷ್ಟಂ ಅನ್ನಂ–ಅನದತಾಂ ಅಭಕ್ಷಯತಾಂ–ಸತಾಂ ಯಏಷದೋಷಃ ಕಥಿತಃ–ಸಏಷ ದೋಷಃ–ಅಪರೈಶ್ಶಿಷ್ಟೈಃ ಸ್ಪೃಷ್ಟಂ ಅನಶ್ನತಾಂ ಮಹಾರಾಷ್ಟ್ರಾದಿಕಾನಾಮಪಿಸಮಃ–ನಿಯತಾಹಾರಃ ಭೋಜನನಿಯತಃ–ಕೋಽಪಿಜನಃ– ಯೇಷಾಂ ವೈಷ್ಣವಾನಾಂ– ದೂಷಯಿತಾ ದೂಷಕಃ ನಭವತಿ–ಪರಂ ತುಕಿಂತು–ಸರ್ವಾಶ್ರಾಶ್ನಾತೀತಿ ಸರ್ವಾಶೀದ್ವಿಜಃ ದೂಷಯಿತಾ ಇದಂ ಅನಿಯಮಭೋಜನ ಕೃತದೂಷ ಣಂತು–ಹಿತಭುಜಾಂ ನಿಯತಾಹಾರಾಣಾಂ ತೇಷಾಂ ಭೂಷಣಮೇವನತುದೂಷಣ ಮಿತಿಯೋಜ್ಯಂ ||

ಅರ್ಥ || ನೆಂಟರಿಷ್ಟರು ಹೊರತಾಗಿ ಬೇರೆ ಜನರು ನೋಡಿದಂಥ ಅನ್ನ ಈ ಶ್ರೀವೈ ಷ್ಣವರು ಉಣ್ಣುವದಿಲ್ಲೆಂಬ ದೋಷವು, ಸದ್ಗುಣಿಗಳಾದ ಬೇರೆ ಜನರು ಮುಟ್ಟಿದ ಅನ್ನ ಮಹಾರಾಷ್ಟ್ರ ಬ್ರಾಹ್ಮಣರೇ ಮೊದಲಾದವರು ಸೇವಿಸುವದಿಲ್ಲ ಎಂಬ ದೋಷಕ್ಕೆ ಸಮಾನ ವಾದದ್ದು. ಆದದರಿಂದ ಅದರಲ್ಲಿ ವಿಶೇಷವೇನಿರುವದಿಲ್ಲೆಂಬ ತಾತ್ಪರ್ಯವು. ನೇಮದಿಂದ ಭೋಜನವ್ಯವಹಾರ ಮಾಡುವಂಥ ಬ್ರಾಹ್ಮಣನ್ಯಾರು ಈ ಶ್ರೀವೈಷ್ಣವರನ್ನು ನಿಂದಿಸ ಲಿಕ್ಕಿಲ್ಲವು. ಬೇಕಾದನ್ನು ತಿನ್ನುವ ಬ್ರಾಹ್ಮಣನು ನೇಮದಿಂದ ಭೋಜನ ವ್ಯವಹಾರ ಮಾಡುವ ಶ್ರೀವೈಷ್ಣವರಿಗೆ ನಿಂದೆಮಾಡಿದರೆ ಅದು ಅವರಿಗೆ ಭೂಷಣರೂಪವಾಗುವದು.

ಮೂ । ಯಚ್ಛಠಾರಿಪ್ರಭೃತಿಮುನಿವಿನಿರ್ಮಿತದಿವ್ಯಪ್ರಬಂಧಾ ಧ್ಯಯನೇದೋಷಉದ್ಭಾವಿತಸ್ಸೋಽಯಮಿತಿಹಾಸ ಪುರಾಣಾದಿ ಭಿರ್ವೇದಮುಪಬೃಂಹಯದ್ಭ್ಯೋವಿದ್ವದ್ಭ್ಯೋನರೋ ಚತೇ || ೩೩೮ ||

ಅರ್ಥ ॥ ಶಠಾರಿಯೇ ಮೊದಲಾದ ಮುನಿಗಳು ಮಾಡಿದ ದೈವಸಂಬಂಧಿ ಪ್ರಬಂಧಗಳನ್ನು ಪಾಠಮಾಡಿದರಿಂದ ಯಾವ ದೋಷ ನೀನು ಹೇಳಿದ್ದಿಯೋ, ಆ ದೋಷವು ಇತಿಹಾಸಪುರಾಣಾದಿ ಗ್ರಂಥಗಳನ್ನು ಮಾಡಿ ವೇದದರ್ಥದ ವಿಸ್ತಾರಮಾಡಿದ ಪಂಡಿತರಿಗೆ ಇಷ್ಟವಾಗದು.

ಮೂ । ಶೃಣ್ವೇತಾವತ್ ॥ ೨೩೯ ॥

ಅರ್ಥ ॥ ಮತ್ತು ಹೇಳುತ್ತೇನೆ ಕೇಳು.

ಶ್ಲೋ । ಬಕುಲವಿಭೂಷಣೇನಗುರುಣಾಕರುಣಾನಿಧಿನಾಶ್ರುತಿಮುಕುಟಾಭಿಸಂಧಿಮವಧಾರ್ಯಪರಂಗಹನಂ । ರಚಿತಮಿಹಪ್ರಬಂಧಮನುಸಂದಧತಾಂಕಥಿತಂಸಮಮಪಿದೂಷಣಂಸ್ಮೃತಿಪುರಾಣಮಧೀತವತಾಂ ॥ ೨೪೦ ॥

ಟೀಕಾ ॥ ದ್ರಾವಿಡ ಪ್ರಬಂಧದೂಷಣ ಮುದ್ಧರ್ತುಮಾಹ— ಬಕುಲೇತಿ ॥ ಕರುಣಾನಿಧಿನಾ ಅತಏವ ಬಕುಲ ವಿಭೂಷಣೇನ ಶಠಕೋಪೇನ ಗುರುಣಾ—ಶ್ರುತಿಮುಕುಟಾನಾಂ ಉಪನಿಷದಾಂ ಅಭಿಸಂಧಿಂ ತಾತ್ಪರ್ಯಂ—ಪರಮತ್ಯಂತಂ ಗಹನಂ ದುರವಗಾಹ ಮವಧಾರ್ಯನಿಶ್ಚಿತ್ಯ ರಚಿತಂ ದ್ರಾವಿಡಭಾಷಯೇತಿಶೇಷಃ— ಪ್ರಬಂಧಂ—ಅನುಸಂದಧತಾಂ ಪಠತಾಂ—ಯದ್ದೂಷಣಂ ಕಥಿತಂ—ತದ್ದೂಷಣಂ ಸ್ಮೃತೀಃಮಾನವಾದೀಃ ಪುರಾಣಾನಿವೈಷ್ಣವಾದೀನಿಚ—ನಪುಂಸಕ ಮನಪುಂಸಕೇನೇತ್ಯಾದಿನಾ ಏಕವದ್ಭಾವಃ—ಅಧೀತವತಾಂ ತತ್ಪಾಠಕಾನಾಮಪಿ ಸಮಂ ವೇದಾರ್ಥೋಪ ಬೃಂಹಕತ್ವಾ ವಿಶೇಷಾದಿತಿಭಾವಃ ॥

ಅರ್ಥ ॥ ದಯಾ ಸಮುದ್ರರಾದ ಬಕುಳ ವಿಭೂಷಣ ಗುರು ಅಂದರೆ ಶಠಗೋಪ ಆಚಾರ್ಯರು ವೇದಗಳಿಗೆ ಕಿರೀಟ ರೂಪವಾದಂಥ ತಿಳಿಯಲಿಕ್ಕೆ ಬಹಳ ಕಠಿಣವಾದ ಉಪನಿಷದಗಳ ತಾತ್ಪರ್ಯವನ್ನು ನಿಶ್ಚೈಸಿ ದ್ರಾವಿಡ ಭಾಷೆಯಲ್ಲಿ ಪ್ರಬಂಧವನ್ನು ರಚಿಸಿದರಷ್ಟೆ. ಆ ಪ್ರಬಂಧ ಅಧ್ಯಯನ ಮಾಡುವವರನ್ನು ಕುರಿತು ನೀನು ಹೇಳಿದ ದೋಷವು ಮನ್ವಾದಿ ಸ್ಮೃತಿಗಳನ್ನೂ ಪುರಾಣಗಳನ್ನೂ ಓದುವವರಿಗೆ ಕೂಡ ತಟ್ಟುತ್ತದೆ.

ಶ್ಲೋ । ಉಪಾದೇಯಂಪ್ರಾಜ್ಞೈರುಚಿತವಿಷಯಂದ್ರಾವಿಡವಚೋಪ್ಯಯುಕ್ತಾರ್ಥಂಹೇಯಂಭವತಿವಚನಂಸಂಸ್ಕೃತಮಪಿ । ಹರಿಂಬಿಭ್ರಚ್ಚೇತಸ್ಯನತಿಸುಭಗೋಪಿಸ್ತುತಿಪದಂ ನಸದ್ರೂಪೋಪ್ಯಂತಃಕರಣಧೃತನಾರೀಸ್ತನಭರಃ ॥ ೨೪೧ ॥

ಟೀಕಾ ॥ ನನುವೇದಾರ್ಥೋಪಬೃಂಹಕತ್ವೇಪಿ—ಪ್ರಬಂಧಸ್ಯ ದ್ರವಿಡ ಭಾಷಾಮಯತ್ವೇನ—ದೇಶಭಾಷಾಮಯಂ ಕಾವ್ಯಂ ಶ್ರೋತವ್ಯಂ ಜಾತುನದ್ವಿಜೈರಿತಿಸ್ಮರಣಾದನುಚಿತಮೇತತ್ಪಠನಮತಆಹ— ॥ ಉಪಾದೇಯಮಿತಿ ॥ ಉಚಿತಃ ಶ್ಲಾಘ್ಯಃ ವಿಷಯಃ ಪ್ರತಿಪಾದ್ಯಂ ಯಸ್ಯತತ್—ದ್ರಾವಿಡವಚಃ ಪ್ರಬಂಧಃ—ಪ್ರಾಜ್ಞೈರುಪಾದೇಯಂ ಗ್ರಾಹ್ಯಂಭವತಿ—ಅಯುಕ್ತಾರ್ಥಂ ಅನುಚಿತವಿಷಯಂ ಸಂಸ್ಕೃತಮಪಿ ವಚನಂ ಭಾಣ ಪ್ರಹಸನಾದಿ—ಹೇಯಂ ತ್ಯಾಜ್ಯಂ—ಭವತಿ—ಅನತಿಸುಭಗಃ ಕುರೂಪೋಪಿ—ಹರಿಂಚೇತಸಿ ಬಿಭ್ರಜ್ಜ

ನಃಸ್ತುತೇಃ ಪದಂಸ್ಥಾನಂ ಭವತಿ ಸದ್ರೂಪೋಪಿ—ಅಂತಃಕರಣೇ ಚೇತಸಿಧೃತನಾರೀಸ್ತನಭರಃ ಜನಃ—ಸ್ತುತಿಪದಂನಭವತಿ ||

ಅರ್ಥ ॥ ನ್ಯಾಯವಾದ ವಿಷಯವು ದ್ರಾವಿಡ ಭಾಷೆಯಲ್ಲಿದ್ದರೂ ಕೂಡ ತಿಳಿದವರಿಗೆ ಸ್ವೀಕಾರ್ಯವಾಗುತ್ತದೆ. ಕುರೂಪನಾದರೂ ತನ್ನ ಮನಸ್ಸಿನಲ್ಲಿ ಹರಿಧ್ಯಾನ ಯುಕ್ತನಾದರೆ ಶ್ಲಾಘನೆಗೆ ಅರ್ಹನಾಗುತ್ತಾನೆ. ಸೊಗಸು ಉಳ್ಳವನಾದರೂ ಮನಸ್ಸಿನಲ್ಲಿ ಹೆಂಗಸರ ಕುಚಗಳ ಭಾರವನ್ನು ಹೊತ್ತುಕೊಳ್ಳುವವನಾದರೆ, ಸ್ತುತಿಗೆ ಪಾತ್ರನಾಗುವದಿಲ್ಲವು.

ಮೂ । ವಸ್ತುತಸ್ತ್ವಗಸ್ತ್ಯವ್ಯಾಕರಣಾನುಶಿಷ್ಟಾನಾಂಅನವದ್ಯ ಶಿಷ್ಟಪರಿಗ್ರಹವಿಶೇಷಪ್ರಕೃಷ್ಟಾನಾಂದ್ರಾವಿಡಶಬ್ದಾನಾಂಕೋ ನಾಮಸಂಸ್ಕೃತಾದಪಕರ್ಷಃ ॥ ೩೮೨ ॥

ಟೀಕಾ || ನನೂಚಿತವಿಷಯತ್ವೇನ ಪ್ರಬಂಧಸ್ಯ ಗ್ರಾಹ್ಯತ್ವೇಪಿ ನಸಂಸ್ಕೃತಮಯತ್ವಮತಇತರೇಷಾಮಿವ ಬ್ರಾಹ್ಮಣಾನಾಂ ನತತ್ಪಠನೌಚಿತ್ಯಮತಆಹ || ವಸ್ತುತಸ್ತ್ವಿತಿ || ಅಗಸ್ತ್ಯ ವ್ಯಾಕರಣಂ ಇಲಕ್ಕಣ ಮಿತಿಭಾಷಾನಾಮ—ತೇನಾನುಶಿಷ್ಟಾನಾಂ ವ್ಯುತ್ಪನ್ನಾನಾಂ ದ್ರಾವಿಡ ಶಬ್ದಾನಾಂ—ಪ್ರಬಂಧಗತಾನಾಮಿತಿ ಶೇಷಃ ||

ಅರ್ಥ ॥ ವಿಚಾರ ಮಾಡಿ ನೋಡಿದರೆ, ಅಗಸ್ತಿ ಋಷಿಯು ಮಾಡಿದ ಇಲಕ್ಕಣವೆಂಬ ವ್ಯಾಕರಣ ಮೂಲವಾದ ಮತ್ತು ಬಲ್ಲಂಥವರಿಂದ ಆದರಿಸಲ್ಪಟ್ಟು ಶ್ರೇಷ್ಠತ್ವ ಪಟ್ಟ ನಿರ್ದೋಷವಾದ ಅರವು ನುಡಿಗಳನ್ನು ಸಂಸ್ಕೃತಕ್ಕಿಂತಲೂ ಯಾಕೆ ಕೀಳೆನ್ನಬೇಕು ?

ಮೂ । ಪುಶ್ಯ । ಶ್ಲೋ । ಸುಯಾಸಾಂ ವ್ಯಾಕರ್ತಾಚುಳುಕಿತಸಮುದ್ರೋಮುನಿವರಃಪ್ರಬಂಧಾರಃಪ್ರೌಢಾಶ್ಶಠಮಥನಮುಖ್ಯಾಶ್ಶಮಧನಾಃ । ಪ್ರವಕ್ತಾರಶ್ಶುದ್ಧಾಃಪ್ರಥಿತಯಶಸಃಪೂರ್ವಗುರವೋಗಿರಾಂಪಾರೇತಾಸಾಂಜಯತಿಗರಿಮಾದ್ರಾವಿಡಗಿರಾಂ॥ ೩೮೩ ॥

ಟೀಕಾ || ಸಇತಿ || ಯಾಸಾಂದ್ರಾವಿಡಗಿರಾಮಿತಿ ವಾಕ್ಯತ್ರಯೇಪಿ ಯೋಜ್ಯಂ—ವ್ಯಾಕರ್ತಾ ವ್ಯಾಕರಣೇನ ಸಂಸ್ಕಾರಕರ್ತಾತು—ಚುಳುಕಿತಸಮುದ್ರಃ ಪೀತಾಬ್ಧಿಃ—ಸಃಪ್ರಸಿದ್ಧಃ—ಮುನಿವರೋಗಸ್ತ್ಯಃ ಪ್ರಬಂಧಾರಃ ಪ್ರಬಂಧಕರ್ತಾರಶ್ಚ—ಪ್ರೌಢಾಃ ಪ್ರಗಲ್ಭಾಃ—ಶಠಮಥನ ಮುಖ್ಯಾಃ ಶಠಕೋಪಾದಯಃ—ಶಮಧನಾಃ ಮುನಯಃ—ಪ್ರವಕ್ತಾರಃ ಅಧ್ಯೇತಾರಶ್ಚ—ಶುದ್ಧಾಃ ಪ್ರಥಿತಯಶಸಃ ಪೂರ್ವೇಗುರವಃ ರಾಮಾನುಜಾದಯಃ—ಸರ್ವತ್ರ ಭವಂತೀತಿ ಯಥಾಯೋಗಂ ಯೋಜ್ಯಂ—ತಾಸಾಂದ್ರಾವಿಡ ಗಿರಾಂ—ಗರಿಮಾ ಉತ್ಕರ್ಷಃ—ಗಿರಾಂಪಾರೇಜಯತಿ—ವಾಚಾಮವಿಷಯ ಇತ್ಯರ್ಥಃ ||

ಅರ್ಥ ॥ ಸಮುದ್ರನನ್ನು ಬೊಗಸಿಯಲ್ಲಿ ತೆಗದುಕೊಂಡು ಕುಡಿದುಬಿಟ್ಟವನಾದಂಥ ಅಗಸ್ತಿಋಷಿಯು ಆ ದ್ರಾವಿಡಭಾಷೆಯ ವ್ಯಾಕರಣ ಕರ್ತನು. ಶಠಗೋಪಾಚಾರ್ಯರೇ ಮೊದಲಾದ ಶಾಂತಿಯಿಂದಲೂ ಜಾಣತನದಿಂದಲೂ ಯುಕ್ತರಾದವರು ಆ ಭಾಷೆಯೊಳಗಿನ ಪ್ರಬಂಧ ಕರ್ತರು. ರಾಮಾನುಜರೇ ಮೊದಲಾದ ಪ್ರಸಿದ್ಧ ಆಚಾರ್ಯರು ಆ ಪ್ರಬಂ

ಥಗಳ ಅರ್ಥಮಾಡಿದವರು. ಈ ಪ್ರಕಾರವಾಗಿ ಆ ದ್ರಾವಿಡಭಾಷೆಯ ಶ್ರೇಷ್ಠತ್ವವು ವರ್ಣಿಸಲಿಕ್ಕೆ ಅಶಕ್ಯವಾದದ್ದು.

ಮೂ। ಯಶ್ಚೈಕದೇಶಿವಿಷಯದೂಷಣೋಪನ್ಯಾಸಸ್ತತ್ರಾಪ್ಯಾಕರ್ಣ್ಯತಾಂ ॥ ೩೮೪ ॥

ಟೀಕಾ ॥ ಯಶ್ಚೇತಿ ॥ ಏಕದೇಶಿನಃ ತೇಂಗಲಾಖ್ಯಾಃ ವಿಷಯಃ ಯೇಷಾಂತೇಷಾಂ ದೂಷಣಾನಾಮುಪನ್ಯಾಸಃ ಕಥನಂ ॥

ಅರ್ಥ॥ ಶ್ರೀ ವೈಷ್ಣವರಾದ ತೆಂಗಲೆಯವರ ದೋಷಗಳನ್ನು ನೀನು ಹೇಳಿದ್ದಿಯಷ್ಟೇ. ಅವುಗಳನ್ನು ಕುರಿತು ಕೂಡ ಹೇಳುತ್ತೇನೆ, ಕೇಳು.

ಮೂ। ಶ್ಲೋ। ಕತಿಚಿದಲಸಾಃಕರ್ಮಾಯಾಸಾದ್ವಿಹಾಯವಿನಿಶ್ಚಲಾ ಸ್ತದಪಿಭಗವದ್ಭಕ್ತಿಸ್ತೇಷಾಂಧುನೋತಿಭವವ್ಯಥಾಂ। ಶ್ರಮಸಹಜನ್ಯೈಕಾರ್ಹೈರ್ನೃಣಾಂವಿನೈವವಿಲಂಘನೈರ್ಜ್ವರನಿರಸನಾಯಾಲಂವೀರ್ಯೋತ್ತರಂಪರಮೌಷಧಮ್ ॥ ೩೮೫ ॥

ಟೀಕಾ ॥ ಕತಿಚಿದಿತಿ ॥ ಅಲಸಾಃ ಅತಏವಕತಿಚಿದನ್ಯೂ—ಆಯಾಸಾದ್ಧೇತೋಃ—ಕಷ್ಟಂ ಕರ್ಮೇತಿ ನ್ಯಾಯಾದಿತಿಭಾವಃ—ಕರ್ಮನಿತ್ಯಂ ನೈಮಿತ್ತಿಕಂಚ—ನಿಶ್ಚಲಾಃ ನಿರ್ಭಯಾಸ್ಸಂತಃ—ಜಹುರ್ಯಾದಿ—ವಿಹಾಯ ವಿನಿಶ್ಚಲಾ ಇತಿಪಾಠಾಂತರೇಪ್ಯಯಮೇವಾರ್ಥಃ—ತದಪಿತಥಾಪಿ—ತೇಷಾಂ ಕರ್ಮತ್ಯಾಗಿನಾಂ— ಭವವ್ಯಥಾಂ ಸಂಸಾರದುಃಖಂ—ಭಗವದ್ಭಕ್ತಿಃ ತದೀಯಾ—ಧುನೋತಿ—ವಾರಯತಿ—ಶ್ರಮಂ ಕ್ಷುತ್ತೃಷ್ಣಾಜನ್ಯಂ ಸಹತ ಇತಿತತ್ಸಹಸ್ಯ ಜನಸ್ಯ ಏಕಂಕೇವಲಂ ಅರ್ಹೈರ್ವಿಃ ಲಂಘನೈರ್ವಿನೈವ—ನೃಣಾಂ ರುಗ್ಣಾನಾಂ—ಜ್ವರಸ್ಯ ನಿರಸನಾಯ—ವೀರ್ಯೋತ್ತರಂ ಪ್ರಬಲಂ ಪರಂ ಔಷಧಮೇವ ಅಲಂ ಸಮರ್ಥಂಭವತಿ—ಅತ್ರ ॥ ಶ್ಲೋ ॥ ಸರ್ವಂ ಕರ್ಮಾಖಿಲಂ ಪಾರ್ಥಜ್ಞಾನೇ ಪರಿಸಮಾಪ್ಯತ ಇತ್ಯಾದಿ ಭಗವದುಕ್ತ್ಯಾತತ್ವ ಸಾಕ್ಷಾತ್ಕಾರಪರ್ಯಂತಂ ಕರ್ಮಾವಶ್ಯಕತ್ವೇ—ಭಗವದ್ಭಕ್ತಿಮಾತ್ರೇಣತತ್ತ್ಯಾಗಃ ಭಗವದಾಜ್ಞಾವಿಲಂಘನಮೇವೇತಿಸುವ್ಯಕ್ತಮೇತತ್—ಅತಏವಕವಿನಾಪಿ ಆಲಸ್ಯಾದಿತ್ಯುಕ್ತಂ ॥

ಅರ್ಥ ॥ ಇವರಲ್ಲಿ ಕೆಲವರು ಆಲಸ್ಯದಿಂದ ಕರ್ಮಮಾಡುವ ಶ್ರಮ ಉಳಿಸಿ ಕೊಳ್ಳುವದಕ್ಕಾಗಿ ಏನು ಅಂಜಿಕೆ ಇಲ್ಲದಂಥಾವರಾಗಿ ಕರ್ಮ ಬಿಟ್ಟುಬಿಡುತ್ತಾರೆ. ಆದಾಗ್ಯೂ ಅವರು ಮಾಡುವ ಭಗವತ್ಸೇವೆಯು ಸಂಸಾರ ದುಃಖವನ್ನು ಬಿಡಿಸುತ್ತದೆ. ಹ್ಯಾಗೆಂದರೆ: ಹಸಿವು ಮೊದಲಾದ ದುಃಖಗಳಿಂದ ಹುಟ್ಟುವ ಆಯಾಸವನ್ನು ತಾಳಲಿಕ್ಕೆ ಶಕ್ತಿವಂತರಾದವರಿಗೆ ಮಾತ್ರ ತಕ್ಕದಾದ ಲಂಘನದ ಹೊರತು ರೋಗಿಗಳ ಜ್ವರವನ್ನು ಪರಿಹರಿಸಲಿಕ್ಕೆ ಬೇರೆ ಒಳ್ಳೆ ಮನಗಂಡ ಔಷಧ ಇದ್ದರೆ ಸಾಕು.

ಮೂ। ಕಿಂಚ । ಶ್ಲೋ ।ರಹಸ್ಯವ್ಯಾಖ್ಯಾನೈರಘುವರಚರಿತಾನುಕಥನೈಸ್ತ್ರಯೀಸಧ್ರೀಚೀನಾಂಬಕುಲಧರವಾಚಾಂಪ್ರವಚನೈಃ। ಅಪಿಭಾಷಾವ್ಯಾಖ್ಯಾನೈರ್ಹರಿಚರಣಕೈಂಕರ್ಯವಿಧಿಭಿಃ ಪ್ರಣಾಮೈಶ್ಚಾರ್ಯಾಣಾಂಕ್ಷಣಮಿವನಯಂತ್ಯತ್ರದಿವಸಾನ್ ॥ ೩೮೬ ॥

ಟೀಕಾ ॥ ರಹಸ್ಯೇತಿ॥ ರಹಸ್ಯಾನಾಂ ಭಗವದ್ವಿಷಯಾಣಾಂ ವ್ಯಾಖ್ಯಾನೈಃ ಅರ್ಥವರ್ಣನೈಃ–ರಘುವರಚರಿತ್ರಸ್ಯ ರಾಮಾಯಣಸ್ಯ ಅನುಕಥನೈಃ ಪಠನೈಃ–ತನ್ಮತೇ ತಸ್ಯಾದ್ವಯಾರ್ಥ ಪ್ರತಿಪಾದಕತ್ವಾದಿತಿಭಾವಃ–ತ್ರಯೀಸಧ್ರೀಚೀನಾಂ ವೇದತುಲ್ಯಾನಾಂ–ಬಕುಲಧರವಾಚಾಂ ಪ್ರಬಂಧ ವಾಕ್ಯಾನಾಂ ಪ್ರವಚನೈಃ–ಭಾಷ್ಯಸ್ಯ ರಾಮಾನುಜೀಯಸ್ಯ ಆಖ್ಯಾನೈಃ–ಹರೇಶ್ಚರಣಯೋಃ ಕೈಂಕರ್ಯವಿಧಿಭಿಃ–ಆರ್ಯಾಣಾಂತನ್ಮತಸ್ಥಾನಾಂಪ್ರಣಾಮೈಶ್ಚ–ಅಮೀ–ಅತ್ರಲೋಕೇ–ದಿವಸಾನ್ ಕ್ಷಣಮಿವನಯಂತಿ–ಇದಂ ನಕಸ್ಯಾಪಿ ದೂಷಣಸ್ಯಾವಾರಕಂ–ಕಿಂತುತದೀಯಸಾಂಕೇತಿಕಾಚಾರಖ್ಯಾಪಕಮೇವ ॥

ಅರ್ಥ ॥ ಭಗವದ್ವಿಷಯಗಳನ್ನು ವರ್ಣಿಸುವಂಥಾವರಾಗಿಯೂ ರಾಮಾಯಣ ಕಥೆ ಪಾಠಮಾಡುವಂಥಾವರಾಗಿಯೂ, ವೇದತುಲ್ಯವಾದ ಬಕುಲಧರರ ಪ್ರಬಂಧಗಳ ಅರ್ಥ ಮಾಡುವಂಥಾವರಾಗಿಯೂ, ರಾಮಾನುಜಭಾಷ್ಯ ಓದುವಂಥಾವರಾಗಿಯೂ ವಿಷ್ಣುಪಾದಸೇವೆ ಮಾಡುವಂಥಾವರಾಗಿಯೂ ಆಚಾರ್ಯರ ವಂದನೆ ಮಾಡುವಂಥಾವರಾಗಿಯೂ ಈ ವೈಷ್ಣವರು ಲೋಕದಲ್ಲಿ ದಿವಸಗಳನ್ನು ಕ್ಷಣಗಳಂತೆ ಕಳಿಯುತ್ತಾರೆ.

ಮೂ। ಪುನಃಕ್ಷಣಮನುಧ್ಯಾಯಸಶ್ಲಾಘಂ ॥

ಅರ್ಥ ॥ ಮರಳಿ ಒಂದು ಕ್ಷಣ ಪರ್ಯಂತ ಧ್ಯಾನ ಮಾಡಿ ವಿಶ್ವಾವಸುವು ಸ್ತುತಿ ಮಾಡುತ್ತಾನೆ.

ಮೂ । ಅನ್ಯದಾಸ್ತಾಂನಾಮತಾಮೇವಕಾಮಮನ್ಯೋನ್ಯಂಕಲಹಾಯಮಾನಾನಾಂನಾನಾವಿಧಾನಾಂಶ್ರುತೀನಾಂಅವಿರೋಧಸಾಧನೇನಸಾಧುಭಾವಂ। ಪ್ರಕಟಯಂತೀಮಖಿಲಗುಣಾಭಿರಾಮಾಂ ರಾಮಾನುಜಸರಸ್ವತೀಮಭಿನಂದಾಮಿ । ಪ್ರಸಿದ್ಧಂಹಿ "ಸಂಧಿಮಿಚ್ಛಂತಿಸಾಧವಃ" ಇತಿ ॥ ೩೪೭ ॥

ಟೀಕಾ ॥ ಅನ್ಯದಿತಿ ॥ ಅನ್ಯತ್‌ದೂಷಣಂ ದುಷ್ಕರೋದ್ಧಾರಂ–ಆಸ್ತಾಂ ತಿಷ್ಠತು ನಾಮೇತಿಸೂಚಿತಂ ಕವೇರುಕ್ತ್ಯೈಕದೇಶಿ ವಿದ್ವೇಷಿತ್ವಂ–ನಾನಾವಿಧಾನಾಂ ಸಗುಣತ್ವ ನಿರ್ಗುಣತ್ವ ದ್ವೈತಾದ್ವೈತ ಪ್ರತಿಪಾದಕಾನಾಂ–ಅನ್ಯೋನ್ಯಂ ಕಲಹಾಯಮಾನಾನಾಂ ವಿರುಧ್ಯಮಾನಾನಾಂ–ಅವಿರೋಧಸ್ಯ ಸಾಧನೇನ ತಾತ್ಪರ್ಯ ವರ್ಣನೇನಸಾಧುಭಾವಂ ಏಕವಾಕ್ಯತ್ವಂ।ನನುವಿರುಧ್ಯಂತು ನಾಮಶ್ರುತಯಃ–ಕಿಮೇತತ್ಸಾಧುಭಾವಸಾಧನೇ ನೇತ್ಯತ ಆಹ–ಪ್ರಸಿದ್ಧಮಿತಿ ॥

ಅರ್ಥ ॥ ಅದಂತಿರಲಿ. ಪರಮೇಶ್ವರನ ಸಗುಣತ್ವ ನಿರ್ಗುಣತ್ವ ಮತ್ತು ದ್ವೈತಾದ್ವೈತತತ್ವವನ್ನು ಹೇಳುವಂಥಾ, ಒಂದಕ್ಕೊಂದು ಅಸಂಗತವಾದಂಥಾ, ವೇದ ನುಡಿಗಳ ಪರಸ್ಪರ ವಿರೋಧಾರ್ಥವನ್ನು ಬಿಡಿಸಿ ಅವುಗಳಿಗೆ ಏಕ ಮತದ ಹೊಂದಿಕೆಯನ್ನುಂಟು ಪಡಿಸಿದಂಥಾ, ಸಕಲ ಗುಣಗಳಿಂದ ಮನೋಹರನಾದಂಥ ರಾಮಾನುಜ ಯತಿಯನ್ನು ಕುರಿತು ನಮಸ್ಕಾರ ಮಾಡುತ್ತೇನೆ. "ಸಜ್ಜನರು ಸಂಧಾನವನ್ನಪೇಕ್ಷಿಸುವರು" ಎಂಬುವದು ಸಕಲರಿಗೂತಿಳಿದಿಧೆಯಷ್ಟೆ.

ಮೂ। ಶ್ಲೋ। ನಿತ್ಯಂಹೇಯಗುಣಾವಧೂನನಪರಾನ್ನೈರ್ಗುಣ್ಯ ವಾದಾಶ್ಶ್ರುತೌ ಮುಖ್ಯಾರ್ಥಾಸ್ಸಗುಣೋಕ್ತಯಶ್ಶುಭಗುಣಪ್ರ ಖ್ಯಾಪನಾದ್ಬ್ರಹ್ಮಣಃ। ಅದ್ವೈತಶ್ರುತಯೋವಿಶಿಷ್ಟವಿಷಯಾ ನಿಷ್ಕೃಷ್ಟರೂಪಾಶ್ರಯಾ ಭೇದೋಕ್ತಿಸ್ತದಿಹಾಖಿಲಶ್ರುತಿಹಿ ತಂರಾಮಾನುಜೀಯಂಮತಂ ॥ ೨೪೮ ॥

ಟೀಕಾ ॥ ನಿತ್ಯಮಿತಿ ॥ ಯಸ್ಮಿನ್ಮತೇ–ಶ್ರುತೌ ಘಟಕತ್ವಂ ಸಪ್ತಮ್ಯರ್ಥಃ–ಇತಃ ವಾಕ್ಯಚತುಷ್ಕೇಪಿ ಯೋಜ್ಯಂ–ನೈರ್ಗುಣ್ಯವಾದಾಃ ಬ್ರಹ್ಮಣೋನಿರ್ಗುಣತ್ವ ಬೋಧಕಭಾಗಾಃ–“ ಅನಾದಿಮಧ್ಯಾಂತವಿಹೀನ ಮೇಕಮಜರಂ ವೀತಶೋಕಮಜರಂ ಬ್ರಹ್ಮ” ಇತ್ಯಾದಯಃ ಹೇಯಗುಣಾನಾಂ ದೋಷಾಣಾಂ ಅವಧೂನನೇ ಅಭಾವಸ್ಥಾಪನೇಪರಾಃ ಪ್ರವಣಾಃ–ಲಕ್ಷಣಾವೃತ್ತ್ಯಾ ರೂಧಕಾಇತ್ಯರ್ಥಃ–ಭವಂತೀತಿಸರ್ವತ್ರಯೋಜ್ಯಂ ಸಗುಣೋಕ್ತಯಸ್ತು-“ಸರ್ವತಃಪಾಣಿಪಾದಂ ತತ್ಸಹಸ್ರಶೀರ್ಷಾಪುರುಷಃ” ಇತ್ಯಾದಯಃ-ಬ್ರಹ್ಮಣಃ-ಶುಭಾ ನಾಂ ಲೋಕೋತ್ತರಾಣಾಂ ಗುಣಾನಾಂ ಸರ್ವತಃ ಪಾಣಿಪಾದತ್ವಾದೀನಾಂ ಪ್ರಖ್ಯಾಪನಾತ್ ವ್ಯವಸ್ಥಾಪನಾ ತ್-ಮುಖ್ಯಾರ್ಥಾಃಅದ್ವೈತಶ್ರುತಯಃ“ತತ್ತ್ವಮಸಿ ಅಹಂ ಬ್ರಹ್ಮಾಸ್ಮಿ” ಇತ್ಯಾದಯಃ-ಜೀವಬ್ರಹ್ಮಣೋರೈ ಕ್ಯಪ್ರತಿಪಾದಕಾಃ–ವಿಶಿಷ್ಟಃ ಸೂಕ್ಷ್ಮಚಿದಚಿದ್ವಿಶಿಷ್ಟಸ್ಯೇಶ್ವರಸ್ಯ ಸ್ಥೂಲಚಿದಚಿದ್ವಿಶಿಷ್ಟಸ್ಯಜೀವಸ್ಯಚ ಅಭೇ ದಃ ವಿಷಯಃ ಲಕ್ಷಣಯಾಪ್ರತಿಪಾದ್ಯಃ ಯಾಸಾಂತಥೋಕ್ತಾಃ ಭೇದೋಕ್ತಿಸ್ತು ನಿಷ್ಕೃಷ್ಟಂ ಉಕ್ತವಿಶೇ ಷಣಶೂನ್ಯಂ ರೂಪಂ ಸ್ವರೂಪಂಯಯೋಸ್ತೌ ಜೀವೇಶ್ವರೌ ಆಶ್ರಯೌ ಪ್ರತಿಪಾದ್ಯೌ ಯಸ್ಯಾಸ್ತಾದೃಶೀ ಭವತಿ ತತ್ತಸ್ಮಾತ್–ರಾಮಾನುಜೀಯಂ ತನ್ಮತಂ ವೈಷ್ಣವ ವಿಶಿಷ್ಟಾದ್ವೈತಶಾಸ್ತ್ರಂ–ಇಹಅಖಿಲಶ್ರುತಿ ಹಿತಂ–ವೈರುಧ್ಯನಿರಸನಾದಿತಿಭಾವಃ ॥

ಅರ್ಥ ॥ ವೇದಗಳಲ್ಲಿ ಬ್ರಹ್ಮವು ಆದಿಮಧ್ಯ ಅಂತ ರಹಿತವಾದದ್ದು ಎಂಬ ಇತ್ಯಾದಿ ನಿರ್ಗುಣತ್ವಬೋಧಕ ನುಡಿಗಳವೆ. ಅವುಗಳ ತಾತ್ಪರ್ಯವೇನಂದರೆ ಪರಮೇಶ್ವರನಲ್ಲಿ ತ್ಯಾಜ್ಯ ಗುಣಗಳು ಅಂದರೆ ದೋಷಗಳು ಇರುವದಿಲ್ಲವು ಎಂಬದಾಗಿರುತ್ತದೆ. ಅದೇ ವೇದ ಗಳಲ್ಲಿ ಬ್ರಹ್ಮವು ಎಲ್ಲ ಕಡೆಯಲ್ಲಿ ಕೈಕಾಲುಗಳುಳ್ಳದೆಂಬುವದೇ ಮೊದಲಾದ ಬ್ರಹ್ಮ ಸಗುಣತ್ವಬೋಧಕ ನುಡಿಗಳವೆ. ಅವುಗಳೇ ಮುಖ್ಯವಾದವುಗಳು. ಯಾಕೆಂದರೆ ಅವು ಪರ ಮೇಶ್ವರನ ಮಂಗಲಕರವಾದ ಗುಣಗಳನ್ನು ತಿಳಿಸುತ್ತವೆ. ಪುನಹಾ ಅದೇ ವೇದಗಳಲ್ಲಿ ಅದ್ವೈತವೆಂದರೆ ಜೀವಬ್ರಹ್ಮ ಐಕ್ಯತ್ವ ಸೂಚಕ ನುಡಿಗಳವೆ. ಅವುಗಳು ಜಗದ್ರೂಪ ವಿಶೇಷದಿಂದ ಪರಮೇಶ್ವರನು ಯುಕ್ತನಾಗಿದ್ದಾನೆ ಎಂಬ ತಾತ್ಪರ್ಯ ಉಳ್ಳವುಗಳಾಗಿವೆ. ಪುನಹಾ ಅದೇ ವೇದಗಳ ದ್ವೈತಬೋಧಕ ಅಂದರೆ ಬ್ರಹ್ಮ ಮತ್ತು ಜಡರೂಪವಾದ ಜಗ ತ್ತು ಬೇರೆಯೆಂತ ತಿಳಿಸುವ ಮಾತುಗಳವೆ. ಅವುಗಳು ಜಗದ್ರೂಪ ವಿಶೇಷವನ್ನು ಬೇರೆ ಪಡಿಸಿ ಶುದ್ಧಪರಮೇಶ್ವರನನ್ನೇ ಪ್ರತಿಪಾದಿಸುವಂಥಾವುಗಳಾಗಿವೆ. ಈ ಪ್ರಕಾರವಾಗಿ ಈ ರಾಮಾನುಜ ಮತವು ಇಡಿವೇದಕ್ಕೆ ಸರಿಯಾಗಿರುವದು.

ಕೃಶಾನುಃ ॥

ಮೂ । ಅವಿತಥಮೇತತ್ತಥಾಪಿಯಇಮೇಸಂಚರಂತ್ಯಾಚಾರ್ಯ

ಪುರುಷಸಮಾಖ್ಯಾತಾ ಏತನ್ಮತಾಭಿನಿವಿಷ್ಟಾಶ್ಶಿಷ್ಟಾಸ್ತೇಷಾ
ಮೇಷಾರೀತಿರ್ನರೋಚತೇವಿವೇಚಕೇಭ್ಯಃ ॥ ೩೪೯ ॥

ಟೀಕಾ ॥ ಅವಿತಥಮಿತಿ ॥ ಏತಸ್ಯ ರಾಮಾನುಜಸ್ಯ ಮತೇಅಭಿನಿವಿಷ್ಟಾಃ ಉತ್ಕಟಾನುರಕ್ತಾಃ ॥

ಅರ್ಥ ॥ ಇದು ಸರಿ. ಆದರೆ ರಾಮಾನುಜ ಮತದಲ್ಲಿ ತುಂಬ ಆಸಕ್ತರಾಗಿ ಆಚಾರ್ಯ ಪುರುಷರೆಂಬ ಹೆಸರಿಟ್ಟುಕೊಂಡು ಅತ್ತಯಿತ್ತ ಸುಳಿದಾಡುವ ಈ ವೈಷ್ಣವರ ರೀತಿಯು ಗುಣಾ ಗುಣ ತಿಳಿದವರ ಮನಸ್ಸಿಗೆ ಬರುವದಿಲ್ಲವು. ಆದೇನಂದರೆ.

ಮೂ। *ತಥಾಹಿ। ಶ್ಲೋ। ಹತ್ವಾಮಾರ್ಗೇದ್ವಿಜಾದೀನಖಿಲಮ
ಪಿಧನಂ ಹಂತಹೃತ್ವಾತಿದೃಪ್ತಾ ದುರ್ವೃತ್ತಾಸ್ತಸ್ಕರಾಯೇವನ
ಗಿರಿನಿಲಯಾಯೇಚನೀಚಾಇಹಾನ್ಯೇ । ಕೃತ್ವಾಚಕ್ರಾಂಕಮೇ
ಷಾಂಝಟಿತಿವಿದಧತಃಕಿಂಚಮಂತ್ರೋಪದೇಶಂ ತದ್ದತ್ತೈರೇವ
ವಿತ್ತೈರ್ದಧತಿತನುಮಮೀಹಾವಂಶ †ಪಾರಂಪರೀತಃ ॥ ೩೫೦ ॥

ಟೀಕಾ ॥ ಹತ್ವೇತಿ ॥ ವನಾನಿಗಿರಯಶ್ಚನಿಲಯಃ ನಿವಾಸಃ ಯೇಷಾಂತೇ—ಯೇತಸ್ಕರಾಃ ಕಿರಾತಶಬರಾದಯಃ—ದ್ವಿಜಾದೀನ್ ಚತುರೋವರ್ಣಾನ್ ಮಾರ್ಗೇಅರಣ್ಯೇ—ಹತ್ವಾ—ಅಖಿಲಮಪಿತೇಷಾಂ ಧನಂ ಹೃತ್ವಾ ಅತಿದೃಪ್ತಾ ದುರ್ವೃತ್ತಾ ದುರಾಚಾರಾಶ್ಚ ಭವಂತಿ— ಉಕ್ತೇಭ್ಯಸ್ತಾನ್ಯೇಯೇನೀಚಾಃ ಕುಲೇನಗುಣೇನಚ ಅಥ ಮಾಭವಂತಿ— ಹಂತೇತಿಖೇದೇ—ತೇಷಾಮೇಷಾಂ ಬ್ರಹ್ಮಹಂತ್ರಾದೀನಾಂ—ಝಟಿತಿಸದ್ಯಃ ಅವಿಚಾರ್ಯೈವ ಗುಣದೋಷಾನಿತ್ಯರ್ಥಃ— ಚಕ್ರಾಂಕಂ ಕೃತ್ವಾ—ಕಿಂಚ— ಮಂತ್ರಸ್ಯ ನಾರಾಯಣಾಷ್ಟಾಕ್ಷರಸ್ಯ ಉಪದೇಶಂ— ವಿದಧತಃ ಕುರ್ವಂತಸ್ಸಂತಃ—ಅಮೀಆಚಾರ್ಯಪುರುಷಾಃ—ತೈಃಕಿರಾತಾದಿಭಿಃ ದತ್ತೈರೇವನತುಶಿಷ್ಟದತ್ತೈಃ—ವಿತ್ತೈಃತನುಂ—ವಂಶಸ್ಯ ಪಾರಂಪರೀತಃ ಪಾರಂಪರ್ಯೇಣ— ಸಾರ್ವವಿಭಕ್ತಿಕಸ್ತಸಿಃ—ದಧತಿ ವರ್ಧಯಂತೀತ್ಯರ್ಥಃ ॥

ಅರ್ಥ ॥ ದಾರಿಯಲ್ಲಿ ಬ್ರಾಹ್ಮಣರೇ ಮೊದಲಾದ ಜನರನ್ನು ಕೊಂದುಅವರ ಸೊತ್ತೆಲ್ಲ ಲೂಟಾಯಿಸಿ ಭಯಂಕರರಾಗಿಯೂ ದುಷ್ಟ ನಡತೆಯುಳ್ಳವರಾಗಿಯೂ ಅಡವಿಗಳಲ್ಲಿ ಬೆಟ್ಟಗಳಲ್ಲಿ ಮನೆ ಮಾಡಿಕೊಂಡಿರುವ ಬೇಡರಿಗೆ ಮತ್ತು ಇತರ ಕೀಳು ವೃತ್ತಿಯ ಜನರಿಗೆ ಏನು ತಡವಿಲ್ಲದೆ ಮುದ್ರೆಗಳನ್ನಿಟ್ಟು ನಾರಾಯಣ ಅಷ್ಟಾಕ್ಷರ ಮಂತ್ರಉಪದೇಶಮಾಡಿ ಅವರು ಕೊಟ್ಟ ಹಣದಿಂದಲೇ ಸಂತತಿಪಾರಂಪರೆಯಾಗಿ ಈ ಆಚಾರ್ಯ ಪುರುಷರು ಬಾಳುವೆ ಮಾಡುತ್ತಾರೆ.

ಮೂ। ಕಿಂಚ। ಶ್ಲೋ। ಜಾರಾಂಶ್ಚೋರಾನ್ಕಿರಾತಾನ್ಜನಪ ‡ದ
ಮಥನಾನ್ರಾಜಪಾಶಾನ್ಮ §ಹೇಶಾನ್ ಶಿಷ್ಯಾನ್ಕೃತ್ವಾತಿ ‖ಮತ್ತಾ
¶ಶ್ರುತಿನಯವಿಧುರಾಶ್ಶ್ರೋತ್ರಿಯೈರ್ಬ್ರಹ್ಮನಿಷ್ಠೈಃ। ಸಾಕಂ

---

* ಪಶ್ಚಾತ್ತಾವದಿತಿ ಪಾಠಾಂತರಂ ॥ † ಪಾರಂಪರೀಭಿರಿತಿಪಾಠಾಂತರಂ ॥ ‡ ದಮನಾನ್ § ಮಹಾಶಾಃ ‖ ದೃಪ್ತಾಃ ¶ ಶ್ರುತಿಪಥವಿಧುರಾಃ ಇತಿಪಾಠಾಂತರಾಣಿ ॥

ನೋಭುಂಜತೇವಿಪ್ರಾಸಕೃದಪಿವಿನತಿಂಕುರ್ವತೇಗ್ರೇನತೇಷಾಂ ಸಂ
ಕೇತೇನೈವಸಿದ್ಧಂ ತದಿದಮವಿದುಷಾಂಶ್ಲಾಘ್ಯಮಾಚಾರ್ಯಪುಂ
ಸ್ತ್ವಂ ॥ ೨೫೧ ॥

ಟೀಕಾ ॥ ಜಾರಾನಿತಿ ॥ ಶ್ರುತಿನಯವಿಧುರಾಃ ವೇದಮಾರ್ಗದೂರಾಃ— ಅತಏವ—ಯೇಮೀಆಚಾರ್ಯಪುರುಷಾಃ— ಜಾರಾನ್ ಚೋರಾನ್ ಕಿರಾತಾನ್— ಜನಪದಮಥನಾನ್ ದೇಶಧ್ವಂಸಕಾನ್— ಅತಏವ— ರಾಜಪಾಶಾನ್ ರಾಜಾಧಮಾನ್— ಮಹೀಶಾಂಶ್ಚ— ಶಿಷ್ಯಾನ್ ಕೃತ್ವಾ—ಅತಿಮತ್ತಾಸ್ಸಂತಃ— ತದ್ವೃತ್ತವಿತ್ತೈರೇವೇತಿಭಾವಃ— ಬ್ರಹ್ಮನಿಷ್ಠೈರಪಿಶ್ರೋತ್ರಿಯೈಸ್ಸಾಕಂಸಹನೋಭುಂಜತೇ— ಕಿಂಚ— ತೇಷಾಂ ಶ್ರೋತ್ರಿಯಾಣಾಂ ಅಗ್ರೇವಿನತಿಂ ಸಕೃದೇಕವಾರಮಪಿನಕುರ್ವತೇ— ಯತಸ್ತತಃ— ಅವಿದುಷಾಂ ಅಪಂಡಿತಾನಾಂ— ಅಮೀಷಾಂ ಸಂಕೇತೇನಸ್ವೀಯವ್ಯವಸ್ಥಯೈವ— ನತುವೇದಶಾಸ್ತ್ರವಿಚಾರೈಸ್ಸಿದ್ಧಂ— ಇದಂಆಚಾರ್ಯಪುಂಸ್ತ್ವಂ— ಶ್ಲಾಘ್ಯಮಿತಿಕಾಕುಃ ಅಶ್ಲಾಘ್ಯಮೇವೇತ್ಯರ್ಥಃ ॥

ಅರ್ಥ ॥ ವೇದಮಾರ್ಗದಿಂದ ದೂರವಾಗಿರುವ ಈ ಆಚಾರ್ಯ ಪುರುಷರು ಹಾದರ ಮಾಡುವವರನ್ನೂ, ತುಡುಗರನ್ನೂ, ಬೇಡರನ್ನೂ, ಲೋಕ ಕಂಟಕರಾದ ಮತ್ತು ಅಧಮರಾದ ಅರಸುಗಳನ್ನೂ ಶಿಷ್ಯರುಗಳಾಗಿ ಮಾಡಿಕೊಂಡು ಸೊಕ್ಕಿನಿಂದ ಕೊಬ್ಬಿದವರಾಗಿ ವೇದ ನಿಷ್ಠರಾದ ಅಗ್ನಿ ಹೋತ್ರಿಗಳ ಸಂಗಡ ಊಟಮಾಡುವದಿಲ್ಲವು. ಅವರ ಎದುರಿನಲ್ಲಿ ಒಂದು ಸಾರಿಯಾದರೂ ನಮಸ್ಕಾರ ಮಾಡುವದಿಲ್ಲವು. ಸ್ವಕಲ್ಪಿತ ಗುರುತುಗಳಿಂದ ಗೊತ್ತಾದ ಈ ಅಪಂಡಿತರ ಆಚಾರ್ಯತ್ವ ದೊಡ್ಡದೈಯ್ಯಾ ದೊಡ್ಡದು! (ಇವರ ಆಚಾರ್ಯತ್ವವು ನಿಂದ್ಯವಾದದ್ದು ಎಂಬ ತಾತ್ಪರ್ಯವು.)

ಮೂ । ಅಹೋಮಹಾನಯಮಭಿಜನವಿದ್ಯಾವೃತ್ತಸಂಪನ್ನಾನಾ
ಮನ್ಯೇಷಾಮಪ್ಯನಿವರ್ತ್ಯೋವ್ಯಾಮೋಹಃ ॥ ೨೫೨ ॥

ಟೀಕಾ ॥ ಅಹೋಇತಿ ॥ ಅಭಿಜನಸ್ಸತ್ಕುಲಂ—ವ್ಯಾಮೋಹಃ ಅಜ್ಞಾನಂ ಅನಿವರ್ತ್ಯಃ ದುರ್ನಿವಾರಃ ॥

ಅರ್ಥ ॥ ಇದೇನಾಶ್ಚರ್ಯ ವೈಯ್ಯಾ! ಕುಲದಿಂದಲೂ ಕಲಿವೆಯಿಂದಲೂ ನಡವಳಿಕೆಯಿಂದಲೂ ಹಿರಿಯರಾದಂಥಾ ಬೇರೆ ಜನರಿಗೆ ಕೂಡ ಇಷ್ಟು ತಿಳಿಗೇಡಿತನವು!

ಮೂ । *ಆಚಾರಸ್ಯದವೀಯಸಾಂಘನತೃಷಾಮಜ್ಞಾತವೇದಾಧ್ವ
ನಾಂ ಕಾಮಾತಂಕಕಳಂಕಪಂಕಿಲಹೃದಾಂಕೇಷಾಂಚಿದೇಷಾಮ
ಮೀ। ಶುದ್ಧಾಚಾರಜುಷೋಜಿತೇಂದ್ರಿಯತಯಾಶ್ರೇಷ್ಠಾಸ್ಸ್ವಯಂ
ಸೂರಯಃ ಶಿಷ್ಯತ್ವಂಯದುಶಂತಿತತ್ಕಿಲಕಲೇಸ್ಸಾಮ್ರಾಜ್ಯಮ
ತ್ಯೂರ್ಜಿತಂ ॥ ೨೫೩ ॥

ಟೀಕಾ ॥ ಆಚಾರಸ್ಯೇತಿ ॥ ಸ್ವಯಂಶುದ್ಧಾಚಾರಜುಷಃ— ಜಿತೇಂದ್ರಿಯತಯಾಶ್ರೇಷ್ಠಾಶ್ಚಾಪ್ಯಮೀಸೂ

* ಆಚಾರೇಷ್ವ ದವೀಯಸಾ ಮಿತಿಪಾಠಾಂತರಂ ॥

ರಯಃ ಪಂಡಿತಾಃ_ ಆಚಾರಸ್ಯ– ದವೀಯಸಾಂ ಅತಿದೂರಾಣಾಂ– ಘನತೃಷಾಂ ಅರ್ಥಾಶಾಪರತಂತ್ರಾಣಾಂ–ಕಾಮಾತಂಕಃ ಮನ್ಮಥವಿಕಾರವಿಕಳಂಕಃ ಮಾಲಿನ್ಯಂ ತೇನಪಂಕಿಲಂ ಕಲುಷಂಸ್ವಾನ್ತಂನಃ ಯೇಷಾಂತೇಷಾಂ–ಅಜ್ಞಾತವೇದಾಧ್ವನಾಂ ಚಾಪಿ–ಕೇಷಾಂಚಿತ್ ಆಚಾರ್ಯಪುರುಷಾಣಾಂ–ಕಿಂಶಬ್ದೋಗರ್ಹಾಯಾಂ–ಶಿಷ್ಯತ್ವಂಯತ್– ಉಶಂತಿವಾಂಛಂತಿಪ್ರಾಪ್ನುವಂತೀತ್ಯರ್ಥಃ–ತಸ್ಮಾತ್–ಅತ್ರಉಕ್ತಾರ್ಥೇ ಕಲೇಸ್ಸಾಮ್ರಾಜ್ಯಂ ಪ್ರಭುಶಕ್ತಿಃ ಊರ್ಜಿತಂ ಅಪ್ರತಿಹತಂಕಿಲ ||

ಅರ್ಥ ॥ ಈ ಆಚಾರ್ಯ ಪುರುಷರುಗಳಲ್ಲಿ ಹೀನ ನಡವಳಿಕೆಯುವರಾದಂಥ, ಹಿರಿದಾದ ಲೋಭದಿಂದ ಯುಕ್ತರಾದಂಥ, ಶ್ರುತ್ಯೋಕ್ತ ಮಾರ್ಗವನ್ನು ಅರಿಯದವರಾದಂಥಾ, ಮನ್ಮಥವಿಕಾರದಿಂದ ಕೊಳಿತ ಮನಸ್ಸು ಉಳ್ಳವರಾದಂಥಾ ಕೆಲವರ ಶಿಷ್ಯತ್ವವನ್ನು ಸಂಪಾದಿಸಲಿಕ್ಕೆ, ಚೊಕ್ಕ ನಡತೆಯುವರಾದ, ಕಾಮ ಕ್ರೋಧ ಮೊದಲಾದ ವಿಷಯುಗಳನ್ನು ಗೆದ್ದಂಥಾವರಾದ ಹಿರಿಯರಾದಂಥಾವರಾದ ಪಂಡಿತರು ಕೂಡ ಬಯುಸುತ್ತಾರೆ. ಇದು ಕಲಿಯು ಧೊರೆತನದ ಏಳಿಗೆಯಲ್ಲವೇ ?

ಮೂ। ಕಿಂಚ। ಶ್ಲೋ। ಸ್ವಯಂತರಿತುಮಕ್ಷಮಃ *ಕಿಮುಪರಾನ ಸೌತಾರಯೇದಿತಿಸ್ವಯಮಚಿಂತಯನ್ನಗಣಯ‌ನ್ ಧನಾನಾಂವ್ಯಯಂ। ಜಡಂಗುರುರಿತಿಭ್ರಮನ್ ಶ್ರಯತಿಪುಸ್ತಕಾಡಂಬರೈರ್ಬಹೂಪಕರಣಾನ್ವಿತೈರ್ಬ †ಹುಳದೇವತಾವಿಗ್ರಹೈಃ॥ ೩೫೪ ॥

ಟೀಕಾ ॥ ಸ್ವಯಮಿ.ತಿ॥ ಸ್ವಯಂತರಿತುಮಕ್ಷಮಃ ಅಶಕ್ತಃ_ಅಸಾವಾಚಾರ್ಯಪುರುಷಃ_ಪರಾನ್ ಕಥಂ ತಾರಯೇತ್_ಉಭಯತ್ರಭವಾಬ್ಧಿಮಿತಿಶೇಷಃ ಇತ್ಯುಕ್ತಪ್ರಕಾರಂ ಸ್ವಯಮಚಿಂತಯನ್ ಬುಧಃಪಾಮರೋವಾ_ ಜಡಂಮೂಢಮಾಚಾರ್ಯಪುರುಷಂ–ಪುಸ್ತಕಾನಾಮಾಡಂಬರೈಃ ಆಟೋಪೈಃ_ ಬಹುಭಿರುಪಕರಣೈಃ ಅರ್ಘ್ಯಪಾತ್ರಾದಿಭಿರನ್ವಿತೈಃ ಬಹುಳೈರನೇಕೈಃ ದೇವತಾನಾಂ ರಾಮಕೃಷ್ಣಾದೀನಾಂ ವಿಗ್ರಹೈಃ ಪ್ರತಿಮಾದಿಭಿಃ ಭ್ರಮನ್ ಮಹಾನಿತಿಭ್ರಾಂತಸ್ಸನ್– ಧನಾನಾಂವ್ಯಯಮಗಣಯನ್ ಅಪ್ರಯೋಜನತ್ವೇನಚಾಲಕ್ಷಯಂಶ್ಚಸನ್– ಗುರುರಿತಿಮಮ ಆಚಾರ್ಯಇತಿ ಆಶ್ರಯತಿ ||

ಅರ್ಥ ॥ ತನ್ನನ್ನು ತಾನು ಸಂಸಾರ ದುಃಖದಿಂದ ರಕ್ಷಿಸಿ ಕೊಳ್ಳಲಿಕ್ಕೆ ಶಕ್ತಿ ಇಲ್ಲದವನು ಹೆರರನ್ನು ಹ್ಯಾಗೆ ಕಡೆಗಾಣಿಸ್ಯಾನು ಎಂಬ ಆಲೋಚನೆ ಮಾಡದೆ, ಜನರು ಪುಸ್ತಕಗಳ ರಾಶಿಗೂ ಅರ್ಘ್ಯಪಾತ್ರಗಳೇ ಮೊದಲಾದ ಪೂಜೆ ಮುಟ್ಟುಗಳ ಸಮೂಹಕ್ಕೂ ರಾಮಕೃಷ್ಣಾದಿ ಅನೇಕ ದೇವತೆಗಳ ಗೊಂಬೆಗಳಿಗೂ ಮರುಳಾಗಿ- ನಿರರ್ಥಕವಾದ ಹಣವೆಚ್ಚವನ್ನು ಎಣಿಕೆಯಲ್ಲಿ ತಾರದೆ- ಯಾವನಾದರು ಒಬ್ಬ ಮೂರ್ಖನಾದ ಆಚಾರ್ಯ ಪುರುಷನನ್ನು ಗುರು ಎಂದು ಅನುಸರಿಸುತ್ತಾರೆ.

ಮೂ। ಕಿಂಚ। ಶ್ಲೋ। ಅಮಲಮತಿಷುಲೋಕೆಜಾಗರೂಕೇಷ್ವನೇಕೇಷ್ವಪಿನಿಜಗುರುವಂಶೋತ್ಪತ್ತಿಮೇವಾವಲೋಕ್ಯ । ವಿಗ

---

* ಕಿಮುತರಾನ್ ॥ † ಪೃಥುಲ ॥

ತಶುಭಚರಿತ್ರಂವೇದಶಾಸ್ತ್ರಾನಭಿಜ್ಞಂ ಕಮಪಿಗುರುರಿತೀಮೇ ಕಷ್ಟಮಾರಾಧಯಂತಿ ॥ ೩೫೫ ॥

ಟೀಕಾ ॥ ಅಮಲೇತಿ ॥ ಇಮೇಪಾಮರಾಃ–ಅಮಲಮತಿಷು ಶುದ್ಧಚಿತ್ತೇಷು ಅನೇಕೇಷು ಬುಧೇಷು ಲೋಕೇ ಜಾಗರೂಕೇಷು ವಿದ್ಯಮಾನೇಷು– ಸತ್ಸ್ವಪಿ– ನಿಜಾನಾಂ ಪಿತೃಪಿತಾಮಹಾದೀನಾಂ ಯೋಗುರುಃ ಪೂರ್ವತನಃ ತಸ್ಯವಂಶೇಉತ್ಪತ್ತಿಂ ಜನ್ಮೈವೇತ್ಯೇವಕಾರೇಣ ವಕ್ಷ್ಯಮಾಣಗುಣವ್ಯವಚ್ಛೇದಃ-- ವಿಗತಶುಭಚರಿತ್ರಂ ವೇದಶಾಸ್ತ್ರಾನಭಿಜ್ಞಂ ಕಮಪ್ಯಾಚಾರ್ಯಪುರುಷಂ ಅಪಿಗರ್ಹಾಯಾಂ--ಗುರುರಿತಿ ಆರಾಧಯಂತಿ ಪೂಜಯಂತಿ-- ಕಷ್ಟಂ ಅನ್ಯಾಯ್ಯಂ ॥

ಅರ್ಥ ॥ ಲೋಕದಲ್ಲಿ ನಿರ್ಮಲಚಿತ್ತರಾದಂಥವರು ಅನೇಕರಿರಲು, ಒಳ್ಳೇ ನಡತೆಯನ್ನು ಬಿಟ್ಟಂಥಾವನಾದ, ಶ್ರುತಿಸ್ಮೃತಿ ಮೊದಲಾದ ಶಾಸ್ತ್ರಗಳನ್ನರಿಯದಂಥಾವನಾದ ಯಾವನೊಬ್ಬನನ್ನಾಗಲೀ ತಮ್ಮ ಕುಲಗುರುವಿನ ವಂಶದಲ್ಲಿ ಹುಟ್ಟಿದವನೆಂಬ ಒಂದೇ ಕಾರಣದಿಂದ ಜನರು ಪೂಜಿಸುತ್ತಾರೆ. ಇದು ಅನ್ಯಾಯವಲ್ಲವೇ !

ಮೂ । ಅಪರಮಪಿಕಲೇರಾಕರ್ಣಯಚಮತ್ಕಾರಂ ॥ ೩೫೬ ॥

ಟೀಕಾ ॥ ಅಪರಮಿತಿ ॥ ಚಮತ್ಕಾರಂ ಪ್ರಭಾವಂ ॥

ಅರ್ಥ ॥ ಮತ್ತು ಈ ಕಲಿಯ ಮಾಯವನ್ನು ಹೇಳುತ್ತೇನೆ ಕೇಳು.

ಶ್ಲೋ । ಸಮ್ಯಕ್‌ಶಿಷ್ಯಜನಂ ಪರೀಕ್ಷ್ಯಬಹುಭಿಸ್ಸಂವತ್ಸರೈರುತ್ಸುಕಂ ಶುಶ್ರೂಷಾಭಿರುಪಾದಿಶನ್ಪ್ರಮುದಿತಾಃ ಪೂರ್ವೇಭುವೀತಿಶ್ರುತಂ । *ಆರಾಧ್ಯೈರ್ವಸನಮರ್ಪಣೈರವಿನತಾ ನಾಚಾರ್ಯಏವಾದರಾದ †ಬ್ದೈರ್ಭೂರಿತಮೈಃ ಪ್ರಸಹ್ಯಲಭತೇಶಿಷ್ಯಾನ್ ‡ಕ್ರಮೇಣಾಧುನಾ ॥ ೩೫೭ ॥

ಟೀಕಾ ॥ ಸಮ್ಯಗಿತಿ ॥ ಪೂರ್ವೇ ಯುಗಾಂತರಸ್ಥಾಃವಸಿಷ್ಠವಾಮದೇವಾದಯಃ–ಭುವಿ ಉತ್ಸುಕಂ ವಿದ್ಯಾಗ್ರಹಣತತ್ಪರಂ– ಅತಏವ ಶಿಷ್ಯಜನಂ ಬಹುಭಿಃ ಸಂವತ್ಸರೈಃ ಶುಶ್ರೂಷಾಭಿಃ ಸಮ್ಯಕ್ಪರೀಕ್ಷ್ಯ–ಪ್ರಮುದಿತಾಸ್ಸಂತಃ– ಉಪಾದಿಶನ್ ತಸ್ಮೈವಿದ್ಯಾಮುಪದಿಷ್ಟವಂತ ಇತಿಶ್ರುತಂ–ಪುರಾಣಾದಿಷ್ವಿತಿಭಾವಃ– ಅಧುನಾ ತು–ಆಚಾರ್ಯಏವ– ಅವಿನತಾನ್ ಜನಾನ್– ಭೂರಿತಮೈಃ ಅಬ್ದೈಃ ಬಹುಸಂವತ್ಸರೈಃ– ಆದರಾದಿಷ್ಟಾನಾಂ ವಸ್ತ್ರಾಲಂಕಾರಭಕ್ಷ್ಯಾದೀನಾಂ ಸಮರ್ಪಣೈರಾರಾಧ್ಯಆವರ್ಜಯಿತ್ವಾ– ಕ್ರಮೇಣಾತಿಕಷ್ಟೇನ–ಪ್ರಸಹ್ಯಬಲಾತ್ಕೃತ್ಯ– ಶಿಷ್ಯಾನ್ ಲಭತೇಕುರುತಇತ್ಯರ್ಥಃ ॥

ಅರ್ಥ ॥ ಪ್ರಾಚೀನ ಕಾಲವೆಂದರೆ ಕಳೆದ ಯುಗಗಳಲ್ಲಿ ಲೋಕದಲ್ಲಿ ಋಷಿಗಳು ವಿದ್ಯೆಘಳಿಸುವ ಲವಲವಿಕೆಯುಳ್ಳವರಾಗಿ ಬಂದ ವಿದ್ಯಾರ್ಥಿಗಳಿಂದ ಅನೇಕ ವರುಷಗಳ ಪರ್ಯಂತ ಸೇವೆ ಮಾಡಿಕೊಂಡು ಅವರನ್ನು ಪರೀಕ್ಷಿಸಿ, ತರುವಾಯ ಸಂತೋಷಯುಕ್ತರಾಗಿ ಆ ವಿದ್ಯಾರ್ಥಿಗಳಿಗೆ ವಿದ್ಯೆಕಲಿಸುತ್ತಿದ್ದರೆಂತ ಕೇಳಿದ್ದೇವೆ. ಈಗಲಾದರೆ ಆಚಾ

---

* ಆರಾಧ್ಯೇಷ್ಟ ಸಮರ್ಪಣೈಃ † ಅಬ್ದೈಃ ‡ ಶ್ರಮೇಣ ಇತಿಪಾಠಾಂತರಾಣಿ ॥

ರ್ಯನೇ ಅಡನಾಡಿ ಜನರನ್ನು ಬಹಳ ವರುಷಗಳ ಪರಿಯಂತ ಆದರಾತಿಥ್ಯವಮಾಡಿ ಅಂದರೆ ಹೋಳಿಗೆ ಪಾಯಸ ಉಣ್ಣಿಸಿ ಉಡುಗೇರೆಗಳನ್ನು ಕೊಟ್ಟು ಒಲಿಸಿಕೊಂಡು ಬಹಳ ಸಾಯಾಸದಿಂದಲೂ, ಬಲಾತ್ಕಾರದಿಂದಲೂ ಶಿಷ್ಯರಾಗಿಮಾಡಿಕೊಳ್ಳುತ್ತಾನೆ.

ವಿಶ್ವಾವಸುಃ ॥

ಮೂ । ಮಂದಮನೀಷಮಹಾಪುರುಷಾನೇವಂಮಾದುದುಷಃ ॥ ೩೫೮ ॥

ಅರ್ಥ ॥ ಮೂಢಬುದ್ಧಿಯೇ ಶ್ರೇಷ್ಠರನ್ನು ಹೀಗೆ ನಿಂದಿಸಬೇಡ.

ಶ್ಲೋ । ಭವಜಲನಿಧಿಮಜ್ಜತ್ಸಜ್ಜನೋಜ್ಜೀವನಾರ್ಥಂ ಜಗತಿಮಹತಿವಂಶೇ ಜಾತವಂತೋಮಹಾಂತಃ । *ಪ್ರಪದನಧನಕೃಷ್ಟಾಃ ಪಂಚಸಂಸ್ಕಾರದಾನಾತ್ಕತಿನಕೃತಿನಏತೇಜ್ಞಾನಹೀನಾನ್ ಪುನಂತೀ ॥ ೩೫೯ ॥

ಟೀಕಾ ॥ ಭವೇತಿ ॥ ಭವಜಲಧೌನಿಮಜ್ಜತಾಂ ಸಜ್ಜನಾನಾಂ ಉಜ್ಜೀವನಾರ್ಥಂ ತಾರಣಾಯ–ಜಗತಿ ಮಹತಿ ವಂಶೇ ಜಾತವಂತಃ–ಅತಏವಮಹಾಂತಃ–ಕೃತಿನಃ ಧನ್ಯಾಃ ಏತೇಆಚಾರ್ಯಪುರುಷಾಃ–ಪ್ರಪದನಂ ಶರಣಾಗತಿರೇವ ಧನಂತೇನ ಕೃಷ್ಟಾಃ ವತ್ಸಲಾಃಸಂತಃ–ಕತಿಕಿಯತಃ ಜ್ಞಾನಹೀನಾನ್–ಪಂಚಾನಾಂ ಸಂಸ್ಕಾರಾಣಾಂ-''ತಾಪಃಪುಂಡ್ರಃ ತಥಾನಾಮಮಂತ್ರೋಯಾಗಶ್ಚ ಪಂಚಮ'' ಇತಿ ತನ್ಮತಪ್ರಸಿದ್ಧಾನಾಂ-ದಾನಾನ್ನ ಪುನಂತಿ ಪುನಂತ್ಯೇವೇತ್ಯರ್ಥಃ–ಸಜ್ಜನೋಜ್ಜೀವನಾರ್ಥ ಮಿತ್ಯುಕ್ತ್ಯಾ ತಸ್ಕರಾದೀನಾಂ ಸಜ್ಜನತ್ವಸ್ಯ ಶಶವಿಷಾಣಪ್ರಾಯತ್ವಾನ್ನ 'ಹತ್ವಾ ಮಾರ್ಗೇ' ಇತ್ಯಾದಿ ಶ್ಲೋಕೋಕ್ತ ದೂಷಣೋದ್ಧಾರ ಇತಿಧ್ಯೇಯಂ ॥

ಅರ್ಥ ॥ ಸಂಸಾರ ಸಮುದ್ರದಲ್ಲಿ ಮುಳುಗಿದ ಸುಜನರನ್ನು ಪಾರಗಾಣಿಸಲಿಕ್ಕೆ ಲೋಕದಲ್ಲಿ ಶ್ರೇಷ್ಠ ಕುಲದಲ್ಲಿ ಜನ್ಮವನ್ನಡೆದು ಶ್ರೇಷ್ಠರಾದಂಥಾವರಾದ ಮತ್ತು ಪುಣ್ಯವಂತರಾದ ಈ ಆಚಾರ್ಯ ಪುರುಷರು ಶರಣಾಗತಿಯೇ ಕಾಣಿಕೆಯಾಗಿ ತೆಗದುಕೊಂಡು ಪ್ರಸನ್ನರಾಗಿ ಚಕ್ರಾಂಕನೇತ್ರಿಪುಂಡ್ರನಾಮ ಮಂತ್ರ ಮತ್ತು ಯಾಗಗಳೆಂಬ ಐದು ಸಂಸ್ಕಾರಗಳಿಂದ ಎಷ್ಟೋ ಅಜ್ಞಾನಿಗಳನ್ನು ಪವಿತ್ರಮಾಡುತ್ತಾರೆ.

ಮೂ । ಕಿಂಚ । ಶ್ಲೋ । ಆಚಾರ್ಯಾಃ ಪುರುಷಾಮಹತ್ತರಕುಲೇ ಸ್ವಬ್ಜಾಕ್ಷದಾಸ್ಯೋಜ್ವಲಾ ನಾವಸ್ಸಂಸೃತಿವಾರಿಧೇಃಪರಮಮೀ ನಾವಾತ್ತರಿಷ್ಯನ್ಯದಿ । ಅಪ್ರಾಪ್ತಾಚ್ಯುತದಾಸ್ಯವೃತ್ತಯಇಹಾವಿಜ್ಞಾತಮಂತ್ರೋತ್ತಮಾಃ ಸರ್ವೇತರ್ಹಿಕಲಾವತಪ್ತತನವೋ ಹಂತಾಪತಿಷ್ಯನ್ನಧಃ ॥ ೩೬೦ ॥

---

* ಪ್ರಪದನಧನತುಷ್ಟಾಃ ಇತಿಪಾಠಾಂತರಂ ॥

ಟೀಕಾ || ಆಚಾರ್ಯಾ ಇತಿ|| ಸಂಸ್ಕೃತಿವಾರಿಧೇಃ ಸಂಸಾರಾಬ್ಧೇಃ_ನಾವಃಪರಂ_ಅಬ್ಜಾಕ್ಷಸ್ಯ ವಿಷ್ಣೋಃ ದಾಸ್ಯೋಜ್ವಲಾ ಅಮೀಆಚಾರ್ಯಾಃಪುರುಷಾಃ_ ಮಹತ್ತರೇಷುಕುಲೇಷುತಿರುಮಲಕಂದಾಳಾದಿಷು_ಸಾ ವಾತರಿಷ್ಯ್‌ ನಜಾತವಂತೋಯದಿತರ್ಹಿ_ಇಹಭುವಿ_ಕಲೌ_ಸರ್ವೇಽಪಿ_ಅಪ್ರಾಪ್ತಾಚ್ಯುತ ದಾಸ್ಯವೃತ್ತ ಯಃ_ಅವಿಜ್ಞಾತಮಂತ್ರೋತ್ತಮಾಃ_ಅತಪ್ತತನವಸ್ಸಂತಃ_ಅಧಃ ಅಪತಿಷ್ಯ್‌ ನಿರಯೇ ಪತಿತಾಅಭವಿ ಷ್ಯ್‌_ತರತಿಪತತ್ಯೋಃ ಹೇತುಹೇತು ಮದ್ಭಾವೇಲೃಜ್_||

ಅರ್ಥ || ಸಂಸಾರ ಕಡುಲು ದಾಟಲಿಕ್ಕೆ ಹಡಗುಗಳಾದಂಥಾವರಾದ ವಿಷ್ಣುಭಕ್ತಿ ಯಿಂದ ತೇಜಃ ಪುಂಜರಾದ ಈ ಆಚಾರ್ಯ ಪುರುಷರು ಶ್ರೇಷ್ಠವಾದ ಕುಲಗಳಲ್ಲಿ ಜನ್ಮ ವತ್ತಿಕೊಳ್ಳದಿದ್ದರೆ ಕಲಿಯುಗದಲ್ಲಿ ಪೃಥ್ವಿಯ ಮೇಲೆ ಎಲ್ಲರು ವಿಷ್ಣುಭಕ್ತಿ ಇಲ್ಲದಂಥಾವರಾ ಗಿಯೂ ಚಕ್ರಾಂಕನೆಯಿಂದ ವಿರಹಿತರಾಗಿಯೂ ನರಕದಲ್ಲಿ ಬೀಳುತಿದ್ದರು.

ಮೂ। ಶ್ಲೋ। ತಾಪಾದಿಭಿಸ್ಸಪಾಪಾಂ ಪುನತಾಂಜನತಾಂಮಹಾ ತ್ಮನಾಮೇಷಾಂ। ದೋಷಶ್ಚೇದೇಷಸಮೋದುಷ್ಟಾನ್‌ಪುನತೋ ಽಪಿಗಾಂಗಪೂರಸ್ಯ || ೩೬೧ ||

ಟೀಕಾ || ನನ್ವೇವ ಮಪಿತಸ್ಕರಾದೀನಾಂ ಪ್ರವತ್ವಾದಿರಾಹಿತ್ಯೇನ ಸಂಸ್ಕಾರೇಷ್ವನಧಿಕಾರಾತ್ತೇಷಾಂ ತತ್ಕರಣಮತಿನಿಂದಿತ ಮೇವೇತ್ಯತ್ರಾಹ || ತಾಪಾದಿಭಿರಿತಿ || ಸಪಾಪಾಂ_ಜನತಾಂ ಜನಸಮೂಹಂ_ತಾ ಪಾದಿಭಿಸ್ಸಂಸ್ಕಾರೈಃ_ಪುನತಾಂ ಪವಿತ್ರೀಕುರ್ವತಾಂ_ ಮಹಾತ್ಮನಾಮೇಷಾಮಾಚಾರ್ಯ ಪುರುಷಾಣಾಂ ದೋಷಃ ಅನಧಿಕಾರಿಷ್ವ ಸಂಸ್ಕಾರಕೃತಃ_ಭವತಿಚೇತ್_ಏಷಃ ದೋಷಃ_ದುಷ್ಟಾನ್ ಪಾಪಾತ್ಮನಃ ಪು ನತಃ ಗಾಂಗಪೂರಸ್ಯಾಪಿಸಮಃ_ತಸ್ಯಾಪಿ ಭವೇದೇವೇತ್ಯರ್ಥಃ_ಅತಃ ಗಂಗಾಪ್ರವಾಹಸ್ಯ ಪಾವನೀಕರಣಂ ಯಥಾನಾಧಿಕಾರಿ ವಿಶೇಷನಿಯಂತ್ರಿತಂ ತಥೈವಮಹಾತ್ಮನಾಮಿತಿಭಾವಃ ||

ಅರ್ಥ || ಶ್ರೇಷ್ಠರಾದ ಈ ಆಚಾರ್ಯ ಪುರುಷರು ಪಾಪಿಷ್ಠರಾದ ಜನರುಗಳನ್ನು ಚಕ್ರಾಂಕನವೇ ಮೊದಲಾದ ಸಂಸ್ಕಾರಗಳಿಂದ ಪವಿತ್ರಮಾಡುವದು ದೋಷವಾದರೆ ಅಂ ಥ ದೋಷವು ಪಾಪಿಷ್ಠರನ್ನು ಪಾವನರಾಗಿ ಮಾಡುವ ಗಂಗಾ ನದಿಗೆ ಸಹ ಉಂಟಾ ಗುವದು.

ಮೂ। ಇದಂಚಾವಬೋದ್ಧವ್ಯಂ || ೩೬೨ ||

ಅರ್ಥ|| ಇದನ್ನು ತಿಳಿ.

ಶ್ಲೋ। ಸದ್ವಂಶಪ್ರಭವಶ್ಚರಿತ್ರರಹಿತೋಽಪ್ಯಾದೃತ್ಯಏವೋತ್ತ ಮೈಃ ಸಾಧ್ವಾಚಾರಯುತೋಽಪಿದುಷ್ಕುಲಭವಃಸಭ್ಯೇಷುನಾಭ್ಯ ರ್ಹಿತಃ। ಶಾಲಗ್ರಾಮಮಕೃತ್ರಿಮಂಪಟುಮತಿಸ್ಸಲ್ಲಕ್ಷಣಾಯು ಕ್ತಮಪ್ಯಾದತ್ತೇಽಸತುಲಕ್ಷಣಾಢ್ಯಮಮಿತಂ ಚಕ್ರೋಜ್ವಲಂಕೃ ತ್ರಿಮಂ || ೩೬೩ ||

ಟೀಕಾ || ಸದಿತಿ || ಚರಿತ್ರರಹಿತಃ ಆಚಾರಶೂನ್ಯೋಽಪಿ_ಸದ್ವಂಶಪ್ರಭವಃ_ಉತ್ತಮೈರಾದೃತ್ಯಃ ಸ್ವೀಕ

ರಣೀಯಮಿವ—ಸಾಧ್ವಾಚಾರಯುಕ್ತೋಪಿ—ದುಷ್ಕುಲಭವಃ— ಸಭ್ಯೇಷು-ತನ್ಮಧ್ಯೇ— ಸಾಭ್ಯರ್ಚಿತಃ ನಪೂಜ್ಯಃ—ಸದ್ಭಿರ್ಲಕ್ಷಣ್ಯೈಃಬಿಲಚಕ್ರ ಶುದ್ಧ್ಯಾದಿಭಿಃ ಅಯುಕ್ತಮಪಿ—ಅಕೃತ್ರಿಮಂ— ಶಾಲಗ್ರಾಮಂ—ಪಟ್ವೀಗುಣಾಗುಣ ಪರಿಶೀಲಿಕಾಮತಿರ್ಯಸ್ಯಸಃ ಬುಧಃ—ಆದತ್ತೇ ಸ್ವೀಕರೋತಿ—ಗುಣಾಢ್ಯಂಚಕೋಜ್ಜ್ವಲಮಪಿ ಕೃತ್ರಿಮಂ—ಶಾಲಗ್ರಾಮಂತು ನಾದತ್ತೇ—ತಸ್ಮಾತ್— ಅಮಲಮತಿಷ್ವಿತ್ಯಾದಿ ಶ್ಲೋಕೋಕ್ತ ದೂಷಣೋದ್ಧಾರಮಿದಮಿತಿಧ್ಯೇಯಂ ||

ಅರ್ಥ ॥ ಉತ್ತಮ ಕುಲದಲ್ಲಿ ಹುಟ್ಟಿದವನು- ಆಚಾರಹೀನನಾದಾಗ್ಯೂ- ಒಳ್ಳೇ ಜನರಿಂದ ಸನ್ಮಾನಿಸಲ್ಪಡಲಿಕ್ಕೆ ಅರ್ಹನು; ಕೀಳು ಕುಲದಲ್ಲಿ ಹುಟ್ಟಿದವನು- ಆಚಾರವಂತನಾದಾಗ್ಯೂ ಒಳ್ಳೇ ಜನರ ಸಭೆಯಲ್ಲಿ ಸನ್ಮಾನನೀಯನಲ್ಲವು. ಅಕೃತ್ರಿಮವಾದ ಶಾಲಗ್ರಾಮವು ಬಿಲಚಕ್ರಶುದ್ಧಿಯಿಂದ ಸರಿಯಾಗಿರದಿದ್ದರು- ಜಾಣರಿಂದ ಸ್ವೀಕರಿಸಲ್ಪಡುತ್ತೆ. ಮನುಷ್ಯರು ಬಿಲಚಕ್ರ ಮುಂತಾದ ಭಾಗಗಳನ್ನು ತಿದ್ದಿ ನೆಟ್ಟಗೆ ಮಾಡಿದ ಕೃತ್ರಿಮ ಶಾಲಗ್ರಾಮವು ಜಾಣರಿಂದ ಸ್ವೀಕರಿಸಲ್ಪಡುವದಿಲ್ಲವು.

ಮೂ। ಸವಿನಯಮಂಜಲಿಂಬಧ್ವಾ ॥

ಅರ್ಥ ॥ ನಮ್ರತೆಯಿಂದ ಕೈಗಳನ್ನು ಜೋಡಿಸಿ ವಿಶ್ವಾವಸು ಹೇಳುತ್ತಾನೆ.

ಶ್ಲೋ। ಶಿಷ್ಯಾರ್ಪಿತೇನಶುಚಿನಾದ್ರವಿಣೇನತುಷ್ಟಾ ಶ್ರೈಷ್ಟ್ಯಮುಕುಂದಶರಣಾಗತಿ* ಧರ್ಮನಿಷ್ಠಾಃ । †ಸತ್ಸಂಪ್ರದಾಯನಿಯಮಪ್ರಯತಾಸ್ಸದಾಯೇ ತೇಭ್ಯೋನಮಾಂಸಿಕರವೈವರವೈಷ್ಣವೇಭ್ಯಃ ॥ ೩೬೪ ॥

ಟೀಕಾ॥ ಶಿಷ್ಯೇತಿ॥ ಶುಚಿನಾನ್ಯಾಯಾರ್ಜಿತೇನ— ಶಿಷ್ಯಾರ್ಪಿತೇನ— ದ್ರವಿಣೇನಧನೇನ— ತುಷ್ಟಾಃ— ಮುಕುಂದಸ್ಯ ಶರಣಾಗತಿಃ ಪ್ರಪತ್ತಿರೇವಧರ್ಮಸ್ತಸ್ಮಿನ್ನಿಷ್ಠಾಃ— ಸತಾಂಸಂಪ್ರದಾಯೇ ಆಚಾರೇಯೇ ನಿಯಮಾಃ ಸ್ನಾನಸಂಧ್ಯಾದಯಃ ತೈಃ ಪ್ರಯತಾಃ ಪರಿಶುದ್ಧಾಶ್ಚಯೇಭವಂತಿ— ತೇಭ್ಯಃ ವರವೈಷ್ಣವೇಭ್ಯಃ— ನಮಾಂಸಿನಮಸ್ಕಾರಾನ್— ಕರವೈಕುರ್ಯಾಂ ||

ಅರ್ಥ॥ ಶಿಷ್ಯರು ಅರ್ಪಿಸಿದ ಸ್ವಕಷ್ಟಾರ್ಜಿತ ಧನದಿಂದ ಸಂತೋಷಬಟ್ಟು ಶ್ರೀವಿಷ್ಣುವೇ ಗತಿ ಎಂಬ ಮತದಲ್ಲಿ ಶ್ರದ್ಧೆಯುಳ್ಳವರಾಗಿ ಸರ್ವದಾ ಸದ್ಗುಣವಂತರುಗಳ ಕಟ್ಟಳೆಗಳೆಂದರೆ ಸ್ನಾನ ಸಂಧ್ಯಾದಿ ಕರ್ಮಗಳನ್ನೂ ನಿರ್ವಹಿಸಿ ನಡೆಯುವ ಶ್ರೇಷ್ಠರಾದ ವೈಷ್ಣವರುಗಳಿಗೆ ನಮಸ್ಕಾರಗಳನ್ನು ಮಾಡುತ್ತೇನೆ.

ಮೂ॥ ಇತಿವಿಮಾನಮನ್ಯತಃಪ್ರಸ್ಥಾಪಯನ್ನಗ್ರತೋದೃಷ್ಟ್ವಾ॥

ಅರ್ಥ॥ ಇಂತೆಂದು, ವಿಮಾನವನ್ನು ಮತ್ತೊಂದು ಕಡೆಗೆ ನಡಿಸಿ, ಮುಂದೆ ನೋಡಿ (ವಿಶ್ವಾವಸುವು ಹೇಳುತ್ತಾನೆ.)

---

* ಶರಣಾಯತಿ ಧರ್ಮನಿಷ್ಠಾಃ † ಸತ್ಸಂಪ್ರದಾಯನಿಯತಾ ಇತಿಪಾಠಾಂತರೆ ||

ಶ್ಲೋ । ಏಷಾಕೈರವಿಣೀವಿಶಲ್ಯಕರಣೀದೋಷಾಶುಗಾರ್ತಾತ್ಮ
ನಾ ಮೇತದ್ರೋಧಸಿಪಾರ್ಥಸಾರಥಿರಿತಿಖ್ಯಾತಸ್ಸಮಿಂಧೇಹರಿಃ ।
ಯತ್ಪಾದಾಂಬುಜಚುಂಬಿನಾಂಸುರಪತೇಃ ಕೋಟೀರಗಾರುತ್ಮತ
ಸ್ತೋಮಾನಾಂ ತುಲಸೀದಲಪ್ರಕರತೋನೋವೇದಭೇದಂಜನಃ
॥ ೩೬೫ ॥

ಟೀಕಾ ॥ ಏಷೇತಿ ॥ ಏಷಾಸರಸೀ— ದೋಷಾಃ ಪಾಪಾನ್ಯೇವ ಆಶುಗಾಬಾಣಾ ಸ್ತೈರಾರ್ತಾತ್ಮನಾಂ ಖಿನ್ನಚಿತ್ತಾನಾಂ— ವಿಶಲ್ಯಕರಣೀಶರೀರಾಂತರ್ಗತಾಯುಧಖಂಡನಿಸ್ಸಾರಣೌಷಧೀವಿಶೇಷಃ— ಕೈರವಿಣೀಸಂಜ್ಞಾ ವರ್ತತೇ—ತಿರುವಲ್ಲಿಕ್ಕೇಣೀತಿಭಾಷಾನಾಮ— ಏತಸ್ಯಾಃ ಕೈರವಿಣ್ಯಾಃ ರೋಧಸಿತೀರೇ— ಹರಿಃ ಪಾರ್ಥಸಾರಥಿರಿತಿಖ್ಯಾತಸ್ಸನ್— ಸಮಿಂಧೇಪ್ರಕಾಶತೇ— ಯಸ್ಯಪಾರ್ಥಸಾರಥೇಃ ಪಾದಾಂಬುಜಂಚುಂಬಂತಿ ಸ್ಪೃಶಂತೀತಿಚುಂಬಿನಾಂ— ಸುರಪತೇಃ ಇಂದ್ರಸಂಬಂಧಿನಾಂ— ಕೋಟೀರೇಕಿರೀಟೇಗಾರುತ್ಮತಸ್ತೋಮಾನಾಂ ಮರಕತಪುಂಜಾನಾಂ ತುಲಸೀದಲಾನಾಂ ಪ್ರಕರತಃ ಸಮೂಹಾತ್ಭೇದಂ ಜನೋನೋವೇದ ನಜಾನಾತಿ— ನೇಮಾನಿಮರಕತಾನಿ— ಕಿಂತು— ಭಕ್ತಾರ್ಪಿತ ತುಲಸೀದಲಾನ್ಯೇವೇತಿಭ್ರಮತೀತ್ಯರ್ಥಃ ॥

ಅರ್ಥ ॥ ಇದೇ ನೋಡು ತಿರುವಲ್ಲಿಕೇಣಿ ಎಂಬ ಕೊಳವು. ಪಾಪವೆಂಬ ಅಂಬುಗಳು ತಗಲಿರುವ ಜನರುಗಳಿಗೆ ಆ ಅಂಬುಗಳನ್ನು ತೆಗಿಯಲಿಕ್ಕೆ ಸಾಧನವಾದ ಮೂಲಿಕೆಯೋಪಾದಿ ಇರುವಂಥ ಈ ಕೊಳದ ದಂಡೆಯಲ್ಲಿ ಪಾರ್ಥಸಾರಥಿ ಎಂಬ ಹೆಸರಿನಿಂದ ಪ್ರಸಿದ್ಧವಾದ ವಿಷ್ಣುವು ಎಸೆಯುತ್ತಾನೆ. ಈ ಪಾರ್ಥಸಾರಥಿಯ ಅಡಿದಾವರೆಯೊಳ್ ಇಂದ್ರನು ಚಾಚಿದ ಕಿರೀಟದೊಳಗಿನ ಪಚ್ಚೆ ರತ್ನಗಳ ಸಮೂಹವು ಭಕ್ತರು ಅರ್ಪಿಸಿದ ತುಳಸಿ ದಳಗಳ ರಾಶಿ ಎಂದು ಜನರು ತಿಳಕೊಳ್ಳುತ್ತಾರೆ.

ಶ್ಲೋ । ಅತ್ರವಸಂತಸ್ಸಂತಶ್ಚಿರಂತನೋಕ್ತ್ಯಂತಚಿಂತನಾಶ್ರಾಂ
ತಾಃ । ಆತನ್ವಂತಸ್ಸುಚರಿತಮಾತನ್ವಂತಂವಿಭಾಂತಿಮಾನಧನಾಃ
॥ ೩೬೬ ॥

ಟೀಕಾ ॥ ಅತ್ರೇತಿ ॥ ಅತ್ರಕೈರವಿಣೀಕ್ಷೇತ್ರೇ— ವಸಂತಃ— ಚಿರಂತನೋಕ್ತ್ಯಂತಾನಾಂ ಉಪನಿಷದಾಂ ಚಿಂತನೇನ ಅರ್ಥಪರ್ಯಾಲೋಚನೇನ ಅಶ್ರಾಂತಾಅವಿಚ್ಛಿನ್ನಾಃ— ಅವಿಚ್ಛಿನ್ನತದಾಲೋಚನಾ ಇತ್ಯರ್ಥಃ— ಮಾನಧನಾಸ್ಸಂತಃ— ಆತನ್ವಂತಂಯಾವಜ್ಜೀವಂ— ಸುಚರಿತಂಸತ್ಕರ್ಮ— ಆತನ್ವಂತಃ ಕುರ್ವಂತಸ್ಸಂತಃ— ವಿಭಾಂತಿ ॥

ಅರ್ಥ ॥ ಈ ತಿರುವಲ್ಲಿಕೇಣಿಕೊಳದ ತೀರದಲ್ಲಿ ವಾಸ್ತವ್ಯ ಮಾಡಿಕೊಂಡಿರುವಂಥಾವರು ಯಾವಾಗಲೂ, ಉಪನಿಷದಾರ್ಥ ಆಲೋಚನೆ ಮಾಡುತ್ತಾ ಜೀವ ಇರುವ ಪರ್ಯಂತರ ಸತ್ಕಾರ್ಯಗಳನ್ನೆ ಆಚರಿಸುತ್ತಾ, ಮರ್ಯಾದಸ್ಥರಾಗಿ ಪ್ರಕಾಶಿಸುತ್ತಾರೆ.

ಕೃಶಾನುಃ ॥

ಮೂ। ಅಸ್ತುತಥಾಪಿಪರಿಕಲಿತಗುಣಪ್ರಹಾಣಹೂಣಪಾಯಹೇ

ಯಜನನಿಬಿಡನಗರ ವಿಶೇಷಸನ್ನಿಕರ್ಷಏವಾತ್ರಮಹಾದೋಷಃ
ದುರ್ಲಭಾಃಖಲುಹೂಣೇಭ್ಯಃಕುತ್ಸಿತತಮಾಲೋಕೇ ॥ ೩೬೭ ॥

ಟೀಕಾ ॥ ಅಸ್ತ್ವಿತಿ ॥ ಪರಿಕಲಿತಂಗುಣಾನಾಂ ಸೌಶೀಲ್ಯಾದೀನಾಂ ಪ್ರಕರ್ಷೇಣ ಹಾನಂತ್ಯಾಗಃ ಯೈಸ್ತಾದೃಶಾಃ ಹೂಣಾಃ ಶ್ವೇತನರಾಃ ಪ್ರಾಯಶಃ ಬಹುಳಾಃ ಯೇಷಾಂ ತಾದೃಶೈರ್ಹೇಯೈಸ್ತ್ಯಾಜ್ಯೈಃ ಜನೈಃ ನಿಬಿಡಸ್ಯ ಸಾಂದ್ರಸ್ಯ ನಗರ ವಿಶೇಷಸ್ಯ ಚನ್ನಪಟ್ಟಣಸ್ಯ ಸನ್ನಿಕರ್ಷಃ ಸಾನ್ನಿಧ್ಯಂ— ಕುತ್ಸಿತತಮಾ ಅತಿನಿಂದ್ಯಾಃ ॥

ಅರ್ಥ ॥ ಇರಲಿ, ಆದಾಗ್ಯೂ ಈ ಸ್ಥಳಕ್ಕೆ ಉತ್ತಮ ಸ್ವಭಾವಾದಿ ಗುಣಗಳನ್ನು ತ್ಯಜಿಸಿದಂಥಾವರಾದ ಹೂಣರು ಅಂದರೆ ಶ್ವೇತಕಾಯರಾದ ಜನರುಗಳಿಂದ ತುಂಬಿರುವ ಪಟ್ಟಣ ಸಮೀಪವಾಗಿರುವದೇ ಒಂದು ದೊಡ್ಡ ಕೊರತೆಯಾಗಿದೆ. ಶ್ವೇತಕಾಯ ಜನರುಗಳಿಗಿಂತಲೂ ಕೀಳರಾದವರು ಲೋಕದಲ್ಲಿ ಶಿಗುವದು ಕಠಿಣವು.

ಶ್ಲೋ । ಹೂಣಾಃಕರುಣಾಹೀನಾಃತೃಣವದ್ಬ್ರಾಹ್ಮಣಗಣಂನಗಣಯಂತಿ । ತೇಷಾಂದೋಷಾಃಪಾರೇವಾಚಾಂಯೇನಾಚರಂತಿಶೌಚಮಪಿ ॥ ೩೬೮ ॥

ಟೀಕಾ ॥ ಹೂಣಾಇತಿ ॥ ಕರುಣಾಹೀನಾ ಅತಏವ ಹೂಣಾಃ ಬ್ರಾಹ್ಮಣಗಣಂ ತೃಣವನ್ನಗಣಯಂತಿನಿರಾಕುರ್ವಂತೀತ್ಯರ್ಥಃ— ತೇಷಾಂ ಹೂಣಾನಾಂ ದೋಷಾಃ ವಾಚಾಂ ಪಾರೇವಕ್ತುಮಶಕ್ಯಾ ಇತ್ಯರ್ಥಃ— ಯೇಹೂಣಾಃ—ಶೌಚಂ ಗುದಪ್ರಕ್ಷಾಳನಮಪಿನಾಚರಂತಿ ನಕುರ್ವಂತಿ ॥

ಅರ್ಥ ॥ ಹೂಣರು ಕ್ರೂರವಾದಂಥವರು, ಬ್ರಾಹ್ಮಣ ಜನರನ್ನು ಹುಲ್ಲು ಕಡ್ಡಿಯೋಪಾದಿ ಲೆಕ್ಕಿಸುವದಿಲ್ಲವು. ಈ ಹೂಣರ ದುರ್ಗುಣಗಳನ್ನು ಇಷ್ಟೇ ಯಂಥೇಳುವದಶಕ್ಯವು. ಇವರು ಬೈಲು ಕಡೆಗೆ ಹೋದರೆ ನೀರು ಕೂಡ ಮುಟ್ಟುವದಿಲ್ಲವು.

ಮೂ । ಪುನಸ್ಸನಿರ್ವೇದಂವಿಧಿಮುದ್ದಿಶ್ಯ ॥

ಅರ್ಥ ॥ ಮರಳಿ ತಿರಸ್ಕಾರಯುಕ್ತನಾಗಿ ಹಣೆಗೆ ಕೈತಟ್ಟಿ ಕೃಶಾನುವು ಹೇಳುತ್ತಾನೆ.

ಶ್ಲೋ । ಶೌಚತ್ಯಾಗಿಷುಹೂಣಕಾದಿಷುಧನಂಶಿಷ್ಟೇಷುಚಕ್ಲಿಷ್ಟತಾಂ ದುರ್ಮೇಧಸ್ಸುಧರಾಧಿಪತ್ಯಮತುಲಂದಕ್ಷೇಷುಭಿಕ್ಷಾಟನಂ। ಲಾವಣ್ಯಂಲಲನಾಸುದುಷ್ಕುಲಭವಾಸ್ವಗ್ರ್ಯಾಸುನೀರೂಪತಾಂ ಕಷ್ಟಂಸೃಷ್ಟವತಾತ್ವಯಾಹತವಿಧೇಕಿನ್ನಾಮಲಬ್ಧಂಫಲಂ॥೩೬೯॥

ಟೀಕಾ ॥ ಶೌಚೇತಿ ॥ ಶಿಷ್ಟೇಷುಸದಾಚಾರಸಂಪನ್ನೇಷು ಕ್ಲಿಷ್ಟತಾಂ ದಾರಿದ್ರ್ಯಂ ದುರ್ಮೇಧಸ್ಸುಮಂದಬುದ್ಧಿಷು ಅತುಲಂಅತ್ಯಂತಂ ದಕ್ಷೇಷು ಬುದ್ಧಿಕುಶಲೇಷು— ಭಿಕ್ಷಾರ್ಥಂ ಅಟನಂಸಂಚಾರಂ— ದುಷ್ಕುಲಭವಾಸುಮ್ಲೇಚ್ಛಾದಿಕುಲಜಾಸು—ಲಲನಾಸುಸ್ತ್ರೀಷು—ಲಾವಣ್ಯಂ ಸೌಂದರ್ಯಂ— ಅಗ್ರ್ಯ

ಸುಬ್ರಾಹ್ಮಣಕುಲಜಾಸು— ಲಲನಾಸು— ನೀರೂಪತಾಂ ಕುರೂಪತ್ವಂಚ— ಕಷ್ಟಂ ಅನ್ಯಾಯ್ಯಂ— ಸೃಷ್ಟಿವತಾನಿರ್ಮಿತವತಾ—ಹೇ ಹತವಿಧೇ— ತ್ವಯಾ— ಕಿನ್ನಾಮಫಲಂಲಬ್ಧಂ ||

ಅರ್ಥ || ಶುಚಿತ್ವವನ್ನು ಬಿಟ್ಟುಗೊಟ್ಟಂಥ ಹೂಣಾದಿ ಜನರುಗಳಿಗೆ ಹಣ, ಶುಚಿಯಾದ ಆಚರಣೆಯುಳ್ಳವರಿಗೆ ಬಡತನ, ಬುದ್ಧಿ ಇಲ್ಲದವರಿಗೆ ಅರಸುತನ, ಬಹಳ ಬುದ್ಧಿವಂತರಾದವರಿಗೆ ಭಿಕ್ಷೆ ಬೇಡುವದಕ್ಕೆ ತಿರುಗಾಟ, ಕೀಳುಜಾತಿಯಲ್ಲಿ ಹುಟ್ಟಿದ ಹೆಂಣುಗಳಿಗೆ ಚಲುವು, ಬ್ರಾಹ್ಮಣಾದಿ ಮೇಲುಜಾತಿಯಲ್ಲಿ ಹೆಂಣುಗಳಿಗೆ ಚಂದಗೇಡಿತನ, ಅನ್ಯಾಯವಪ್ಪಾ ಅನ್ಯಾಯ! ಎಲಾ ಹಾಳು ದೈವವೇ! ಹೀಗೆ ಮಾಡಿದರಿಂದ ನಿನಗೇನು ಶಿಕ್ಕಿತು?

ವಿಶ್ವಾವಸುಃ ||

ಮೂ || *ಏಹಿತ್ವಮೇತೇಷ್ವಪಿಗುಣಗ್ರಾಹಿತ್ವಂ || ೩೭೦ ||

ಅರ್ಥ || ಎಲಾ ಇವರಲ್ಲಿ ಕೂಡ ಇರುವ ಗುಣಗಳನ್ನು ತೆಗದುಕೊಳ್ಳುವಂಥವನಾಗು.

ಶ್ಲೋ || ಪ್ರಸಹ್ಯನಹರಂತ್ಯಮೀಪರಧನೌಘಮನ್ಯಾಯತೋ ವದಂತಿನಮೃಷಾವಚೋವಿರಚಯಂತಿವಸ್ತ್ವದ್ಭುತಂ | ಯಥಾವಿಧಿಕೃತಾಗಸಾಂವಿದಧತಿಸ್ವಯಂದಂಡನಂ ಗುಣಾನವಗುಣಾಕರೇಷ್ವಪಿಗೃಹಾಣಹೂಣೇಷ್ವಮೂರ್ || ೩೭೧ ||

ಟೀಕಾ ||ಪ್ರಸಹ್ಯೇತಿ || ಅಮೀಹೂಣಾಃ—ಪರೇಷಾಂಧನೌಘಂ ಅನ್ಯಾಯತಃ—ಪ್ರಸಹ್ಯ ಬಲಾತ್ಕೃತ್ಯ ನಹರಂತಿ—ಮೃಷಾವಚೋಽನೃತ ವಚನಂ ನವದಂತಿ—ಅದ್ಭುತಂ ವಸ್ತುಕಾಚಪಾತ್ರೋಪಲೋಚನಾದಿ—ವಿರಚಯಂತಿ ನಿರ್ಮಿಮತೇ—ಕೃತಂ ಅಗಃ ಅಪರಾಧಃ ಯೈಸ್ತೇಷಾಂ—ದಂಡನಂ—ಯಥಾವಿಧಿಶಾಸ್ತ್ರಮನತಿಕ್ರಮ್ಯ—ವಿದಧತಿ—ಯತಸ್ತತಃ—ಅವಗುಣಾನಾಂ ಸಮಸ್ತದೋಷಾಣಾಮಾಕರೇಷು ಸ್ಥಾನೇಷು ಹೂಣೇಷು—ಅಮೂನ್ ಗುಣಾನಪಿ ಉಕ್ತವಿಧಾನ್ ಗೃಹಾಣಜಾನೀಹಿ ||

ಅರ್ಥ || ಈ ಹೂಣರು ಹೆರರ ದ್ರವ್ಯವನ್ನು ಅನ್ಯಾಯವಾಗಿ ಬಲತ್ಕಾರದಿಂದ ಸುಲಕೊಳ್ಳುವದಿಲ್ಲವು, ಸಟಿಯಾಡುವದಿಲ್ಲವು; ಚಮತ್ಕಾರಿಕ ಪದಾರ್ಥಗಳನ್ನು ನಿರ್ಮಿಸುತ್ತಾರೆ, ತಪ್ಪುಗಾರರಿಗೆ ಕಾಯಿದೆಮೇರಿಗೆ ಶಿಕ್ಷೆ ಮಾಡುತ್ತಾರೆ, ಅವಗುಣಗಳಿಗೆ ಎಡೆಯಾಗಿರುವಂಥ ಹೂಣರಲ್ಲಿ ಈ ಗುಣಗಳನ್ನು ತಿಳಿ.

ಮೂ | ಇತಿವಿಮಾನಮಿತಃಪ್ರತೀಚ್ಯಾಂದಿಶಿಯೋಜನಪಂಚಕಮತಿಕ್ರಾಮಯ್ಯ ಪುರತೋದೃಷ್ಟ್ವಾಸಾಮೋದಂ ||

ಅರ್ಥ || ಇಂತೆಂದು ವಿಮಾನವನ್ನು ಪಡುವಣ ದಿಕ್ಕಿಗೆ ಐದು ಯೋಜನ ದೂರ ನಡಿಸಿ ಮುಂದೆ ನೋಡಿ ಹರ್ಷದಿಂದ ವಿಶ್ವಾವಸು ಹೇಳುತ್ತಾನೆ.

---

* ಪಶ್ಯತ್ವ ಮೇತೇಷ್ವಪಿ ಗುಣಾಗ್ರಾಹಿತಾ ಮಿತಿಪಾಠಾಂತರಂ ||

## ಕಾಂಚಿವರ್ಣನಂ ॥

ಶ್ಲೋ। ಇಯಂಕಾಂಚೀಕಾಂಚೀಕರಿಶಿಖರಿಣಃಕಾಪಿನಗರೀ ಗರೀಯಸ್ಯಾಂಯಸ್ಯಾಂವಿಹರಣಜುಷಾಂಪಕ್ಷ್ಮಲದೃಶಾಂ । ಮುಖಂದರ್ಶಂದರ್ಶಂರಜನಿಕರಮಾದರ್ಶಮಮಲ ಸ್ವರೂಪಂಕೇಪಂಕೇರುಹಮಪಿನನಿಂದಂತಿರಸಿಕಾಃ ॥ ೨೭೧ ॥

ಟೀಕಾ ॥ ಇಯಮಿತಿ ॥ ಕರಿಶಿಖರಿಣಃ ಹಸ್ತಿಶೈಲಸ್ಯ ಕಾಪಿಮನೋಜ್ಞಾ–ಕಾಂಚೀರಶನಾ–ತಮಭಿತೋವರ್ತಮಾನೇತ್ಯರ್ಥಃ– ಇಯಂನಗರೀ– ಕಾಂಚೀನಾಮಭವತಿ– ಗರೀಯಸ್ಯಾಂ ಲೋಕೋತ್ತರಾಯಾಂ–ಯಸ್ಯಾಂ ಕಾಂಚೀನಗರ್ಯಾಂ-ವಿಹರಣಜುಷಾಂ-ಪಕ್ಷ್ಮಲದೃಶಾಂ-ಸ್ತ್ರೀಣಾಂ-ಮುಖಂ-ದರ್ಶಂದರ್ಶಂ ದೃಷ್ಟ್ವಾಏವ ದೃಷ್ಟ್ವಾಏವ–ಕೇರಸಿಕಾಃ–ಅಮಲಸ್ವರೂಪಮಿತಿ ಚಂದ್ರೇದರ್ಪಣೇಪಿಪಮಯೋಜ್ಯಂ-ರಜನಿಕರಂ ಚಂದ್ರಂ-ಆದರ್ಶಂ ದರ್ಪಣಂ-ಪಂಕೇರುಹಂ ಪದ್ಮಮಪಿ-ನನಿಂದಂತಿ-ಸರ್ವೇಪಿನಿಂದಂತ್ಯೇವೇತ್ಯರ್ಥಃ ॥ ೨೭೦ ॥

ಅರ್ಥ ॥ ಇದೇ ಕಾಂಚೀ ಪಟ್ಟಣವು ಅವರ್ಣನೀಯವಾಗಿ ಹಸ್ತಿಗಿರಿಎಂಬ ಬೆಟ್ಟಕ್ಕೆ ಸೊಂಟದ ಪಟ್ಟಿಯಂತಿರುವದು ( ಅಂದರೆ ಆ ಬೆಟ್ಟದ ಸುತ್ತಲಿರುವದು ಎಂಬ ತಾತ್ಪರ್ಯ ) ಈ ಶ್ರೇಷ್ಠವಾದ ಪಟ್ಟಣದಲ್ಲಿ ಸಂಚರಿಸುವಂಥ ಹೆಂಗಸರ ಮುಖಗಳನ್ನು ಪುನಃ ಪುನಹಾ ನೋಡಿ ಪದಪಿನಿಂದ ಹೊಳೆಯುವ ರೂಪಉಳ್ಳಂಥ ಚಂದ್ರನನ್ನು ಕನ್ನಡಿಯನ್ನು ಮತ್ತು ತಾವರೆಯನ್ನು ಕೂಡ ರಸಾಭಿಜ್ಞರಾದವರ್ಯಾರು ಜರಿಯಲಿಕ್ಕಿಲ್ಲ? ಎಲ್ಲವರು ಜರಿಯುವರೆಂಬ ತಾತ್ಪರ್ಯವು.

ಶ್ಲೋ । *ಸುಮನೋಜನವಾದರಣಸ್ಥಾನಂ †ಸದ್ಭಿರ್ದ್ಯಶೋಭಿನೀಸೇಯಂ । ಸುರತಾಭ್ಯುದಯವಿಧಾತ್ರೀಶುಭಕಾಂಚೀಸಾಧು ರಂಜಯತಿಚೇತಃ ॥ ೨೭೨ ॥

ಟೀಕಾ ॥ಸುಮನಇತಿ ॥ ಸುಷ್ಟುಮನೋಜಸ್ಯ ಮನ್ಮಥಸ್ಯನವಂ ಆದರಣಂ ಯಸ್ಯತಚ್ಚತತ್ಸ್ಥಾನಂ ಮನ್ಮಥವಾಸ ಇತ್ಯರ್ಥಃ ಸುಮನಸಾಂ ಪಂಡಿತಾನಾಂ ಜನಾನಾಂವಾದಃಶಾಸ್ತ್ರೀಯಚರ್ಚಾವರ್ಣಃ ಯುದ್ಧಂ ತಸ್ಯಸ್ಥಾನಂ ಚ ಸತಾರೂಪೇಣ–ಸದ್ಭಿರ್ದ್ರುಭಿಃ–ಆಮ್ರಪನಸನಾರಿಕೇಳಾದಿಭಿಶ್ಚ–ಉಪಶೋಭತ ಇತ್ಯುಪಶೋಭಿನೀ–ಸುರತಸ್ಯ–ಸುರಾಣಾಂ ಭಾವಸ್ಸುರತಾತಸ್ಯಾಃ ದೇವತ್ವಸ್ಯಚ–ಅಭ್ಯುದಯಂ ವಿಧತ್ತ ಇತಿವಿಧಾತ್ರೀ–ಸೇಯಂ ಶುಭಾ ಕಾಂಚೀ ಸ್ತ್ರೀಕಟಿಃ ನಗರೀಚ–ಚೇತಃಸಾಧುರಂಜಯತಿ ॥

ಅರ್ಥ ॥ ಸುಮನೋಜನೆಂದರೆ ಕಾಮನು ನೂತನ ಸತ್ಕಾರ ಪಡಿಯುವ ಸ್ಥಳವಾದಂಥಾ ( ಅಥವಾ ಪಂಡಿತರು ಶಾಸ್ತ್ರಚರ್ಚೆಮಾಡಿ ವಾದವಿವಾದ ರೂಪ ಲಢಾಯಿ ನಡಿಸುವ ಸ್ಥಳವಾದಂಥಾ ) ಚೆಲುವಾದ ಆಕೃತಿಯನ್ನು ಶೋಭಿಸುವಂಥಾ ( ಅಥವಾ ಉತ್ತಮ ರೂಪವಂತರುಗಳಿಂದ ಶೋಭಾಯಮಾನವಾದಂಥಾ) ಕ್ರೀಡೆಯ (ಅಥವಾ ದೇ

* ಸುಮನೋಜನತಾಸ್ಥಾನಂ † ಸ್ಥಾನೇಸದ್ರೂಪಶೋಭನೀ ಇತಿಪಾಠಾಂತರೇ ॥

ವತ್ವ ರೂಪವಾದ) ಉತ್ಕರ್ಷವನ್ನುಂಟುಪಡಿಸುವಂಥಾ ಈ ಕಲ್ಯಾಣ ಕಾರಕವಾದ ಕಾಂಚೀ ಪಟ್ಟಣವು ಮನಸ್ಸಿಗೆ ಚನ್ನಾಗಿ ಸಂತೋಷಕೊಡುತ್ತದೆ.

ಮೂ । ನಗರೀಮೇನಾಂದಕ್ಷಿಣೇನಕರುಣಾಝುರೀವಭಗವತೋ
*ವೇಗವತೀನಾಮಪ್ರವಹತಿಪಾವನೀಶೈವಲಿನೀ ॥ ೩೭೪ ॥

ಟೀಕಾ ॥ ನಗರೀಮಿತಿ॥ ನಗರೀಂ ದಕ್ಷಿಣೇನ ಕಾಂಚ್ಯಾಃ ದಕ್ಷಿಣತಃ–ಏನಪಾದ್ವಿತೀಯೇತಿದ್ವಿತೀಯಾ–ಭಗವತಃ ವರದರಾಜಸ್ಯ–ಕರುಣಾಝುರೀದಯಾರಸಪ್ರವಾಹ ಇವಸ್ಥಿತಾ–ಶೈವಲಿನೀನದೀ ॥

ಅರ್ಥ ॥ ಈ ಕಾಂಚಿನಗರದ ತೆಂಕಣದಿಕ್ಕಿಗೆ ಪರಮೇಶ್ವರನ ದಯಾರಸದ ಪ್ರವಾಹದ ಪ್ರೋಲ್ ಪವಿತ್ರವಾದ ವೇಗವತಿ ಎಂಬ ಹೊಳೆಯು ಹರಿಯುತ್ತದೆ.

ಶ್ಲೋ । ಮಾಧುರ್ಯಾಧ್ಯಯನೋ †ಪಪನ್ನಮಧುನಿಷ್ಯಂದಾನಿ
ಮಂದಾನಿಲ ವ್ಯಾಲೋಲತ್ತಟಚಾರುಭೂರುಹಶಿಖಾ ನಿಷ್ಪಾತಿಪು
ಷ್ಪಾಧಿಕ್ಯೈಃ। ಡಿಂಡೀರೈಃಸ್ಮಿತವಂತಿ ‡ಪಾಂತುದುರಿತಾ ದ್ವೇಗಾಪ
ಗಾಯಾಃಸ್ಫುರದ್ವೇಗೋದ್ವೇಜಿತ ವಾಜಿಮೇಧಮುಖಕೃದ್ವೇಧಾಂ
ಸಿಪಾಥಾಂಸಿನಃ ॥ ೩೭೫ ॥

ಟೀಕಾ ॥ ಮಾಧುರ್ಯೇತಿ ॥ ಮಾಧುರ್ಯಸ್ಯ ಅಧ್ಯಯನಾರ್ಥಂ ಸ್ವೀಕಾರಾಯ ಉಪಪನ್ನಾಃ ಮಧುನಿಷ್ಯಂದಾಃ ತಟತರುಪುಷ್ಪರಸಬಿಂದವಃ ಯೇಷುತಾನಿ–ಮಂದಾನಿಲೇನ ವ್ಯಾಲೋಲಂತಿ ತಟಯೋಶ್ಚಾರುಭೂರುಹಾಣಾಂ ಶಿಖಾಭ್ಯಃ ನಿಷ್ಪಾತೀನಿಯಾನಿಪುಷ್ಪಾಣಿ ತೇಭ್ಯಃ ಅಧಿಕೈರತಿಧವಳೈಃ ಪ್ರವೃದ್ಧೈರೇವೇತ್ಯರ್ಥಃ– ಡಿಂಡೀರೈಃ ಫೇನೈಃ–ಸ್ಮಿತವಂತೀವೇತ್ಯುತ್ಪ್ರೇಕ್ಷಾಗವ್ಯಾ–ಸ್ಫುರತಾ ವೇಗೇನ ಉದ್ವೇಜಿತಃ ಯಜ್ಞಭಂಗೇನ ದುಃಖಾಯಿತಃ ವಾಜಿಮೇಧಂನಾಮಮಖಂ ಕರೋತೀತಿ ತತ್ಕೃತ್ ವೇಧಾಃ ಬ್ರಹ್ಮಾಯೇಷಾಂತಾನಿ–ವೇಗಾಪಗಾಯಾಃ ವೇಗವತ್ಯಾನಾಮನದ್ಯಾಃ ಪಾಥಾಂಸಿ–ದುರಿತಾತ್–ನಃ ಅಸ್ಮಾನ್ ಪಾಂತು ರಕ್ಷಂತು–ಪುರಾಕಿಲ ಬ್ರಹ್ಮಣಿ ಕಾಂಚ್ಯಾಮಶ್ವಮೇಧಕಾರಿಣಿ ತದ್ವಿಘ್ನಾಯ ಸರಸ್ವತೀ ವೇಗವತೀ ನಾಮನದೀ ಭೂತ್ವಾ ಯಜ್ಞವೇದಿಮಾವೃಣೋತಿಸ್ಮೇತಿ ಕಾಂಚೀ ಮಾಹಾತ್ಮ್ಯೇ ಪ್ರಸಿದ್ಧಾ ಕಥಾತ್ರಾನುಸಂಧೇಯಾ ॥

ಅರ್ಥ ॥ ಮಧುರತ್ವವನ್ನು ಪಡೆಯಲಿಕ್ಕೆ ಬಂದ ಹೂಗಳಿಂದ ಕೂಡಿರುವಂಥಾ, ನಸುಘಾಳಿಯಿಂದ ಅಲ್ಲಾಡುತ್ತಿರುವ ರಮಣೀಯವಾದ ದಂಡೆಯ ಮೇಲಿನ ಮರಗಳ ತುದಿಗಳಿಂದ ಉದುರುವ ಹೂಗಳಿಂದ ಹೆಚ್ಚಿದ ನೊರೆಯಿಂದ ನಗುತ್ತಪ್ರೋ ಎಂಬಂತೆ ಕಾಣಬರುವಂಥಾ, ಉಕ್ಕೇರುವ ವೇಗದಿಂದ ಅಶ್ವಮೇಧಯಜ್ಞ ಮಾಡುತ್ತಿದ್ದ ಬ್ರಹ್ಮದೇವರಿಗೆ ಬೆದರಿಕೆಯುಂಟು ಪಡಿಸಿದಂಥಾ, ಈ ವೇಗವತಿನದಿಯ ನೀರುಗಳು ನಮ್ಮನ್ನು ಪಾಪದಿಂದ ರಕ್ಷಿಸಲಿ.

---

* ಭಗವತೀ ಇತಿಪಾಠಾಂತರಂ ॥ † ಉಪಪನ್ನ ಇತಿಪಾಠಾಂತರಂ ॥ ‡ ಪಾಂತಿ ಇತಿ ಪಾಠಾಂತರಂ ॥

ಮೂ । ಇತಶ್ಚ ಸಖಿವಿಚಕ್ಷುರ್ನಿ *ರೂಪ್ಯತಾಂ ॥ ೩೭೬ ॥

ಟೀಕಾ ॥ ಇತಇತಿ ॥ ನಿರೂಪ್ಯತಾಂ ಪ್ರೇರ್ಯತಾಂ ॥

ಅರ್ಥ ॥ ಗೆಳೆಯನೇ ಇತ್ತಕಡೆಗೆ ನೋಡು.

ಶ್ಲೋ । ಯುಪಿಷು ರಾಜತ್ಕಟಕಸ್ಸದಾಳಿಭಿ ಸ್ಸಮಾಶ್ರಿತಃ ಶೋಭನದಾನಸಂಪದಾ । ಸನಿತ್ಯಶುದ್ಧಂವರದಂತಮುದ್ವಹನ್ಯಥಾರ್ಥನಾಮಾಗಜಭೂಭೃದೀಕ್ಷ್ಯತೇ ॥ ೩೭೭ ॥

ಟೀಕಾ ॥ ಯುಇತಿ ॥ ಯುಪಿಷಶ್ಶೈಲಃ_ಸತಾಪವಾಳಿಭಿಃ ಪಜ್‌ತಿಭಿಃ_ಸದಾಅಳಿಭಿಃ ಭೃಂಗೈಶ್ಚ_ರಾಜತ್ ಕಟಕಃ ನಿತಂಬದೇಶಃ ಯಸ್ಯಸಃ_ರಾಜಂತೌ ಕಟೌಕುಂಭೌ ಯಸ್ಯಶತ್ಕ ಇತಿಚ_ ಶೋಭನಾನಾಂ ಶುಭಾನಾಂ ದಾನಸ್ಯ ವಿತರಣಸ್ಯ_ಶೋಭನಸ್ಯ ಮದಜಲಸ್ಯಚ_ಸಂಪದಾಸಮೃದ್ಧ್ಯಾ_ಸಮಾಶ್ರಿತಶ್ಚ_ನಿತ್ಯಂ ಶುದ್ಧಂ ನಿರ್ಮಲಂ_ತಂಲೋಕಪ್ರಸಿದ್ಧಂ_ವರದಂ ಭಗವಂತಂ_ವರದಂತಂಚ_ಉದ್ವಹ‌ನ್_ಅತಏವ ಯಥಾರ್ಥನಾಮಾ_ಸಃಗಜ ಭೂಭೃತ್ ಹಸ್ತಿಶೈಲಃ_ಗಜರಾಜಶ್ಚ_ಈಕ್ಷ್ಯತೇದೃಶ್ಯತೇ ॥

ಅರ್ಥ ॥ ೧. ಈ ಹಸ್ತಿಗಿರಿಯು ತೊಪ್ಪಲು ಭೂಮಿಯಲ್ಲಿ ಒಳ್ಳೆ ಜನರ ಸಮುದಾಯದಿಂದ ಶೋಭಿಸುವಂಥಾದ್ದಾಗಿಯೂ, ಜನರಿಗೆ ಕಲ್ಯಾಣಗಳನ್ನು ಕೊಡುವ ಸಂಪತ್ತಿಯುಳ್ಳದ್ದಾಗಿಯೂ, ಶಿಖರದ ಮೇಲೆ ಪ್ರಸಿದ್ಧನಾದ ಮತ್ತು ಶೂರನಾದ ವರದ ರಾಜಸ್ವಾಮಿಯನ್ನು ಹೊತ್ತುಕೊಂಡಂಥಾದ್ದಾಗಿಯೂ, ತನ್ನ ಹೆಸರಿಗೆ ತಕ್ಕವಾಗಿ ಕಂಡು ಬರುತ್ತದೆ.

೨. ಈ ಹಸ್ತಿ ಬೆಟ್ಟವು ಯಾವಾಗಲೂ ದುಂಬಿಗಳಿಂದ ಶೋಭಿಸುವ ಕುಂಭಸ್ಥಳಗಳುಳ್ಳ ಮದಜಲದ ಸಮೃದ್ಧಿಯುಳ್ಳ ಮತ್ತು ಲೋಕ ಪ್ರಸಿದ ವಾದ ಶುಭ್ರ ಹಲ್ಲುಗಳುಳ್ಳ ಅರಸಾನೆಯಂತೆ ಹೆಸರಿಗೆ ಸರಿಯಾಗಿ ತೋರುತ್ತದೆ.

ಮೂ । ಸಭಕ್ತಿಪ್ರಕರ್ಷಮಂಜಲಿಂಬಧ್ವಾ ॥

ಅರ್ಥ ॥ ಭಕ್ತಿಯಿಂದ ಕೈಗಳನ್ನು ಜೋಡಿಸಿ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ । ದ್ವಿಪಾಚಲಮುಪಾಶ್ರಿತಂ ತ್ರಿದಶಪಾದಪಸ್ವರ್ಗವೀತ್ರಪಾಕರಮುಪಾಸ್ಮಹೇದಿಗಧಿಪಾವನಂಪಾವನಂ । ಕೃಪಾಶಿಶಿರಲೋಚನಂ ವಪಾಸುರಭಿಳಾಧರಂವರದನಾಮಧಾಮಸ್ಥಿರಂ ॥ ೩೭೮ ॥

ಟೀಕಾ ॥ ದ್ವಿಪೇತಿ ॥ ದ್ವಿಪಾಚಲಂ ಹಸ್ತಿಶೈಲಂ_ಉಪಾಶ್ರಿತಂ_ತ್ರಿದಶಪಾದಪ ಸ್ವರ್ಗವ್ಯೋಃ ಕಲ್ಪವೃಕ್ಷಕಾಮಧೇನ್ವೋಃ ತ್ರಪಾಕರಂ_ದಾನೇನೇತಿಭಾವಃ_ದಿಗಧಿಪಾನಿಂದ್ರಾದೀನವತೀತ್ಯವನಂ_ಪಾವನಂ_ಕೃಪಯಾದಯಾರಸೇನ ಶಿಶಿರಲೋಚನಂ ಆರ್ದ್ರಕಟಾಕ್ಷಂ ವಪಯಾ ಬ್ರಹ್ಮಾಶ್ವ ಮೇಧೀಯಯಾ ಸುರ

---

* ನಿಕ್ಷಿಪ್ಯತಾಮಿತಿಪಾಠಾಂತರಂ ॥

ಭಿಳಿಃ ಸುಗಂಧಿಃ ಅಧರಃ ಯಸ್ಯತತ್— ವರದನಾಮ—ಧಾಮ ವೈಷ್ಣವಂ ತೇಜಃ— ಉಪಾಸ್ಮಹೇ ಭಜಾಮಹೇ ||

ಅರ್ಥ || ಹಸ್ತಿಗಿರಿಯಲ್ಲಿ ನೆಲೆಗೊಂಡಿರುವಂಥಾ ಔದಾರ್ಯದಿಂದ ಸ್ವರ್ಗದ ಕಲ್ಪವೃಕ್ಷ ಮತ್ತು ಕಾಮಧೇನುಗಳಿಗೆ ನಾಚಿಸುವಂಥಾ ಇಂದ್ರಾದಿ ಅಷ್ಟದಿಕ್ಪಾಲಕರನ್ನು ಕಾಪಾಡಿಸುವಂಥಾ ಶುದ್ಧವಾದಂಥಾ ದಯಾರಸದಿಂದ ತೋದಕಣ್ಣುಗಳುಳ್ಳಂಥಾ ಬ್ರಹ್ಮದೇವರು ಮಾಡಿದ ಅಶ್ವಮೇಧ ಯಜ್ಞ ಸಂಬಂಧಿ ವಪೆಯ ಸುಗಂಧಯುಕ್ತವಾದ ತುಟಿಯುಳ್ಳಂಥಾ-ವರದ ಎಂಬ ಹೆಸರಿನ ವಿಷ್ಣುತೇಜವನ್ನು ಆರಾಧಿಸುತ್ತೇನೆ.

ಮೂ । ಕೃಶಾನುಮಾಮಂತ್ರ್ಯ ||

ಅರ್ಥ || ಕೃಶಾನುವನ್ನು ಕರೆದು (ವಿಶ್ವಾವಸು ಹೇಳುತ್ತಾನೆ.)

ಶ್ಲೋ । ವರದಂಭೋಭಜಸತತಂಶರದಂಭೋರುಹವಿಲೋಚನಂ ದೇವಂ । ಪರದಂಭೋಪಹತಿಕರಂಹರದಂಭೋಳಿಧರಮುಖಮುಖಾಶನುತಂ || ೩೭೯ ||

ಟೀಕಾ || ವರದಮಿತಿ || ಭೋಕೃಶಾನೋ—ಶರದಿಋತೌ ಅಂಭೋರುಹೇ ಇವವಿಶಾಲೇ ಲೋಚನೇ ಯಸ್ಯತಂ—ಪರೇಷಾಂ ಶತ್ರೂಣಾಂ ದಂಭಸ್ಯ ಗರ್ವಸ್ಯ ಉಪಹತಿಕರಂ ನಾಶಕರಂ—ಹರಃ ದಂಭೋಳಿಧರಃ ಇಂದ್ರಃ ತೌಮುಖೌ ಅಗ್ರೇಯೇಷಾಂತೈಃ ಮಖಾಶೈರ್ದೇವೈರ್ನುತಂ—ವರದಂ ದೇವಂ—ಸತತಂಭಜ ||

ಅರ್ಥ || ಎಲಾ ಕೃಶಾನುವೇ, ಶರದೃತುವಿನಲ್ಲಿಯ ತಾವರೆಯೋಪಾದಿ ಕಣ್ಣುಗಳುಳ್ಳಂಥ, ಶತ್ರುಗಳ ಹೆಮ್ಮೆ ಮುರಿಯುವಂಥಾವನಾದಂಥ, ರುದ್ರ ಮತ್ತು ಇಂದ್ರನೇ ಮೊದಲಾದ ದೇವತೆಗಳಿಂದ ವಂದಿಸಲ್ಪಡುವಂಥ, ವರದರಾಜಸ್ವಾಮಿಯ ಆರಾಧನೆಯನ್ನು ಮಾಡುವಂಥಾವನಾಗು.

ಮೂ । ಪುನಃಸಾನುಸ್ಮರಣರೋಮಾಂಚಂ ||

ಅರ್ಥ || ಮರಳಿ ಧ್ಯಾನವಂ ಮಾಡಿ ರೋಮಾಂಚಯುಕ್ತನಾಗಿ ವಿಶ್ವಾವಸು ಹೇಳುತ್ತಾನೆ.

ಶ್ಲೋ । ತಾಪತ್ರಯಪ್ರಶಮನಾದಮೃತಂಗೃಹೀತುಂತಾಮೇವವೈಧಹಯಮೇಧವಪಾಮುಪಾಸೇ । ಅಂಭೋಧಿಜಾಧರಸುಧಾರಸವಾಸಿತೇನಯಾಚುಂಬಿತಾವರದರಾಜಮುಖಾಂಬುಜೇನ ||೩೮೦ ||

ಟೀಕಾ || ತಾಪೇತಿ || ತಾಪಾನಾಂ ಆಧ್ಯಾತ್ಮಿಕಾಧಿ ಭೌತಿಕಾಧಿ ದೈವಿಕಾನಾಂ ತ್ರಯಸ್ಯ ಪ್ರಶಮನಾತ್—ನಾಶಂ ಪ್ರಾಪ್ಯೇತಿಲ್ಯಬ್ಲೋಪೇ ಪಂಚಮೀ—ಅಮೃತಂ ಮೋಕ್ಷಂ ಗೃಹೀತುಂ—ವಿಧೇರ್ಬ್ರಹ್ಮಣೋಯಂ ವೈಧಃ ಹಯಮೇಧಃ ತತ್ಸಂಬಂಧಿನೀಂವಪಾಮೇವ— ಉಪಾಸೇಭಜೇ—ಯಾವಪಾ—ಅಂಭೋಧಿಜಾಯಾಃ ಲಕ್ಷ್ಮ್ಯಾಃ ಅಧರಸ್ಯ ಸುಧಾತುಲ್ಯೇನ ರಸೇನವಾಸಿತೇನ ಸುರಭಿತೇನ—ವರದರಾಜಸ್ಯ ಮುಖಾಂಬುಜೇನ—ಚುಂಬಿತಾ—ತಾಮಿತಿಸಂಬಂಧಃ ||

ಅರ್ಥ ॥ ಆಧ್ಯಾತ್ಮಿಕವೆಂದರೆ ಆತ್ಮನ ಅಜ್ಞಾನದಿಂದ ಹುಟ್ಟುವ ಆಧಿ ಭೌತಿಕ ಪೃಥ್ವಿ, ಅಪ, ತೇಜ, ವಾಯು, ಆಕಾಶಗಳೇ ಮೊದಲಾದ ಭೂತಗಳಿಂದ ಉಂಟಾಗುವ, ಆಧಿದೈವಿಕ ಅಂದರೆ-ಕುಲದೇವತೆಯೇ ಮೊದಲಾದ ದೇವತೆಗಳಿಂದ ಉಂಟಾಗುವ ದುಃಖವನ್ನು ನಾಶ ಪಡಿಸಿಕೊಂಡು ಮೋಕ್ಷಫಳಿಸುವದಕ್ಕಾಗಿ ಬ್ರಹ್ಮದೇವರು ಮಾಡಿದ ಯಜ್ಞಕ್ಕೆ ಸಂಬಂಧ ಉಳ್ಳಂಥ, ಲಕ್ಷ್ಮಿದೇವಿಯು ಅಧರಾಮೃತದಿಂದ ಸವಿಯಾದಂಥ- ವರದ ರಾಜಸ್ವಾಮಿಯು ತನ್ನ ಮುಖಕಮಲದಿಂದ ಮುದ್ದುಗೈದಂಥ ವಪೆಯನ್ನು ನಾನು ಸ್ಮರಿಸುತ್ತೇನೆ.

ಮೂ। ಪುನಸ್ಸಾನಂದಂ ॥

ಅರ್ಥ ॥ ತಿರಿಗಿ ಸಂತೋಷಯುಕ್ತನಾಗಿ ವಿಶ್ವಾವಸು ಹೇಳುತ್ತಾನೆ.

ಶ್ಲೋ। ಭುವನವಹನಶೀಲಾಸಿಂಧುರಾಗಂಭಜಂತೀಜಯತಿವರದ ಮೂರ್ತಿಸ್ಸಾಧುವೇಗಾಪಗಾಚ ।ದಮಯಿತುಮವತೀರ್ಣಾಧಾ ತ್ರ್ಯಯಜ್ಞಂದ್ವಿತೀಯಾಸಫಲಯಿತುಮಿಹಾದ್ಯಾ ಸಾದರಾಪ್ರಾದು ರಾಸೀತ್ ॥ ೩೮೧ ॥

ಟೀಕಾ ॥ ಭುವನೇತಿ॥ ಭುವನಾನಾಂ ಲೋಕಾನಾಂ ವಹನಂ ಪಾಲನಂ ಜಲೇನಪ್ರವಹಣಂಚಶೀಲಂ ಸ್ವಭಾವಃ ಯಸ್ಯಾಸ್ಸಾ ಸಿಂಧುರಃ ಗಜಃ ಅಗಃ ಶೈಲಃ ಸಿಂಧುಶ್ಚ ಸಮುದ್ರಃ ರಾಗಃ ಪ್ರೇಮಾಚತಂ-ಭಜಂತೀ ಪ್ರಾಪ್ನುವಂತೀ- ವರದ ಮೂರ್ತಿರ್ವೇಗಾಪಗಾಚ-ಸಾಧುಜಯತಿ ದ್ವಿತೀಯಾವೇಗಾಪಗಾ-ಧಾತುಬ್ರಹ್ಮಣಃ ಯಜ್ಞಮಶ್ವಮೇಧಂ-ದಮಯಿತುಂ ನಾಶಯಿತುಂ-ಇಹಕಾಂಚ್ಯಾಂ ಅವತೀರ್ಣಾ ಆವಿರ್ಭೂತಾ-ಆದ್ಯಾತು ವರದಮೂರ್ತಿರ್ಧಾತ್ರ್ಯಯಜ್ಞಂ ಸಫಲಯಿತುಂ ಸಫಲಂಕರ್ತುಂ- ಸಾದರಾಸತೀ- ಪ್ರಾದುರಾಸೀತ್ ॥

ಅರ್ಥ ॥ ವರದರಾಜಮೂರ್ತಿಯು- ಲೋಕಗಳನ್ನು ಪಾಲಿಸುವ ಸ್ವಭಾವವುಳ್ಳಂಥಾವಳಾಗಿಯು ಹಸ್ತಿಗಿರಿಯ ಮೇಲೆ ಬಂದು ವಾಸಮಾಡುವಂಥಾವಳಾಗಿಯೂ ಜಯಿಸುತ್ತಾಳೆ. ಅಂದರೆ ಉತ್ಕರ್ಷದಿಂದೊಪ್ಪುತ್ತಾಳೆ. ವೇಗಾವತಿಯು ಜಲರೂಪದಿಂಧರಿಯುವ ಸ್ವಭಾವ ಉಳ್ಳವಳಾಗಿಯೂ ಸಮುದ್ರನಲ್ಲಿ ಪ್ರೀತಿಯುಳ್ಳವಳಾಗಿಯೂ ಜಯಿಸುತ್ತಾಳೆ, ಅಂದರೆ ಉತ್ಕರ್ಷದಿಂದೊಪ್ಪುತ್ತಾಳೆ. ಮೊದಲನೇಯವಳು ( ಅಂದರೆ ವರದರಾಜಮೂರ್ತಿ ) ಬ್ರಹ್ಮದೇವರ ಯಜ್ಞ ಸಂಪೂರ್ಣಪಡಿಸುವ ಅಪೇಕ್ಷೆಯಿಂದ, ಎರಡನೇಯವಳು ( ವೇಗಾವತಿ ನದಿ ) ಆ ಯಜ್ಞವನ್ನು ನಾಶಪಡಿಸುವ ಅಪೇಕ್ಷೆಯಿಂದ ಪ್ರಕಟವಾದರು.

ಕೃಶಾನುಃ ॥

ಮೂ। ವೇಯುವಯಸ್ಯತಂಜಯಾನಭಿಜ್ಞೋತಸ್ಮಿಂಜಯತೀತ್ಯುಕ್ತಿರಯುಕ್ತಾ । ಸವನಸಫಲೀಕರಣಘಟಿತಿರಪಿತತ್ಪ್ರಾತಿಕೂಲ್ಯಭಾಜಿನಿನೋಚಿತಾ ॥ ೩೮೨ ॥

ಟೀಕಾ ॥ ವಯಸ್ಯೇತಿ ॥ ಸವನಂಯಜ್ಞಃ ॥

ಅರ್ಥ॥ ಗೆಳೆಯನೇ- ಜಯ ಹ್ಯಾಗೆ ಮಾಡಬೇಕು, ಅಥವಾ ಜಯವೆಂದರೇನೆಂದರಿಯದ ವರದರಾಜಸ್ವಾಮಿಯೂ ಜಯಿಸುತ್ತಾನೆಂಬ ಮಾತು ಸರಿಯಾದದ್ದಲ್ಲವು. ಯಜ್ಞಗಳಿಗೆ ವಿರೋಧ ತಾಳಿಕೊಳ್ಳುವವನು ಯಜ್ಞ ಸಂಪೂರ್ಣಪಡಿಸಿದನೆಂಬ ನುಡಿ ಕೂಡ ನ್ಯಾಯವಾದದ್ದಲ್ಲವು.

ಮೂ। ತಥಾಹಿ। ಶ್ಲೋ। ಅಜಯಜ್ಞೋದ್ಭವೇತಸ್ಮಿನ್ಕಥಂ ನಾಮಜಯಜ್ಞತಾ। ಸವನಾಶಾನುಕೂಲೇಕಾಸವಸಾಫಲ್ಯಕಾರಿತಾ ॥ ೩೮೩ ॥

ಟೀಕಾ ॥ ಉಕ್ತಮೇವಾರ್ಥಂಪದ್ಯತೋನುಗೃಹ್ಣಾತಿ ॥ ಅಜೇತಿ ॥ ಜಯಂಸರ್ವೋತ್ಕರ್ಷಂನಜಾನಾತೀತ್ಯಜಯಜ್ಞಃ– ಅಜಸ್ಯಬ್ರಹ್ಮಣೋಯಜ್ಞಶ್ಚ– ತತಃ ಉದ್ಭವೇ– ತಸ್ಮಿನ್ವರದೇ– ಜಯಜ್ಞತಾಕಥಂನಾಮ–ನಾಸ್ತ್ಯೇವೇತ್ಯರ್ಥಃ–ತಜ್ಜನಕಸ್ಯೈವತದಭಾವಾದಿತಿಭಾವಃ– ಸವಸ್ಯಯಜ್ಞಸ್ಯನಾಶಾನುಕೂಲೇ–ಸವನಾಶಾನಾಂದೇವಾನಾಂ ಅನುಕೂಲೇಚ-ಸವಸ್ಯಯಜ್ಞಸ್ಯಸಾಫಲ್ಯಕಾರಿತಾಕಾ-ನಾಸ್ತ್ಯೇವೇತ್ಯರ್ಥಃ- ಅತ್ರಕೇಚನವೈಷ್ಣವಾಃ-ಪೂರ್ವಾರ್ಧೇಕಥಂನಾಮೇತ್ಯತ್ರ–ಕಥಂ-ನ–ಅಮ–ಇತಿಛಿತ್ವಾ–ಹೇಅಮಭಾಗ್ಯರಹಿತಕೃಶಾನೋ–ತಸ್ಮಿನ್ವರದೇಜಯಜ್ಞತಾ–ಕಥಂನಾಸ್ತೀತಿಕಾಕುಃ–ಅಸ್ತ್ಯೇವೇತ್ಯರ್ಥಃ–ಇತಿಉತ್ತರಾರ್ಧೇಚ–ಕಾಸವೇತ್ಯತ್ರ ಅಕಾರಂ ಪ್ರಶ್ಲಿಷ್ಯ–ಅಸವಸಾಫಲ್ಯಕಾರಿತಾಕೇತಿಕಾಕುಃ–ನಾಸ್ತ್ಯೇವ-ಅಪಿತುಸವಸಾಫಲ್ಯಕಾರಿತ್ವೈವಾಸ್ತೀತ್ಯರ್ಥಾಂತರಂ ಚಾತುರ್ಯಾತ್ ಕಲ್ಪಯಂತಿ ॥

ಅರ್ಥ॥ ಅಜಯಜ್ಞನಾದವನಿಂದ ಅಂದರೆ ಜಯ ತಿಳಿಯದವನಿಂದ ಅಥವಾ ಅಜನೆಂದರೆ ಬ್ರಹ್ಮನ ಯಜ್ಞದಿಂದ ಹುಟ್ಟಿದವನಿಗೆ ಜಯಜ್ಞತಾ ಅಂದರೆ ಜಯದ ತಿಳುವಳಿಕೆಯೆಂದು ಬರುವದು? ಸವನಾಶ ಅಂದರೆ ಯಜ್ಞಭಂಗಕ್ಕೆ ಅಥವಾ ಯಜ್ಞಗಳೇ ಅನ್ನವಾಗಿರುವಂಥ ದೇವತೆಗಳಿಗೆ ಅನುಕೂಲನಾದಂಥಾವನಿಗೆ ಸವಸಾಫಲ್ಯ ಉಂಟುಪಡಿಸುವ ಅಂದರೆ ಯಜ್ಞ ಸಂಪೂರ್ಣಪಡಿಸುವ ಶಕ್ತಿಯಲ್ಲಿಂದ ಬಂದೀತು.

ವಿಶ್ವಾವಸುಃ ॥

ಮೂ। ಸಖೆಶ್ಲೇಷಭಂಗ್ಯೈವದೋಷಮುದ್ಭಾವಯತಾಭವತಾಸಕಲಹೇಯಪ್ರತ್ಯನೀಕತ್ವೈವಾಸ್ಮಿನ್ನಾವಿಷ್ಕೃತಾ। ಯುಕ್ತಂಚೈತತ್ ॥ ೩೮೪ ॥

ಟೀಕಾ ॥ ಸಖಇತಿ ॥ ಶ್ಲಿಷ್ಯಂತ್ಯರ್ಥದ್ವಯಾದಿಕಮತ್ರೇತಿಶ್ಲೇಷಾಃ ಅನೇಕಾರ್ಥವಾಚಕಾಶ್ಶಬ್ದಾಃತೇಷಾಂಭಂಗ್ಯಾರೀತ್ಯಾ- ಸಕಲಾನಾಂಹೇಯಾನಾಂ ದೋಷಾಣಾಂ ಪ್ರತ್ಯನೀಕತಾವಿರೋಧಿತ್ವೈವ ॥

ಅರ್ಥ॥ ವಿಶ್ವಾವಸುವು ಕೃಶಾನುವಿಗೆ ಹೇಳುತ್ತಾನೆ. ಗೆಳೆಯನೇ ಶ್ಲೇಷಭಂಗಿಯಿಂದ ಅಂದರೆ ಅನೇಕಾರ್ಥ ಸೂಚಕ ಶಬ್ದಗಳ ಉಪಯೋಗದಿಂದ ಕೊರತೆಗಳನ್ನು ತೋರಿಸುವದಕ್ಕೆ ಪ್ರಯತ್ನಿಸುವಂಥಾವನಾದ ನಿನ್ನಿಂದ ಈ ವರದರಾಜಸ್ವಾಮಿಯಲ್ಲಿ ತ್ಯಾಜ್ಯವಾದ ಗುಣಗಳ ವಿರೋಧವೆಂದರೆ ಸದ್ಗುಣಗಳ ಅಸ್ತಿತ್ವವೇ ಪ್ರಕಟಿತವಾಗುತ್ತದೆ. ಇದು ಸರಿಯೇ.

ಮೂ । ಶ್ಲೋ । ಪದ್ಮೋಲ್ಲಾಸವಿಧಾಯಿನಿಸತ್ಪಥದೀಪ್ತಿಕೃತಿ ಚಕ್ರಭವ್ಯಕರೇ । ಭಾಸ್ವತಿವರದೇಭವಿತಾನಜಾತುದೋಷಾನುಷಂಗವಾರ್ತಾಪಿ ॥ ೩೪೫ ॥

ಟೀಕಾ ॥ ಪದ್ಮೇತಿ ॥ ಪದ್ಮಾನಾಂ ಪದ್ಮಾಯಾಲಕ್ಷ್ಮ್ಯಾಶ್ಚ ಉಲ್ಲಾಸವಿಧಾಯಿನಿಪ್ರಕಾಶಕೇ-ಸತ್ಪಥಸ್ಯ ಆಕಾಶಸ್ಯ ಸನ್ಮಾರ್ಗಸ್ಯ ದೀಪ್ತಿಕೃತಿಪ್ರಕಾಶಕೇ–ಚಕ್ರಾಣಾಂ ಚಕ್ರವಾಕಾನಾಂ ಭವ್ಯಕರೇ ಸಂಭೋಗ ಕುಶಲ ಸಂಪಾದಕೇ–ಚಕ್ರೇಣ ಸುದರ್ಶನೇನ ಭವ್ಯಃ ಕರಃ ಹಸ್ತಃ ಯಸ್ಮಿನ್ ತಸ್ಮಿನ್ನಿತಿಚ–ವರಾನ್ ಪ್ರಾರ್ಥಿತಾನಿದದಾತೀತಿ ವರದೇ–ಭಾಸ್ವತಿ ಸೂರ್ಯೇತೇಜಸ್ವಿನಿ–ವರದೇ ಭಗವತಿ–ದೋಷಾನುಷಂಗಸ್ಯರಾತ್ರಿ ಸಂಬಂಧಸ್ಯ ದೋಷಾಣಾಂ ಅನುಷಂಗಸ್ಯಚ ವಾರ್ತಾ–ಕಥಾ–ಜಾತುಕದಾಚಿದಪಿ–ನಭವಿತಾನಭವಿಷ್ಯತಿ ।

ಅರ್ಥ ॥ ಲಕ್ಷ್ಮೀದೇವಿಗೆ ಆನಂದವನ್ನು ಉಂಟುಪಡಿಸುವಂಥಾವನಾದ ಒಳ್ಳೇ ಮಾರ್ಗವನ್ನು ಬೆಳಗಿಸುವಂಥಾವನಾದ, ಸುದರ್ಶನ ಚಕ್ರದಿಂದ ಜಯಶಾಲಿಯಾದ ಹಸ್ತ ಉಳ್ಳಂಥಾವನಾದ, ಪ್ರಕಾಶಮಯನಾದ ಬೇಡಿದ್ದನ್ನು ಕೊಡುವಂಥಾವನಾದ ವರದರಾಜಸ್ವಾಮಿಗೆ ಎಂದಿಗೂ ದೋಷದ ಘಾಳಿ ಕೂಡ ತಟ್ಟಲಿಕ್ಕಿಲ್ಲವು.

(೨) ಕಮಲಗಳಿಗೆ ಉತ್ಸಾಹ ಉಂಟುಪಡಿಸುವಂಥಾವನಾದ ಆಕಾಶದೀವಿಗೆಯಂಥಾವನಾದ ಚಕ್ರವಾಕಪಕ್ಷಿಗಳಿಗೆ ಸಂಯೋಗ ಸುಖವನ್ನುಂಟಾಗುವ ಹಾಗೆ ಮಾಡುವಂಥಾವನಾದ ಬೇಡಿದ್ದನ್ನು ಕೊಡುವಂಥಾವನಾದ ಸೂರ್ಯನಲ್ಲಿ ಕತ್ತಲೆಯ ಸುದ್ದಿ ಕೂಡ ಸರ್ವಥಾ ಇರಲಾರದು.

ಮೂ । ಸಮಂತಾದವಲೋಕಯನ್ನಂಜಲಿಂಬಧ್ವಾ ॥

ಅರ್ಥ ॥ ಸುತ್ತಲು ಕಣ್ಣು ಓಡಿಸಿ ಕೈಗಳನ್ನು ಜೋಡಿಸಿ (ವಿಶ್ವಾವಸು ಹೇಳುತ್ತಾನೆ.)

ಮೂ । ಶ್ಲೋ । ಸೇವೇನಂತಸರಶ್ಶ್ರಯೇಕರಿಗಿರಿಂ ಶ್ರೀಪುಣ್ಯಕೋಟ್ಯಾಸಮಂ ಧ್ಯಾಯಾಮ್ಯುತ್ತರವೇದಿಮತ್ರಮಹಿತಂದೇವಾಧಿರಾಜಂಭಜೇ । ಕಲ್ಯಾಣೀಂಕಲಯಾಮಿಕಂಜನಿಲಯಾಂಕಲ್ಯಾಣಕೋಟಿಸ್ಥಿತಾಮೀಡೇರಾಘವ ಯಾದವಾದಿಮಕಿಟೀನ್ವಂದೇಮುಕುಂದಾಶ್ರಿತಾನ್ ॥ ೩೪೬ ॥

ಟೀಕಾ ॥ ಸೇವಇತಿ ॥ ಅನಂತಸರೋ ನಾಮಸ್ಥಲೀ ತೀರ್ಥಂ ಸೇವೆಭಜೆ–ಕರಿಗಿರಿಂ ಹಸ್ತಿಶೈಲಂ–ಶ್ರಯೇ–ಆಶ್ರಯೇ–ಉತ್ತರವೇದಿಂ ಬ್ರಹ್ಮಾಶ್ವಮೇಧೀಯಾಂ–ಪುಣ್ಯಕೋಟ್ಯಾವಿಮಾನೇನ ಸಮಂಧ್ಯಾಯಾಮಿ–ಅತ್ರಅಸ್ಯಾಂ ಉತ್ತರವೇದ್ಯಾಂ–ಮಹಿತಂ ಪೂಜಿತಂ–ದೇವಾಧಿರಾಜಂ ವರದಂಭಜೇ–ಕಲ್ಯಾಣಕೋಟ್ಯಾಂವಿಮಾನೇಸ್ಥಿತಾಂ– ಕಲ್ಯಾಣೀಂ ಭಕ್ತಶುಭಪ್ರದಾಯಿನೀಂ–ಕಂಜನಿಲಯಾಂ ಲಕ್ಷ್ಮೀಂ–ಕಲಯಾಮಿಭಜಾಮಿ–ರಾಘವಂ ಶ್ರೀರಾಮಂ ಯಾದವಂ ಶ್ರೀಕೃಷ್ಣಂ ಆದಿಮಕಿಟಂ ಆದಿವರಾಹಂಚತಾನ್–ಈಡೇಸ್ತೌಮಿ–ಮುಕುಂದಾಶ್ರಿತಾನ್ ಸನಕಾದೀನ್ ವಂದೇ ॥

ಅರ್ಥ ॥ ನಾನು ಇಲ್ಲಿ ಇರುವ ಅನಂತ ಸರೋವರ ಎಂಬ ಹೆಸರಿನ ತೀರ್ಥವನ್ನು

ಸೇವಿಸುತ್ತೇನೆ. ಹಸ್ತಿಗಿರಿಯ ಮರೆ ಹೊಕ್ಕುತ್ತೇನೆ. ಬ್ರಹ್ಮದೇವರು ಮಾಡಿದ ಅಶ್ವಮೇಧ ಯಾಗಕ್ಕೆ ಸಂಬಂಧವುಳ್ಳ ಉತ್ತರವೇದಿಯನ್ನು ಅಲ್ಲಿರುವ ಪುಣ್ಯಕೋಟಿಯೆಂಬ ವಿಮಾನ ಸಹಿತವಾಗಿ ಧ್ಯಾನಿಸುತ್ತೇನೆ. ಆ ಉತ್ತರವೇದಿಯೆಂಬ ಸ್ಥಳದಲ್ಲಿ ಪೂಜಿಸಲ್ಪಟ್ಟ ದೇವತೆಗಳಿಗೆ ಒಡೆಯನಾದ ವರದರಾಜಸ್ವಾಮಿಯನ್ನು ಆರಾಧಿಸುತ್ತೇನೆ. ಕಲ್ಯಾಣ ಕೋಟಿಯೆಂಬ ವಿಮಾನದಲ್ಲಿ ಕುಳಿತುಕೊಂಡಿರುವ ಭಕ್ತರಿಗೆ ಮಂಗಲದಾಯಕಳಾದ ಲಕ್ಷ್ಮೀದೇವಿಯನ್ನು ಸೇವೆಮಾಡುತ್ತೇನೆ. ಶ್ರೀರಾಮನನ್ನೂ ಕೃಷ್ಣನನ್ನೂ ವರಾಹದೇವರನ್ನೂ ಸ್ತುತಿಸುತ್ತೇನೆ. ವಿಷ್ಣು ಭಕ್ತರಾದ ಸನಕಾದಿಮುನಿಗಳನ್ನು ನಮಸ್ಕರಿಸುತ್ತೇನೆ.

ಮೂ । ಇತಿಪ್ರತೀಚ್ಯಾಂದಿಶಿಕಿಂಚಿದಂತರಮತಿಕ್ರಮ್ಯಸವಿಸ್ಮಯಾನಂದಂ ॥

ಅರ್ಥ ॥ ಇಂತೆಂದು ಸ್ವಲ್ಪದೂರ ಪಶ್ಚಿಮ ದಿಕ್ಕಿಗೆ ನಡದು ಆಶ್ಚರ್ಯ ಮತ್ತು ಸಂತೋಷದಿಂದ್ಯುಕ್ತನಾಗಿ (ವಿಶ್ವಾವಸು ಹೇಳುತ್ತಾನೆ.)

ಮೂ । ಅತ್ರಹಿ । ಶ್ಲೋ । ಸ್ವಾವಜ್ಞಾನಸಮುನ್ಮಿಷದ್ರುಷಿಸರಸ್ವತ್ಯಾಂವಿರಿಂಚಾಧ್ವರಪ್ರತ್ಯೂಹಾಯನದೀಪ್ರವಾಹ*ವಿಧಯಾಪ್ರಯಾತಪ್ರತಂತ್ಯಾಮಹೋ । ದೂನೇತದ್ದ್ರುಹಿಣೇಗಣೇಚಮರುತಾಂದೀನೇಮಖಂವಿಘ್ನತಃಪಾತುಂಸೇತುಕೃದೇವ† ಸೇತುರಭವತ್ಪಕ್ಷೀಂದ್ರಕೇತುಸ್ಸ್ವಯಂ ॥ ೩೪೭ ॥

ಟೀಕಾ ॥ ಸ್ವೇತಿ ॥ ಸ್ವಸ್ಯಾಃಅವಜ್ಞಾನೇನ ಅವಮಾನೇನ ಸಮುನ್ಮಿಷದ್ರುಷಿ ಉಲ್ಲಸತ್ಕ್ರೋಧಾಯಾವಶವಿವ ವಿರಿಂಚಾಧ್ವರ ಪ್ರತ್ಯೂಹಾಯ ಬ್ರಹ್ಮಾಶ್ವಮೇಧ ವಿಘ್ನಂ ಕರ್ತುಂ–ಕ್ರಿಯಾರ್ಥೇತ್ಯಾದಿನಾ ಚತುರ್ಥೀ-ಸರಸ್ವತ್ಯಾಂವಾಗ್ದೇವತಾಯಾಂ–ನದೀಪ್ರವಾಹವಿಧಯಾವೇಗವತೀ ಸ್ರೋತೋರೀತ್ಯಾ-ಪ್ರಯಾತವತಂತ್ಯಾಂಸತ್ಯಾಂ–ದ್ರುಹಿಣೇ ಬ್ರಹ್ಮಣಿ– ದೂನೇಕ್ರತುವಿಘ್ನೇನ ದುಃಖಿತೇಸತಿ–ಮರುತಾಂಗಣೇದೇವವೃಂದೇಚದೀನೇಸತಿ–ಮಖಂ ಅಶ್ವಮೇಧಂ–ವಿಘ್ನತಃ ಪಾತುಂ ರಕ್ಷಿತುಂ–ಸೇತುಕೃತ್–ಪಕ್ಷೀಂದ್ರಕೇತುಃ–ಸ್ವಯಮೇವಸೇತುರಭವತ್–ವೇಗವತೀಜಲಂ ನಿರುದ್ಧವಾನಿತ್ಯರ್ಥಃ ॥ ವಿರೋಧಾಭಾಸಃ ॥

ಅರ್ಥ ॥ ತನಗೆ ಆದ ಅವಮಾನದಿಂದ ಸಿಟ್ಟುಗೇರಿ, ಬ್ರಹ್ಮನ ಯಜ್ಞಭಂಗ ಮಾಡಬೇಕೆಂಬ ಉದ್ದೇಶದಿಂದ ಸರಸ್ವತಿಯು ವೇಗವತೀ ನದಿಯಾಗಿ ಹರಿದು ಬರುತ್ತಿರಲು, ಬ್ರಹ್ಮದೇವರು ತನ್ನ ಯಜ್ಞ ಹಾಳಾಗುತ್ತದೆಯಲ್ಲಯೆಂಬ ದುಃಖದಿಂದ ವ್ಯಾಪ್ತನಾಗಲು, ಯಜ್ಞಗಣವೆಲ್ಲ ನಿರಾಶೆಯಾಗಿ ಸಂಕಟದಲ್ಲಿ ಬಿದ್ದಿರಲು ಯಜ್ಞವನ್ನು ನಿರ್ವಿಘ್ನವಾಗಿ ನೆರವೇರಿಸಲಿಕ್ಕೆ ಸಮುದ್ರದ ಮೇಲೆ ಸೇತುವೆ ಕಟ್ಟಿಸಿದಂಥಾವನಾದ ಗರುಡಧ್ವಜನು ತಾನೇ ಸ್ವತಹಾ ಸೇತುವೆಯಾಗಿ ವೇಗವತಿ ನದಿಯನ್ನು ಕಟ್ಟಿದನು.

---

* ವಿಧಿನಾ † ಏಷ ಇತಿಪಾಠಾಂತರೆ ॥

ಮೂ । ಶ್ಲೋ । ಪರಂವೇಗಂಸರಸ್ವತ್ಯಾಉದ್ವೇಗಮಪಿತತ್ಪತೇಃ ।
ಸಮಿಷಸೇತ್ರೂದ್ಧರಣೋಽಪ್ಯರುಣದ್ಯುಗಪತ್ಪ್ರಭುಃ ॥ ೩೭೭ ॥

ಟೀಕಾ ॥ ಪರಮಿತಿ ॥ ಸೇತೋರುದ್ಧರಣಃ ಭಂಜಕೋಽಪಿನಿಷ್ಪಾದಕಶ್ಚ—ಸಮಿಷಪ್ರಭು ಶ್ರೀರಾಮಃ ವೇಗವತೀ ತೀರನಿಲಯಃ—ಸರಸ್ವತ್ಯಾಃ ನದೀರೂಪಾಯಾಃ—ಪರಮಿತ್ಯುಭಯತ್ರವಿಶೇಷಣಂ—ವೇಗಂ—ತತ್ಪತೇ ಬ್ರಹ್ಮಣಃ—ಉದ್ವೇಗಂ ದುಃಖಮಪಿ—ಯುಗಪದೇಕದಾ—ಅರುಣತ್ ನಿರುದ್ಧವಾನ್—ಅತ್ರಸೇತೋರ್ಭಂಜನ ನಿಷ್ಪಾದನಯೋಶ್ಶ್ಲೇಷಭಿತ್ತಿಕಯಾ ಭೇದಾಧ್ಯವಸಾಯಾದ್ವಿರೋಧಾಭಾಸಃ ॥

ಅರ್ಥ ॥ ಈ ವರದರಾಜ ಒಡೆಯನು ಸೇತುವೆ ಕಟ್ಟಿ ಪುನಹಾ ಅದನ್ನು ಮುರದು ಹಾಕಿದಂಥಾವನಾದಾಗ್ಯೂ, ನದೀ ರೂಪವಾದ ಸರಸ್ವತಿಯ ವೇಗವನ್ನು ಮತ್ತು ಅವಳ ಗಂಡನಾದ ಬ್ರಹ್ಮದೇವರ ದುಃಖವನ್ನು ಸಂಗಡಲೇ ಕಟ್ಟಿ ಬಿಟ್ಟನು.

ಮೂ । ಅಪಿಚ । ಶ್ಲೋ । ಆಶಾಮೈಶಾನಬಂಧೋಶ್ಚರಣನಖರುಚಾ
ಂಧಾರಯಾಸ್ಮೇರಯಂತೀ *ಕುಂಡೀಡಿಂಭಸ್ಯಕಾಷ್ಠಾಮಪಿಮಣಿ
ಮುಕುಟ †ನ್ಯಸ್ತಮುಕ್ತಾಮಯೂಖೈಃ। ಪರ್ಯಂಕೇಶಬ್ದವಿದ್ಯಾ
ಪರಿಮಳಸರಳೇಪಂಕಜಸ್ಪರ್ಧಿನೇತ್ರಾವ್ಯಕ್ತಿರ್ವೇಗಾಪಗಾಯಾಂ
ಸ್ವಪಿತಿ ‡ಭಗವತೀಕಾಪಿತಾಪಿಚ್ಛವರ್ಣಾ॥ ೩೭೮ ॥

ಟೀಕಾ ॥ ಆಶಾಮಿತಿ ॥ ಈಶಾನಬಂಧೋಃ ಕುಬೇರಸ್ಯ—ಆಶಾಂದಿಶಂ—ಚರಣನಖರುಚಾಂಧಾರಯಾ ಪಙ್ಕ್ತ್ಯಾ—ಕುಂಡೀಡಿಂಭಸ್ಯಅಗಸ್ತ್ಯಸ್ಯ— ಕಾಷ್ಠಾಂದಿಶಂ ದಕ್ಷಿಣಾಂ—ಮಣಿಮಯೇಮುಕುಟೇನ್ಯಸ್ತಾನಾಂ ಮುಕ್ತಾನಾಂ ಮಯೂಖೈಃ ಕಾಂತಿಭಿರಪಿ—ಸ್ಮೇರಯಂತೀ ಧವಳೀಕುರ್ವಂತೀ— ದಕ್ಷಿಣೋತ್ತರಶಿರಃ ಪಾದಂ ಶಯಾನೇತ್ಯರ್ಥಃ—ಪಂಕಜಸ್ಪರ್ಧಿ ನೇತ್ರಾತಾಪಿಚ್ಛವರ್ಣಾಕಾಪಿ ಅನಿರ್ವಚನೀಯಾ ಭಗವತೀವ್ಯಕ್ತಿಃ ಶ್ರೀರಂಗನಾಯಕ ಮೂರ್ತಿಃ—ವೇಗಾಪಗಾಯಾಂ ವೇಗವತ್ಯಾಂ ಶಬ್ದವಿದ್ಯಾಯಾಃ ಶಾಬ್ದಭಾಷ್ಯಸ್ಯ ಪರಿಮಳೇನ ವಾಸನಯಾ ಸರಳೇ ಮನೋಹರೇ ಪರಿಮಳರಸಿಕ ಇತಿವಾ ಪರ್ಯಂಕೇ ಶೇಷಶಯನೇ—ಸ್ವಪಿತಿಶೇತೇ ॥

ಅರ್ಥ ॥ ಈಶಾನನ ಬಂಧುವಾದ ಕುಬೇರನದಿಕ್ಕು ಅಂದರೆ ಬಡಗ ದಿಕ್ಕು ಪಾದಗಳ ಉಗುರುಗಳ ಪದಪಿನಿಂದ ಮತ್ತು ಅಗಸ್ತ್ಯಋಷಿಯ ದಿಕ್ಕು ಅಂದರೆ ತೆಂಕಣ ದಿಕ್ಕು ತಲೆಯ ಕಿರೀಟದಲ್ಲಿ ಕೆತ್ತಿದ ರತ್ನಗಳ ಹೊಳವಿನಿಂದ ಬೆಳಗಿಸುವಂಥಾದ್ದಾಗಿ, ಕಮಲದ ಸಂಗಡ ಹುರುಡು ಮಾಡುವ ಕಣ್ಣುಗಳುಳ್ಳ ತಮಾಲ ವೃಕ್ಷದ ಬಣ್ಣದಂತೆ ಬಣ್ಣ ಇರುವ ವರ್ಣಿಸಲಿಕ್ಕಶಕ್ಯವಾದ ಶ್ರೀ ವಿಷ್ಣುವಿನ ಒಂದು ಮೂರ್ತಿಯು ವೇಗವತಿ ನದಿಯಲ್ಲಿ ವ್ಯಾಕರ್ಣ ಶಾಸ್ತ್ರದ ಸುಗುಂಧದಿಂದ ಸುಖಕರವಾದ ಮಂಚದ ಮೇಲೆ ಅಂದರೆ ಶೇಷರೂಪವಾದ ಶಯನದ ಮೇಲೆ ಮಲಗಿರುತ್ತದೆ.

---

* ಕುಂಭಿಡಿಂಭಸ್ಯ † ನ್ಯುಪ್ತ ‡ ಸಮುದಿತಾ ಇತಿಪಾಠಾಂತರಾಣಿ ॥

ಮೂ। ಸಪ್ರತ್ಯಭಿಜ್ಞಂ ॥

ಅರ್ಥ ॥ ಪೂರ್ವ ಪರಿಚಯ ನೆನಪಿಗೆ ತಂದು ವಿಶ್ವಾವಸು ಹೇಳುತ್ತಾನೆ.

ಶ್ಲೋ । ಪ್ರಾಜಾಪತ್ಯಮಖಾಂತರಾಯತಟಿನೀಪಾಥೋನಿರೋ
ಧೋದ್ಯತಃ ಪ್ರಾಪ್ತಃಪಾವನಹೇಮತಾಮರಸಿನೀ*ತೀರಂಕೃಪಾ
ರಮ್ಯಧೀಃ । ಕ್ಷೇಮಂಕೋಮಲ†ವಲ್ಲಿಕಾಸಹಚರಃಪುಷ್ಣಾತುಕೃ
ಷ್ಣಾಂಬುದಚ್ಛಾಯಸ್ಸೋಯಮವಾತರನ್ಮಹತಿಯೋರಂಗೇಭು
ಜಂಗೇಶಯಃ ॥ ೩೯೦ ॥

ಟೀಕಾ ॥ ಪ್ರಾಜಾಪತ್ಯೇತಿ ॥ ಯೋಭಗವಾನ್—ಮಹತಿ ರಂಗೇಕ್ಷೇತ್ರೇ—ಭುಜಂಗೇಶಯಃ ಶೇಷಶಾಯಿಪು ರುಷಃ—ಅವಾತರತ್ ಆವಿರ್ಬಭೂವ—ಪ್ರಜಾಪತೇರ್ಬ್ರಹ್ಮಣಃ ಸಂಬಂಧಿನಃ ಮಖಸ್ಯ ಅಶ್ವಮೇಧಸ್ಯ ಅಂತ ರಾಯಸ್ಯ ವಿಘ್ನಭೂತಾಯಾಃ ತಟಿನ್ಯಾಃ ವೇಗವತ್ಯಾಃ ಪಾಥಸೋಜಲಸ್ಯ ನಿರೋಧಾರ್ಥಂ ಉದ್ಯತಃ— ಕೃಪಾರಮ್ಯಧೀಃ—ಕೋಮಲವಲ್ಲಿಕಯಾನಾಮದೇವ್ಯಾ ಸಹಚರಃ—ಕೃಷ್ಣಾಂಬುದಚ್ಛಾಯಃ ಪಾವನಾ ಪರಿ ಶುದ್ಧಾಯಾ ಹೇಮತಾಮರಸಿನೀ—ವೇಗವತೀ ಪ್ರದವಿಶೇಷಃ—ತಸ್ಯಾಃ ತೀರಂಪ್ರಾಪ್ತಃ ಸೋಯಂರಂಗನಾ ಯಕಃ— ಕ್ಷೇಮಮಸ್ಮಾಕಂ ಕುಶಲಂ—ಪುಷ್ಣಾತುವರ್ಧಯತು ॥

ಅರ್ಥ ॥ ಶ್ರೇಷ್ಠವಾದ ಈ ಕ್ಷೇತ್ರದಲ್ಲಿ ಸರ್ಪಶಯನನಾಗಿ ಕಾಣಿಸಿಕೊಂಡಿರುವಂ ಥಾವನಾದ, ಬ್ರಹ್ಮದೇವರು ಮಾಡುವ ಅಶ್ವಮೇಧಯಜ್ಞವನ್ನಡ್ಡಗಟ್ಟಲಿಕ್ಕೆ ಹರಿದು ಬಂದ ವೇಗವತೀ ಹೊಳೆಯ ನೀರುವನ್ನೆದುರಿಸಲಿಕ್ಕೆ ಉದ್ಯುಕ್ತನಾದಂಥಾವನಾದ, ಮನೋಹರವಾದ ದಯೆಯಿಂದ ಯುಕ್ತವಾದ ಬುದ್ಧಿಯುಳ್ಳಂಥಾವನಾದ ಕೋಮಲವಲ್ಲಿ ಕಾಯೆಂಬ ಹೆಸರಡೆದ ದೇವಿಯ ಗೆಳೆಯನಾದಂಥಾವನಾದ ಕಪ್ಪಾದ ಮೇಘವರ್ಣ ಉಳ್ಳಂಥಾವನಾದ ಪವಿತ್ರವಾದ ವೇಗವತಿ ನದಿಯ ತೀರವನ್ನು ಕುರಿತು ವಿಜಯ ಗೈದಂಥಾವನಾದ ಈ ರಂಗನಾಯಕನು ನಮ್ಮ ಕಲ್ಯಾಣವನ್ನು ಹೆಚ್ಚಿಸುವಂಥಾವನಾ ಗಲಿ.

ಮೂ। ಪುನರನುಧ್ಯಾಯಸಾನಂದಂ ॥

ಅರ್ಥ । ತಿರಿಗಿ ಧ್ಯಾನವನ್ನು ಮಾಡಿ ಹರ್ಷದಿಂದ ( ವಿಶಾವಸುವು ಹೇಳುತ್ತಾನೆ. )

ಮೂ। ಶ್ಲೋ। ಶತಮಖಮಣಿಸ್ತೋಮ ಶ್ಯಾಮಂಶಯಾನಮಹೀ
ಶ್ವರೇ ಶಶಿಸಖಮುಖಂರಾಜೀವಾಕ್ಷಂಸಮುನ್ನತನಾಶಿಕಂ । ಮಹಿತ
ಚರಣಂಧಾತುಃ ಪತ್ನ್ಯಾಮಹಸ್ತಮಸಃ ಪರಂ ಹೃದಿಲಗತುಮೇ
ಬಿಂಬೋಷ್ಠಂತದ್ಯಥೋಕ್ತಕೃದಾಹ್ವಯಂ ॥ ೩೯೧ ॥

* ಪಾರಂ † ಮಲ್ಲಿಕಾ ಇತಿಪಾಠಾಂತರೆ ॥

ಟೀಕಾ ॥ ಶತೇತಿ ॥ ಶತಮಖಮಣೀನಾಂ ಇಂದ್ರನೀಲಾನಾಂ ಸ್ತೋಮ ಇವಶ್ಯಾಮಸ್ತಂ—ಅಹೀಶ್ವರೇ ಶೇಷೇ—ಶಯಾನಂ ನಿದ್ರಾಯಮಾಣಂ ಶಶಿಸಖಮುಖಂ ಚಂದ್ರತುಲ್ಯಾಸ್ಯಂ—ರಾಜೀವಾಕ್ಷಂ—ಸಮುನ್ನತ ನಾಸಿಕಂ— ಧಾತುಃ ಪತ್ನ್ಯಾಸರಸ್ವತ್ಯಾ—ಮಹಿತಚರಣಂ ಪೂಜಿತಾಂಘ್ರಿಂ—ಯಥೋಕ್ತ ಕೃತ್ಯಥೋಕ್ತಕಾರೀತಿ ಆಹ್ವಯಃ ನಾಮಯಸ್ಯತತ್—ಯಥಾಶಕಾರಾದಿತ್ವೇನ ಪೂರ್ವಾರ್ಧಂ— ಮಕಾರಾದಿತ್ವೇನ ಉತ್ತರಾರ್ಧ ಮುಕ್ತಂ— ಶಮುಮಿತ್ಯರ್ಥಃ—ಕುರ್ವಂತೀತಿ ಶಮಕೃತಃ ಶಾಂತಿಸುಖದಾಯಕಾ ಆಹ್ವಯಾಃ ನಾಮಾನಿಯಸ್ಯೇತಿ— ಬಿಂಬೋಪ್ಸಂ—ತಮಸಃ ಅಜ್ಞಾನಾತ್ಪರಂ ಪರತಃ ವರ್ತಮಾನ ಮಿತ್ಯರ್ಥಃ—ಮಹವೈಷ್ಣವಂತೇಜಃ—ಮೇಹೃದಿ—ಲಗತುಶಿಷ್ಯತು ॥

ಅರ್ಥ ॥ ಇಂದ್ರನೀಲಮಣಿಗಳ ಪ್ರೋಲ್ ಶ್ಯಾಮವರ್ಣ ಉಳ್ಳಂಥಾವನಾದ ಸರ್ಪವೇ ಮಂಚವಾಗಿ ಮಲುಗಿದಂಥಾವನಾದ, ಚಂದ್ರ ಸಮಾನವಾದ ಮೊಗವೂ ತಾವರೆಗೆ ಸಮಾನವಾದಕಣ್ಣುಗಳೂ ಎತ್ತರವಾದ ಮೂಗೂ ಉಳ್ಳಂಥಾವನಾದ, ಬ್ರಹ್ಮದೇವರ ಹೆಂಡತಿಯಾದ ಸರಸ್ವತಿಯಿಂದ ಪೂಜಿಸಲ್ಪಟ್ಟ ಪಾದಗಳುಳ್ಳಂಥಾವನಾದ, ಯಥೋಕ್ತ ಕೃತ್ ಅಂದರೆ ಮಾತು ಪ್ರಕಾರ ನಡಕೊಳ್ಳುವಂಥಾವನೆಂಬ ಹೆಸರು ಉಳ್ಳಂಥಾವನಾದ, ಕೆಂದುಟಿಯುಳ್ಳಂಥಾವನಾದ, ಅಜ್ಞಾನದಿಂದಗಲಿರುವಂಥಾವನಾದ ಶ್ರೀ ವಿಷ್ಣುವಿನ ತೇಜವು ನನ್ನ ಹೃದಯದಲ್ಲಿ ಇರುವಂಥಾದ್ದಾಗಲೀ.

ಮೂ। ಶ್ಲೋ। ವೇಗವತೀಸೇತುತಯಾಪ್ರಾಗವತೀರ್ಣಾದಿದೇವತಾವಿನತಾನ್। ದ್ರಾಗವತೀಯಂದುರಿತಾದ್ರಾಗವತೀಕಲಶಜಲಧಿಕನ್ಯಾಯಾಂ ॥ ೩೯ ॥

ಟೀಕಾ ॥ ವೇಗವತೀತಿ ॥ ವೇಗವತ್ಯಾಃ ನದ್ಯಾಃ ಸೇತುತಯಾ ಸೇತುವನ್ನಿರೋಧ ಕತ್ವೇನೇತ್ಯರ್ಥಃ—ಪ್ರಾಕ್‌ಬ್ರಹ್ಮಾಶ್ವ ಮೇಧಕಾಲೆ—ಅವತೀರ್ಣಾ ಆವಿರ್ಭೂತಾ—ಕಲಶಜಲಧಿ ಕನ್ಯಾಯಾಂ ಲಕ್ಷ್ಮ್ಯಾಂ—ರಾಗವತೀ ಪ್ರೇಮಶಾಲಿನೀ—ಇಯಂ ಆದಿದೇವತಾರಂಗನಾಯಕಮೂರ್ತಿಃ—ವಿನತಾನ್ ದುರಿತಾತ್ ದ್ರಾಕ್‌ಸತ್ವರಮವತಿ ॥

ಅರ್ಥ ॥ ಸೇತುವೆಯಾಗಿ ವೇಗವತಿ ಹೊಳೆಯನ್ನಡ್ಡಗಟ್ಟಲಿಕ್ಕೆ ಹಿಂದೆ ಬ್ರಹ್ಮನು ಮಾಡಿದ ಅಶ್ವಮೇಧ ಯಜ್ಞದ ಕಾಲದಲ್ಲಿ ಇಳಿದು ಬಂದಂಥಾ, ಸಮುದ್ರನ ಮಗಳಾದ ಲಕ್ಷ್ಮೀದೇವಿಯಲ್ಲಿ ಪ್ರೀತಿಯುಳ್ಳಂಥಾ, ಈ ರಂಗನಾಯಕನೆಂಬ ಆದಿದೇವತೆಯು ಶರಣ ಬಂದವರನ್ನು ಬೇಗನೆ ಪಾಪದಿಂದ ಉಳಿಸುತ್ತದೆ.

ಕೃಶಾನುಃ॥

ಮೂ। *ಅಹೋ ಆಶುಕವಿಸ್ಸನ್ನಪಿಭವಾನಮುಂದೇವಮಭಿನಂದತಿ ॥ ೪೦ ॥

ಅರ್ಥ ॥ ಎಲೋ ನೀನು ಶೀಘ್ರ ಕವಿಯಾಗಿದ್ದರೂ ಕೂಡ ಈ ದೇವರನ್ನು ಹೊಗಳುತ್ತಿ.

---

* ಕಥಮಿತ್ಯಧಿಕಂ ಪುಸ್ತಕಾಂತರೆ ॥

ಶ್ಲೋ॥ ಅಧಃಕರೋತ್ಯಾದಿಮಶಾಬ್ದಿಕೋರಗಂಕಲಾನಿಧಿಂಧಿಕ್ಕು
ರುತೇಮುಖೇನಯಃ । ಕೃತಾಂತರಾಯಸ್ಯಸರಸ್ವತೀಜವೇಸ್ತವೇ
ರುಚಿಸ್ತಸ್ಯಕಥಂಭವೇತ್ಕವೇಃ ॥ ೩೯೪ ॥

ಟೀಕಾ ॥ ಅಧ ಇತಿ ॥ ಯಃ ರಂಗೇಶಃ—ಆದಿಮಃ ಪ್ರಾಥಮಿಕಃ ಶಾಬ್ದಿಕಃ ಶಬ್ದಶಾಸ್ತ್ರವೇತ್ತಾ ಯಃ ಉರಗಃ ಶೇಷಃ ತಂ-ತನ್ನೇದೇತಿ ತರ್ಕ-ಅಧಃ ಕರೋತಿ ತಿರಸ್ಕರೋತಿ-ಶಯನತ್ವೇನ ಅಧೋಭಾಗೇ ಕರೋತೀತಿ ಚ-ಮುಖೇನ ನಾಜ್ಮತ್ರೇಣ—ಮುಖೇನ ಚ—ಕಳಾನಿಧಿಂ ವಿದ್ಯಾನಿಧಿಂ ಚಂದ್ರಂ ಚ—ಧಿಕ್ಕುರುತೇ—ಸರಸ್ವತ್ಯಾ ವಾಗ್ದೇವತಾಯಾಃ ವೇಗವತ್ಯಾಶ್ಚ—ಜವೇ ವಿಜೃಂಭಣೇ ವೇಗೇ ಚ—ಕೃತಾಂತರಾಯಸ್ಯ ಕೃತವಿಘ್ನಸ್ಯ—ತಸ್ಯ ರಂಗೇಶ್ವರಸ್ಯ—ಸ್ತವೇ ವಿಷಯೇ—ಕವೇಃ ರುಚಿಃ ಆಸಕ್ತಿಃ—ಕಥಂ ಭವೇತ್ ನ ಭವೇದೇವೇತ್ಯರ್ಥಃ ॥

ಅರ್ಥ ॥ ವ್ಯಾಕರಣ ಶಾಸ್ತ್ರ ತಿಳಿದವರಲ್ಲಿ ಮೊದಲನೆಯವನಾದ ಶೇಷನನ್ನು ತಗ್ಗಿಸಿದಂಥಾವನಾದ (ಅಥವಾ ಶೇಷನನ್ನು ಹಾಸಿಗೆಯಾಗಿ ಮಾಡಿಕೊಂಡಂಥಾವನಾದ), ವಿದ್ಯಾನಿಧಿಯಾದ ಚಂದ್ರನನ್ನು ಕೇವಲ ಮಾತಿನಿಂದ ತಿರಸ್ಕರಿಸಿದಂಥಾವನಾದ (ಅಥವಾ ತನ್ನ ಮುಖದಿಂದ ಚಂದ್ರನನ್ನು ಕೀಳು ಮಾಡಿದಂಥಾವನಾದ), ಸರಸ್ವತಿಯ ವಾಗ್ವಿಜೃಂಭಣಕ್ಕೆ ತಡೆ ಹಾಕಿದಂಥಾವನಾದ (ಅಥವಾ ವೇಗವತೀ ಹೊಳೆಗೆ ಸಂಕ ಕಟ್ಟಿದಂಥಾವನಾದ), ದೇವರ ಹೊಗಳಿಕೆಯಲ್ಲಿ ಯಾವ ಕವಿಗೆ ಇಚ್ಛೆಯುಂಟಾದೀತು ? ಯಾರಿಗೂ ಉಂಟಾಗಲಿಕ್ಕಿಲ್ಲೆಂಬ ಭಾವವು.

ವಿಶ್ವಾವಸುಃ ॥

ಮೂ । ಕಿಮೇಭಿಃಶ್ಲೇಷೈಕಾವಲಂಬನೈರ್ದೋಷೈಃಅಮುಂ
ದೇವಮಾಶ್ರಿತೇಷುಜನೇಷುಖಲ್ವಪ್ರತ್ಯೂಹಸ್ಸರಸ್ವತೀಪ್ರವಾ
ಹೋವಿಜಯತೇ ॥ ೩೯೫ ॥

ಟೀಕಾ ॥ ಕಿಮಿತಿ ॥ ಸರಸ್ವತೀ ಪ್ರವಾಹಃ ವಾಗ್ಧೋರಣೀ—ಅಪ್ರತ್ಯೂಹಃ ನಿರ್ವಿಘ್ನಸ್ಸನ್—ವಿಜಯತೇ ॥

ಅರ್ಥ ॥ ಅನೇಕಾರ್ಥ ಉಳ್ಳ ಶಬ್ದಗಳಿಂದ ದೋಷಗಳನ್ನು ಹೇಳಿದರಿಂದೇನು ಪ್ರಯೋಜನವು ? ಈ ದೇವರ ಕಾಲು ಹಿಡಿದವರಲ್ಲಿ ವಾಕ್ಸಂಪತ್ತಿಯು ತೊಡಕಿಲ್ಲದೆ ಉತ್ಕರ್ಷಪಡುತ್ತೆ.

ಮೂ। ಪಶ್ಯ। ಶ್ಲೋ। ಕಲ್ಪಂತೇಕಾಮರಾಮಾಸ್ಫುರದಧರಸುಧಾಗ
ರ್ವಸರ್ವಸ್ವಮೋಷೋದ್ಯುಕ್ತಾನ್ಯುಕ್ತಾನ್ಯಮೀಷಾಂರಸಿಕಜನ
ಮುದೇಧಾತ್ರ್ಯಯೋಷಾಹಿಪಷಾಂ । ಶ್ಲಾಘಾವೇಲಾಸುದೋಲಾ
ಯಿತನಿಜಮುಕುಟಾಕಲ್ಪಕಲ್ಪದ್ರುಸೂನೋಡ್ಡೀನಾಲಿಧ್ವಾನತಾ
ನಾಕಲನಪರಿಕನಚ್ಛಾರುವೀಣಾಭಿಗಾನಾ॥ ೩೯೬ ॥

ಟೀಕಾ || ಕಲ್ಪಂತ ಇತಿ || ಕಾಮರಾಮಾಯಾಃ ರತೀದೇವ್ಯಾಃ ಸ್ಫುರತ್ಯಧರೆಸುಧಾಯಾಃ ರಸಸ್ಯಯತ್ ಗರ್ವಸರ್ವಸ್ವಂ ಸರ್ವಂ ಗರ್ವಧನಂ ತಸ್ಯಮೋಕ್ಷೇ ಅಪಹರಣೇ ಉದ್ಯುಕ್ತಾನಿ—ತತೋಽಪ್ಯತಿಮಧುರಾಣೀತ್ಯರ್ಥಃ—ಅಮೀಷಾಂ ರಂಗೇಶಾಶ್ರಿತಾನಾಂ—ಉಕ್ತಾನಿ ವಚಾಂಸಿ—ರಸಿಕಜನಸ್ಯಾಮುದೇ—ಕಲ್ಪಂತೇ—ತದಾನಂದ ಜನಕಾನಿ ಭವಂತೀತ್ಯರ್ಥಃ—ಹಿಯಸ್ಮಾತ್—ಏಷಾಂ ಭಕ್ತಾನಾಂ ಉಕ್ತಾನಾಂವಾ—ಶ್ಲಾಘಾವೇಲಾಸು ಸಶಿರಃ ಕಂಪನಾಭಿನಂದನಕಾಲೇಷು—ಧಾತುರ್ಯೋಷಾ ಸರಸ್ವತೀ—ದೋಲಾಯಿತೇಭ್ಯಃ ಚಲದ್ಭ್ಯ ಇತಿಯಾವತ್—ನಿಜಮುಕುಟಸ್ಯ ಆಕಲ್ಪೇಭ್ಯಃ ಭೂಷಣೇಭ್ಯಃ ಕಲ್ಪದ್ರುಸೂನೇಭ್ಯಃ ಕಲ್ಪವೃಕ್ಷ ಕುಸುಮೇಭ್ಯಃ ಉಡ್ಡೀನಾನಾಂ ಉತ್ಪತತಾಂ ಅಲೀನಾಂ ಧ್ವಾನಸ್ಯೈವ ತಾನಸ್ಯ ಗಾನವರ್ಧಕ ಶ್ರುತಿವಿಶೇಷಸ್ಯ ಆಕಲನೇನ ಯೋಗೇನ ಪರಿಕನತ್ ವರ್ಧಮಾನಂ ಚಾರುವೀಣಾಯಾಃ ಅಭಿತೋಗಾನಂ ಯಸ್ಯಾಸ್ತಥೋಕ್ತಾ ಭವತಿ—ತೇಷಾಂ ತಾನೀತಿವಾಸಂಬಂಧಃ ||

ಅರ್ಥ ॥ ರತಿದೇವಿಯ ಹೊಳೆಯುವಂಥಾ ತುಟಿಯ ಅಮೃತ ರಸದ ಗರ್ವ ಅಂದರೆ ಮಾಧುರ್ಯವನ್ನೆಲ್ಲ ಹರಣ ಮಾಡುವಂಥಾ ಈ ರಂಗನಾಯಕನ ಭಕ್ತರ ನುಡಿಗಳು ರಸಜ್ಞ ಜನರ ಮನಸ್ಸಿಗೆ ಆನಂದ ಕೊಡಲಿಕ್ಕೆ ಸಮರ್ಥವಾಗಿವೆ. ಆ ನುಡಿಗಳಿಗೆ ಮೆಚ್ಚಿ ಬ್ರಹ್ಮಪತ್ನಿಯಾದ ಸರಸ್ವತಿಯು ತಲೆದೂಗುವ ವೇಳೆಗಳಲ್ಲಿ ಅವಳ ಕಿರೀಟವನ್ನಲಂಕರಿಸಿದ ಕಲ್ಪವೃಕ್ಷದ ಹೂಗಳ ಮೇಲಿಂದ ದುಂಬಿಗಳು ಹಾರಿದವು. ಆ ದುಂಬಿಗಳ ಝುಂಕಾರ ರೂಪತಾನಗಳಿಂದ ಸರಸ್ವತಿ ದೇವಿಯ ಸುಂದರವಾದ ವೀಣೆಯ ಗಾಯನವು ಸುತ್ತಲು ತುಂಬಿ ಹೋಗುವಂಥಾದ್ದಾಯಿತು.

ಮೂ । ಕಿಂಚಿದುತ್ತರತೋದೃಷ್ಟಿಮಾಧಾಯ ಕೃತಾಂಜಲಿಬಂಧಃ ||

ಅರ್ಥ ॥ ಸ್ವಲ್ಪ ಬಡಗ ದಿಕ್ಕಿಗೆ ಕಣ್ಣಿಟ್ಟು ಕೈಜೋಡಿಸಿ ವಿಶ್ವಾವಸು ಹೇಳುತ್ತಾನೆ.

ಶ್ಲೋ । ಕ್ಷೇಮಾರಂಭನಿದಾನಮಾಪ್ಲವಜುಷಾಂ ಹೇಮಾಭಿರಾ
ಮಾಂಬುಜಸ್ತೋಮಾಯಾತಮರಂದ *ತುಂದಿಲಪಯೋಭೂ
ಮಾಸ್ವಭೂಮಾನಿತಾ । ಸಹ್ಯಾದ್ರಿಪ್ರಭವಾಸಮಾನವಿಭವಾಮ
ಹ್ಯಾಂಮ †ಮಹ್ಯಾರ್ತಿಹೃತ್ ‡ಪುಣ್ಯಾಯೋಗಿವರೇಣ್ಯಪುಣ್ಯಸ
ರಸೀದ್ರುಹ್ಯಾದಸಹ್ಯಾಂಹಸೇ || ೩೭ ||

ಟೀಕಾ || ಕ್ಷೇಮೇತಿ || ಆಪ್ಲವಜುಷಾಂ ಸ್ನಾನಂ ಕುರ್ವತಾಂ—ಕ್ಷೇಮಸ್ಯಾರಂಭೇ ಜನನೇ ನಿದಾನಂ ಮುಖ್ಯಕಾರಣಂ—ಹೇಮವದಭಿರಾಮಾಣಾಮಂಬುಜಾನಾಂ ಸ್ತೋಮಾತ್ ಆಯಾತೇನ ಪತಿತೇನ ಮರಂದೇನ ಮಕರಂದೇನ ತುಂದಿಲಃ ಪೂರ್ಣಃ ಪಯೋಭೂಮಾ ಜಲಾತಿಶಯೋ ಯಸ್ಯಾಸ್ಸಾ—ಸ್ವಭೂಮಾ ಬ್ರಹ್ಮಣಾ ಮಾನಿತಾ ಸಹ್ಯಾದ್ರಿಪ್ರಭವಯಾ ಕಾವೇರ್ಯಾ ಸಮಾನವಿಭವಾ ತುಲ್ಯಮಾಹಾತ್ಮ್ಯಾ—ಮಹ್ಯಾಂ—ಆರ್ತಿಹೃತ್ ದುಃಖನಾಶಿನೀ—ಪುಣ್ಯನಾಮ-ಯೋಗಿನಾಂ ವರೇಣ್ಯಾ ಕಾಮನೀಯಾ ಪುಣ್ಯಾಖ್ಯಸರಸೀ—ಮಮ ಸಂಬಂಧಿನೇ— ಅಸಹ್ಯಾಯ ಅಂಹಸೇ ಪಾಪಾಯ—ದ್ರುಹ್ಯಾತ್—ತನ್ನಾಶಯತ್ವಿತ್ಯರ್ಥಃ ||

---

* ಲಂಭಿತ † ಅಸಹ್ಯಾರ್ತಿಹೃತ್ ‡ ಪುಣ್ಯಾ ಇತಿಪಾಠಾಂತರಾಣಿ ||

ಅರ್ಥ ॥ ಸ್ನಾನ ಮಾಡಿದವರಿಗೆ ಮಂಗಲವನ್ನು ಹುಟ್ಟಿಸಿಕೊಡಲಿಕ್ಕೆ ಮುಖ್ಯ ಕಾರಣವಾಗಿರುವಂಥ, ಸ್ವರ್ಣದಂತೆ ರಮಣೀಯವಾದ ಕಮಲಗಳ ಗುಂಪಿನಿಂದ ಸುರಿಯುವ ಮಕರಂದದಿಂದ ಪುಷ್ಕಲವಾಗಿ ಕಲಿತಿರುವ ಜಲ ಸಮೃದ್ಧಿಯುಳ್ಳಂಥಾ, ಬ್ರಹ್ಮ ದೇವರಿಂದ ಮನ್ನಣೆ ಪಡದವಳಾದಂಥಾ, ಸಹ್ಯಾದ್ರಿ ಬೆಟ್ಟದ ಮೇಲೆ ಹುಟ್ಟಿದ ಕಾವೇರಿ ನದಿಗೆ ಸಮಾನವಾದ ಶ್ರೇಷ್ಠತ್ವ ಉಳ್ಳಂಥಾ, ಪೃಥ್ವಿಯಲ್ಲಿ ದುಃಖ ಪರಿಹರಿಸುವಂಥ, ಯೋಗಿಗಳಿಂದ ಪ್ರಾರ್ಥಿಸಲ್ಪಡುವಂಥ, ಪುಹ್ಯಾ ಎಂಬ ಪುಣ್ಯ ನದಿಯು ನನ್ನ ಪಾಪಗಳನ್ನು ನಾಶ ಪಡಿಸಲೀ.

ಮೂ । *ಇತಿವಿಮಾನಂದಕ್ಷಿಣತಃಪ್ರಸಾಧ್ಯಸಾದರಮಕ್ಷಿನಿಕ್ಷಿಪ್ಯಪ್ರಾಂಜಲಿರ್ಭೂತ್ವಾ ॥

ಅರ್ಥ ॥ ಇಂತೆಂದು ವಿಮಾನವನ್ನು ತೆಂಕಣ ದಿಕ್ಕಿಗೆ ನಡಿಸಿ, ಪ್ರೀತಿಯಿಂದ ನೋಡಿ ಕೈಜೋಡಿಸಿ ( ವಿಶ್ವಾವಸು ಹೇಳುತ್ತಾನೆ. )

ಮೂ । ಶ್ಲೋ । ವಿಶ್ವಾಹ್ಲಾದಕರೀಂಕರೀಂದ್ರಸರಸೀಕಲ್ಹಾರಪಾರಂಪರೀ ಭವ್ಯಾಮೋದಧುರಂಧರಾನಿಲಜಡೇದಿವ್ಯಾಲಯೇಜಾಗ್ರತೀಂ। ಕಷ್ಟಾಪದ್ವಿನಿವರ್ತಿನೀಂಘನತಪಃಕ್ಲಿಷ್ಟಾತ್ಮನಾಂಯೋಗಿನಾ ಮಿಷ್ಟಾಮಷ್ಟಭುಜಾಂಭಜಾಮಿವಿಬುಧೈ *ರಾಸೇವಿತಾಂದೇವತಾಂ ॥ ೩೯೮ ॥

ಟೀಕಾ ॥ ವಿಶ್ವೇತಿ ॥ ವಿಶ್ವಸ್ಯ ಪ್ರಪಂಚಸ್ಯ ಆಹ್ಲಾದಕರೀಂ ಕಷ್ಟಾನಾಮಾಪದಾಂ ವಿನಿವರ್ತಿನೀಂ ನಾಶಯಿತ್ರೀಂ– ಘನೇನತಪಸಾಕ್ಲಿಷ್ಟಃ ಕ್ಲೇಶಿತಃ ಆತ್ಮಾಮನಃ ಯೇಷಾಂತೇಷಾಂ–ಯೋಗಿನಾಮಿಷ್ಟಾಂ ಪ್ರಾರ್ಥನೀಯಾಂ– ಕರೀಂದ್ರಸರಸೀತೀರ್ಥಂ ನಾಮಾಲಯಸ್ಥಂ ತಸ್ಯಾಂ ಕಲ್ಹಾರಪಾರಂ ಪರೀ ರಕ್ತಾಬ್ಜಪಙ್ಕ್ತಿಃ ತಸ್ಯಾಃ ಭವ್ಯಸ್ಯಮನೋಜ್ಞಸ್ಯ ಆಮೋದಸ್ಯ ಗಂಧಸ್ಯ ಧುರಂಧರೇಣ ತತ್ಪೂರ್ಣೇನೇತ್ಯರ್ಥಃ ಅನಿಲೇನಜಡೇಶಿಶಿರೀಕೃತೇ– ದಿವ್ಯೇಆಲಯೇ– ಜಾಗ್ರತೀಂ ಪ್ರಕಾಶಮಾನಾಂ– ವಿಬುಧೈರ್ದೇವೈರಾಸೇವಿತಾಂ– ಅಷ್ಟಭುಜಾಂ ದೇವತಾಂ ಭಜಾಮಿ ॥

ಅರ್ಥ ॥ ಜಗತ್ತಿಗೆ ಸಂತೋಷಪಡಿಸುವಂಥಾವಳಾದ, ಆಪತ್ತುಗಳನ್ನು ನಿವಾರಿಸುವಂಥಾವಳಾದ, ಕಠಿಣವಾದ ತಪದಿಂದ ಕ್ಲೇಶಬಡುವ ಯೋಗಿಗಳಿಂದ ಪ್ರಾರ್ಥಿಸಲ್ಪಡುವಂಥಾವಳಾದ, ಕರೀಂದ್ರಸರಸ್ಸು ಎಂಬ ಕೊಳದಲ್ಲಿರುವ ಕೆಂದಾವರೆಗಳ ಸಮೂಹದಿಂದ ಹೊರಡುವ ಸುಗಂಧದಿಂದ ತುಂಬಿರುವ ಘಾಳಿಯಿಂದ ತಂಪಾಗಿ ಮಾಡಲ್ಪಟ್ಟ ಮಂದಿರದಲ್ಲಿ ಎಸೆಯುವಂಥವಳಾದ ದೇವತೆಗಳಿಂದ ಪೂಜಿಸಲ್ಪಡುವಂಥಾ ಅಷ್ಟಭುಜಾ ( ಎಂಟು ಭುಜಗಳುಳ್ಳ ) ದೇವಿಯನ್ನು ನಮಸ್ಕಾರ ಮಾಡುತ್ತೇನೆ.

---

* ಇತಿದಕ್ಷಿಣಾತಃ ಸಾದರಮಕ್ಷಿನಿಕ್ಷಿಪ್ಯಅವೇಕ್ಷ್ಯ ಇತಿಚಪಾಠಾಂತರಂ॥ * ಆರಾಧಿತಾಮಿತಿಪಾಠಾಂತರಂ॥

ಮೂ। ಅಥಪ್ರತೀಚ್ಯಾಂದಿಶಿಕಿಂಚಿದಂತರಂ *ವಿಮಾನಮಾನೀಯ ಸಹರ್ಷಂ॥

ಅರ್ಥ ॥ ಬಳಿಕ ಮೂಡಣ ದಿಕ್ಕಿಗೆ ಸ್ವಲ್ಪ ದೂರ ವಿಮಾನವನ್ನು ನಡಿಸಿ ಕೊಂಡು ಹೋಗಿ ಆನಂದದಿಂದ ( ವಿಶ್ವಾವಸುವು ಹೇಳುತ್ತಾನೆ. )

ಮೂ । ಶ್ಲೋ । ತ್ರಿದಶಾಕಲಿತಸ್ನೇಹಸ್ಫೂರ್ತಿರ್ವಾರ್ಣಶಮಯಂ ಸ್ತಮಃ । ಭಾತಿದೀಪಪ್ರಕಾಶೋತ್ರಶರಣಾಗತಬೋಧಕೃತ್ ॥ ೩೯೯ ॥

ಟೀಕಾ ॥ ತ್ರೀತಿ॥ ತಿಸೃಭಿರ್ದಶಾಭಿರ್ವರ್ತಿಭಿರಾಕಲಿತೇನಸಂಗತೇನ ಸ್ನೇಹೇನ ತೈಲೇನಸ್ಫೂರ್ತಿಃ ಪ್ರಕಾಶೋಸ್ಯಾಸ್ತೀತಿತದ್ವಾನ್— ತ್ರಿದಶೇಷು ದೇವೇಷು ಆಕಲಿತಾಸ್ನೇಹಸ್ಯಪ್ರೇಮ್ಣಃ ಸ್ಫೂರ್ತಿರಸ್ಯಾಸ್ತೀತಿಚ— ತಮಃತಿಮಿರಂ ಅಜ್ಞಾನಂಚ— ಶಮಯನ್ನಾಶಯನ್— ಅತಏವ— ಶರಣಂ ಗೃಹಮಾಗತಾನಾಂ— ರಕ್ಷಣಾರ್ಥಮಾಗತಾನಾಂಚ ಬೋಧಂ ಪ್ರಕಾಶಂ ಜ್ಞಾನಂಚಕರೋತೀತಿ ತತ್ಕೃತ್— ದೀಪಸ್ಯ ಪ್ರಕಾಶಃ— ದೀಪಪ್ರಕಾಶಸಂಜ್ಞೋಭಗವಾಂಶ್ಚ— ಅತ್ರಪುರೋದೇಶೇ— ಭಾತಿ ॥

ಅರ್ಥ ॥ ೧. ತ್ರಿದಶರೆಂದರೆ ದೇವರುಗಳ ಮೇಲೆ ಪ್ರೀತಿಯಿಂದ ಪ್ರಕಾಶಬಡುವಂಥ, ಅಜ್ಞಾನವನ್ನು ನಾಶಪಡಿಸುವಂಥ, ಶರಣ ಬಂದವರಿಗೆ ಜ್ಞಾನೋಪದೇಶ ಮಾಡುವಂಥಾ ದೀಪಪ್ರಕಾಶ ಎಂಬ ಹೆಸರಿನ ದೇವರು ಇದೇ ನೋಡು ನಮ್ಮ ಎದುರಿನಲ್ಲಿ ಶೋಭಿಸುತ್ತಾನೆ.

೨. ಮೂರು ಬತ್ತಿಗಳಿಂದ ಎಳಕೊಳ್ಳಲ್ಪಡುವ ಎಣ್ಣೆಯಿಂದ ಉರಿಯುವಂಥ, ಕತ್ತಲೆ ಓಡಿಸುವಂಥ, ಮನೆಯ ಒಳಗೆ ಬಂದವರಿಗೆ ಬೆಳಕು ಕೊಡುವಂಥ ದೀವಿಗೆಯ ಬೆಳಕು ಇದೇ ಎದುರಿಗೆ ಪ್ರಕಾಶಿಸುತ್ತದೆ.

ಕೃಶಾನುಃ॥

ಮೂ। ಶ್ಲೋ। ದೀಪಪ್ರಕಾಶಸಂಜ್ಞಾದೇವೇಸ್ಮಿನ್ನುತ್ತಮಸ್ಫುರಣೇ। ರಾತ್ರಿಚರಪ್ರತಿಕೂಲೇನದೀಪಜಾತೋಲ್ಲಸದ್ರುಚೌನಾಹರ್ನಾ ॥ ೪೦೦ ॥

ಟೀಕಾ ॥ ದೀಪೇತಿ ॥ ಉದ್ಗತಂ ಪ್ರಸಿದ್ಧಂ ನಷ್ಟಂಚತಮಸಃ ಅಜ್ಞಾನಸ್ಯಚಸ್ಫುರಣಂ ಯಸ್ಮಾತ್ತಸ್ಮಿನ್— ರಾತ್ರಿಚರಾಣಾಂ ಜನಾನಾಂ ರಕ್ಷಸಾಂಚ ಪ್ರತಿಕೂಲೇ—ಕಿಂಚ— ದೀಪಾಜ್ಜಾತಾಉಲ್ಲಸಂತೀಚ ರುಚಿಃ ನಾಸ್ತಿನಾಯಸ್ಯತಸ್ಮಿನ್— ನದೀಃ ಪಾತೀತಿನದೀಪಃ— ಸಮುದ್ರಸ್ತಜ್ಜಾತಾಯಾಂ ಲಕ್ಷ್ಮ್ಯಾಂ ಉಲ್ಲಸಂತೀರುಚಿಃ ಪ್ರೇಮಯಸ್ಯತಸ್ಮಿನ್ನಿತಿಚ— ಅಸ್ಮಿನ್ದೇವೇ— ದೀಪಪ್ರಕಾಶಸಂಜ್ಞೇ— ನಾಹರ್ನಾನಯುಕ್ತಾ ॥

* ಗತ್ವಾವಿಮಾನಮಾಗಮಯ್ಯ ಇತಿಪಾಠಾಂತರಂ ॥

ಅರ್ಥ ॥ ಈ ದೇವರಿಗೆ ದೀಪಪ್ರಕಾಶವೆಂಬ ಹೆಸರು ಒಪ್ಪುವದಿಲ್ಲವು. ಯಾಕಂದರೆ-- ಇವನಲ್ಲಿ ತಮವೆಂಬ ಅಜ್ಞಾನದ ಸ್ಫೂರ್ತಿ ಅಂದರೆ ಪ್ರಕಾಶಿಸುವಿಕೆ ಇರುವದಿಲ್ಲವು. ಇವನು ಇರುಳಿನಲ್ಲಿ ಸಂಚರಿಸುವ ರಾಕ್ಷಸರಿಗೆ ವಿರೋಧಿಯಾಗಿದ್ದಾನೆ. ನದೀಪಜಾತ ಅಂದರೆ ನದಿಗಳ ಗಂಡನಾದ ಸಮುದ್ರನ ಮಗಳಾದ ಲಕ್ಷ್ಮಿಯಲ್ಲಿ ಪ್ರೀತಿಯುಳ್ಳವನು.

೨ ಈ ದೇವರಿಗೆ ಉರಿಯುವ ದೀವಿಗೆ ಎಂಬ ಹೆಸರು ಒಪ್ಪುವದಿಲ್ಲವು. ಯಾಕಂದರೆ: ಅವನ ಸುತ್ತಲು ಕತ್ತಲೆ ದೃಷ್ಟಿಗೆ ಬೀಳುವದಿಲ್ಲವು. ಇರುಳು ತಿರುಗಾಟದವರಿಗೆ ವಿರೋಧವುಳ್ಳವನಾಗಿದ್ದಾನೆ. ದೀವಿಗೆಯಿಂದ ಹೊಳೆಯುವ ಬೆಳಕು ಇವನಲ್ಲಿರುವದಿಲ್ಲವು.

ವಿಶ್ವಾವಸುಃ ॥

ಮೂ। *ಮಂದಮತೇಮೈವಂಭಾಣೀಃ ॥ ೪೦೧ ॥

ಅರ್ಥ ॥ ಮೂಢ ಬುದ್ಧಿಯೇ ಹೀಗನ್ನ ಬೇಡ.

ಮೂ। ಶ್ಲೋ। ಪ್ರಕಟಿತದಶಾವತಾರೇ ಪ್ರಚುರಾಜ್ಯಾಕಲನಭಾವಿತಸ್ಫುರಣೇ। ದೀಪಪ್ರಕಾಶನಾಮಕ್ಷಮಂವಿಭಾವಯುರ್ದಿತಭೀತಿಹರೇ ॥ ೪೦೨ ॥

ಟೀಕಾ ॥ ಪ್ರಕಟಿತೇತಿ ॥ ಪ್ರಕಟಿತಃ ದಶಾಯಾಂ ವರ್ತೇ ಅವತಾರಃ ಆವಿರ್ಭಾವಃ ಅನ್ಯತ್ರಪ್ರಕಟಿತಾಃ ದಶಸಂಖ್ಯಾಕಾಃ ಅವತಾರಃ ಮಾತ್ಸ್ಯಾದಿ ಜನ್ಮಾನಿಯೇನೇತಿಚ-ಪ್ರಚುರಸ್ಯ ಆಜ್ಯಸ್ಯ ಘೃತಸ್ಯ ಪ್ರಚುರಾಯಾಃ ಆಜೇಃ ರಾಕ್ಷಸೈರ್ಯುದ್ಧಸ್ಯಚ ಆಕಲನೇನ ಗ್ರಹಣೇನ ಭಾವಿತಂ ಸಂಪಾದಿತಂ ಸ್ಫುರಣಂ ಪ್ರಕಾಶಃ ಪ್ರಸಿದ್ಧಿಶ್ಚ ಯಸ್ಯತಸ್ಮಿನ್-ವಿಭಾವರ್ಯಾಃ ರಾತ್ರ್ಯಾಃ ಉದಿತಾಂ ಜಾತಾಂ ಭೀತಿಂ ಹರತೀತಿ ತದ್ಧರೇ-ವಿಭೌ ಅರಿಭ್ಯಃ ಶತ್ರುಭ್ಯಃ ಉದಿತಭೀತಿ ಹರಇತಿ ಛೇದಃ-ವಿಭೌ ಭಗವತಿ-ದೀಪಪ್ರಕಾಶ ಇತಿನಾಮ-ಕ್ಷಮಂ ಯುಕ್ತಮೇವ ॥

ಅರ್ಥ ॥ (೧) ಮಚ್ಛಾವತಾರವೇ ಮೊದಲಾದ ಹತ್ತು ಅವತಾರಗಳನ್ನೆತ್ತಿದಂಥಾವನಾದ, ಬಹಳವಾದ ಯುದ್ಧದಲ್ಲಿ ಜಯದಿಂದ ಮೆರೆದಂಥಾವನಾದ, ಶತ್ರುಗಳಿಂದ ಉಂಟಾದ ಭಯವನ್ನು ನಿವಾರಿಸಿದಂಥಾವನಾದ, ಪ್ರಭುವಿಗೆ ದೀಪ ಪ್ರಕಾಶವೆಂಬ ಹೆಸರು ಯೋಗ್ಯವು.

(೨) ಪ್ರಕಟವಾದ ಬತ್ತಿಯಲ್ಲಿ ಕಾಣಿಸಿಕೊಳ್ಳುವಂಥಾವನಾದ ಬಹಳ ತುಪ್ಪದಿಂದ ಉರಿಯುವ ಕಾಂತಿಯುಳ್ಳಂಥಾವನಾದ ರಾತ್ರಿಯಲ್ಲಿ ಕತ್ತಲೆಯಿಂದ ಉಂಟಾಗುವ ಅಂಜಿಕೆ ದೂರ ಪಡಿಸುವಂಥಾವನಾದ ಈ ದೇವರಿಗೆ ಬೆಳಗುವ ದೀವಿಗೆ ಎಂಬ ಹೆಸರು ಒಪ್ಪುತ್ತದೆ.

ಮೂ। ನಿರೂಪ್ಯಸಾನಂದಂ॥

ಅರ್ಥ ॥ ನೋಡಿ ಸಂತೋಷಯುಕ್ತನಾಗಿ ( ವಿಶ್ವಾವಸು ಹೇಳುತ್ತಾನೆ. )

---

* ಮುದಮುತ್ತೇತಿ ಪಾಠಾಂತರಂ ॥

ಮೂ। ಶ್ಲೋ। ಶ್ರೀರಂಗೇಶ್ವರಶಾಸನಾದಧಿಗತಶ್ರುತ್ಯಂಚಲಾಚಾ
ರ್ಯಕಂ ದಾಂತಂಯಂಕವಿವಾದಿದಂತಿಹರಿರಿತ್ಯಾರ್ಯಾವದಂತಿ
ಕ್ಷಿತೌ । ಸರ್ವಸ್ಯಾಮಪಿಹಂತ *ತರ್ಕಸರಣೌಸ್ವಾತಂತ್ರ್ಯಮಾ
ಸೇದುಷಾಂ ಸುತ್ರಾಮಾಸಹಿವೇಂಕಟೇಶಕವಿರಾಡತ್ರಾವಿರಾಸೀ
ತ್ †ಗುರುಃ ॥ ೪೦೩ ॥

ಟೀಕಾ ॥ ಶ್ರೀರಂಗೇತಿ ॥ ಶ್ರೀರಂಗೇಶ್ವರಸ್ಯ ಭಗವತಶ್ಶಾಸನಾತ್ ಆಜ್ಞಾಮವಲಂಬೇತ್ಯರ್ಥಃ–ಅಧಿಗತಂ ಪ್ರಾಪ್ತಂ ಶ್ರುತ್ಯಂಚಲಾಚಾರ್ಯಕಂ ವೇದಾಂತಾಚಾರ್ಯ ನಾಮಯೇನತಂ–ದಾಂತಂಜಿತೇಂದ್ರಿಯಂ–ಯಂವೇಂಕಟೇಶಕವಿಂ–ಕ್ಷಿತೌ–ಆರ್ಯಾಃ–ಕವೀನಾಂ ವಾದಿನಾಂ ಚೈವದಂತಿನಾಂ ಗಜಾನಾಂ ಹರಿಃಸಿಂಹ ಇತಿಕವಿವಾದಿ ಕರಿ ಸಿಂಹಂ ವದಂತಿ–ಸರ್ವಸ್ಯಾಂ ತರ್ಕಸರಣೌ ನ್ಯಾಯಶಾಸ್ತ್ರೇ–ಸ್ವಾತಂತ್ರ್ಯಮಾಸೇದುಷಾಂ ಪ್ರಾಪ್ತವತಾಂ–ಸ್ವಾಧೀನ ತರ್ಕಶಾಸ್ತ್ರಾಣಾಮಿತಿಯಾವತ್–ಸುತ್ರಾಮಾ ಇಂದ್ರಃ–ಸಗುರುಃ ವೆಂಕಟೇಶ ಕವಿರಾಟ್–ಅತ್ರಕಾಂಚ್ಯಾಂ–ಆವಿರಾಸೀತ್–ಪ್ರಾದುರ್ಬಭೂವ–ಹಂತೇತಿ ಹರ್ಷೇ ॥

ಅರ್ಥ ॥ ಶ್ರೀರಂಗೇಶ್ವರ ದೇವರ ಅಪ್ಪಣೆ ಮೇರಿಗೆ ವೇದಾಂತಾಚಾರ್ಯ ಎಂಬ ಹೆಸರು ಪಡೆದಂಥಾವನಾದ, ಇಂದ್ರಿಯಗಳನ್ನು ಜಯಿಸಿದಂಥಾವನಾದ, ಪೃಥ್ವಿಯಲ್ಲಿ ಕವಿಗಳೆಂಬ ಮತ್ತು ವಾದಿಗಳೆಂಬ ಆನೆಗಳಿಗೆ ಸಿಂಹನೆಂದು ಶ್ರೇಷ್ಠರಿಂದ ಕರಿಯಲ್ಪಡುವಂಥಾವನಾದ, ನ್ಯಾಯ ಶಾಸ್ತ್ರ ಕರತಲಾಮಲವಾದವರಲ್ಲಿ ಇಂದ್ರನೆಂದರೆ ಅರಸನಾದಂಥಾವನಾದ, ಗುರುವಾದ ವೇಂಕಟೇಶ ಕವಿರಾಜನು ಈ ಕಾಂಚಿಯಲ್ಲೇ ಹುಟ್ಟಿದನು.

ಮೂ। ಜನಾನುದ್ದಿಶ್ಯ ॥

ಅರ್ಥ ॥ ಜನರನ್ನುದ್ದೇಶಿಸಿ ( ವಿಶ್ವಾವಸು ಹೇಳುತ್ತಾನೆ. )

ಮೂ। ಶ್ಲೋ। ಭೇದಾಭಿದಾವಿಷಯವಾದಾಪತದ್ದುರುಪವಾದಾ
ರ್ಥಸಾಧಕ ಮದೋತ್ಪಾದಾವಹಾದ್ಭುತಮುಖಾದಾಪಗಾಸ್ಯದವಿ
ನೋದಾಭಿಜಾತಭಣಿತಿಃ । ಪಾದಾರವಿಂದನತಖೇ ‡ದಾಪನೋದ
ಚತುರೋದಾರಮಾಧವಗುಣಾಸ್ವಾದಾಭಿತುಷ್ಟಇಹಮೋದಾಯ
ವೋಭವತುವೇದಾಂತದೇಶಿಕಮಣಿಃ ॥ ೪೦೪ ॥

ಟೀಕಾ ॥ ಭೇದೇತಿ ॥ ಭೇದಃ ಜೀವೇಶ್ವರಯೋಃ ದ್ವೈತಂ– ಅಭಿದಾತಯೋರದ್ವೈತಂ–ತೇವಿಷಯೌಯಯೋಸ್ತಾದೃಶೌ ಯೌವಾದೌ–ತದರ್ಥ ಮಾಪತತಾಂ–ದುರುಪ ವಾದಸ್ಯ ಅತಿನಿಂದ್ಯಸ್ಯ ಅರ್ಥಸ್ಯ

---

* ತಂತ್ರಸರಣೌ ಇತಿಪಾಠ ಏವಸಾಧೀಯಾನ್ ವಾಚಸ್ಪತಿಮಿಶ್ರಾಧಿಷು ಮಾನ್ಯೇಷು ಪಂಡಿತೇಷು ಸರ್ವತಂತ್ರಸ್ವತಂತ್ರೇತ್ಯೇವ ವಿಶೇಷಣ ಪ್ರಯೋಗದರ್ಶನಾತ್ ॥ † ಪ್ರಭುರಿತಿ ಪಾಠಾಂತರಂ ॥
‡ ಅಪಹಾರೇತಿ ಪಾಠಾಂತರಂ ॥

ದ್ವೈತಾದ್ವೈತಾನ್ಯತರಸ್ಯ ಸಾಧಕಾನಾಂ ವಾದಿನಾಂ—ಮದಸ್ಯ ಉತ್ಸಾದಾವಹಾಃ ನಿವಾರಣ ಸಂಪಾದಕಾಃ— ಅದ್ಭುತಾಶ್ಚ ಮಖಾದಾನಾಂ ದೇವಾನಾಮಾಪಗಾಯಾಃ ಗಂಗಾಯಾಃ—ಸ್ಯದಸ್ಯವೇಗಸ್ಯೇವ ವಿನೋದ ವಿಲಾಸಃ ಯಾಸಾಂತಾದೃಶ್ಯಶ್ಚ—ಅಭಿಜಾತಾನಿರ್ಮಲಾಶ್ಚ—ಭಣಿತಯಃ ವಾಕ್ಯಾನಿಯಸ್ಯಸಃ—ಪಾದಾರ ವಿಂದೇನತಾನಾಂ ಖೇದಸ್ಯ ಅಪನೋದೇ ವಾರಣೇಚತುರಸ್ಯ ಅತಏವೋದಾರಸ್ಯ ಮಹತಃ ಮಾಧವಸ್ಯ ಗು ಣಾನಾಂ ಕಾರುಣ್ಯಾದೀನಾಂ ಆಸ್ವಾದೇನ ಅನುಸಂಧಾನೇನ ಅಭಿತುಷ್ಟಃ—ವೇದಾಂತದೇಶಿಕಮಣಿಃ ಇಹವಃ ಮೋದಾಯಭವತು ||

ಅರ್ಥ ॥ ವೇದಾಂತ ದೇಶಿಕನವಚನಗಳು-ದ್ವೈತ ಮತ್ತು ಅದ್ವೈತ ಎಂಬ ಎರಡು ಮತಗಳಲ್ಲಿ ಅದು ಅಥವಾ ಇದು ಒಂದೇ ಯಥಾರ್ಥವಾದದ್ದೆಂಬ ಸುಳ್ಳು ವಾದ ಮಾಡು ವವರ ಗರ್ವವನ್ನು ನಾಶಪಡಿಸುವಂಥವುಗಳಾಗಿಯೂ, ಆಶ್ಚರ್ಯಕಾರಕವಾದಂಥವುಗ ಳಾಗಿಯೂ, ಯಜ್ಞಗಳೇ ಊಟವಾಗಿರುವ ದೇವತೆಗಳ ನದಿಯೆಂದರೆ ಗಂಗಾನದಿಯ ವೇಗದಂತೆ ವಿಲಾಸ ಉಳ್ಳಂಥವುಗಳಾಗಿಯೂ, ಶುದ್ಧವಾದಂಥವುಗಳಾಗಿಯೂ ಅವೆ. ಈ ತರಹಾದವನಾದ ಮತ್ತು ಪಾದಕ್ಕೆರಗಿದವರ ದುಃಖನಿವಾರಣೆ ಮಾಡುವದರಲ್ಲಿ ಕುಶ ಲನಾಗಿಯೂ ಉದಾರನಾಗಿಯೂ ಇರುವ ಲಕ್ಷ್ಮೀಕಾಂತನ ಗುಣಗಳ ಧ್ಯಾನದಿಂದ ಸಂತೋಷ ಉಳ್ಳಂಥವನಾದ ವೇದಾಂತ ದೇಶಿಕ ಮಣಿಯು ನಮಗೆ ಆನಂದ ಪಡಿಸು ವಂಥಾವನಾಗಲೀ.

ಮೂ। ಶ್ಲೋ। ಅಪಿಚ। ನಾನಾಮ್ನಾಯಪರಿಶ್ರಮಂಕಲಯತಾಂನಾ
ಸ್ತ್ಯೇವಶಾಸ್ತ್ರೇಷುಧೀಸ್ಸತ್ಯೋರ *ಪ್ಯನಯೋಸ್ತಯೋರ್ನ
ಸುಲಭಾ †ಸಾಹಿತ್ಯಕ್ಷ್ಮತಾಸಾಹಿತೀ । ಅಪ್ಯೇತಾಸುಸತೀಷುನಾಸ್ತಿ
ವಿನಯೋನಾಚಾರಭಕ್ತಿಕ್ಷಮಾಚಾತುರ್ಯಸ್ಸಚಸಾಚಸಾಚಸ
ಚತಾಶ್ಚಾಲಂಬ್ಯಖೇಲಂತ್ಯಮುಂ॥ ೪೦೫ ॥

ಟೀಕಾ ॥ ನಾನೇತಿ ॥ ನಾನಾಸಮಸ್ತೇ ಆಮ್ನಾಯೇವೇದೇಪರಿಶ್ರಮಂ ಅಧ್ಯಯನಂ— ಕಲಯತಾಂಕು ರ್ವತಾಂ ಶಾಸ್ತ್ರೇಷುಧೀಃ ಶಾಸ್ತ್ರಾರ್ಥವಿಜ್ಞಾನಂ— ನಾಸ್ತ್ಯೇವ— ಪ್ರಾಯಶಇತಿಶೇಷಃ— ಅನ ಯೋಸ್ತಯೋರ್ವೇದಶಾಸ್ತ್ರಾಭ್ಯಾಸಯೋಸ್ಸತ್ಯೋರಪಿಕಥಂಚಿದಿತಿಶೇಷಃ-ಸಾಪ್ರಸಿದ್ಧಾನಿರಂಕುಶಾ ಅಕ್ಷ ತಾಸಾಹಿತೀಶಬ್ದಾರ್ಥವ್ಯುತ್ಪತ್ತಿರ್ನಸುಲಭಾನಾಸ್ತ್ಯೇವೇತ್ಯರ್ಥಃ ಏತಾಸುವೇದಶಾಸ್ತ್ರವ್ಯುತ್ಪತ್ತಿಷು ಸತೀಷ್ವಪಿ— ವಿನಯಃ ಮಾರ್ದವಂ— ನಾಸ್ತ್ಯೇವ ಆಚಾರಃ ಶ್ರೌತಸ್ಮಾರ್ತಕರ್ಮಾನುಷ್ಠಾನಂ— ಭಕ್ತಿರ್ಭಾಗವತೀ—ಕ್ಷಮಾಸುಖದುಃಖಸಹನಂ—ಚಾತುರೀಕರ್ತವ್ಯೇಷು ಕೌಶಲಂ ಚತಸ್ರಃ ನಸಂತ್ಯೇವ— ಸಃ ವೇದಾಭ್ಯಾಸಃ— ಸಾಶಾಸ್ತ್ರಧೀಶ್ಚ— ಸಾಸಾಹಿತೀಚ— ಸಃವಿನಯಶ್ಚ—ತಾಆಚಾರಭಕ್ತಿಕ್ಷಮಾಚಾ ತುರ್ಯಶ್ಚ—ಅಮುಂವೇದಾಂತಾಚಾರ್ಯಮಾಲಂಬ್ಯಆಶ್ರಿತ್ಯ— ಖೇಲಂತಿರಮಂತೇ— ಇತಿವಸ್ತುನಾಲೋ ಕೋತ್ತರೋಯಮಿತಿಧ್ವನ್ಯತೆ ॥

* ಉಭಯೋಃ ॥ † ಸಾಹಕ್ಷಿತಾ ಇತಿಪಾಠಾಂತರೆ ॥

ಅರ್ಥ ॥ ಸಂಪೂರ್ಣವೇದಾಧ್ಯಯನ ಮಾಡಿದವರಿಗೆ ಬಹಳ ಮಾಡಿ ಶಾಸ್ತ್ರಗಳ ತಿಳಿವು ಇರುವದಿಲ್ಲವು. ವೇದ ಮತ್ತು ಶಾಸ್ತ್ರ ಕಲಿತವರಿಗೆ ಸಾಹಿತ್ಯ ಶಾಸ್ತ್ರದ ಜ್ಞಾನ ಇರುವದಿಲ್ಲವು. ಈ ಮೂರೂ ಅಂದರೆ ವೇದ ಶಾಸ್ತ್ರ ಮತ್ತು ಸಾಹಿತ್ಯ ಬಲ್ಲವರಲ್ಲಿ ನಮ್ರತೆ, ಶ್ರುತಿಸ್ಮೃತಿಗಳಿಗೆ ಸರಿಯಾದ ನಡತೆ, ಹರಿಭಕ್ತಿ, ಸುಃಖ ದುಃಖ ತಾಳ್ಮೆ, ವ್ಯವಹಾರಿಕ ಜಾಣತನ ಮೊದಲಾದ ಗುಣಗಳಿರುವದಿಲ್ಲವು. ಆದರೆ ವೇದಾಭ್ಯಾಸ ಶಾಸ್ತ್ರಜ್ಞಾನ ಸಾಹಿತ್ಯದ ಅರಿವು, ನಮ್ರತೆ, ಆಚಾರಭಕ್ತಿ, ತಾಳ್ಮೆ, ಜಾಣತನ ಈ ಎಲ್ಲ ಗುಣಗಳು ವೇದಾಂತದೇಶಕರಲ್ಲಿ ಶೇರಿಕೊಂಡು ಕ್ರೀಡಿಸುತ್ತಿದ್ದವು.

ಮೂ। ಕಿಂಬಹುನಾ ॥ ೪೦೬ ॥

ಅರ್ಥ ॥ ಬಹಳ ವಿಸ್ತಾರ ಯಾಕೆ.

ಮೂ। ಶ್ಲೋ। ಅರ್ವಾಂತಮಾಸ್ಯೇತಮುಪಾಸ್ಯದೇವಂಗರ್ವಾಂತ
ಮೋಜಂಕುದೃಶಾಂಪ್ರಶಾಂತಂ। ಕುರ್ವಂತಮೇಕಂಗುರುಮಂತ
ರೇಣಗುರ್ವಂತರಂಕೋತ್ರಗುಣೀವೃಣೀತೆ ॥ ೪೦೭ ॥

ಟೀಕಾ ॥ ಅರ್ವಾಂತಮಿತಿ ॥ ಆಸ್ಯೇಅರ್ವಂತಮಶ್ವಂ—ಅಶ್ವಾನನಂ—ತಂದೇವಂಹಯಗ್ರೀವಂ—ಉಪಾಸ್ಯಸಂಸೇವ್ಯ—ಕುತ್ಸಿತಂ ಪಶ್ಯಂತಿಶಾಸ್ತ್ರಾರ್ಥಮಿತಿಕುದೃಶಾಂ ದುರ್ವಾದಿನಾಂ—ತಿವೋಜಂ ಅಜ್ಞಾನ ಜನ್ಯಂ ಗರ್ವಂ—ಪ್ರಶಾಂತಂಕ್ಷೀಣಂ—ಕುರ್ವಂತಂ—ಗುರುಮಂತರೇಣ—ವೇದಾಂತಾಚಾರ್ಯಮೇಕಂವಿನಾ—ಅತ್ರಲೋಕೇ—ಗುರ್ವಂತರಮನ್ಯಂಗುರುಂ—ಗುಣೀಸದ್ಗುಣವಾನ್—ಕಃ—ವೃಣೀತೇಸ್ವೀಕರೋತಿ—ನಕೋಪೀತ್ಯರ್ಥಃ ॥

ಅರ್ಥ ॥ ಮುಖದಲ್ಲಿ ಕುದುರೆಯಾಕೃತಿಯಾಗಿರುವ ಹಯಗ್ರೀವ ದೇವರನ್ನು ಭಜಿಸಿ ಲೋಕದಲ್ಲಿ ಯಾರಾದರೂ ದುಷ್ಟವಾದಿಗಳಿಗೆ ಅಜ್ಞಾನದಿಂದುಂಟಾಗುವ ಹೆಮ್ಮೆ ಇಳಿಸಿ ಬಿಡಲಿಕ್ಕೆ ಒಬ್ಬನೇ ಗುರುವಾದ ವೇದಾಂತಾಚಾರ್ಯನನ್ನು ಬಿಟ್ಟು ಬೇರೆ ಗುರುಗಳನ್ನು ಒಡಂಬಟ್ಟಾರೋ ? ಒಡಂಬಡಲಿಕ್ಕಿಲ್ಲೆಂಬ ತಾತ್ಪರ್ಯವು.

ಕೃಶಾನುಃ ॥

ಮೂ। ವಯಸ್ಯಮಾಸ್ಮೈವಂವದಯದೇತತ್ಪಕ್ಷಾವಲಂಬನತಃಪ
ಕ್ಷಾಂತರಸ್ವೀಕಾರಪವಿವರಇತಿಪ್ರತಿಭಾತಿ ॥ ೪೦೮ ॥

ಟೀಕಾ ॥ ಏವಂಗುರ್ವಂತರಂ ನವೃಣೀತಇತ್ಯುಕ್ತಪ್ರಕಾರಂ ಏತಸ್ಯಪಕ್ಷಃ ಯಥಾಮರ್ಕಟಕಿಶೋರಃ ಪ್ರಾಕಾರಾದಿಲಂಘನೇಪಿ ದೃಢಮವಲಂಬಮಾನಃ ಮಾತುಃ ಕಾಂಕ್ಷಿತಂಸ್ತನ್ಯಂ ಅನುಭವತಿ ತಥಾ ಶ್ರೌತಸ್ಮಾರ್ತಕರ್ಮದ್ವಾರಾಸೇವಮಾನೋಭಕ್ತಃ ಭಗವತ್ಪ್ರಸಾದಂ ಲಭತಇತಿ ಮರ್ಕಟಕಿಶೋರನ್ಯಾಯಾನುಗೃಹೀತಃ— ತಸ್ಮಾತ್ಪಕ್ಷಾಂತರಮನ್ಯಃ ಪಕ್ಷಃ—ಯಥಾಮಾರ್ಜಾಲಕಿಶೋರಂ ತನ್ಮಾತಾಮಾರ್ಜಾಲೀಸ್ವಯಮೇವದಂತಘಾತನಾದೇಃ ಸಂರಕ್ಷ್ಯ ದೇಶಾದ್ದೇಶಾಂತರಂ ನೀತ್ವಾಪುಷ್ಣಾತಿತಥಾವಿಹಾಯಸರ್ವಂ ಕರ್ಮಸ್ವಾ

ತ್ಮಾನಂ ಭಗವತೇನಿವೇದ್ಯವರ್ತಮಾನಂ ಸ್ವಯಮೇವಭಗವಾನ್ ಕೃತಯೋಗಕ್ಷೇಮಃ ರಕ್ಷತೀತಿಮಾರ್ಜಾಲಕಿಶೋರನ್ಯಾಯಾನುಗೃಹೀತಃ ಪರ ಇತಿ– ಕಷ್ಟಂಕರ್ಮೇತಿನ್ಯಾಯಾದಿತಿಭಾವಃ॥

ಅರ್ಥ ॥ ಗೆಳೆಯನೇ ಹಾಗನ್ನಬೇಡ, ಈ ವೇದಾಂತ ದೇಶಿಕರ ಮಾರ್ಗಕ್ಕಿಂತಲೂ ಬೇರೆ ಮಾರ್ಗವನ್ನು ಹಿಡಿಯುವದು ಲೇಸೆಂದು ಕಾಣಬರುತ್ತೆ.

ಮೂ। ತಥಾಹಿ । ಶ್ಲೋ। ಯಸ್ಮಿನ್ಪಕ್ಷೇಪ್ಯಮೋಕ್ಷೋಗುರುಣಿಲಘುನಿವಾಸಾಧನೇಪ್ಯಪ್ರಯುಕ್ತೇಶ್ಲಾಘಾಹೇತುಶ್ರಮಾರ್ಥವ್ಯಯಕರಯಜನಾದ್ಯಗ್ರ್ಯಕರ್ಮಪ್ರಹಾಣಂ।ತಂಹಂತೋಪೇಕ್ಷ್ಯಪಕ್ಷಂಶ್ರಯತಿಜಗತಿಕಃಕಾಮ್ಯವೇದೋಕ್ತಕರ್ಮಾನುಷ್ಠಾನಾವಶ್ಯಕತ್ವಪ್ರಕಟನಕಠಿನಂವೇದಚೂಡಾರ್ಯಮಾರ್ಗಂ॥೪೯॥

ಟೀಕಾ॥ ಉಕ್ತಂತಾರತಮ್ಯಂ ವಿಶದಯತಿ॥ ಯಸ್ಮಿನ್ನಿತಿ॥ ಗುರುಣಿಮಹತಿ–ಲಘುನಿ ಅಲ್ಪೇವಾ–ಸಾಧನೇಮೋಕ್ಷಕಾರಣೇಕರ್ಮಣಿ– ಅಪ್ರಯುಕ್ತೇಸತ್ಯಪಿ– ಯಸ್ಮಿನ್ಪಕ್ಷೇ ತೇಂಗಲಾಖ್ಯಸಿದ್ಧಾಂತೇಮಾರ್ಜಾಲಕಿಶೋರನ್ಯಾಯಕೇಮೋಕ್ಷಃ–ಶ್ಲಾಘಾಹೇತುಃ ಪ್ರಶಂಸಾಕಾರಣಂ–ಶ್ರಮಕರಂದೇಹಾಯಾಸಕರಂ ಅರ್ಥವ್ಯಯಕರಂಚಯತ್ ಯಜನಾದಿಕಂ ಅಗ್ರ್ಯಾಣಾಂ ಬ್ರಾಹ್ಮಣಾನಾಂ ಕರ್ಮ ತಸ್ಯ ಪ್ರಕರ್ಷೇಣಹಾನಂತ್ಯಾಗಃ–ಯಸ್ಮಿನ್–ತಂಪಕ್ಷಂತೆಂಗಲೀಯಂಪಕ್ಷಂ–ಉಪೇಕ್ಷ್ಯ–ಕಾಮ್ಯಾನಾಂ ವೇದೋಕ್ತಾನಾಂ ಕರ್ಮಣಾಂ ಯಜನಾದೀನಾಂ ಅನುಷ್ಠಾನಸ್ಯ ಯದಾವಶ್ಯಕತ್ವಂ ಗ್ರಾಹ್ಯತ್ವಂ ತಸ್ಯಪ್ರಕಟನೇನಕಠಿನಂ ದುಷ್ಕರಂ–ವೇದಚೂಡಾರ್ಯಸ್ಯ ವೇದಾಂತಾಚಾರ್ಯಸ್ಯ ಮಾರ್ಗಂ ಪಕ್ಷಂ– ಜಗತಿಕಃಪುಮಾನ್–ಶ್ರಯತಿಸ್ವೀಕರೋತಿ– ನಕೋಪೀತ್ಯರ್ಥಃ॥

ಅರ್ಥ ॥ ಹ್ಯಾಗೆಂದರೆ ಯಾವ ಮಾರ್ಗದಲ್ಲಿ ಸುಲಭವಾದ ಕರ್ಮಗಳಾಗಲೀ ಕಠಿಣವಾದ ಕರ್ಮಗಳಾಗಲೀ ಮಾಡದಲೇ ಮುಕ್ತಿ ಪ್ರಾಪ್ತವಾಗುತ್ತದೆಯೋ ಮತ್ತು ಯಾವ ಮಾರ್ಗವು ಹೊಗಳಿಕೆ ಘಳಿಸುವ ಇಚ್ಛೆಯೇ ಮೂಲವಾದ ಆಯಾಸ ಮತ್ತು ಹಣವೆಚ್ಚದಿಂದ ಸಾಧ್ಯವಾದ ಯಜ್ಞಗಳೇ ಮೊದಲಾದ ಬ್ರಾಹ್ಮಣ ಕರ್ಮಗಳನ್ನು ಮೂಲೆಗೆ ತಳ್ಳಿ ಬಿಡುತ್ತದೆಯೊ ಅಂಥ ಮಾರ್ಗವನ್ನು ಬಿಟ್ಟುಗೊಟ್ಟು, ಸಕಾಮವಾದ ಶ್ರುತ್ಯುಕ್ತ ಕರ್ಮಗಳನ್ನು ಮಾಡಲೇ ಬೇಕೆಂತ ಕಠಿಣವಾದ ಏರ್ಪಾಟು ಮಾಡಿದ ವೇದಾಂತ ದೇಶಿಕರ ಮಾರ್ಗ ಲೋಕದಲ್ಲಿ ಯಾರು ಹಿಡಿದಾರು? ಯಾರೂ ಹಿಡಿಯಲಿಕ್ಕಿಲ್ಲಯೆಂಬ ಭಾವವು.

ವಿಶ್ವಾವಸುಃ ॥

ಮೂ।ನಿರೂಪಣನಿಪುಣೋಪಿಭವಾನ್ಕಥಮೇವಂಕಥಯತಿ॥೫೦॥

ಟೀಕಾ॥ ನಿರೂಪಣೇತಿ॥ ವಿಚಾರೇ ನಿಪುಣಃ ಕುಶಲೋಪಿ॥

ಅರ್ಥ ॥ ಪರೀಕ್ಷೆಯಲ್ಲಿ ನೀನು ಜಾಣನು, ಹೀಗ್ಯಾಕನ್ನುತ್ತೀ ?

ಮೂ। ಶ್ಲೋ। *ವೇದಾಂತಾರ್ಯವಿಶೋಧಿತಂಹಿತಪಥಂವ್ಯಾಧೂಯಸಾಧೂಚಿತಂ ಚಾಪಲ್ಯಾದನುರುಂಧತೇತದಿತರಂಪಂಥಾನಮಂಧಾನರಾಃ। ಇಷ್ಟಂಭಕ್ಷಯಕಾಂತಯಾಚವಿಹರೇತ್ಯೇವಂಪ್ರಿಯಾಲಾಪಿನಂರೋಗಾರ್ತಾಶ್ಚಪಲಾಃಸ್ತುವಂತಿನತುತಂಯಃಪಥ್ಯವಾದೀಭಿಷಕ್ ॥ ೪೧೧ ॥

ಟೀಕಾ ॥ ವೇದಾಂತೇತಿ ॥ ಅಂಧಾಃ ಅಜ್ಞಾನಿನಃ ನರಾಃ ವಿಷಯಲಾಲಸಾಃ–ಸಾಧೂನಾಂ ಬ್ರಾಹ್ಮಣಾನಾಮುಚಿತಂ ಯಥಾಚತಥಾ– ವೇದಾಂತಾರ್ಯೇಣವಿಶೋಧಿತಂ ವ್ಯವಸ್ಥಾಪಿತಂ–ಹಿತಪಥಂ ಅನಿಂದ್ಯಂಮಾರ್ಗಂ–ವ್ಯಾಧೂಯಹಿತ್ವಾ ಚಾಪಲ್ಯಾತ್ ವಿಷಯೇಷ್ವಿತಿಶೇಷಃ–ತಸ್ಮಾದ್ವೇದಾಂತಾರ್ಯನಿರ್ಣೀತಮಾರ್ಗಾದಿತರಂ– ಪಂಥಾನಂ ನಿಷ್ಕರ್ಮಮಾರ್ಗಮನುರುಂಧತೇ ಅನುಸರಂತಿ–ನತುಪ್ರಾಜ್ಞಾ ಇತಿಭಾವಃ ಚಪಲಾಃ ಭಾವ್ಯನರ್ಥಾಚಿಂತಕಾಃ–ರೋಗಾರ್ತಾಃ– ಇಷ್ಟಂವಸ್ತುಭಕ್ಷಯ–ಕಾಂತಯಾಚವಿಹರ–ಇತ್ಯೇವಂ ಪ್ರಿಯಾಲಾಪಿನಂ ಭಿಷಜಂ–ಸ್ತುವಂತಿ–ಯೋಭಿಷಕ್ವೈದ್ಯಃ–ಪಥ್ಯಂವಸ್ತುಭಕ್ಷಣಂ ವದತೀತಿವಾದೀ–ತಂಭಿಷಜಂತು ನಸ್ತುವಂತಿ ॥

ಅರ್ಥ ॥ ವೇದಾಂತಾಚಾರ್ಯರು ಪರೀಕ್ಷೆಮಾಡಿ ಸ್ಥಾಪಿಸಿದ ಬ್ರಾಹ್ಮಣರುಗಳಿಗೆ ಯೋಗ್ಯವಾದಂಥ ಉತ್ತಮ ಮಾರ್ಗವನ್ನು ಕುರುಡರಾದವರು ವಿಷಯಾಧೀನರಾಗಿ ಬಿಟ್ಟುಕೊಟ್ಟು, ಬೇರೆ ಮಾರ್ಗವಂದರೆ ಕರ್ಮರಹಿತವಾದ ಮಾರ್ಗವನ್ಹಿಡಿಯುತ್ತಾರೆ. ಬೇಕಾದು ತಿನ್ನು, ಹೆಂಡತಿಯ ಸಂಗಡ ಕ್ರೀಡಿಸು ಎಂತ ಸವಿಮಾತುಗಳನ್ಹೇಳುವ ಮುದ್ದುಗಾರನನ್ನು ರೋಗಿಗಳು ಹೊಗಳುತ್ತಾರೆ. ಆದರೆ ಪಥ್ಯವಾದ ಅಂದರೆ ಅನುವಾದ ಪದಾರ್ಥವನ್ನು ಮಾತ್ರ ತಿನ್ನ ಬಹುದೆಂತ ಹೇಳುವ ವೈದ್ಯನು ಹೊಗಳರು.

ಮೂ। ಶ್ಲೋ। ಆಮ್ನಾಯಮೌಳಿಗುರುಣಾಕರುಣಾಕರೇಣನಾವಾ ತರಿಷ್ಯತಯದೀಹಭವಾಬ್ಧಿನಾವಾ। ಅಜ್ಞಾತಭಕ್ತಿಜಗದಶ್ರುತಸಚ್ಚರಿತ್ರಂಅಜ್ಞಾತಶಾಸ್ತ್ರಮಭವಿಷ್ಯದವೈದಿಕಂಚ ॥ ೪೧೨ ॥

ಟೀಕಾ ॥ ಆಮ್ನಾಯೇತಿ ॥ ಭವಾಬ್ಧೇಃ ನಾವಾ ತಾರಕೇಣ–ಕರುಣಾಕರೇಣ–ಆಮ್ನಾಯಮೌಳಿಗುರುಣಾವೇದಾಂತಾಚಾರ್ಯೇಣ–ಇಹಲೋಕೇ–ನಾವಾತರಿಷ್ಯತ ನಾವಿರ್ಭೂತಂಯದಿ– ತದಾಜಗತ್ಸರ್ವಂ– ಅಜ್ಞಾತಭಕ್ತಿ– ಅಶ್ರುತಸಚ್ಚರಿತ್ರಂ–ಅಜ್ಞಾತಶಾಸ್ತ್ರಂ–ಅವೈದಿಕಂ ವೇದೋಕ್ತಕರ್ಮಶೂನ್ಯಂಚೇತಿ–ಚತುಷ್ಟಯಂವಿಧೇಯಂ–ಅಭವಿಷ್ಯತ್ ॥

ಅರ್ಥ ॥ ಸಂಸಾರ ಕಡಲಿನ ಮೇಲಿನ ಹಡಗು ನಡಿಸುವಂಥಾವರಾದ, ತುಂಬ ದಯಾವಂತರಾದ, ವೇದಾಂತ ಮೌಳಿ ಅಂದರೆ ಉಪನಿಷತ್ತುಗಳ ಅರ್ಥ ತಿಳಿದವರಲ್ಲಿ ಹಿರಿಯರಾದ ವೇದಾಂತಾಚಾರ್ಯರು ಈ ಲೋಕದಲ್ಲಿ ಪ್ರೈದೋರಿಸದಿದ್ದರೆ, ಇಡೀ ಲೋಕದಲ್ಲಿ ಭಕ್ತಿ ಸದಾಚಾರ, ಶಾಸ್ತ್ರಜ್ಞಾನ, ವೇದೋಕ್ತಕರ್ಮಾನುಷ್ಠಾನ, ಇವುಗಳಿರದೆ ಹೋಗುತ್ತಿದ್ದವು.

---

* ವೇದಾಂತಾರ್ಥ ಇತಿಪಾಠಾಂತರಂ ॥

ಮೂ । ಪುನರಾಲೋಚ್ಯ ॥ ಅಸ್ಯಖಲುನಿಗಮಮೌಳಿಗುರೋಃ ಅಶೇಷವಿದ್ಯಾಸಮುದ್ರತಲಸ್ಪರ್ಶಿತ್ವಾದಧುನಾತನವಿಬುಧವ್ಯೂಹಸಮಭಿವ್ಯಾಹಾರೋನೋಚಿತಃ ॥ ೪೧೩ ॥

ಟೀಕಾ ॥ ಅಸ್ಯೇತಿ ॥ ಸಮಭಿವ್ಯಾಹಾರಃ ಸಹಗಣನಂ ॥

ಅರ್ಥ ॥ ಮರಳಿ ವಿಚಾರಮಾಡಿ ( ವಿಶ್ವಾವಸು ಹೇಳುತ್ತಾನೆ ), ನಿಗಮ ಮೌಳಿ ಅಂದರೆ ವೇದಾಂತ ಜ್ಞಾನದಲ್ಲಿ ಹಿರಿಯರಾದ ಮತ್ತು ಸಂಪೂರ್ಣ ಅರುಹಿನ ಕಡಲಿನ ನೆಲೆ ಮುಟ್ಟಿದ ಈ ವೇದಾಂತದೇಶಿಕಾಚಾರ್ಯರನ್ನು ಈಗಿನ ಪಂಡಿತರ ಕೂಟದಲ್ಲಿ ಸೇರಿಸುವದು ಸರಿಯಲ್ಲವು.

ಮೂ । ಕಿಂಚ । ಶ್ಲೋ । ನಿಶಮಯತಿಯಃಕಿಲದೃಶಾನಿಶಾಮಯತ್ಯಂಘ್ರಿಣಾಚಯೋವಿಶ್ವಂ । *ಗಜತುರಗೌಚಮುಖೇಯಸ್ತೈಸ್ಸಹವೇದಾಂತದೇಶಿಕೋಗಣ್ಯಃ ॥ ೪೧೪ ॥

ಟೀಕಾ ॥ ನಿಶಮಯತೀತಿ ॥ ಯಃದೃಶಾನೇತ್ರೇಣ ನಿಶಮಯತಿಶೃಣೋತಿ—ಶೇಷಇತ್ಯರ್ಥಃ— ಯಶ್ಚ ಅಂಘ್ರಿಣಾ ವಿಶ್ವಂನಿಶಾಮಯತಿಪಶ್ಯತಿಚ—. ಗೌತಮಇತ್ಯರ್ಥಃ—ಯೌಮುಖೇಗಜತುರಗೌಭವತಃ—ಗಜಾನನಃ ಹಯಗ್ರೀವಶ್ಚೇತ್ಯರ್ಥಃ—ತೈಃ ಶೇಷಗೌತಮವಿಘ್ನೇಶ ಹಯಾನನೈಸ್ಸಹ ವೇದಾಂತದೇಶಿಕೋಗಣ್ಯಃ ॥

ಅರ್ಥ ॥ ವೇದಾಂತ ದೇಶಿಕಚಾರ್ಯರು ಕಣ್ಣುಗಳಿಂದ ಕೇಳುವವ್ಯಾಕರ್ಣ ಕರ್ತನಾದ ಶೇಷ, ಪಾದಗಳಿಂದ ನೋಡುವವನಾದ ನ್ಯಾಯಶಾಸ್ತ್ರಕಾರ ಗೌತಮ, ಆನೆ ಮೊಗ ಉಳ್ಳ ವಿಘ್ನೇಶ ಮತ್ತು ಕುದುರೆಮುಖ ಉಳ್ಳ ಹಯಗ್ರೀವ ಇವರುಗಳಿಗೆ ಸಮಾನಾಗಿ ಎಣಿಸಲ್ಪಡಲಿಕ್ಕೆ ಯೋಗ್ಯರು.

ಮೂ । ವಿಚಿಂತ್ಯ । ಶ್ಲೋ । ಗಂಭೀರಶಬ್ದೇನವಿಶಾಲಮೋಹದಶಾಪಿಶಾಚಗ್ರಹಮೋಚನೇನ । ಘಂಟಾಹರೇರ್ವೇಂಕಟನಾಥರೂಪಾಕಲ್ಯಾಣಮುಲ್ಲಾಸಯತಿಶ್ರುತೀನಾಂ ॥ ೪೧೫ ॥

ಟೀಕಾ ॥ ಗಂಭೀರೇತಿ ॥ ಹರೇಃ ವೇಂಕಟೇಶ್ವರಸ್ಯ ಸಂಬಂಧಿನೀ—ವೇಂಕಟನಾಥರೂಪಾವೇದಾಂತಾಚಾರ್ಯಾತ್ಮನಾ ಅವತೀರ್ಣೇತ್ಯರ್ಥಃ-ಘಂಟಾ—ವಿಶಾಲಮೋಹದಶಾ ಅಧಿಕಾಜ್ಞಾನಾವಸ್ಥೈವ ಪಿಶಾಚಸ್ತಸ್ಯಗ್ರಹಂ ಸಂಬಂಧಂ ಮೋಚಯತೀತಿ ಮೋಚನೇನ—ಗಂಭೀರೇಣ ಶಬ್ದೇನಧ್ವನ್ಯಾತ್ಮಕೇನವ್ಯಾಖ್ಯಾನಾತ್ಮಕೇನಚ—ಶ್ರುತೀನಾಂ ಶ್ರೋತ್ರಾಣಾಂ ಶ್ರುತೀನಾಂ ಚಕಲ್ಯಾಣಂ ಶುಭಂ ವಾಸ್ತವಾರ್ಥಂ ಚಉಲ್ಲಾಸಯತಿ ॥

ಅರ್ಥ ॥ ಆಲೋಚನೆ ಮಾಡಿ ( ವಿಶ್ವಾವಸು ಹೇಳುತ್ತಾನೆ. ), ವೆಂಕಟನಾಥರೂಪವಾದ ಘಂಟೆಯು ಗಂಭೀರವಾದ ಧ್ವನಿಯಿಂದ ದಟ್ಟವಾದ ಅಜ್ಞಾನವೆಂಬ ಪಿಶಾಚದ ಹಿಡಿಕೆ

* ಗಜತುರಗೌವದನೆ ಇತಿಪಾಠಾಂತರಂ ॥

ಯನ್ನು ಬಿಡುಸುವಂಥಾದ್ದಾಗಿ ಕಿವಿಗಳಿಗೆ ಆನಂದ ಉಂಟುಪಡಿಸುತ್ತದೆ. ಅಥವಾ ಪಂಕಟನಾಥ ರೂಪವಾದ ಘಂಟೆಯು ಅಜ್ಞಾನ ನಿವಾರಕವಾದ ವ್ಯಾಖ್ಯಾನ ಧ್ವನಿಯಿಂದ ಅಂದರೆ ಅರ್ಥ ತಿಳಿಸುವ ಶಬ್ದಗಳಿಂದ ಶ್ರುತಿಗಳನ್ನು ಅಂದರೆ ವೇದಗಳನ್ನು ಬೆಳಗಿಸುತ್ತದೆ.

ಮೂ। ಪುನಸ್ಸಚಮತ್ಕಾರಂ ॥

ಅರ್ಥ ॥ ತಿರಿಗಿ ಆಶ್ಚರ್ಯಯುಕ್ತನಾಗಿ (ವಿಶ್ವಾವಸು ಹೇಳುತ್ತಾನೆ.)

ಮೂ। ಶ್ಲೋ। ವೇದಾಂತಾಚಾರ್ಯಶಬ್ದೋಽಸ್ಮಿನ್ವೇದಾಂತ *ಸ್ಥಾಪನೇಕ್ಷಮಃ। ಇಮಂವಿವೇಕಂಕುರ್ವಂತೋಽದಾಂತಾಚಾರ್ಯಂಚ ತಂವಿದುಃ ॥ ೪೧೬ ॥

ಟೀಕಾ ॥ ವೇದಾಂತೇತಿ ॥ ಅಸ್ಮಿನ್ ಲೋಕೇ– ವೇದಾಂತಾಚಾರ್ಯಇತಿಶಬ್ದ್ಯತೇ ಕೀರ್ತ್ಯತಇತಿವೇದಾಂತಗುರುಃ–ತಾದೃಶನಾಮಪದಂಚ ವೇದಾಂತಾನಾಂ ಸ್ಥಾಪನೇತಾತ್ಪರ್ಯನಿರ್ಣಯೇ– ಕ್ಷಮಃಸಮರ್ಥಃ– ಇಮಮುಕ್ತವಿಧಂ–ವಿವೇಕಂವಿಚಾರಂ–ಇಮಂತುವೇದಾಂತಾಚಾರ್ಯಶಬ್ದಂ–ವಿಗತಂ ವೇಇತ್ಯಕ್ಷರಂ ಯಸ್ಯ ತತ್ಕುರ್ವಿತಿಚ– ಕುರ್ವಂತಃ ಬುಧಾಃ–ತಂವೇದಾಂತದೇಶಿಕಂ ದಾಂತಾನಾಂ ಜಿತೇಂದ್ರಿಯಾಣಾಂ ಆಚಾರ್ಯಂ ದಾಂತಾಚಾರ್ಯಶಬ್ದಂ ಚೇತ್ಯಪಿಚವಿದುಃ ॥

ಅರ್ಥ ॥ ವೇದಾಂತಾಚಾರ್ಯ ಎಂಬ ನುಡಿಯು ಲೋಕದಲ್ಲಿ ವೇದಾಂತ ಮತವನ್ನು ನೆಲೆಗೊಳಿಸಲಿಕ್ಕೆ ಶಕ್ತವಾದದ್ದು. ಈ ಶಬ್ದದೊಳಗಿಂದ ವೇ ಎಂಬ ಅಕ್ಷರವನ್ನು ಬಿಡಿಸಿ, ಬಲ್ಲವರು ವೇದಾಂತಾಚಾರ್ಯರಿಗೆ ದಾಂತಾಚಾರ್ಯರು ಅಂದರೆ ಇಂದ್ರಿಯಗಳನ್ನು ಗೆದ್ದವರ ಗುರು ಎಂಧೇಳುತ್ತಾರೆ.

ಕೃಶಾನುಃ ॥

ಮೂ। ಕಥಂನಾಮದ್ರುಹಿಣಗೃಹಿಣೀಚಿಕುರನಿಕುರುಂಬಚುಂಬಿಚಂಪಕಕುಸುಮಸುಕುಮಾರತರಾಃ ಕವಿಕಥಕಕಂಠೀರವಗುರೋರ್ಗಿರೋಽಪಿದುಸ್ತರಪ್ರಸ್ತರೋದರನಿಷ್ಠುರಬಾಹಿಷ್ಠಸಾಸೂಯಹೃದಯ ನಿರ್ಭೇದಾಯಜಾಯಂತೇ ॥ ೪೧೭ ॥

ಟೀಕಾ ॥ ಕಥಮಿತಿ ॥ ದ್ರುಹಿಣ ಗೃಹಿಣ್ಯಾಸ್ಸರಸ್ವತ್ಯಾಃ ಚಿಕುರನಿಕುರುಂಬ ಚುಂಬೀನಿ ಚಂಪಕ ಕುಸುಮಾನೀವ ಸುಕುಮಾರತರಾಃ– ದುಸ್ತರಾಣಿ ದುಷ್ಪ್ರವೇಶಾನಿ ಪ್ರಸ್ತರೋದರಾಃ ಪಾಷಾಣಗರ್ಭಾ ಇವ ನಿಷ್ಠುರಾಣಿ ಕಠಿನಾನಿ ಬಾಹಿಷ್ಠಾನಿ ಅನೇಕಾನಿ ಸಾಸೂಯಾನಿಚ ಯಾನಿಹೃದಯಾನಿ ಮತಾಂತರಸ್ಥಶಾಸ್ತ್ರಾಣಿ ತತ್ತಾತ್ಪರ್ಯಾಣೀತಿ ವಾತೇಷಾಂ ನಿರ್ಭೇದಾಯ ಖಂಡನಾಯ ಜಾಯಂತೇ ಪ್ರಭವಂತಿ ॥

ಅರ್ಥ ॥ ಸರಸ್ವತಿಯ ಕೂದಲುಗಳ ಸಮೂಹಕ್ಕೆ ತಗಲಿದ ಸಂಪಿಗೆ ಹೂವಿನಕಿಂತಲೂ ಅಧಿಕವಾಗಿ ಮೃದುವಾದ ಕವಿಕಥಕರಲ್ಲಿ (ಅಂದರೆ ಕವಿಗಳಲ್ಲಿ ಮತ್ತು ಕಥಕರೆಂದರೆ ಪ್ರ

* ಸ್ಥಾಪಕೇ ಇತಿಪಾಠಾಂತರಂ ॥

ಸಂಗ ಮಾಡುವವರಲ್ಲಿ ) ಸಿಂಹರಾದ ಈ ವೇದಾಂತ ದೇಶಿಕರ ನುಡಿಗಳು ಅಭೇದ್ಯವಾದಂಥಾ ಪಾಷಾಣದಂತೆ ಕಠಿಣವಾದಂಥ ಮತ್ಸರದಿಂದ ಯುಕ್ತವಾದಂಥ ಪರಮತ ಸಂಬಂಧಿ ಶಾಸ್ತ್ರಗಳ ಹೃದಯವನ್ನು ಹೊಗಲಿಕ್ಕೆ ಹ್ಯಾಗೆ ಶಕ್ಯವಾದಾವು ?

ವಿಶ್ವಾವಸುಃ ॥

ಮೂ। ಸಖೇಶೃಣುತಾವತ್। ಶ್ಲೋ। ವೇದಾಂತಾರ್ಯಗಿರಃಪ್ರಸೂನಮೃದವೋಮೋದಂದಧಾನಾಸ್ಸತಾಂ ಪ್ರೌಢಗ್ರಾವಕಠೋರಕಾಣ್ಯಪಿಪರಂಭಿಂದಂತಿಹೃಂದಿದ್ವಿಷಾಂ। ನಂದಾದ್ಯಾರ್ಯಜನಾಭಿನಂದಿತಮೃದುಸ್ಪರ್ಶೋಽಪಿಪಾದೋಹರೇರ್ದುರ್ಭೇದೇಶಕಟಾಸುರೇಽಪಿ ಶತಕೋಟ್ಯಾಕಾರಮಾಗಾನ್ನಕಿಂ ॥ ೪೧೮ ॥

ಟೀಕಾ ॥ ವೇದಾಂತೇತಿ ॥ ಪ್ರಸೂನಮೃದವಃ_ ಅತಏವಸತಾಂ ಮರ್ಕಟಕಿಶೋರನ್ಯಾಯಾನುಸಾರಿಣಾಂ ಮೋದಂದಧಾನಾಃ_ವೇದಾಂತಾರ್ಯಗಿರಃ_ದ್ವಿಷಾಂ ಮಾರ್ಜಾಲಕಿಶೋರನ್ಯಾಯ ಪ್ರಮುಖಾದೀನಾಂ ಸಂಬಂಧೀನಿ_ಪ್ರೌಢಾಃ ಪ್ರಬಲಾಃ ಗ್ರಾವಾಣಃ ಪಾಷಾಣಾ ಇವಕಠೋರಕಾಣಿ ಕಠಿನಾನ್ಯಪಿ_ಹೃಂದಿಹೃದಯಾನಿ_ಭಿಂದಂತಿನಿರಾಕುರ್ವಂತಿ_ನಂದಾದ್ಯಾರ್ಯಜನಾಭಿನಂದಿತ ಮೃದುಸ್ಪರ್ಶೋಽಪಿ_ಹರೇಃ ಕೃಷ್ಣಸ್ಯ ಪಾದಃ_ದುರ್ಭೇದೇಭೇತ್ತುಮಶಕ್ಯೇಽಪಿ_ಶಕಟಾಸುರೇ_ಶತಕೋಟೇರ್ವಜ್ರಸ್ಯ ಆಕಾರಂ ಸಾಮ್ಯಂನಾಗಾತ್ ನಾಪ್ನೋತಿಸ್ಮಕಿಂ ॥

ಅರ್ಥ ॥ ವೇದಾಂತಾಚಾರ್ಯರ ನುಡಿಗಳು ಹೂಗಳಂತೆ ಮೆತ್ತಗಾಗಿದ್ದರೂ ಸಾಧುಜನರಿಗೆ ಆನಂದ ಹುಟ್ಟಿಸುವಂಥಾವುಗಳಾಗಿ ಕಲ್ಲಿನಂತೆ ಘಟ್ಟಿಯಾಗಿರುವ ಎದುರುವಾದಿಗಳ ಹೃದಯವನ್ನು ಒಡದು ಹಾಕುತ್ತವೆ. ನಂದನೇ ಮೊದಲಾದ ಆರ್ಯ ಜನರು ಹೊಗಳಿದ ಶ್ರೀ ಕೃಷ್ಣನಚರಣವು ಕೈಗೆ ಮೆತ್ತಗಾಗಿದ್ದಾಗ್ಯೂ ಹೊಡೆಯಲಿಕ್ಕೆ ಕಠಿಣವಾದ ಶಕಟಾಸುರನ ವಿಷಯದಲ್ಲಿ ವಜ್ರದಂತೆ ಘಟ್ಟಿಯಾಗಲಿಲ್ಲವೋ? ಆಯಿತು ಎಂಬ ತಾತ್ಪರ್ಯವು.

ಮೂ। ಪುನಸ್ಸಪ್ರಾರ್ಥನಮಂಜಲಿಂಬಧ್ವಾ ॥

ಅರ್ಥ ॥ ತಿರಿಗಿ ಬೆಸಗೊಳ್ಳುವಂಥಾವನಾಗಿ ಕೈಜೋಡಿಸಿ (ವಿಶ್ವಾವಸು ಹೇಳುತ್ತಾನೆ.)

ಶ್ಲೋ। ದರ್ಪಾವಿಷ್ಟಕುದೃಷ್ಟಿದುಷ್ಟಸಮಯೋತ್ಪಾದಾಯಭೇದಾಂಕುರೋದ್ಛೇದಾಯಪ್ರಬಲೇಕಲಾವಪಿಜಯೋತ್ಪಾದಾಯವೇದಾಧ್ವನಃ। ಶ್ರೀಮಲ್ಲಕ್ಷ್ಮಣಪಕ್ಷರಕ್ಷಕಬುಧಾಮೋದಾಯಪಾಪಾಟವೀಚ್ಛೇದಾಯಾರ್ಥಿ ಮರುತ್ತರುರ್ವಿ *ಜಯತೇ ವೇದಾಂತವಿದ್ಯಾಗುರುಃ ॥ ೪೧೯ ॥

---

* ವಿಜಯತಾಮಿತಿಪಾಠಾಂತರಂ ॥

ಟೀಕಾ ॥ ದರ್ಪೇತಿ ॥ ದರ್ಪಾವಿಷ್ಟಾನಾಂ ಕುದೃಷ್ಟೀನಾಂ ದುರಭಿಪ್ರಾಯಾಣಾಂ ತೆಂಗಲಾಖ್ಯಾನಾಂ ದುಷ್ಟೋಕ್ತೀಯಸ್ಸಮಯಃ ನ್ವೈಷ್ಕರ್ಮ್ಯಸಿದ್ಧಾಂತಃ ತಮುತ್ಸಾದಯಿತುಂ ನಾಶಯಿತುಂ ಉತ್ಸಾದಾಯ— ತುಮರ್ಥಾಚ್ಚ ಭಾವವಚನಾದಿತಿ ಚತುರ್ಥೀ— ಏವಮಗ್ರೇಪಿ— ಭೇದಾಂಕುರಂ ದ್ವೈತವಾದಪ್ರಸರಣಂ— ಉಚ್ಛೇದಾಯ— ಪ್ರಬಲೇಪಿ ಕಲೌ— ವೇದಾಧ್ವನಃ ಕರ್ಮಮಾರ್ಗಸ್ಯ— ಜಯಮುತ್ಪಾದಯಿತುಂ— ಶ್ರೀಮತೋ ಲಕ್ಷ್ಮಣವಕ್ಷಸ್ಯ ರಾಮಾನುಜೀಯವೈಷ್ಣವವಿಶಿಷ್ಟಾದ್ವೈತಸ್ಯ ರಕ್ಷಕಾಣಾಂ ಸ್ಥಾಪಕಾನಾಂ ಬುಧಾನಾಂ ಮರ್ಕಟಕಿಶೋರನ್ಯಾಯವಾದಿನಃ ಆಮೋದಯಿತುಂ— ಪಾಪಮೇವಾಟವೀಂ ಛೇತ್ತುಂ ಚ— ಅರ್ಥಿನಾಂ ಉಕ್ತಕಾಮಾನಾಂ ಮರುತ್ತರುಃ ಕಲ್ಪವೃಕ್ಷಃ— ವೇದಾಂತವಿದ್ಯಾಗುರುಃ— ವಿಜಯತೆ ॥

ಅರ್ಥ ॥ ಅಹಂಕಾರ ಮತ್ತು ಕೆಟ್ಟ ಅಭಿಪ್ರಾಯಗಳುಳ್ಳವರ ಮತಗಳನ್ನು ಮುಗುಚಿ ಬಿಡುವದಕ್ಕೋಸ್ಕರವೂ, ದ್ವೈತವಾದದ ಚಿಗುರೇ ಚಿವುಟುವದಕ್ಕೋಸ್ಕರವೂ, ವೇದ ಮಾರ್ಗವೆಂದರೆ ಕರ್ಮಮಾರ್ಗದ ಏಳಿಗೆ ಕಲಿಯುಗದಲ್ಲಿ ಕೂಡ ಆಗಪಡಿಸುವದಕ್ಕೋಸ್ಕರವೂ, ಶ್ರೀರಾಮಾನುಜ ಸಾಂಪ್ರದಾಯವನ್ನು ಕಾಯುವ ಬುದ್ಧಿವಂತರಿಗೆ ಧೈರ್ಯ ಕೊಡುವದಕ್ಕೋಸ್ಕರವೂ, ಪಾಪದ ಅಡವಿಯನ್ನು ಸವರುವದಕ್ಕೋಸ್ಕರವೂ ಬೇಡಿದ ವರ ಕಲ್ಪವೃಕ್ಷರಾದ ವೇದಾಂತಗುರುಗಳು ಲೋಕದಲ್ಲಿ ವಿಜಯ ಮಾಡುತ್ತಾರೆ.

ಮೂ। ಇತ್ಯನ್ಯತೋದೃಷ್ಟಿಂವಿನ್ಯಸ್ಯಸಾಂಜಲಿಬಂಧಂ ॥

ಅರ್ಥ ॥ ಇಂತೆಂದು ಬೇರೆ ಕಡೆಗೆ ನೋಡಿ ಕೈಜೋಡಿಸಿ (ವಿಶ್ವಾವಸು ಹೇಳುತ್ತಾನೆ.)

ಶ್ಲೋ । ಶ್ರೀಮಾನ್ಗಭೀರತರವೇಗವತೀಪ್ರತೀರಭೂಮಾವಘ
ದುಹಿಸುರದ್ರುರಿವಾವತೀರ್ಣಃ । ಕಾಮಾದಿವೈರಿಗಣಮುಲ್ಬಣ
ಮಸ್ಮದೀಯಂನಾಮಾಸಿನಾನರಹರಿಃಕಬಳೀಕರೋತು ॥ ೪೨೦ ॥

ಟೀಕಾ ॥ ಶ್ರೀಮಾನಿತಿ ॥ ಅಘಾಯದ್ರುಹ್ಯತೀತಿ ಅಘದ್ರುಹಿಪಾಪನಾಶಕೇ— ಗಭೀರತರಾಯಾಃ— ವೇಗವತ್ಯಾಃ ಪ್ರತೀರಭೂಮೌ— ಸುರದ್ರುರಿವಾವತೀರ್ಣಃ— ಆವಿರ್ಭೂತಃ— ನರಹರಿಃ ನರಸಿಂಹಃ ಉಲ್ಬಣಂ ಪ್ರವೃದ್ಧಂ— ಅಸ್ಮದೀಯಂ— ಕಾಮಾದೀನಾಂ ವೈರಿಣಾಮಂತಶ್ಶತ್ರೂಣಾಂ ಗಣಂ— ನಾಮೈವಾಸಿನಾ ಖಡ್ಗೇನ— ಕಬಳೀಕರೋತು ನಾಶಯತು ॥

ಅರ್ಥ ॥ ಪಾಪವನ್ನು ನಾಶಪಡಿಸುವಂಥಾ ವೇಗವತಿನದೀತೀರಕೆ ಸಮೀಪವಾದ ನೆಲದಲ್ಲಿ ಕಲ್ಪವೃಕ್ಷದೋಪಾದಿ ಇಳಿದು ಬಂದಂಥಾ, ನರಸಿಂಹ ದೇವರು ತನ್ನ ನಾಮವೆಂಬ ಕತ್ತಿಯಿಂದ ನಮ್ಮಲ್ಲಿ ಬಲಿತಿರುವಂಥ ಕಾಮಾದಿ ವೈರಿಗಳ ಗುಂಪನ್ನು ನಾಶಪಡಿಸುವಂಥಾವನಾಗಲೀ.

ಮೂ। ತತೋನ್ಯತಶ್ಚಕ್ಷುರ್ನಿಕ್ಷಿಪ್ಯಪ್ರಾಂಜಲಿಸ್ಸನ್ ॥

ಅರ್ಥ ॥ ಅಲ್ಲಿಂದ ಮತ್ತೊಂದು ಕಡೆಗೆ ಕಣ್ಣಿಕ್ಕಿ ಕೈಜೋಡಿಸಿ (ವಿಶ್ವಾವಸು ಹೇಳುತ್ತಾನೆ.)

ಶ್ಲೋ । ಭಯಾರ್ತಜೀವಾತುದಯಾಮಹಿಮ್ನೇ ವೈಕುಂಠಧಾ
ಮ್ನೇ *ತನವೈನಮಾಂಸಿ । ಆಮ್ನಾಯಉಕ್ತಃಪರಮೇಶಿತೇತಿನಾ
ಮ್ನಾಯಉಕ್ತಃಪರಮತ್ರಚಿತ್ರಂ ॥ ೪೨೧ ॥

ಟೀಕಾ ॥ ಭಯೇತಿ ॥ ಭಯೇನ ಸಾಂಸಾರಿಕೇಣ ಆರ್ತಾನಾಂ ಜೀವಾತುರ್ಜೀವನೌಷಧಂ ದಯಾಯಾ ಮಹಿಮಾ ಯಸ್ಯತಸ್ಮೈ—ವೈಕುಂಠ ಧಾಮ್ನೆ ಭಗವತೇ—ನಮಾಂಸಿತನವೈ ಕರೋಮಿ—ಆಮ್ನಾಯೇ ಪರಮಃ ಈಶಿತಾಈಶ್ವರಃ ಇತಿಉಕ್ತಃ—ವೈಕುಂಠಧಾಮಾ—ಆಮ್ನಾಯೇನೋಕ್ತ ಇತ್ಯತ್ರಅರ್ಥೇ ವಿಷಯೆಪರಂಚಿತ್ರಂ ಯಆಮ್ನಾಯೆ ಪರಮೇಶಿತಾ ಇತಿ ನಾಮ್ನಾಉಕ್ತಃ—ತಸ್ಮೈ ಇತಿಸಂಬಂಧಃ ॥

ಅರ್ಥ ॥ ಸಂಸಾರದ ಭೀತಿಯಿಂದ ಬೇನೆಗೊಳುವವರಿಗೆ ಔಷಧವಾದ ಕೃಪೆಯಿಂದ ಮಹಿಮೆಯುಳ್ಳವನಾದ ಭಗವಂತನಿಗೆ ನಮಸ್ಕಾರಗಳನ್ನು ಮಾಡುತ್ತೇನೆ. ವೇದಗಳಲ್ಲಿ ಅವನಿಗೆ „ ಪರಮೇಶಿತಾ ” ಅಂದರೆ ಆಜ್ಞೆಮಾಡುವ ಮುಖ್ಯ ಒಡೆಯನು ಎಂಬ ಹೆಸರು ಕೊಡಲ್ಪಟ್ಟದೆ. ಆದರೆ ವೇದಗಳು ಅವನ ವರ್ಣನೆ ಮಾಡುವದಿಲ್ಲ. ಇದೊಂದು ದೊಡ ಚಮತ್ಕಾರವು.

ಮೂ । ಯುಕ್ತಂಚೈತತ್ । ಯತೋ “ ವಿಷ್ಣುಃಪರಮ ” ಇತಿಶ್ರುತಾಶ್ರುತಿಃ ॥ ೪೨೨ ॥

ಅರ್ಥ ॥ ಇದು ಸರಿಯೇ; ಯಾಕೆಂದರೆ „ ವಿಷ್ಣುವು ಎಲ್ಲ ದೇವತೆಗಳಿಗಿಂತಲೂ ಹಿರಿಯನು ” ಎಂತ ವೇದಶ್ರುತಿ ನಾವು ಕೇಳುತ್ತೇವಲ್ಲ.

ಶ್ಲೋ । ಅನಪಾಯರಮೋವಿಷ್ಣುಃಕಸ್ಮಾದಪರಮೋಭವೇತ್ ।
ಯುಕ್ತಂರಮಾಪತೇರನ್ಯೇದೇವಾಸ್ತ್ವಪರಮಾಇತಿ ॥ ೪೨೩ ॥

ಟೀಕಾ ॥ ಅನಪಾಯೇತಿ ॥ ತತಃ—ಅನಪಾಯಾ ಅವಿಯುಕ್ತಾರಮಾಯಸ್ಯಸಃವಿಷ್ಣುಃ— ಕಸ್ಮಾದ್ಧೇತೋರಪಗತಾ ರಮಾಯಸ್ಮಾತ್ಸಃ—“ ವಿಷ್ಣೋರೇಷಾನಪಾಯಿನೀ ” ತ್ಯಾಗಮಾದಿತಿಭಾವಃ—ಅನುತ್ಕೃಷ್ಟಶ್ಚ—ಭವೇತ್—ನಭವೇದೇವ—ರಮಾಪತೇರ್ವಿಷ್ಣೋರನ್ಯೇ ದೇವಾಸ್ತು—ಅಪರಮಾ ಇತಿಯುಕ್ತಮೇವ ॥

ಅರ್ಥ ॥ ಅಪಾಯರಹಿತವಾದ ಲಕ್ಷ್ಮೀಯೆಂದರೆ ಸಂಪತಿಯುಳ್ಳ ವಿಷ್ಣು ಅಪರಮ ಹ್ಯಾಗೆ ಆದಾನು ? ಅಂದರೆ ಲಕ್ಷ್ಮೀಯಿಂದ ತೊಲಗಿದವನ್ಯಾಕಾದಾನು ? ಅಥವಾ ಬೇರೆ ದೇವತೆಗಳಿಂದ ಕೆಳಗಿನವನ್ಯಾಗಾದಾನು ? ಆಗಲಿಕ್ಕಿಲ್ಲೆಂಬ ಭಾವವು. ಬೇರೆ ದೇವರು ರಮಾಪತಿಯಾದ ವಿಷ್ಣುವಿಗಿಂತಲೂ ಕೆಳಗಿನವರು ಅಥವಾ ಲಕ್ಷ್ಮೀವಿರಹಿತವಾದವರೆಂಬುವದು ಯೋಗ್ಯವೇ

---

* ಕರವೈ ಇತಿಪಾಠಾಂತರಂ ॥

ಮೂ। ಕಿಂಚ। ಶ್ಲೋ । ಜಾಗ್ರತ್ಯೇವಶಿರಾಂಸಿನಿತ್ಯವಚಸಾಂ ಸರ್ವೋನ್ನತೌಶಾರ್ಙ್ಗಿಣಃ ತತ್ರವ್ಯಾಸಪರಾಶರಾದಿಕೃತಯೋದತ್ತಾದರಾವಸ್ತುತಃ । ಯಃಪಾದಾಂಬುದದಾತಿಯಸ್ತದುಪಸಂಗೃಹ್ಣಾತಿ *ಗೃಹ್ಣಾತಿವಾಯಶ್ಚೈತಚ್ಛಿರಸ್ಯೈವತೇಷುಪರಮಂಜಾನಾತಿಕೋನಾತ್ಮವಾನ್ ॥೪೨೪॥

ಟೀಕಾ ॥ ಜಾಗ್ರತೀತಿ ॥ ನಿತ್ಯವಚಸಾಂ ವೇದಾನಾಂ–ಶಿರಾಂಸಿ ಉಪನಿಷದಃ–ಶಾರ್ಙ್ಗಿಣಃ ಸರ್ವೋನ್ನತೌ ವಿಷ್ಣೋಸ್ಸರ್ವೋತ್ತಮತ್ವೇ ವಿಷಯೇ–ಜಾಗ್ರತಿ ಪ್ರಕಾಶಂತ ಏವ–ತತ್ರತಸ್ಮಿನ್ನೇವಾರ್ಥೇ–ವ್ಯಾಸಪರಾಶರಾದೀನಾಂ ಕೃತಯಃ ಪುರಾಣಾನಿ ದತ್ತಾದರಾಃ ಸಿದ್ಧ ತಾತ್ಪರ್ಯಾಃ–ವಸ್ತುತಸ್ತು ನ ಶಬ್ದಮಾತ್ರಮೇವ ಪ್ರಮಾಣ ಮತ್ರಾರ್ಥೇಽನುಮಾನಮಪ್ಯಸ್ತೀತ್ಯರ್ಥಃ–ಯಃಪಾದಾಂಬು ಗಂಗಾಂದದಾತಿವಿಷ್ಣುರಿತ್ಯರ್ಥಃ–ಯಸ್ತತ್ಪಾದಾಂಬು ಉಪಸಂಗೃಹ್ಣಾತಿ–ಕಮಂಡಲು ನೇತಿಶೇಷಃ ಬ್ರಹ್ಮೇತ್ಯರ್ಥಃ– ಯಶ್ಚ ಏತತ್ ಪಾದಾಂಬು ಶಿರಸ್ಯೈವ ವ್ಯೋಮ್ನಾ ಕೇಶೇನ ಗೃಹ್ಣಾತಿ–ರುದ್ರಇತ್ಯರ್ಥಃ–ವ್ಯೋಮಕೇಶೋ ಭವೋಭೀಮ ಇತ್ಯಭಿಧಾನಾತ್–ತೇಷು–ತ್ರಿಷು ಪರಮಂ–ಆತ್ಮವಾನ್ ವೇತ್ತಾ–ಕೋನಜಾನಾತೀತಿ ಕಾಕುಃ । ತ್ರಯಾಣಾಮಪಿಗುಣ ಮೂರ್ತಿತ್ವೇನ ವೈಕಾರಿಕತ್ವಾ ತ್ತುಲ್ಯಾನಾಂ ಮಧ್ಯೇಕಂಚಿತ್ಪರಮಂ ಅನಾತ್ಮವಾನ್ ಅಜ್ಞಾನೀಕಶ್ಚಿ ಜ್ಜಾನಾತಿ ನಸರ್ವ ಇತ್ಯರ್ಥಃ ಪರಮತ್ವಸ್ಯಾತ್ಮ ವಿಷಯತ್ವಾದಿತಿಭಾವ ಇತಿವಾಸ್ತವ ಮರ್ಥಮನಿಚ್ಛತೋಽಪಿ ಕವೇರ್ವಾಗ ಭಿಧತ್ತೇ ॥ ಶ್ಲೋ ॥ ಲೌಕಿಕಾನಾಂಹಿ ಸಾಧೂನಾಮರ್ಥಂವಾಗನು ವರ್ತತ ಇತ್ಯಭಿ ಯುಕ್ತೋಕ್ತಿರಿತಿಶೈವಾಃ ॥

ಅರ್ಥ । ಮತ್ತು ವಿಷ್ಣುವಿನ ಸರ್ವೋನ್ನತತ್ವ ಅಂದರೆ ಸರ್ವೋತ್ಕೃಷ್ಟತ್ವದ ವಿಷಯದಲ್ಲಿ ವೇದಶ್ರುತಿಗಳು ಎಚ್ಚರಿಕೆಯುಳ್ಳವುಗಳಾಗಿರುವದಲ್ಲದೆ, ವ್ಯಾಸಪರಾಶರರೇ ಮೊದಲಾದ ಋಷಿಗಳ ಪುರಾಣಾದಿ ಗ್ರಂಥಗಳು ಕೂಡ ತತ್ಪರವಾಗಿರುತ್ತವೆ. ವಸ್ತುತಃ ಇದಕ್ಕೆ ಶಬ್ದಪ್ರಮಾಣ ಮಾತ್ರವಲ್ಲ, ಅನುಮಾನ ಪ್ರಮಾಣ ಕೂಡಸಿಗುತದೆ. ಒಬ್ಬನು (ವಿಷ್ಣುವು) ತನ್ನ ಪಾದೋದಕ ( ಗಂಗೆ) ವನ್ನು ಕೊಡುತ್ತಾನೆ. ಎರಡನೇ ಒಬ್ಬನು ( ಬ್ರಹ್ಮನು ) ಆ ಪಾದೋದಕವನ್ನು ಒತ್ತಟ್ಟುಮಾಡಿ ತೆಗದುಕೊಳ್ಳುತ್ತಾನೆ. ಮೂರನೇ ಒಬ್ಬನು ( ರುದ್ರನು ) ಅದನ್ನು ತನ್ನ ತಲೆಯ ಮೇಲೆ ಹೊತ್ತು ಕೊಳ್ಳುತ್ತಾನೆ. ಈ ಮೂವ್ವರಲ್ಲಿ ಶ್ರೇಷ್ಠನ್ಯಾರೆಂದು ಬಲ್ಲವರಲ್ಲಿ ಯಾರಿಗೆ ತಿಳಿಯದು ? ಅರಿಯದವರು ಮಾತ್ರ ಆ ಮೂವ್ವರಲ್ಲಿ ಯಾರಾದರೂ ಒಬ್ಬನು ಶ್ರೇಷ್ಠನೆಂದು ತಿಳಿಯುತ್ತಾರೆ. ಬಲ್ಲವರು ವಿಷ್ಣುವೇ ಶ್ರೇಷ್ಠನೆಂದು ತಿಳಿಯುತ್ತಾರೆಂಬ ತಾತ್ಪರ್ಯವು.

ಮೂ। ಪುನಸ್ಸಚಮತ್ಕಾರಂ ॥ ಶ್ಲೋ। ದುರ್ವಾದಿನೋವಿಷ್ಣುಪದಾರವಿಂದಂದೋಷಾಪಹಂ †ನಾನುಸರಂತುಮೋಹಾತ್ । ತೇ

---

* ಧತ್ತೇಥವಾ ಇತಿಪಾಠಾಂತರಂ ॥ † ಅನುಸರಂತೀತಿ ಪಾಠಾಂತರಂ ॥

ಷಾಂಮತಂತುಸ್ವಯಮತ್ರವಿಷ್ಣುಪದಾರವಿಂದಾನುಸ್ಮೃತಿಂವಿಧತ್ತೇ ॥ ೪೨೫ ॥

ಟೀಕಾ ॥ ದುರ್ವಾದಿನಇತಿ ॥ ದುರ್ವಾದಿನಃ ಮತಾಂತರಸ್ಥಾಃ— ದೋಷಾಪಹಂ— ವಿಷ್ಣೋಃಪದಾರವಿಂದಂ—ಮೋಹಾದಜ್ಞಾನಾದ್ಧೇತೋಃ— ನಾನುಸರಂತು— ಅತಿಸರ್ಗೇಲೋಟ್—ತೇಷಾಂದುರ್ವಾದಿನಾಂ ಮತಂತು— ಸ್ವಯಮಾತ್ಮನಾ— ವಿಷ್ಣುಪದೇಆಕಾಶೇ— ಅರವಿಂದಸ್ಯ ಕದಾಚಿದಪ್ಯಸಂಭವತಃ ಅನುಸ್ಮೃತಿಂ ಅಸಂಭವಂ— ವಿಧತ್ತೇಕರೋತಿ— ಮಿಥ್ಯಾಭವತೀತ್ಯರ್ಥಃ— ಅತ್ರಾಪಿಆಕಾಶೇಅರವಿಂದಸ್ಯ ಗಂಗಾಜಲರುಹಸ್ಯ ಆಗೋಪಾಲಾಂಗನಮಾಚಪಂಡಿತಂ ಸರ್ವಸಂಪ್ರತಿಪನ್ನತ್ವಾದ್ವಿಷ್ಣೋಃ ಪದಂವ್ಯವಸಿತಂ ನಿಶ್ಚಿತಮಿತಿ ಯಾವತ್— ಅಯಂತೇಗವ್ಯತೇಅನೇನೇತ್ಯರ್ಥೋಮಾರ್ಗಃ ವಿಷ್ಣುನಿಶ್ಚಿತಸಿದ್ಧಾಂತಃ ಶ್ಶೈವಃತಂವಿಂದಂತೀತಿ ತದ್ವಿಂದಾಃ ತೇಷಾಂ ಅನುಸ್ಮೃತಿಮನುಸರಣಂ ಪ್ರಚಾರಮಿತಿಯಾವತ್— ಇತ್ಯರ್ಥಂ ವದಂತಿಶ್ಶೈವಾಃ ॥

ಅರ್ಥ ॥ ಮರಳಿ ಆಶ್ಚರ್ಯ ಯುಕ್ತನಾಗಿ-- ಕುತರ್ಕಿಗಳು ಅಜ್ಞಾನವಶರಾಗಿ ಪಾಪ ನಿವಾರಕವಾದ ವಿಷ್ಣುಪಾದ ಕಮಲವನ್ನು ಅನುಸರಿಸದೆ ಹೋದರೆ ಹೋಗಲಿ. ಅವರ ಮತವೇ ಸ್ವತಃವಾಗಿ ವಿಷ್ಣುಚರಣಕಮಲದ ನೆನವರಿಕೆ ಮಾಡುತ್ತದೆ. ಅಥವಾ ಅವರ ಮತವು ವಿಷ್ಣು ಪದಾರವಿಂದ ಅಂದರೆ ಆಕಾಶ ಪುಷ್ಪವನ್ನನುಸರಿಸುತ್ತದೆ. ಅಂದರೆ ಅಸತ್ಯ ವನ್ನನುಸರಿಸುತ್ತದೆ ಎಂಬ ಭಾವವು.

ಮೂ । ಇತ್ಯನ್ಯತೋದೃಷ್ಟಿಂ *ನಿಕ್ಷಿಪ್ಯ ॥

ಅರ್ಥ ॥ ಇಂತೆಂದು ಬೇರೆ ದಿಕ್ಕಿಗೆ ಕಣ್ಣಿಕ್ಕಿ (ವಿಶ್ವಾವಸುವು ಹೇಳುತ್ತಾನೆ.)

ಶ್ಲೋ । ಸಮಂತರೂಢದ್ರುಮಪುಷ್ಪನಿಷ್ಪತನ್ಮರಂದಸಂತತ್ಯಭಿ
ಷಿಕ್ತಮುತ್ತಮಂ । ರವಿಕ್ರಮಾಶುತ್ವನಿರೋಧಿಗೋಪುರಂತ್ರಿ
ವಿಕ್ರಮಸ್ಯಾಯತನಂನಿಶಾಮ್ಯತಾಂ ॥ ೪೨೬ ॥

ಟೀಕಾ ॥ ಸಮಂತೇತಿ ॥ ಸಮಂತೇಸಮೀಪದೇಶೇರೂಢಾನಾಂ ಜಾತಾನಾಂ ದ್ರುಮಾಣಾಂ ಪುಷ್ಪೇಭ್ಯಃ ನಿಷ್ಪತತಃ ಮರಂದಸ್ಯ ಸಂತತಿಭಿರ್ಧಾರಾಭಿರಭಿಷಿಕ್ತಂ— ಉತ್ತಮಂ— ರವೇಃ ಕ್ರಮೇಗಮನೇಆಶುತ್ವಸ್ಯ ವೇಗಸ್ಯ ನಿರೋಧಿಗೋಪುರಂ ವಿಮಾನಂ ಯಸ್ಯತತ್ತ್ರಿವಿಕ್ರಮಸ್ಯಭಗವತಃ ಆಯತನಂ ಆಲಯಃ— ನಿಶಾಮ್ಯತಾಂ ದೃಶ್ಯತಾಂ— ತ್ವಯೇತಿಶೇಷಃ ॥

ಅರ್ಥ ॥ ಸಮೀಪವಾದ ಭೂಮಿಯಲ್ಲಿ ಹುಟ್ಟಿದ ಮರಗಳ ಹೂಗಳಿಂದ ಸುರಿಯುವಂಥ ಮಕರಂದ ಧಾರೆಗಳಿಂದ ತೋಯಿದಂಥ ಬಹಳ ಶ್ರೇಷ್ಠವಾದಂಥ ಸೂರ್ಯನ ಗಮನದ ವೇಗವನ್ನು ತಡಿಸುವ ಗೋಪುರ ಶಿಖರ ಉಳ್ಳಂಥ ತ್ರಿವಿಕ್ರಮ ದೇವರ ಮಂದಿರವನ್ನು ನೋಡು.

ಮೂ । ಸವಿಸ್ಮಯಮಭಿಧ್ಯಾಯನ್ ॥

ಅರ್ಥ ॥ ಆಶ್ಚರ್ಯಬಟ್ಟು ಸುತ್ತಲು ನೋಡಿ (ವಿಶ್ವಾವಸು ಮತ್ತು ಹೇಳುತ್ತಾನೆ.)

---

* ವಿನ್ಯಸ್ಯ ಇತಿಪಾಠಾಂತರಂ ॥

ಶ್ಲೋ। ಅವ್ಯಾದಾಶ್ರಯತಾಮನಶ್ವರಪದಪ್ರಾಸಾದ*ನಿಶ್ರೇಣಿಕಾ ಹರ್ಷಾದೂರ್ಧ್ವಮುದಂಚಿತಸ್ಸಚರಣಸ್ತ್ರೈವಿಕ್ರಮೋನಃ ಕ್ಲಮಾತ್। ತ್ರೈಲೋಕ್ಯಾರ್ಪಣತಸ್ಸತಂಶುಭಯಶಶ್ಛತ್ರಂಯದಾಸೀದ್ಬಲೇಃ ದ್ರಾಘಿಷ್ಠೋಹರಿನೀಲದಂಡಇವಯಸ್ತದ್ಧಾರಣಾಯೋದ್ಧೃತಃ ॥ ೪೨೭ ॥

ಟೀಕಾ ॥ ಅವ್ಯಾದಿತಿ ॥ ಆಶ್ರಯತಾಂ ಸೇವಕಾನಾಂ ಅನಶ್ವರಸ್ಯ ನಾಶರಹಿತಸ್ಯ ಪದಸ್ಯ ವೈಕುಂಠಸ್ಯೇವ ಪ್ರಾಸಾದಸ್ಯ ನಿಶ್ರೇಣಿಕಾಆರೋಹಣ ಸಾಧನದಾರುಯಂತ್ರಂ— ತತ್ಸಾಪೇಕ್ಷೇತ್ಯರ್ಥಃ— ಹರ್ಷಾತ್ ಊರ್ಧ್ವಂ ಉದಂಚಿತಃ ಉನ್ನಮಿತಃ— ತ್ರಿವಿಕ್ರಮಸ್ಯ ಅಯಂತ್ರೈವಿಕ್ರಮಃ—ಸಚರಣಃ—ನಃ ಅಸ್ಮಾನ್— ಕ್ಲಮಾತ್‌ಸಂಸಾರಶ್ರಮಾತ್— ಅವ್ಯಾತ್‌ರಕ್ಷತು— ಯಸ್ತ್ರಿವಿಕ್ರಮಚರಣಃ— ತ್ರೈಲೋಕ್ಯಸ್ಯ ಅರ್ಪಣತಃ ದಾನಾದ್ಧೇತೋಃ—ಬಲೇರ್ದೈತ್ಯಸ್ಯ ಸಂಬಂಧಿಶುಭಯಶಏವಸಿತಂ ಛತ್ರಮಾಸೀತ್ ಜಾತಂ-ತಸ್ಯಯಶಚ್ಛತ್ರಸ್ಯ ಧಾರಣಾಯಉದ್ಧೃತಃ ದ್ರಾಘಿಷ್ಠಃಅತಿದೀರ್ಘಃ—ಹರಿನೀಲಮಯೋದಂಡಇವಸ್ಥಿತಃ—ಸಚರಣಇತಿಸಂಬಂಧಃ ॥

ಅರ್ಥ ॥ ಮರೆ ಹೊಕ್ಕವರು ನಾಶರಹಿತವಾದ ಮನೆಯ ( ಅಂದರೆ ವೈಕುಂಠ ) ಉಪ್ಪರಿಗೆ ಏರಲಿಕ್ಕೆ ಸಾಧನವಾದ ನಿಚ್ಚಣಿಕೆಯಾದಂಥಾ ಉತ್ಸಾಹದಿಂದ ಮೇಲಕ್ಕೆ ಎತ್ತಿದ ಆ ತ್ರಿವಿಕ್ರಮ ದೇವರ ಕಾಲು ನಮ್ಮನ್ನು ಸಂಸಾರರೂಪಕಷ್ಟದಿಂದ ರಕ್ಷಿಸಲೀ. ಆ ಕಾಲು ಮೂರು ಲೋಕಗಳನ್ನು ಅರ್ಪಣೆಮಾಡಿ ಕೊಟ್ಟ ಬಲಿರಾಜನಿಗೆ ನಿಷ್ಕಲಂಕವಾದ ಮತ್ತು ಕಲ್ಯಾಣರೂಪವಾದ ಕೀರ್ತಿಯ ಸತ್ತಿಗೆಯ ಓಲಾಗಿಯೂ ಆ ಕೀರ್ತಿರೂಪ ಸತ್ತಿಗೆಗೆ ಆಧಾರವಾದ ನೀಲ ಬಣ್ಣದ ದಂಡದ ಓಲಾಗಿಯೂ ಇರುತ್ತದೆ.

ಕೃಶಾನುಃ ॥

ಮೂ। ಕಿಮರೇಮಾಯಾವಿನಮೇಸಂ ಅಕ್ರಮಂತ್ರಿವಿಕ್ರಮಮಭಿನಂದಸಿ। ಪಶ್ಯ ॥ ೪೨೮ ॥

ಟೀಕಾ ॥ ಕಿಮಿತಿ ॥ ಮಾಯಾವಿನಂ ವಂಚಕಂ— ಅಕ್ರಮಂ ಅನುಚಿತಕರ್ಮಾಣಂ ॥

ಅರ್ಥ ॥ ಎನೆಲಾ, ಮೋಸಗಾರನಾದ ಮತ್ತು ಅನ್ಯಾಯವಾದ ಕೆಲಸಮಾಡಿದ ಈ ತ್ರಿವಿಕ್ರಮ ದೇವರನ್ನು ಹೊಗಳುತ್ತೀಯಾ?

ಶ್ಲೋ। ಶ್ರೀಮಾನಪಿಸ್ವಯಂದೈತ್ಯಾತ್ಕಾರ್ಪಣ್ಯಾತ್ಕುರುತೇಗ್ರಹಂ। ವಿಂದನ್ಸಮಹತೀಂ†ಪೃಥ್ವೀಮಿಷ್ಟಾಂಗೋತ್ರಭಿದೇದದೌ ॥ ೪೨೯ ॥

ಟೀಕಾ ॥ ಶ್ರೀಮಾನಿತಿ ॥ ಸ ತ್ರಿವಿಕ್ರಮಃ— ಸ್ವಯಂ ಶ್ರೀಮಾನ್ ಭಾಗ್ಯವಾನಪಿ— ಲಕ್ಷ್ಮೀವಾಂಶ್ಚಾಪಿ—

* ನಿಶ್ರೇಣಿಕೋ ಇತಿಪಾಠಾಂತರಂ ॥ † ವೃದ್ಧಿಮಿತಿಪಾಠಾಂತರಂ ॥

ದೈತ್ಯಾದ್ರಾಕ್ಷಸಾತ್ನತು ವಿಶಿಷ್ಟಾದಸ್ಮಾ– ಕುತ್ಸಿತಂ ಪ್ರತಿಗ್ರಹಂ ಯಾಚಿತಾರ್ಥ ಗ್ರಹಣಂ– ಕೋಽರ್ಥ ಷಃ ಪ್ರತಿಗ್ರಹಣಂಚ– ಕುರ್ವಾರ್ಣಸ್ಸ ಮಹತೀಂ ಪೃಥ್ವೀಂ ವಿಂದರ್ ಪ್ರಾಪ್ನುವನ್ನಪಿಸ ಇಷ್ಟಾಂ ಪೃಥಿವೀಂ– ಗೋತ್ರಭಿದೇವಂಶಚ್ಛೇದಕಾಯ– ಇಂದ್ರಾಯುಚ– ದದೌನತುಸ್ವಯ ಮುಪಭುಕ್ತವಾರ್– ಕೃಚ್ಛ್ರಪ್ರಾಪ್ತಂ ಪಾಮರೋಪಿನತ್ಯಜತೀತ್ಯತೋಽಯಂ ಅಕ್ರಮ ಇತಿವ್ಯಾಜಸ್ತುತ್ಯಲಂಕಾರಃ ॥

ಅರ್ಥ ॥ ಈ ತ್ರಿವಿಕ್ರಮನು ತಾನು ಸ್ವತಹಾ ಸಂಪತ್ತಿಯುಳ್ಳವನಾಗಿದ್ದಾಗ್ಯೂ ಅಸುರನಾದ ಬಲಿಯ ಬಳಿಗೆ ಹೋಗಿ ಕುತ್ಸಿತವಾದ ದಾನವನ್ನು ಬೇಡಿ ವಿಸ್ತಾರವಾದ ಪೃಥ್ವಿಯನ್ನು ಪಡೆದು ಅದನ್ನು ಇಂದ್ರನಿಗೆ ಕೊಟ್ಟನು.

ಮೂ । ವಿಶಿಷ್ಯಾಯಮಕಪಟಾನಾಂಕವೀನಾಂನಶ್ಲಾಘನೀಯಃ ॥ ೪೩೦ ॥

ಟೀಕಾ ॥ ವಿಶಿಷ್ಯೇತಿ ॥ ಅಯಂ ತ್ರಿವಿಕ್ರಮಃ– ವಿಶಿಷ್ಯ ಅತಿಶಯ್ಯ ॥

ಅರ್ಥ ॥ ಬಹಳ ಮಾಡಿ ಯಥಾರ್ಥವಕ್ತ್ರುಗಳಾದ ಕವಿಗಳು ಈ ತ್ರಿವಿಕ್ರಮನು ಹೊಗಳಿಕೆಗೆ ಯೋಗ್ಯನೆಂದು ತಿಳಿಯರು.

ಮೂ । ಯತಃ । ಶ್ಲೋ । ನಿತ್ಯಾನಪಾಯಿಪ್ರಮದೋಪಿನಾಥೋ ಬಟೂಭವನ್ವಂಚಿತದಾತೃಕೋಽಸೌ । ಕವಿವ್ಯಥಾಕೃತ್ಖಲುಭೂಸು ರೋಽಪಿಭೂದಾನವತ್ವಂಕ್ಷಮಮೇವ *ಲೇಭೆ ॥ ೪೩೧ ॥

ಟೀಕಾ ॥ ನಿತ್ಯೇತಿ ॥ ನಿತ್ಯಮನಪಾಯಿನೀ ಪ್ರಮದಾಲಕ್ಷ್ಮೀರ್ಯಸ್ಯ ತಥೋಕ್ತೋಽಪಿ–ಬಟೂಭರ್ವ ಬ್ರಹ್ಮಚಾರೀಭೂತಃ– ಅಭೂತತದ್ಭಾವೇಚ್ವಿಃ– ಕಿಂಚವಂಚಿತಃ ದಾತಾಬಲಿರ್ಯೇನತತ್ಕಃ– ಕವೀನಾಂ ಪಂಡಿತಾನಾಂ ಕವೇಶ್ಶುಕ್ರಸ್ಯ ಚ ವ್ಯಥಾಕೃತ್–ಅಸೌಸಾಥ ತ್ರಿವಿಕ್ರಮಃ– ಸ್ವಯಂ ಭೂಸುರಃ ಬ್ರಾಹ್ಮಣೋಽಪಿಸ– ಭುವಿದಾನವತ್ವಂ ರಾಕ್ಷಸತ್ವಂ– ಭುವೋದಾನಂ ಬಲಿಕೃತಂ ಅಸ್ಯಾಸ್ತೀತಿ ತದ್ವತೋಭಾವಃ– ಭೂದಾನವತ್ವಮಿತಿಚ– ಲೇಭೇಪ್ರಾಪ್ತವಾರ್– ಇತೀದಂ ಕ್ಷಮಂ ಯುಕ್ತಮೇವ ಏಕೇನದಾತಾವಂಚಿತಃ ಅನಂತರಂ ಸರ್ವಾನಪಿ ಯಾಚಕಾರ್ ದ್ವೇಷ್ಟೀತಿವದಿತರವ್ಯಥಾಕರತ್ವಂ– ಸ್ವಶಿಷ್ಯಸ್ಯ ವಂಚನಾಯಾ ಶ್ಶುಕ್ರವ್ಯಥಾಕರತ್ವ ಮಿತಿವಿವೇಕಃ ॥

ಅರ್ಥ ॥ ಎಂದಿಗೂ ಕೇಡಿಲ್ಲದ ಲಕ್ಷ್ಮಿಯುಳ್ಳವನಾಗಿದ್ದಾಗ್ಯೂ, ಬ್ರಹ್ಮಚಾರಿ ವೇಷವನ್ನು ಹಾಕಿಕೊಂಡು ದಾನಿಯಾದ ಬಲಿಯನ್ನು ಠಕ್ಕಿಸಿದ ಈ ತ್ರಿವಿಕ್ರಮ ದೇವರು (ಪಂಡಿತರಿಗೆ ಅಥವಾ ಬಲಿಯ ಗುರುವಾದ ಶುಕ್ರಾಚಾರ್ಯರಿಗೆ) ಬೇಸರುಗೊಳಿಸುವಂಥಾವನಾದನು ಇಷ್ಟೇ ಅಲ್ಲಾ, ತಾನು ಸ್ವತಹಾ ಭೂಸುರನೆಂದರೆ ಬ್ರಾಹ್ಮಣನಾಗಿಯೂ ಪೃಥ್ವಿಯಲ್ಲಿ ಭೂದಾನವತ್ವ, ಅಂದರೆ ರಾಕ್ಷಸತ್ವವನ್ನು (ಅಥವಾ ಪೃಥ್ವಿದಾನವನ್ನು) ಸಂಪಾದಿಸುವಂಥಾತನಾದನು. ಇದು ಯುಕ್ತವೇ ಸರಿ.

---

* ಭೇಜೆ ಇತಿಪಾಠಾಂತರಂ ॥

ವಿಶ್ವಾವಸುಃ ॥

ಮೂ। ಅಭ್ಯುಪಗಚ್ಛಾಮಪಿವಭವತಃಪ್ರೌಢಗುಣದೋಷೀಕರಣ
ಪಾಂಡಿತ್ಯಮಾಸ್ತಾಂಮೇಷಶ್ಲೇಷಚಮತ್ಕಾರಃ ॥ ೪೩೨ ॥

ಟೀಕಾ ॥ ಅಭೀತಿ ॥ ಪ್ರೌಢಂ ಶ್ಲೇಷಭಿತ್ತಿಕಾ ಭೇದಾಧ್ಯವಸಾಯಪ್ರಯೋಜಕಂ— ಗುಣಾನಾಂ ದೋಷೀಕರಣೇ ದೋಷತ್ವಾಪಾದನೇ ಪಾಂಡಿತ್ಯಂ ವಿಜ್ಞಾನಂ— ಅಭ್ಯುಪಗಚ್ಛಾಮಃ— ಸರ್ವೇತ್ರಜಾನೀಮಃ ॥

ಅರ್ಥ ॥ ಒಳ್ಳೆಗುಣಗಳನ್ನು ಕೊರತೆಗಳಾಗಿ ಕಾಣುವಂತೆ ಮಾಡುವ ನಿನ್ನ ಜಾಣತನವನ್ನು ನಾವೆಲ್ಲ ಬಲ್ಲೆವು. ಸಾಕು ಈ ಶ್ಲೇಷ ಚಮತ್ಕಾರ ಅಂದರೆ ಅನೇಕಾರ್ಥ ಶಬ್ದಗಳನ್ನು ಉಪಯೋಗಿಸುವ ವಿದ್ಯೆ.

ಮೂ। ಆಕರ್ಣಯತಾವದೇತತ್ ಯದಾಶ್ರಿತರಕ್ಷಣಾಯಪದ್ಮೇಕ್ಷ
ಣಸ್ಸ್ವಮಹತ್ತ್ವಾನನುರೂಪಮಪಿರೂಪಮಾಪೇದೇ ॥ ೪೩೩ ॥

ಟೀಕಾ ॥ ಆಕರ್ಣಯೇತಿ ॥ ರೂಪಂ ವಾಮನಂ ॥

ಅರ್ಥ ॥ ಕೇಳಿದನ್ನು:-ಭಕ್ತರನ್ನು ಪಾಲಿಸುವದಕ್ಕೋಸ್ಕರ ಕಮಲನೇತ್ರನಾದ ವಿಷ್ಣುವು ತನ್ನ ದೊಡ್ಡಸ್ತಿಕೆಗೆ ಸರಿಯಲ್ಲದ ರೂಪವನ್ನು ಕೂಡ ಧರಿಸಿಕೊಂಡನು.

ಶ್ಲೋ। ನಿತ್ಯೋನ್ನತೋಪಿನಿರಪಾಯರಮಾಶ್ರಯೋಪಿ ದಾತಾಪಿ
ಹಂತಬಹುಶೋಮಹತಾಂಪದಾನಾಂ । ಸ್ವೀಕೃತ್ಯವಾಮನವಪು
ಶ್ಶ್ರಿತಮಿಂದ್ರಮಿಶಃ ಪಾತುಂಪದತ್ರಿತಯಮತ್ರಬಲಿಂಬಿಭಿಕ್ಷೇ
॥ ೪೩೪ ॥

ಟೀಕಾ ॥ ನಿತ್ಯೇತಿ ॥ ನಿತ್ಯಂಉನ್ನತಃ ಉತ್ತಮೋಪಿ—ನಿರಪಾಯರಮಾಶ್ರಯೋಪಿ—ಮಹತಾಂ ಅತ್ಯಾಯತಾನಾಂಚ— ಬಹುಶಃ— ಅನೇಕೇಷಾಂ— ನತುದ್ವಿತ್ರಾಣಾಂ— ಬಹ್ವಲ್ಪಾರ್ಥಾಚ್ಛಸ್ಕಾರಕಾದನ್ಯತರಸ್ಯಾಮಿತಿಶಸ್—ಪದಾನಾಂ ಬ್ರಾಹ್ಮೈಂದ್ರಾದಿಸ್ಥಾನಾನಾಂ ಪದಮಿತಭೂಖಂಡಾನಾಂಚ—ದಾತಾಪಿ— ಶ್ರಿತಂಆಶ್ರಿತಂ— ಇಂದ್ರಂ— ಪಾತುಂರಕ್ಷಿತುಂ— ವಾಮನವಪುಃ ಸ್ವೀಕೃತ್ಯ—ಬಲಿಂದೈತ್ಯಂ— ಪದತ್ರಿತಯಂ—ಬಿಭಿಕ್ಷೇಯಾಚಿತವಾನ್— ನಿಂದ್ಯಸ್ಯಾಪಿಅನ್ಯೋಪಕಾರಸ್ಯ ಅವಶ್ಯಕತ್ವಾದಿತಿಭಾವಃ— ಭಿಕ್ಷತಿರ್ದ್ವಿಕರ್ಮಕಃ ॥

ಅರ್ಥ ॥ ಒಡೆಯನಾದ ಶ್ರೀ ವಿಷ್ಣುವು ಸರ್ವದಾ ಶ್ರೇಷ್ಠನು. ನಾಶರಹಿತವಾದ ಲಕ್ಷ್ಮಿಯಿಂದ ಆಶ್ರಯಿಸಲ್ಪಟ್ಟಿರುವಂಥವನು. ಅನೇಕರಿಗೆ ಉಚ್ಚವಾದ ಪದವಿಗಳನ್ನು ಕೊಟ್ಟಂಥವನು. ಆದಾಗ್ಯೂ ಮರೆಹೊಕ್ಕಿ ಬಂದ ಇಂದ್ರನನ್ನು ಸಂರಕ್ಷಿಸುವದರಸಲವಾಗಿ ವಾಮನ ರೂಪವನ್ನು ಧರಿಸಿಕೊಂಡು ಬಲಿಯ ಬಳಿಗೆ ಹೋಗಿ ಮೂರು ಅಡಿ ನೆಲವನ್ನು ಭಿಕ್ಷೆಯಾಗಿ ಬೇಡಿದನು.

ಮೂ। ಪುನಸ್ಸಭಕ್ತಿಪ್ರಕರ್ಷಂ ॥ ಅತ್ರಹಿ ॥

ಅರ್ಥ ॥ ಮತ್ತು ಭಕ್ತಿವಿಕಸನದಿಂದ ಯುಕ್ತನಾಗಿ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ। ತ್ರೈವಿಕ್ರಮಸ್ತ್ರಿಪಥಗಾಜನಕಸ್ಸಪಾದಃಪಾಯಾತ್ಸು ರಸ್ಯಮರುತಾಂಮರುತಾಂನಿಹಂತಾ। ಶಂಭೋಃಸ್ಫುರನ್ಮಕುಟಭೂಷಣದಾನಚುಂಚುಮಂಭೋನಿಧೇಶ್ಶ್ವಶುರಮಾಪ್ತಗಿರೋಯಮಾಹುಃ ॥ ೪೩೫ ॥

ಟೀಕಾ॥ ತ್ರೈವಿಕ್ರಮಇತಿ॥ ತ್ರಿಪಥಗಾಗಂಗಾತಜ್ಜನಕಃ—ಊರ್ಧ್ವೋತ್ಕ್ಷಿಪ್ತವಿಷ್ಣುಪಾದಾಂಗುಷ್ಠನಖೇನ ಬ್ರಹ್ಮಾಂಡ ಭಿತ್ತಿಭೇದನೇಗಳಿತ ಮಹಾರ್ಣವೋದಕಸ್ಯೈವಗಂಗಾತ್ವಶ್ರವಣಾದಿತಿಭಾವಃ— ಅತಏವ— ಮರುತಾಂದೇವಾನಾಂ— ಪುರಸ್ಯಸ್ವರ್ಗಸ್ಯ— ಮರುತಾಂ ನಿರ್ಜಲದೇಶತ್ವಂ— ನಿಹಂತಾನಿವಾರಕಃ— ಪಾಯಾತ್ ಅಸ್ಮಾನ್ರಕ್ಷತು— ಆಪ್ತಗಿರಃ ವೇದವಾಕ್ಯಾನಿ— ಶಂಭೋರಿತಿಗಂಗೋತ್ತಮಾಂಗತ್ವಾದಿತಿಭಾವಃ— ಅಂಭೋನಿಧೇರಿತಿ— ಗಂಗಾಕಳತ್ರತ್ವಾದಿತಿಭಾವಃ— ದಾನೇನಪ್ರಸಿದ್ಧಇತ್ಯರ್ಥೇದಾನಚುಂಚುರಿತಿ— ತೇನವಿತ್ತಶ್ಚುಂಚುಪ್ಚಣಪಾವಿತಿ ಚುಂಚುಪ್ಪ್ರತ್ಯಯಃ ॥

ಅರ್ಥ ॥ ಗಂಗಾನದಿಗೆ ಬುಡವಾದ ತ್ರಿವಿಕ್ರಮ ಸಂಬಂಧಿ ಚರಣ ಕಮಲವು ದೇವಲೋಕದಲ್ಲಿ ಜಲರಹಿತ್ವವನ್ನು ನಾಶಪಡಿಸುವಂಥಾದ್ದಾಯಿತು. ಅದಕ್ಕೆ ಮಹಾದೇವನ ಥಳಥಳಿಸುವ ಕಿರೀಟದ ಶೃಂಗಾರವೆಂತಲೂ ಸಮುದ್ರನಿಗೆ ಹೆಣ್ಣು ಕೊಟ್ಟ ಮಾವನೆಂತಲೂ ವೇದ ಶ್ರುತಿಗಳು ಹೇಳುತ್ತವೆ; ಅಂಥಾ ಪಾದಕಮಲವು ನಮ್ಮನ್ನು ಕಾಯಲಿ.

ಮೂ। ಇತಿಕಿಂಚಿದಂತರಮತಿಕ್ರಮ್ಯ ॥ ಅತ್ರಹಿ ॥

ಅರ್ಥ ॥ ಇಂತೆಂದು ತುಸು ದೂರಕ್ಕೆ ಹೋಗಿ (ವಿಶ್ವಾವಸು ಹೇಳುತ್ತಾನೆ.)

ಶ್ಲೋ। ಕಾಂಚೀನಗರವಿಭೂಷಾಕಾಮಾಕ್ಷೀಕಲ್ಪಮಂಜರೀಭಜತಾಂ। ರಕ್ಷಾಸುರಸೇನಾನಾಂರಾಜತಿಶರ್ವಸ್ಯಸರ್ವಸ್ವಂ॥ ೪೩೬ ॥

ಟೀಕಾ॥ ಕಾಂಚೀತಿ॥ ಭಜತಾಂ ಸೇವಕಾನಾಂ— ಕಲ್ಪಮಂಜರೀ ಕಲ್ಪವೃಕ್ಷಗುಚ್ಛಃ— ಸುರಸೇನಾನಾಂ ರಕ್ಷಾ— ಶರ್ವಸ್ಯಶಂಭೋಸ್ಸರ್ವಸ್ವಂ ಸರ್ವಧನಂ— ಕಾಂಚೀನಗರಸ್ಯ ವಿಭೂಷಾಭೂಷಣಂ— ಕಾಮಾಕ್ಷೀ ದೇವೀರಾಜತಿ॥

ಅರ್ಥ ॥ ಭಕ್ತರಿಗೆ ಕಲ್ಪವೃಕ್ಷದ ಹೂಗೊಂಚಲಾದಂಥಾವಳಾದ, ದೇವರ ಸೇನೆಯ ಅಂದರೆ ದಂಡಿನ ಸಂರಕ್ಷಕಳಾದ, ಮಹಾದೇವನಿಗೆ ಸಂಪೂರ್ಣ ಧನವಾದ ಕಾಮಾಕ್ಷಿ ದೇವಿಯು ಕಾಂಚಿ ಪಟ್ಟಣಕ್ಕೆ ಶೃಂಗಾರವಾಗಿ ಎಸೆಯುತ್ತಾಳೆ,

ಮೂ। ನಿರೂಪ್ಯಸವಿಸ್ಮಯಾನಂದಂಕಾಮಾಕ್ಷೀಮಾಮಂತ್ರ್ಯ॥

ಅರ್ಥ ॥ ಚನ್ನಾಗಿ ಪರೀಕ್ಷಿಸಿ ಆಶ್ಚರ್ಯದಿಂದಲೂ ಸಂತೋಷದಿಂದಲೂ ಯುಕ್ತನಾಗಿ ಕಾಮಾಕ್ಷಿದೇವಿಯನ್ನು ಪ್ರಾರ್ಥಿಸಿ (ವಿಶ್ವಾವಸು ಹೇಳುತ್ತಾನೆ.)

ಶ್ಲೋ।ದಂತಶ್ರೀಸ್ತವದೃಶ್ಯತೇಯದಿತತಃಕುಂದಂನನಿಂದಂತಿಕೇ ವಕ್ತ್ರಂಯದ್ಯಭಿಲಕ್ಷ್ಯತೇಬುಧಜನೈಶ್ಚಂದ್ರಂನಸಂದ್ರಕ್ಷ್ಯತೇ।

ದೃಷ್ಟೇದೃಷ್ಟಿಯುಗೇಪುನರ್ನವಿನುಯಾದ್ಬಾಲೋಪಿನೀಲೋತ್ಪಲಂ ಸೂಕ್ತಿಶ್ಚೇದನುಭೂಯತೇಮಧುರತಾಕಾಮಾಕ್ಷಿಕಾಮಾಕ್ಷಿಕೇ ॥ ೪೩೭ ॥

ಟೀಕಾ ॥ ದಂತೇತಿ ॥ ಹೇಕಾಮಾಕ್ಷಿದೇವಿ– ತವದಂತಾನಾಂ ಶ್ರೀಃ ದೃಶ್ಯತೇಯದಿ– ತತಃ ತದಾ– ಕೇಜನಾಃ ಕುಂದಂಕುಟ್ಮಲಂ ನನಿಂದಂತೀತಿಕಾಕುಃ– ತವೇತಿ ಸರ್ವತ್ರಯೋಜ್ಯಂ– ವಕ್ತ್ರಂ ಅಭಿಲಕ್ಷ್ಯತೆಯದಿ– ತದಾಬುಧಜನಃ– ಚಂದ್ರಂ ನಸಂದ್ರಕ್ಷ್ಯತೆ– ಉತ್ತಮಲಾಭಸ್ಯ ಅಥವಾನಾದರ ಹೇತುತ್ವಾದಿತಿಭಾವಃ– ದೃಷ್ಟಿಯುಗೇಲೋಚನದ್ವಂದ್ವೇ ದೃಷ್ಟೇಸತಿ– ಬಾಲೋಪಿ ಪುನಃ– ಕಿಂಪುನಃ ಪ್ರಾಜ್ಞಃ– ನೀಲೋತ್ಪಲಂ ನವಿನುಯಾತ್– ಸೂಕ್ತಿಃ ಮಧುರವಾಕ್– ಅನುಭೂಯತೇ ಚೇತ್ ಶ್ರೂಯತೇಯದಿ– ಮಾಕ್ಷಿಕೆಮಧುನಿ– ಮಧುರತಾಕಾ– ನಾಸ್ತ್ಯೇವೇತ್ಯರ್ಥಃ ॥

ಅರ್ಥ ॥ ಎಲೇ ಕಾಮಾಕ್ಷಿದೇವಿಯೇ, ನಿನ್ನ ಹಲ್ಲುಗಳ ಪೊಳವು ನೋಡಿದರೆ ಯಾರು ಕುಂದಿ ಹೂಮೊಗ್ಗೆಗಳನ್ನು ಹೀಕರಿಸಲಿಕ್ಕಿಲ್ಲ? ನಿನ್ನ ಮೊಗವನ್ನು ನೋಡಿದ ಜಾಣರು ಚಂದ್ರನನ್ನ ನೋಡರು. ನಿನ್ನ ಕಣ್ಣೆರಡ ನೋಡಿದ ಹುಡುಗನಾದರೂ, ಕಪ್ಪುನೈದಿಲೆಯನ್ನು ನೋಡನು. ನಿನ್ನ ಸವಿನುಡಿಗಳನ್ನು ಕೇಳಿದವರು ಜೇನುತುಪ್ಪದ ರುಚಿ ನೋಡರು.

ಕೃಶಾನುಃ ॥

ಮೂ । ಯದ್ಯಪಿವಿದ್ಯತೇಕಾಮಾಕ್ಷ್ಯಾಸ್ಸರ್ವಾಭಿನಂದನೀಯಂ ಸೌಂದರ್ಯಂತಥಾಪಿಮುಧಾತದಿತಿಪ್ರತಿಭಾತಿ ॥ ೪೩೮ ॥

ಟೀಕಾ ॥ ಯದೀತಿ ॥ ತತ್ಸೌಂದರ್ಯಂ ॥

ಅರ್ಥ ॥ ಕಾಮಾಕ್ಷಿದೇವಿಗೆ ಎಲ್ಲರಿಂದಲೂ ಹೊಗಳಲ್ಪಡಲಿಕ್ಕೆ ಯೋಗ್ಯವಾದ ಸೊಂಪಿದ್ದರೂ, ಅದರಲ್ಲೇನು ಹುರುಳಿಲ್ಲವೆಂತ ತೋರುತ್ತೆ.

ಮೂ । ಉಪಜಾತಿ । ಶ್ಲೋ । ಕಾಂತೋವಿರೂಪಾಕ್ಷಇತಿಪ್ರತೀತಃ ಕಾಮಸ್ಯಹಂತಾಗಿರಿರಾಜಪುತ್ರ್ಯಾಃ । ಸ್ತಂಬೇರಮಾಸ್ಯ *ಸ್ತನಯಶ್ಚತಸ್ಯಾಲಂಬೋದರಃಕಿಂಫಲಮಾಭಿರೂಪ್ಯಂ॥ ೪೩೯ ॥

ಟೀಕಾ ॥ ಕಾಂತಇತಿ ॥ ಗಿರಿರಾಜಪುತ್ರ್ಯಾಃ ಕಾಮಾಕ್ಷ್ಯಾ ಇತಿಸರ್ವತ್ರಯೋಜ್ಯಂ– ಕಾಂತಃ ಪತಿಃ– ವಿರೂಪೇವಿಕೃತೇ ಅಕ್ಷಿಣೀ ವಿರೂಪಾಣಿ ವಿಷಮಾಣಿ ಅಕ್ಷೀಣಿಚಯಸ್ಯಸಃ– ಕಾಮಸ್ಯ ತೃತೀಯಪುರುಷಾರ್ಥಸ್ಯ ಮನ್ಮಥಸ್ಯಚ– ಹಂತಾನಾಶಕಶ್ಚೇತಿ– ಪ್ರತೀತಃ ಪ್ರಸಿದ್ಧಃ– ತನಯಶ್ಚಸ್ತಂಬೇರಮಾಸ್ಯಃ ಗಜಮುಖಃ ಲಂಬೋದರಃ ಗಣಾಧಿಪಶ್ಚೇತಿ ಪ್ರತೀತಃ ಇದಂಉಕ್ತವಿಧಂತಸ್ಯಾಃ ಲೋಕೋತ್ತರಸೌಂದರ್ಯವತ್ಯಾಃ ಆಭಿರೂಪ್ಯಂ ಸೌಂದರ್ಯೋಚಿತಂ ಫಲಂಕಿಮಿತಿಕಾಕುಃ ॥

ಅರ್ಥ ॥ ಹಿಮಾಚಲನ ಮಗಳಾದ ಈ ಕಾಮಾಕ್ಷಿದೇವಿಯ ಗಂಡನು ವಿರೂಪವಾದ ಕಣ್ಣುಳ್ಳವನೆಂತಲೂ ಕಾಮನನ್ನು ನಾಶಪಡಿಸಿದವನೆಂತಲೂ ಅವಳ ಮಗನು ಆನೆ ಮೊಗ

---

* ತನಯೋಪಿ ಇತಿಪಾಠಾಂತರಂ ॥

ಉಳ್ಳ ಲಂಬೋದರನೆಂದರೆ ಉದ್ದ ಹೊಟ್ಟೆಯವನೆಂತಲೂ ಎಲ್ಲರಿಗೂ ತಿಳಿದಿದೆ. ಇದೇನೋ ಅವಳ ಸೌಂದರ್ಯದ ಫಲ ?

ಮೂ । ಅನಯೋಃಖಲ್ವಂಬಿಕಾತ್ರ್ಯಂಬಕಯೋಃದಾಂಪತ್ಯಮನ ನುರೂಪಮಿತಿವ್ಯಕ್ತಮೇತತ್ ॥ ೪೪೦ ॥

ಟೀಕಾ ॥ ಅನಯೋರಿತಿ ॥ ಅನನುರೂಪಂ ಅನುಚಿತಂ ॥

ಅರ್ಥ ॥ ಇವರಿಬ್ಬರು ಗಂಡಹೆಂಡತಿಯಾದದ್ದು ಅಯೋಗ್ಯವೆಂಬುವದು ಸ್ಪಷ್ಟವಾಗಿ ಕಾಣುತ್ತೆ.

ಮೂ । ಪುಶ್ಪ । ಶ್ಲೋ । ಇಯಂಹಿಸರ್ವಮಂಗಳಾಸತುಸ್ಮಶಾನಮಂ ದಿರೋವಿಭಾತಿಹೈಮವತ್ಯಸೌಸಯಾತಿದಿಕ್ಷುಭಿಕ್ಷುಕಃ । ಇ ಯಂತುಕುಂಕುಮಾಂಕಿತಾಸಭಸ್ಮರಾಶಿ ರೂಷಿತಸ್ತ್ವರಾಳಕುಂತ ಲಾಚಸಾಜಟಾಭಿರೇಷಭೀಷಣಃ ॥ ೪೪೧ ॥

ಟೀಕಾ ॥ ಇಯಮಿತಿ ॥ ಇಯಂ ಅಂಬಿಕಾ_ ಸರ್ವಾಣಿಮಂಗಳಾನಿಯಸ್ಯಾಸ್ಸಾತಥೋಕ್ತಾ ಸತ್ತ್ರ್ಯಂಬಕಃ_ ಸ್ಮಶಾನಮಂದಿರಃ_ಸ್ಮಶಾನಂ ಶೂನ್ಯತ್ವಾದ್ವಹರಾಕಾಶಂ ಮಂದಿರಂ ಯಸ್ಯೇತಿಚ_ ಅಸಾ ಅಂಬಿಕಾ ಹೇಮ್ನೈವ ಹೈಮಂತ ದ್ಯುತೀಹಿಮವತೋಗಿರೇರಪತ್ಯಂ ಹೈಮವತೀತಿಚ ಸತುಭಿಕ್ಷುಕಃ_ ದಿಕ್ಷುಯಾತಿ ಭಿಕ್ಷತೇಕಾಂಕ್ಷತೇ ಭಕ್ತಶ್ರೇಯಾಂಸೀತಿ ಭಿಕ್ಷುಕ ಇತಿಚ ಬ್ರಾಹ್ಮ ವೈಷ್ಣ ವೈಶ್ವರ್ಯಕಾರಣೀಭೂತ ಮಹೈಶ್ವರ್ಯಸ್ಯಸತ್ತ್ವೇಪಿ ವಿಷಯ ವೈತೃಷ್ಣ್ಯ ಮೇವ ಸ್ವಾತ್ಮಾನಂದಾನುಭವ ಸಂಧಾಯಕಮಿತಿ ವಿಷಯಿಣಾಂ ಶಿಕ್ಷಣಾಯಭಿಕ್ಷುಕ ಇತಿಪರಮಾರ್ಥಃ_ ಇಯಂತು ಕುಂಕುಮಾಂಕಿತಾ_ಸತು ಭಸ್ಮರಾಶಿನಾ ವಿಭೂತಿ ಸಮೂಹೇನ ರೂಷಿತಃ ಲಿಪ್ತಃ_ಸಾಚ ಅರಾಳ ಕುಂತಲಾ ಕುಟಿಲಕೇಶೀ ಏಷಃ ಜಟಾಭಿಃ_ಭೀಷಣಃ ಭಯಂಕರಃ ॥

ಅರ್ಥ ॥ ನೋಡು ಈ ಅಂಬಿಕೆಯು ಸಕಲ ಕಲ್ಯಾಣಗಳುಳ್ಳವಳು. ಮುಕ್ಕಣ್ಣನು ಸುಡುಗಾಡಶಿದ್ದನು. ಇವಳು ಚಿನ್ನ; ಅವನು ಭಿಕ್ಷಗಾರನಾಗಿ ಅತ್ತಿತ್ತ ಸುಳಿಯುತ್ತಾನೆ. ಇವಳು ಕುಂಕುಮದ ಬೊಟ್ಟು ಇಟ್ಟುಕೊಂಡವಳು, ಅವನು ಬೂದಿಬಡಕನು, ಇವಳು ಉಂಗುರಗೂದಲುಳ್ಳವಳು, ಅವನು ಭಯಂಕರವಾದ ಜಡೆಯುಳ್ಳವನು.

ವಿಶ್ವಾವಸುಃ ॥

ಮೂ । ವಯಸ್ಯಮೈವಂವಾದೀಃ ನಖಲ್ವಕುಶಸ್ಯೈರಪಿವಾಸಕೃತ್ತಿವಾಸಃ ಪ್ರಭೃತಿಭಿಃಸಾಂಸಿದ್ಧಿಕಮಭಿರೂಪಾಣಾಂಆಭಿರೂಪ್ಯ ಮಪಹೀಯತೇ ॥ ೪೪೨ ॥

ಟೀಕಾ ॥ ವಯಸ್ಯೇತಿ ॥ ವಾಸಃ ನಿವಾಸಃ ವಾಸಃ ವಸ್ತ್ರಂ_ಸಾಂಸಿದ್ಧಿಕಂ ಪ್ರಕೃತಿಸಿದ್ಧಂ_ಆಭಿರೂಪ್ಯಂ ಸೌಂದರ್ಯಂ ॥

ಅರ್ಥ ॥ ಗೆಳೆಯನೇ ಹೀಗನ್ನಬೇಡ, ಸಾಂಸಿದ್ಧಿಕ ಅಭಿರೂಪವೆಂದರೆ ಹುಟ್ಟು ಸೊಬ

ಗರ ಸೊಂಪು ಅಯೋಗ್ಯವಾದ ಮನೆ ಮತ್ತು ತೊಗಲುಬಟ್ಟೆ ಮೊದಲಾದವುಗಳಿಂದ ಅಳಿಯುವದಿಲ್ಲವು.

ಶ್ಲೋ । ನಿವಸ್ತಾಂಸಾಕೃತ್ತಿಂ ನಿವಸತುಚಿರಂವಾಪಿತೃವನೇಶಿವ ಸ್ತಾವದ್ಧತಾತ್ವಹಿಗಣಮಥಾಪ್ಯೇಷಸುಭಗಃ । ಪರೀತಂಶ್ಶೈವಾ ಲೈರುಷಿತಮಪಿ ಪಂಕೇಷು ಮಲಿನಾ ನಳೀನಾಬಿಭ್ರಾಣಾಕಿಮಿಹ ಕಮನೀಯಂ ನಕಮಲಂ ॥ ೪೪೩ ॥

ಟೀಕಾ ॥ ನಿವಸ್ತಾಮಿತಿ ॥ ಶಿವಃ ತಾವಚ್ಛಬ್ದೋವಾಕ್ಯಾಲಂಕಾರೇ– ಕೃತ್ತಿಂಗಜಚರ್ಮ– ನಿವಸ್ತಾಂ ಪರಿದಧಾತು ವಸ್ತ್ರೀಕರೋತ್ವಿತಿಯಾವತ್– ಪಿತೃವನೇಸ್ಮಶಾನೇ– ಚಿರಂನಿವಸತುತಿಷ್ಠತು– ಅಹಿಗಣಂ ಸರ್ಪರಾಶಿಂ ಧತ್ತಾಂ ದಧಾತು ಸರ್ವತ್ರ ಅತಿಸರ್ಗೇಲೋಟ್ ಅಥಾಪಿತಥಾಪೀತ್ಯರ್ಥಃ ಏಷ ಶಿವಃ ಸುಭಗಃ ತಥಾಹಿ ಶೈವಾಲೈಃ ಜಲನೀಲೀಭಿಃ ಪರೀತಂವ್ಯಾಪ್ತಮಪಿ ಪಂಕೇಷು ಉಷಿತಂ ಸ್ಥಿತಮಪಿ ಮಲಿನಾ ಅಲೀನಾಬಿಭ್ರಾಣಮಪಿ– ಕಮಲಂ ಇಹಲೋಕೇನ ಕಮನೀಯಂ ಕಿಮಿತಿಕಾಕುಃ ॥

ಅರ್ಥ ॥ ಶಿವನು ಆನೆ ತೊಗಲು ಬಟ್ಟೆಯಾಗಿ ತೊಟ್ಟುಕೊಂಡರೆ ತೊಟ್ಟುಕೊಳ್ಳಲೀ. ಯಾವಾಗಲೂ ಸುಡುಗಾಡಿನಲ್ಲಿ ವಾಸವಾಡಿಕೊಂಡಿದ್ದರೆ ಇರಲೀ, ಸರ್ಪಗಳ ಗುಂಪು ಧರಿಸಿ ಕೊಂಡರೆ ಧರಿಸಿಕೊಳ್ಳಲೀ, ಆದಾಗ್ಯೂ ಅವನು ಸುಂದರನೇ, ಹ್ಯಾಗಂದರೆ: ನೈದಿಲೆಯು ಹಾವಸಿಯಿಂದ ಸುತ್ತಿ ಇದ್ದರೇನು ಕೆಸರಿನಲ್ಲಿದ್ದರೇನು ಕಪ್ಪಾದ ದುಂಬಿಗಳು ಅದರ ಮೇಲಿದ್ದರೇನು ಅದು ಸುಂದರವೇ.

ಶ್ಲೋ। ರಮಣೀಯಸ್ಸಹಿಪುರುಷೋರಮಣೀಯತ್ರೈವರಜ್ಯತಿ ವಿದಗ್ಧಾ। ಶ್ಲೋಕಸ್ಸಏವಸುಭಗಶ್ಚಿತ್ತಂಸಕ್ತಂಹಿಯತ್ರರಸಿಕಸ್ಯ ॥ ೪೪೪ ॥

ಟೀಕಾ ॥ ರಮಣೀಯಇತಿ ॥ ವಿದಗ್ಧಾರಮಣೀ ಚತುರಾಂಗನಾ– ಯತ್ರಪುರುಷ ಏವ–ರಜ್ಯತಿ–ಹಿರೇ ವಾರ್ಥೇ– ಸಪುರುಷ ಏವರಮಣೀಯಃ– ರಸಿಕಸ್ಯ ಸಾಹಿತೀ ಪಾರದೃಶ್ವನಃ ಚಿತ್ತಂ– ಯತ್ರಶ್ಲೋ ಕೇಸಕ್ತಂ– ಸಏವ ಶ್ಲೋಕಃ–ಸುಭಗಃ ಮನೋಜ್ಞಃ ॥

ಅರ್ಥ ॥ ಚತುರೆಯಾದ ಸ್ತ್ರೀಯ ಮನಸ್ಸು ಯಾವ ಪುರುಷನಲ್ಲಿ ರಮಿಸುವದೋ ಅವನೇ ಸುಂದರನು. ಯಾವ ಶ್ಲೋಕದಲ್ಲಿ ರಸಾಭಿಜ್ಞರು ಅನುರಕ್ತಿಪಡುವರೋ ಅದೇ ಶ್ಲೋಕ ಮನೋಹರವಾದದ್ದು.

ಮೂ। ಅವಧಾರ್ಯತಾಂ *ಮತ್ರೈತದತಿಮಾತ್ರಂಚಿತ್ರಂ ॥

ಅರ್ಥ ॥ ಆಲೈಸು ಇದು ಅತ್ಯಂತ ಆಶ್ಚರ್ಯಕರವಾದದ್ದು.

ಶ್ಲೋ। ಶಿವಾಕ್ಷ್ಯಾ †ಲೋಕತಃಕಾಮೋಜಿತಇತ್ಯೇವಶುಶ್ರುಮ । ವ್ಯತ್ಯಸೋತ್ರ ‡ಜಿತಃಕಾಂಚ್ಯಾಂಕಾಮಾಕ್ಷ್ಯಾಲೋಕತಶ್ಶಿವ ॥ ೪೪೫ ॥

* ಅತ್ರೇದಮತಿಮಾತ್ರಂ ವಿಚಿತ್ರ ಮಿತಿಪಾಠಾಂತರಂ ॥ †ಆಲೋಕಿತಃ ‡ಜಿತೋಯಸ್ಮಾತ್ ಇತಿಪಾಠಾಂತರೇ ॥

ಟೀಕಾ || ಶಿವೇತಿ || ಕಾಮಃ ಮನ್ಮಥಃ ಶಿವಸ್ಯ ಅಕ್ಷ್ಣಾ ಲಾಲಾಟೇನ ಆಲೋಕತಃ ದರ್ಶನಾತ್— ಜಿತಇತ್ಯೇವ ಮೇವಶುಶ್ರುಮ— ಅತ್ರಾರ್ಥೇ— ವ್ಯತ್ಯಾಸಃ ವಿಪರ್ಯಾಯಃ ಅಸ್ತಿ—ಯತಃ ಕಾಂಚ್ಯಾಂ— ಶಿವಃ ಕಾಮಸ್ಯ ಅಕ್ಷ್ಣಾ ಆಲೋಕತಃ— ಕಾಮಾಕ್ಷ್ಯಾಃ ಪಾರ್ವತ್ಯಾಃ ಆಲೋಕತ ಇತಿಚಜಿತಃ ||

ಅರ್ಥ || ಶಿವನು ತನ್ನ ನೋಟದಿಂದ ಕಾಮನನ್ನು ಗೆಲ್ದನೆಂದು ಮಾತ್ರ ಕೇಳುತ್ತೇವೆ. ಆದರೆ ಇದಕ್ಕೆ ವಿಪರೀತವಾಗಿ ಕಾಂಚೆಯಲ್ಲಿ ಶಿವನೇ ಕಾಮಾಕ್ಷಿಯ ನೋಟಕ್ಕೆ ಸೋಲ್ದು ಹೋಗಿದ್ದಾನೆ.

ಮೂ।ಪುಷ್ಕಲಂಕಿಲಪುತ್ರಭಾಗ್ಯಮಪಿಪರ್ವತರಾಜಕನ್ಯಾಯಾಃ||

ಅರ್ಥ || ಪಾರ್ವತಿ ದೇವಿಯ ಮಕ್ಕಳು ಸಂಪತ್ತು ಕೂಡ ಬಹಳ ಶ್ರೇಷ್ಠವಾದದ್ದಲ್ಲವೇ.

ಮೂ। ಯುತಃ। ಶ್ಲೋ। ಕುಶಲೀಭನಾಥವಕ್ತ್ರಃಪುತ್ರಃಪ್ರಥ
ಮೋಹಿಮಾದ್ರಿತನಯಾಯಾಃ। ಪಂಚಾಸ್ಯಾತ್ಪಿತುರಧಿಕಃಷಡಾ
ನನೋನಂದನೋದ್ವಿತೀಯೋಸ್ಯಾಃ ||೪೪೬||

ಟೀಕಾ || ಕುಶಲೀತಿ || ಹಿಮಾದ್ರಿತನಯಾಯಾಃ ಪಾರ್ವತ್ಯಾಃ—ಪ್ರಥಮಃ ಪುತ್ರಃ ಗಣೇಶಃ ಕುಶಲೀ ಪ್ರಶಸ್ತಕುಶಲಃ— ಭನಾಥಶ್ಚಂದ್ರಇವವಕ್ತ್ರಂಯಸ್ಯಸಃ— ಇಭನಾಥಸ್ಯ ಗಜನಾಥಸ್ಯೇವವಕ್ತ್ರಂ ಯಸ್ಯೇತಿಚ— ಅಸ್ಯಾಃ ದ್ವಿತೀಯೋನಂದನಃ ಷಡಾನನಃ ಗುಹಃ— ಪಂಚಾಸ್ಯಾತ್ಪಿತುಃ ಶಿವಾತ್ ಅಧಿಕಃ ||

ಅರ್ಥ || ಹಿಮವತ್ಪರ್ವತನ ಕನ್ಯೆಯ ಹಿರೀ ಮಗನು ಆನೆಯ ಮೊಗವುಳ್ಳವನು ಮತ್ತು ಬಹಳ ಜಾಣನು. ಎರಡನೇ ಮಗನು ಆರ್ಮೊಗನಾಗಿ ಐದು ಮುಖವುಳ್ಳ ತಂದೆಗಿಂತಲೂ ಮೇಲಾದವನು.

ಮೂ। ಇತ್ಯನ್ಯತಃಕಿಂಚಿತ್ಪರಿಕ್ರಾಮನ್ಸಾಮೋದಂ||

ಅರ್ಥ || ಇಂತೆಂದು ತುಸು ದೂರ ನಡದು ಆನಂದಯುಕ್ತನಾಗಿ (ವಿಶ್ವಾವಸು ಹೇಳುತ್ತಾನೆ.)

ಶ್ಲೋ। ಶಶಾಂಕಮೌಲಿಸ್ಸಹಕಾರಮೂಲೇಕೈಲಾಸವಾಸೀಸಇಹಾ
ವಿರಾಸೀತ್।ಯಸ್ಯಾಗ್ನಿಭೂರ್ದೃಕ್ಚತನೂಭವಶ್ಚಯೋಷಾಪಿಭೂ
ಷಾಪಿಚನಾಗರಾಜಿಃ || ೪೪೭ ||

ಟೀಕಾ || ಶಶೇತಿ || ಕೈಲಾಸವಾಸೀ ಸಶಶಾಂಕಮೌಲಿಃ ಶಿವಃ— ಇಹಕಾಂಚ್ಯಾಂ— ಸಹಕಾರಸ್ಯ ಆಮ್ರವೃಕ್ಷಸ್ಯಮೂಲೇ— ಆವಿರಾಸೀತ್—ಯಸ್ಯಚಂದ್ರಚೂಡಸ್ಯ— ದೃಕ್‌ನೇತ್ರಂಚ—ಅಗ್ನಿರ್ಭವತ್ಯಸ್ಯಾ ಇತ್ಯಗ್ನಿಭೂಃ— ತನೂಭವಶ್ಚ ಪುತ್ರೋಪಿ— ಅಗ್ನೇರ್ಭವತಿ ಜಾಯತ ಇತ್ಯಗ್ನಿಭೂಃ—ಕಿಂಚಯಸ್ಯ ಯೋಷಾ ಅಂಗನಾಪಿ— ನಗರಾಜಸ್ಯಾಪತ್ಯಂ ಸ್ತ್ರೀನಾಗರಾಜಿಃ ಪರ್ವತರಾಜಪುತ್ರೀ— ಯಸ್ಯ ಭೂಷಾ ಭೂಷಣಮಪಿ— ನಾಗಾನಾಂ ಸರ್ಪಾಣಾಂ ರಾಜಿಃ ಪಙ್‌ಕ್ತಿಃ—ಸಇತಿಸಂಬಂಧಃ ||

ಅರ್ಥ || ತಿಂಗಳ ಸೂಡಿದವನಾದ ಶಿವನು ಇಲ್ಲಿ ಕಾಂಚೆಯ ಒಂದು ಮಾವಿನ

ಮರದ ಬುಡದಲ್ಲಿ ಪವಡಿಸಿದನು. ಅವನ ಕಣ್ಣಿನಿಂದ ಬೆಂಕಿ ಹೊರಡುತ್ತದೆ. ಅವನ ಮಗನು ಬೆಂಕಿಯಿಂದ ಹುಟ್ಟಿದವನು; ಪರ್ವತಗಳ ಅರಸಾದ ಹಿಮಾಚಲನ ಕನ್ಯೆಯು ಅವನ ಹೆಂಡತಿ. ಸರ್ಪಗಳ ಸಾಲು ಅವನ ಅಲಂಕಾರವು.

ಕೃಶಾನುಃ ॥

ಮೂ । ವಯಸ್ಯ ಕಿಂ ವರ್ಣಯಸಿ ವಿಶ್ವವಿಲಕ್ಷಣಚಾರಿತ್ರ್ಯಂ ರುದ್ರಂ ॥ ೪೪೮ ॥

ಟೀಕಾ ॥ ವಯಸ್ಯೇತಿ ॥ ವಿಶ್ವಸ್ಮಾತ್ ಲೋಕಾತ್ ವಿಲಕ್ಷಣಂ ವಿರುದ್ಧಂ– ಅನೃತ ಜಡದುಃಖಾತ್ಮಕ ಪ್ರಪಂಚಾತ್ ವಿಭಿನ್ನಂಚ ಚಾರಿತ್ರ್ಯಂ ಕರ್ಮ ಯಸ್ಯ ತಂ– ಸತ್ಯಜ್ಞಾನಾನಂದಾತ್ಮಕಮಿತಿಚ ॥

ಅರ್ಥ ॥ ಗೆಳೆಯನೇ! ಲೋಕಕ್ಕೆ ಹೊರತಾದ ನಡತೆಯುಳ್ಳ ರುದ್ರನ ಬಣ್ಣಿಕೆ ಯೇನೆಂದು ಮಾಡುತ್ತಿ?

ಮೂ । ಲೋಕೇಹಿಲೋಚನಶೈತ್ಯಸಂಪಿಪಾದಯಿಷಯಾಯತಮಾನಾನ್ ಜನಾನೇವಪಶ್ಯಾಮಃ। ಅಯಂತುಪಶುಪತಿಃ ಸ್ಥಾಣುರಿತಿ *ಚಾಹ್ವಯಮನ್ವರ್ಥಯನ್ನಿಹಾಶುಶುಕ್ಷಣಿಮಕ್ಷ್ಣಿನಿಕ್ಷಿಪ್ತವಾನ್ ॥ ೪೪೯ ॥

ಟೀಕಾ ॥ ಲೋಕ ಇತಿ ॥ ಪಶೂನಾಂ ಪತಿಃ ಗೋಪತಿಃ ಸ್ಥಾಣುಃ ಶಾಖಾಶೂನ್ಯಃ ವೃಕ್ಷಸ್ಕಂಧಃ ಅನಭಿಜ್ಞೋ ಚೇತನಶ್ಚೇತಿ ಪ್ರತೀತಿ ಗೋಧಃ ॥ ಶ್ಲೋ ॥ ಸರ್ವೇ ದೇವಾಸ್ತು ಪಶವಃ ಬ್ರಹ್ಮವಿಷ್ಣ್ವಿಂದ್ರ ಪೂರ್ವಕಾಃ । ಪ್ರೋಕ್ತಾಸ್ತೇಷಾಂ ಪತಿರ್ಯಸ್ಮಾದತಃ ಪಶುಪತಿಃ ಸ್ಮೃತ ಇತಿನಿರುಕ್ತಾತ್– ತೇಷಾಮಸುರಾಣಾಂತ್ರಿಪುರಮಿಸನ್ನಿತ್ಯಾದ್ಯನುವಾಕೇ ಅಹಮೇವಪಶೂನಾಮಧಿಪತಿರಸಾನೀತೀತಿ ಶ್ರುತೇಶ್ಚ ॥ ಶ್ಲೋ ॥ ಸರ್ವಾನ್ವೈ ಕಾರಿ ಕಲಯೇ ಸ್ಥಾಣುಸ್ತಿಷ್ಠತಿ ಯೇನಸ ಇತಿನಿರುಕ್ತಾಚ್ಚ ವಾಸ್ತವಾರ್ಥಃ ಪಾಷಂಡಾ ನಾಮವಿಷಯ ಇತಿಬೋಧ್ಯಂ– ಅಕ್ಷ್ಣಿನೇತ್ರೇ ಆಶುಶುಕ್ಷಣಿಂ ಅಗ್ನಿಂ ॥

ಅರ್ಥ ॥ ಪೃಥ್ವಿಯಲ್ಲಿ ಕಣ್ಣುಗಳಿಗೆ ತಂಪು ಇರಬೇಕೆಂದು ಉದ್ಯೋಗಮಾಡುವವರನ್ನೇ ಕಂಡಿದ್ದೇವೆ. ಇವನಂತು, ಪಶುಪತಿ ಮತ್ತು ಸ್ಥಾಣು (ಅಂದರೆ ಮೊಂಡ ಅಥವಾ ಕಂಭ) ಎಂಬ ಹೆಸರಿನಂತೆ ನಡಕೊಳ್ಳುವಂಥಾವನಾಗಿ ಕಣ್ಣುಗಳನ್ನು ಬೆಂಕಿಯಲ್ಲಿ ಹಾಕಿದ್ದಾನೆ.

ವಿಶ್ವಾವಸುಃ ॥

ಮೂ । ಅವಧೇಹಿ ತಾವದವಧಾಸ್ಯಾಮಿ ರಹಸ್ಯಂ ॥ ೪೫೦ ॥

ಅರ್ಥ ॥ ತತ್ವವನ್ನು ಹೇಳುತ್ತೇನೆ. ಕೇಳು.

ಶ್ಲೋ । †ಗಂಗಾನುಷಂಗಾದತಿಶೀತಬಾಧಾಮಿಂದೋರ್ದ್ವಿಸಿಂಧೋಶ್ಚ ‡ತದನ್ವಯೇನ। ಹರ್ತುಂ ವಹತ್ಯಗ್ನಿಮಯಂ ತ್ರಿನೇತ್ರೋ ಯಾಂಚ ಹರೋ ಹಸಂತೀಮಿವ ಪಂಕ್ತಿದೃಷ್ಟಿಂ ॥ ೪೫೧ ॥

---

* ಸ್ವಾಹ್ವಯ ಮನ್ವರ್ಥಯನ್ನಿವ ಇತಿಪಾಠಾಂತರಂ ॥ † ಅಂಗಾನುಷಂಗೋದಿತಶೀತಬಾಧಾಮ್ ‡ ಸಮನ್ವಯೇನ ಇತಿಪಾಠಾಂತರೆ ॥

ಟೀಕಾ ॥ ಸಂಗೇತಿ ॥ ಇಂದೋರ್ಗಂಗಾಯಾಃ ಅನುಷಂಗಾತ್ ಸಂಬಂಧಾತ್ ಅತಿಶೀತಬಾಧಾಂ- ದ್ಯುಸಿಂಧೋಃ ಗಂಗಾಯಾಃ- ತಸ್ಯಚಂದ್ರಸ್ಯ ಅನ್ವಯೇನ ಸಂಬಂಧೇನ ಅತಿಶೀತಬಾಧಾಂಚ ಹರ್ತುಂ- ಹರಃ-ತೃತೀಯಾಂ ಅಗ್ನಿಮಯೀಂ ದೃಷ್ಟಿಂ ಹಸಂತೀಂ ಅಂಗಾರ ಶಕಟೀಮಿವ- ವಹತಿ- ಹಂತೇತ್ಯಾಶ್ಚರ್ಯೆ ॥

ಅರ್ಥ ॥ ಗಂಗೆ ಮತ್ತು ಚಂದ್ರ ಇವುಗಳು ಕೂಡಿರುವದರಿಂದ ಉಂಟಾದ ನೆಗಡಿ ಉಪದ್ರವನ್ನು ನಿವಾರಿಸಿಕೊಳ್ಳುವದಕ್ಕಾಗಿ, ಶಿವನು ಬೆಂಕಿಯು ಉರಿಯಿಂದ ನಗುತ್ತದೆಯೊ ಎಂಬಂತೆ ಕಂಡುಬರುವ ಅಗ್ನಿಮಯವಾದ ಮೂರನೆ ಕಣ್ಣು ಧರಿಸಿಕೊಂಡಿದ್ದಾನೆ.

ಕೃಶಾನುಃ ॥

ಮೂ । ಹಂತತರ್ಹಿತುಹಿನಕಿರಣಶಕಲಸುರಸರಿಜ್ಝರೀಶಿಶಿರಶಿರಸ
ಸ್ತ್ರಿಪುರಹರಸ್ಯಕಥಮಭಿಷೇಕಪ್ರಿಯತಾ ॥ ೪೫೨ ॥

ಟೀಕಾ ॥ ಹಂತೇತಿ ॥ ತುಹಿನಕಿರಣ ಶಕಲೇನ ಸುರಸರಿಜ್ಝರ್ಯಾ ಗಂಗಾಪ್ರವಾಹೇನಚ ಶಿಶಿರಂ ಶೀತಲಂ ಶಿರಃ ಯಸ್ಯತಸ್ಯ ॥

ಅರ್ಥ ॥ ಹಾಗಾದರೆ ಹಿಮಕಿರಣಗಳುಳ್ಳ ಚಂದ್ರನ ಮತ್ತು ದೇವನದಿಯಾದ ಗಂಗೆಯ ಪ್ರವಾಹದಿಂದ ಶೀತಳವಾದ ತಲೆಯುಳ್ಳ ಮಹಾದೇವನಿಗೆ ಅಭಿಷೇಕದಲ್ಲಿ ಹ್ಯಾಗೆ ಪ್ರೀತಿ ಯುಂಟಾಯಿತು ? ಆಶ್ಚರ್ಯ!

ಮೂ । ತತಶ್ಚ । ಶ್ಲೋ । ಗಂಗಾತರಂಗಾವಲಿಭಿಸ್ಸುಧಾಂಶೋಸ್ಸು
ಧಾಝುರೈಶ್ಚಾನಿಶಮಾರ್ದ್ರಮೂರ್ಧ್ನಃ । ಮುಧಾಭಿಷೇಕಂಕಲ
ಯಂತಿಶಂಭೋಸ್ತೃಷಾರ್ತಾಯತೋಯೇನದದತ್ಯಪಃಕೇ ॥ ೪೫೩ ॥

ಟೀಕಾ ॥ ತತಶ್ಶೈಶಿರ ಶಿರಸ್ಕತ್ವಾದ್ಧೇತೋಶ್ಚ ॥ ಗಂಗೇತಿ ॥ ಗಂಗಾತರಂಗಾವಲಿಭಿಃ ಸುಧಾಂಶೋಃ ಸಂಬಂಧಿಭಿಃ ಸುಧಾಝುರೈರಮೃತಪ್ರವಾಹೈಃ ಅನಿಶಂ ಆರ್ದ್ರಮೂರ್ಧ್ನಃ ಶಂಭೋಃ- ಅಭಿಷೇಕಂ ಮುಧಾ ವ್ಯರ್ಥಂ ಕಲಯಂತಿ ಕುರ್ವಂತಿ-ಸ್ವೈವಾಇತಿ ಶೇಷಃ- ಕುತಃ-ತೋಯೇನ ತೃಷಾರ್ತಾಯ ಪೀತ ಜಲಾಯ ಜನಾಯ- ಅಪಃಕೇದದತಿ ನಕೇಪೀತ್ಯರ್ಥಃ ॥

ಅರ್ಥ ॥ ರಾತ್ರಿ ಹಗಲು ಹರಿಯುವ ಗಂಗಾ ನದಿಯ ತೆರೆಗಳ ಸಮೂಹದಿಂದಲೂ ಚಂದ್ರ ಸಂಬಂಧಿ ಅಮೃತಧಾರೆಯಿಂದಲೂ ತೋದ ಶಿರಸ್ಸು ಉಳ್ಳ ಶಿವನಿಗೆ ವ್ಯರ್ಥವಾಗಿ ಅಭಿಷೇಕ ಮಾಡುತ್ತಾರೆ. ನೀರು ಕುಡಿದು ದಣಿದವಗೆ ಜಲವನ್ಯಾರಾದರೂ ಕೊಡುವರೇ ? ಕೊಡಲಿಕ್ಕಿಲ್ಲ ಎಂಬ ಭಾವವು.

ವಿಶ್ವಾವಸುಃ ॥

ಮೂ । ಅತ್ರಾಪಿಯುಕ್ತಮುತ್ತರಂವ್ಯಾಹರಾಮಿ ॥ ೪೫೪ ॥

ಟೀಕಾ ॥ ಅತ್ರೇತಿ ॥ ಅತ್ರಅಭಿಷೇಕ ಕ್ರಿಯಾಯಾಮಪಿ ಉತ್ತರಂ- ವ್ಯಾಹರಾಮಿವದಾಮಿ ॥

ಅರ್ಥ ॥ ಇದಕ್ಕೆ ಕೂಡ ಸರಿಯಾದ ಉತ್ತರ ಹೇಳುತ್ತೇನೆ.

ಶ್ಲೋ। ಜ್ವಲನಾಕಲನಾದ್ವಿಷಸ್ಯಪಾನಾದ್ವಿಷಭಾಜಾಂವಹನಾಚ್ಚ
ತಪ್ತಮೂರ್ತೇಃ। ಅನಿಶಂತ್ರಿದಶಾಪಗಾಧರಸ್ಯಾಪ್ಯಭಿಷೇಕಪ್ರಿ
ಯತಾಹರಸ್ಯಜಾತಾ ॥ ೪೫೫ ॥

ಟೀಕಾ ॥ ಜ್ವಲನೇತಿ ॥ ಜ್ವಲನಸ್ಯಲಲಾಟ ನೇತ್ರಾಗ್ನೇಃ ॥ ಆಕಲನಾತ್ ಸಂಬಂಧಾತ್– ವಿಷಸ್ಯಕಾಲ ಕೂಟಸ್ಯಪಾನಾತ್– ವಿಷಭಾಜಾಂ ಭೂಷಣೀಕೃತ ಸರ್ಪಾಣಾಂ ವಹನಾದ್ಧೇತುತ್ರಯಾಚ್ಚ– ತಪ್ತ ಮೂರ್ತೇಃ ತ್ರಿದಶಾಪಗಾಧರಸ್ಯಾಪಿಹರಸ್ಯ– ಅನಿಶಮಭಿಷೇಕಪ್ರಿಯತಾಜಾತಾ ॥

ಅರ್ಥ ॥ ಹಣೆಯಲ್ಲಿ ಬೆಂಕಿ ಇಟ್ಟು ಕೊಂಡಿರುವದರಿಂದಲೂ, ನಂಜು ಕುಡಿದಿರುವದ ರಿಂದಲೂ, ವಿಷಯುಕ್ತರಾದ ಸರ್ಪಗಳನ್ನೂ ಧರಿಸಿಕೊಂಡಿರುವದರಿಂದಲೂ ಕಾವು ಉಂ ಟಾಗಿ, ಈ ಗಂಗಾಧರನಾದ ಹರನಿಗೆ ಅಭಿಷೇಕದಲ್ಲಿ ಪ್ರೀತಿಯಾಯಿತು.

ಕೃಶಾನುಃ॥

ಮೂ। *ಅಸ್ತ್ವೇವಮಥಾಪಿಅನ್ಯದನುಯುಜ್ಯತೇ ॥ ೪೫೬ ॥

ಟೀಕಾ ॥ ಅಸ್ತ್ವಿತಿ ॥ ಅನುಯುಜ್ಯತೆ ಪೃಚ್ಛ್ಯತೇ ॥

ಅರ್ಥ ॥ ಇದಂತಿರಲೀ. ಮತ್ತೊಂದು ಮಾತು ಕೇಳುತ್ತೇನೆ.

ಮೂ। ಕಿಮಸೌವಿಹಾಯಸಂವಿಹಾಯಸಂತತಂಶಂಕರಶಿರಸಿಗಂಗಾ
ತರಂಗಾಂತಃಪ್ರತಿವಸತಿಮೃಗಾಂಕಃಕೃಶಾಂಗಃ ॥ ೪೫೭ ॥

ಟೀಕಾ ॥ ಕಿಮಿತಿ ॥ ಅಸೌಮೃಗಾಂಕಃ ಚಂದ್ರಃ–ಕೃಶಾಂಗಃ ಅಲ್ಪಶರೀರಸ್ಸನ್– ವಿಹಾಯ ಸಮಾಕಾ ಶಂ– ಅಂತರ್ಮಧ್ಯೇ ॥

ಅರ್ಥ ॥ ಈ ಚಂದ್ರನು ಅಲ್ಪಶರೀರಿಯಾಗಿ ಆಕಾಶವನ್ನು ಬಿಟ್ಟು ಸರ್ವದಾ ಶಿವನ ನೆತ್ತಿಯ ಮೇಲೆ ಗಂಗೆಯ ನೀರಲ್ಲಿ ಮುಳುಗಿರುತ್ತಾನೆ. ಯಾಕೆ ?

ಶ್ಲೋ। ಸೌವರ್ಣಭೂಧರಮಪಿಸ್ವಕರೇನಿಧಾಯಭಿಕ್ಷಾಂಕಪಾಲ
ಭೃದಿಹಾಟತಿಕೃತ್ತಿವಾಸಾಃ । ಆಸ್ತಾಮಿದಂಸ್ವಯಮಸೌಪರಿ
ಗೃಹ್ಯಲುಬ್ಧೋಲಕ್ಷ್ಮೀಪತಿಂತಮಪಿಮಾರ್ಗಣಯಾಂಚಕಾರ
॥ ೪೫೮ ॥

ಅರ್ಥ ॥ ಈ ಕೃತ್ತಿವಾಸನು ಅಂದರೆ ಚರ್ಮ ಹೊದ್ದುಕೊಳ್ಳುವವನು, ಕೈಯಲ್ಲಿ ಚಿನ್ನದ ಬೆಟ್ಟವಿದ್ದರೂ ಭಿಕ್ಷೆಬೇಡಲಿಕ್ಕೆ ಕಪಾಲ ತೆಗದುಕೊಂಡು ತಿರುಗಾಡುತ್ತಾನೆ. ಇದಂತಿರಲೀ. ಈ ಲೋಭಿಯು ತಾನಾಗಿ ಲಕ್ಷ್ಮೀಪತಿಯನ್ನು ಸ್ವೀಕರಿಸಿ, ಬಳಿಕ ಅವ ನನ್ನು ಬಾಣವಾಗಿ ಮಾಡಿದನು.

---

* ಅಸ್ತ್ವೇವಮಥಾಪ್ಯನ್ಯ ದಪಿನಯುಜ್ಯತೆ ಇತಿಪಾಠಾಂತರಂ ॥

## ವಿಶ್ವಾವಸುಃ ॥

ಮೂ । ಶೃಣುಸಖಿತತ್ರಕಾರಣಂ ॥ ೪೫೯ ॥

ಅರ್ಥ ॥ ಗೆಳೆಯನೇ, ಅದರ ಕಾರಣವನ್ನು ಕೇಳು.

ಶ್ಲೋ । ಶಿವಶಿರಸಿಶೀತಭಾನುಸ್ಸಾಗರಸೂನುತ್ವಸೂಚನಾಯಪು
ರಂ ಅಧಿವಸತಿತನಮ್ರಹಿಷ್ಯಾಗಂಗಾಯಾಜಠರಮಲ್ಪತನುರೇಷಃ
॥ ೪೬೦ ॥

ಟೀಕಾ ॥ ಶಿವೇತಿ ॥ ಶೀತಭಾನುಶ್ಚಂದ್ರಃ– ಸಾಗರಸ್ಯ ಸಮುದ್ರಸ್ಯ ಸೂನುತ್ವಸೂಚನಾಯ ಪುತ್ರೋಹಮಿತಿ ಜ್ಞಾಪನಾಯೇವೇತ್ಯರ್ಥಃ– ಗವ್ಯೋತ್ಪ್ರೇಕ್ಷಾ– ಪರಮಲ್ಪತನುಸ್ಸನ್–ತಸ್ಯ ಸಮುದ್ರಸ್ಯ ಮಹಿಷ್ಯಾಃ ಭಾರ್ಯಾಯಾಃ ಗಂಗಾಯಾಃ– ಜಠರಂ ಮಧ್ಯಂ ಗರ್ಭಂಚ– ಅಧಿವಸತಿ ತತ್ರತಿಷ್ಠತೀತ್ಯರ್ಥಃ ॥

ಅರ್ಥ ॥ ತಂಪುಳ್ಳ ಚಂದ್ರನು ತಾನು ಸಮುದ್ರನ ಮಗನೆಂತ ತಿಳಿಸುವದಕ್ಕೆ ಬಹಳ ಸಣ್ಣ ಶರೀರವುಳ್ಳವನಾಗಿ ಮಹಾದೇವನ ತಲೆಯ ಮೇಲೆ ಸಮುದ್ರನ ಹೆಂಡತಿಯಾದ ಗಂಗೆಯ ಒಡಲಿನಲ್ಲಿ ವಾಸಮಾಡುತ್ತಾನೆ.

## ಕೃಶಾನುಃ ॥

ಮೂ । ತಥಾಪಿಲುಬ್ಧಪಿಷಫಲಪ್ರೇಪ್ಸುಭಿರನಾದೃತ್ಯಃ ॥ ೪೬೧ ॥

ಟೀಕಾ ॥ ತಥಾಪೀತಿ ॥ ಲುಬ್ಧ ಆದಿಕಿರಾತಶ್ಚ– ಫಲಂ ಪ್ರಾಪ್ತುಮಿಚ್ಛುಭಿಃ ಫಲಪ್ರೇಪ್ಸುಭಿಃ ಅನಾದೃತ್ಯಃ ನಕಾಂಕ್ಷಣೀಯಃ ॥

ಅರ್ಥ ॥ ಆದಾಗ್ಯೂ ಈ ಧನಲೋಭಿಯು ಫಲ ಅಪೇಕ್ಷಿಸುವವರಿಂದ ಪ್ರಾರ್ಥಿಸಲ್ಪಡಲಿಕ್ಕೆ ಅರ್ಹನಲ್ಲವು.

ಮೂ । ತಥಾಹಿ । ಶ್ಲೋ । ಸೂಕ್ಷ್ಮಸಿತಾಂಶುಕಲಾಭೋಪ್ಯಪ
ಟೋಹೈಮಧರಪದನಿವಿಷ್ಟೋಪಿ । ಲುಬ್ಧೋಯಮಯೋಹಸ್ತ
ಸ್ತಂಡುಲಸತ್ತ್ವೇಪ್ಯಟತ್ಯಹೋಭಿಕ್ಷಾಂ ॥ ೪೬೨ ॥

ಟೀಕಾ ॥ ಸೂಕ್ಷ್ಮೇತಿ ॥ ಲುಬ್ಧಃ ಧನಲೋಭವಾನ್ ಆದಿಕಿರಾತಶ್ಚ– ಅತಏವ–ಅಯಂ ಶಿವಃ ಸೂಕ್ಷ್ಮಸ್ಯಸಿತಸ್ಯ ಚಾಂಶುಕಸ್ಯ ಲಾಭಃ– ಸೂಕ್ಷ್ಮಾಯಾಃ ಸಿತಾಂಶೋಃ ಚಂದ್ರಸ್ಯ ಕಲಾಯಾಃ ಆಭಾಚಾಸ್ಯಾಸ್ತೀತ್ಯರ್ಥ ಆದ್ಯಚ್– ತಥಾಪಿಸನ್– ಅಪಟಃ ವಸ್ತ್ರಹೀನಃ ದಿಗಂಬರಶ್ಚ– ಹೈಮಧರೇ ಸುವರ್ಣ ರಾಶಿ ಮತಿಪದೇ ಸ್ಥಾನೇಮೇರುಸ್ಥಾನೇಚ ನಿವಿಷ್ಟೋಪಿ–ಅಯಃ ಅಶ್ಮಸಾರಃ ಶೂಲಂಚ ಹಸ್ತೇಯಸ್ಯಸಃ–ಕಿಂಚ–ತಂಡುಲಾನಾಂ ಸತ್ತ್ವಂ ವಿದ್ಯಮಾನತ್ವಂ–ತಂಡೋರ್ನಂದಿಕೇಶ್ವರಸ್ಯ ಲಸತ್ತ್ವಂ ಪ್ರಕಾಶಶ್ಚ ತಸ್ಮಿನ್ ಸತ್ಯಪಿ–ಭಿಕ್ಷಾಮಟತಿ ॥

ಅರ್ಥ ॥ ೧. ಈ ಧನಲೋಭಿಯು ಸಣ್ಣಾದ ಶುಭ್ರವಸ್ತ್ರ ದೊರತಾಗ್ಯೂ ಬತ್ತಲೆಯಾಗಿರುತ್ತಾನೆ. ಚಿನ್ನದ ರಾಶಿಯ ಮೇಲೆ ಕೂತಾಗ್ಯೂ ಕೈಯಲ್ಲಿ ಕಬ್ಬಿಣ ತೆಗೆದು ಕೊಳ್ಳು

ತ್ತಾನೆ. ಅಕ್ಕಿಯಿದ್ದಾಗ್ಯೂ (ತಿನ್ನಲಿಕ್ಕೆ ಇಲ್ಲದವನಂತೆ) ಭಿಕ್ಷೆಬೇಡಲಿಕ್ಕೆ ತಿರುಗಾಡು ತ್ತಾನೆ. ಇದೇನು ಆಶ್ಚರ್ಯ ?

(೨) ಈ ಬೇಡನು ಕ್ಷೀಣನಾದ ಚಂದ್ರನ ಕಳೆಸಂಪಾದಿಸಿದಂಥಾವನಾದಾಗ್ಯೂ ದಿಗಂಬರನು, ಮೇರುಪರ್ವತದ ಮೇಲಿರುವವನಾದಾಗ್ಯೂ ಶೂಲಕ್ಕೈಯಲ್ಲಿ ಹಿಡಕೊಂಡ ವನು, ತಂಡುಲಸತ್ವಂ ಅಂದರೆ ಬಸವನ ಪ್ರಕಾಶ ಅವನಲ್ಲಿದ್ದಾಗ್ಯೂ ಭಿಕ್ಷೆ ಬೇಡಲಿಕ್ಕೆ ತಿ ರುಗಾಡುವನು.

ಮೂ। ಅತ್ಯಲ್ಪಮಿದಮುಚ್ಯತೇ। ಯಚ್ಛಂಕರಸಂಗಾದ್ಗಂಗಾಯಾ
ಮಪಿಜೀವನದಾಯಿನ್ಯಾಂಸಂಕ್ರಾಂತಾತದ್ಗತಾಲುಬ್ಧತಾ॥ ೪೬೩ ॥

ಟೀಕಾ ॥ ಅತೀತಿ ॥ ಅತ್ಯಲ್ಪಂ ಸೂಕ್ಷ್ಮ ಗೋಚರ ಮಿತ್ಯರ್ಥಃ ॥

ಅರ್ಥ ॥ ಒಂದು ಸಣ್ಣ ಮಾತು ಹೇಳುತ್ತೇನೆ. ಅದೇನೆಂದರೆ ಈ ಶಿವನ ಸಹವಾಸ ದಿಂದ ಅವನ ಲುಬ್ಧತೆಯು ಜೀವನಕ್ಕಾಧಾರವಾದ ನೀರು ಕೊಡುವ ಗಂಗೆಯನ್ನು ಕೂಡ ಸೋಕಿತು.

ಮೂ। ಪುನ್ಶ್ಯ। ಶ್ಲೋ। ಮುಕ್ತಾಶ್ರಿತಾಪಿವಿಷ್ಣುಪದಾದುದೀತಾಪಿಗಾಂ
ಗೇಯಮುತ್ಪಾದ್ಯವಸುಪ್ರಕೃಷ್ಟಂ। ಪ್ರಾಪ್ಯಾಪಿರತ್ನಾಕರನಿತ್ಯ
ಸಂಗಂಕಪರ್ದಿಕಾಶಾಂನಜಹಾತಿಗಂಗಾ॥ ೪೬೪ ॥

ಟೀಕಾ ॥ ಮುಕ್ತೇತಿ ॥ ಮುಕ್ತೈಃ ತ್ಯಕ್ತಸಂಸಾರೈಃ ಮುಕ್ತಾಭಿರ್ಮೌಕ್ತಿ ಕೈಶ್ಚ ಆಶ್ರಿತಾಪಿ–ವಿಷ್ಣೋಸ್ಸ ತ್ವ ಪ್ರಧಾನಸ್ಯ ಪದಾತ್ ಆಕಾಶಾಚ್ಚ ಉದೀತಾ ಜಾತಾಪಿಚ– ಗಂಗಾ– ಪ್ರಕೃಷ್ಟಂ– ಗಾಂಗೇಯಂ ಸ್ವ ರ್ಣಮಯಂ–ವಸುಧನಂ–ವಸುಷು ಅಷ್ಟ ಸುಪ್ರಕೃಷ್ಟಂ–ಗಾಂಗೇಯಂ ಭೀಷ್ಮಂಚ–ಉತ್ಪಾದ್ಯ ರತ್ನಾ ಕರೇಣ ಸಮುದ್ರೇಣ ನಿತ್ಯಂ ಸಂಗಂ ಪ್ರಾಪ್ಯಾಪಿ–ಕಪರ್ದಿಕಾಯಾಂ ವರಾಟಿಕಾಯಾಂ ಆಶಾಂಕಾಂಕ್ಷಾಂ– ಕಪರ್ದಿನಃ ಶಿವಸ್ಯ ಕೇಶಿರಸಿ ಆಶಾಂ–ನಜಹಾತಿ ॥

ಅರ್ಥ ॥ ನೋಡು—(೧) ಈ ಗಂಗೆಯು ಮುತ್ತುಗಳುಳ್ಳವಳು. ಸತ್ವಗುಣಪ್ರಧಾ ನವಾಗಿರುವ ವಿಷ್ಣುವಿನ ಅಡಿಯೊಳಗಿಂದ ಹೊರಟಂಥವಳು. ಸ್ವರ್ಣಮಯವಾದ ಉತ್ತ ಮ ಧನವನ್ನು ಉತ್ಪತ್ತಿಮಾಡುತ್ತಾಳೆ. ರತ್ನಗಳ ಗಣಿಯ ಜೊತೆಯಲ್ಲಿ ನಿರಂತರವಾಗಿ ರುವಳು. ಆದಾಗ್ಯೂ ಕಾಸಿನ ಆಶೆಬಿಡುವದಿಲ್ಲವು.

(೨) ಈ ಗಂಗೆಯು ಸಂಸಾರ ಬಿಟ್ಟು ಹೋದವರಿಗೆ ಆಶ್ರಮವಾಗಿರುವಳು. ಆಕಾ ಶದಿಂದ ಪ್ರಕಟವಾದವಳು, ಅಷ್ಟವಸುಗಳಲ್ಲಿ ಶ್ರೇಷ್ಠನಾದ ಭೀಷ್ಮನನ್ನು ಹಡದವಳು ಸಮುದ್ರನಲ್ಲಿ ನಿತ್ಯ ಕೂಟವುಳ್ಳವಳು, ಇಷ್ಟಾದರು ಶಿವನ ಕೂದಲಿನ ಇಚ್ಛೆ ಬಿಡುವದಿ ಲ್ಲವು.

ಮೂ। ಅನ್ಯಚ್ಚ। ಶ್ಲೋ। ಸರ್ವತೋಮುಖಸಮೃದ್ಧಿಜುಷೋ

ದ್ಯತ್ಪೌಂಡರೀಕವನವಾಸನಯಾಪಿ । ಯತ್ತ್ವಯಾಕ್ಷ್ಯವಧಿ ಜಹ್ನು ಮುಖಸ್ತತ್ಸತ್ತ್ರಶೌತ್ರಿಚಿರಸಂಗತಿದೋಷಾತ್ ॥ ೪೬೫ ॥

ಟೀಕಾ ॥ ಸರ್ವತಇತಿ ॥ ಸರ್ವತೋ ಮುಖಾನಾಂ ಕ್ರತುವಿಶೇಷಾಣಾಂ ಜಲಾನಾಂಚ ಸಮೃದ್ಧಿಜು ಷಾಪಿ– ಉದ್ಯತೀ ಪ್ರಬುದ್ಧಾ ಪೌಂಡರೀಕಾಣಾಂ ಕ್ರತು ವಿಶೇಷಾಣಾಂ ಶ್ವೇತಪದ್ಮಾನಾಂಚ ವನೇ ಸಮೂಹೇ ವಾಸನಾ ಸಂಸ್ಕಾರಃ ಸುಗಂಧಶ್ಚ ಯಸ್ಯಾಸ್ತಥೋಕ್ತಯಾಪಿ– ತಯಾಗಂಗಯಾಪಿ–ಜಹ್ನೋರ್ಮುನೇಃ ಮುಖಃ–ಅವಧಿನಾಶಿತ ಇತಿಯತ್– ತದ್ಯಜ್ಞ ನಾಶಃ– ಸತ್ರಘಾತಿನಃ ದಕ್ಷಯಜ್ಞ ಭಂಜಕಸ್ಯ ಚಿರಸಂಗತಿರೇವ ದೋಷಾತ್– ತಯಾಕೃತ ಇತಿಶೇಷಃ– ಅನ್ಯಥಾ ತಾದೃಶಯಜ್ಞೋತ್ತಮ ಕತ್ರ್ಯಾಸ್ತದಯೋಗಾದಿತಿಭಾವಃ ॥

ಅರ್ಥ ॥ ಮತ್ತು ( ೧ ) ಇವಳು ಜಲಸಮೃದ್ಧಿಯುಳ್ಳವಳು, ಬಿಳಿ ತಾವರೆಗಳ ಗಂಪಿನಿಂದ ಪರಿಮಳಿತವಾಗಿರುವವಳು, ಆದಾಗ್ಯೂ ಇವಳು ಜಹ್ನು ಋಷಿಯ ಯಜ್ಞ ನಾಶಪಡಿಸಿದಳು. ಇದು ದಕ್ಷನ ಯಜ್ಞ ನಾಶಪಡಿಸಿದವನ ಸಂಗತಿಯು ಪರಿಣಾಮವು.

( ೨ ) ಇವಳು ಸರ್ವತೋ ಮುಖ ಎಂಬ ಯಜ್ಞಗಳ ಸಮೃದ್ಧಿಯುಳ್ಳವಳು. ಮತ್ತು ಅನೇಕ ಪೌಂಡರಿಕ ಯಜ್ಞಗಳನ್ನು ಮಾಡಬೇಕೆಂಬ ಕಾಂಕ್ಷೆಯುಳ್ಳವಳು. ಆದಾಗ್ಯೂ ಯಜ್ಞ ಹಾಳು ಮಾಡಿದವನ ( ಶಿವನ ) ಸಂಗತಿಯ ದೋಷದಿಂದ ಜನ್ಹು ಋಷಿಯ ಯಜ್ಞ ನಾಶಪಡಿಸಿದಳು.

ಮೂ । ಪುನರ್ವಿಮೃಶ್ಯ ॥

ಅರ್ಥ॥ ತಿರಿಗಿ ಆಲೋಚನೆ ಮಾಡಿ ( ಕೃಶಾನು ಹೇಳುತ್ತಾನೆ. )

ಶ್ಲೋ । ಈಶಃಕರಸ್ವೀಕೃತಕಾಂಚನಾದ್ರಿಃಕುಬೇರಮಿತ್ರಂರಜತಾಚಲಸ್ಥಃ । ತಥಾಪಿಭಿಕ್ಷಾಟನಮಸ್ಯಜಾತಂವಿಧೌಶಿರಃಸ್ಥೇಕುಟಿಲೇಕುತಶ್ರೀಃ ॥ ೪೬೬ ॥

ಟೀಕಾ ॥ ಈಶಇತಿ ॥ ಯದ್ಯಪಿ ಈಶಃ ಶಿವಃ ಪ್ರಭುಶ್ಚ– ಕರಸ್ವೀಕೃತಃ ಚಾಪತ್ವೇನ ಕರೇಧೃತಃ ಕಾಂಚನಾದ್ರಿರ್ಯೇನಸಃ–ಕುಬೇರಸ್ಯ ಧನದಸ್ಯ ಮಿತ್ರಂ–ರಜತಾಚಲಸ್ಥಃ ಕೈಲಾಸವಾಸೀತಿ ಚಭವತಿ–ತಥಾಪಿ– ಅಸ್ಯಈಶಸ್ಯ– ಭಿಕ್ಷಾಟನಂ ಜಾತಂ ಅಭೂತ್–ತಥಾಹಿ– ಕುಟಿಲೇವಾಮೇವಕ್ರೇಚ–ವಿಧೌಚಂದ್ರೇ– ಇಕಾರಾಂತಃ–ಚಂದ್ರೇಚ–ಉಕಾರಾಂತಃ– ಶಿರಃಸ್ಥೇಸತಿ–ಶ್ರೀರ್ಲಕ್ಷ್ಮೀಃ ಕುತಃ–ನಾಸ್ತೇವೇತ್ಯರ್ಥಃ– ಅತ್ರಕೇಚಿತ್ ಬ್ರಾಹ್ಮವೈಷ್ಣವೈಂದ್ರಾದ್ಯ ಖಿಲೈಶ್ವರ್ಯಪ್ರದಾಯಿತ್ವೇನ ಪ್ರಸಿದ್ಧಸ್ಯ ಅಚಂಚಲಾಣಿವಾಮೈಶ್ವರ್ಯ ಪರಿಪೂರ್ಣ ಸ್ಯೇಶ್ವರಸ್ಯ ಚಂಚಲಾ ಶ್ರೀಃ ಕುತಃ ನಾಸ್ತ್ಯೇವೇತ್ಯರ್ಥಾಂತರಂ ಭಣಂತಿ ॥

ಅರ್ಥ ॥ ಶಿವನು ಕೈಯಲ್ಲಿ ಚಿನ್ನದ ಬೆಟ್ಟವೆಂದರೆ ಮೇರು ಪರ್ವತವನ್ನು ಬಾಣವಾಗಿ ಧರಿಸಿ ಕೊಂಡವನಾಗಿಯೂ, ಕುಬೇರನ ಸ್ನೇಹಿತನಾಗಿಯೂ, ರಜತಾಚಲಸ್ಥ ಅಂದರೆ ಬೆಳ್ಳಿಯ ಬೆಟ್ಟದ ಮೇಲೆ ವಾಸ ಮಾಡುಂಥಾವನಾಗಿಯೂ ಇರುತ್ತಾನೆ. ಆದಾಗ್ಯೂ ಭಿಕ್ಷೆ ಬೇಡುವದಕ್ಕೆ ತಿರುಗಾಡುವದು ಅವನ ಪಾಲಿಗೆ ಬಂತು. ಹಣೆ ಬರಹ ದೊಂಕಾದರೆ

( ಪಾಪಿಯಾದ ಚಂದ್ರನು ತಲೆಯ ಮೇಲಿರಲು ) ಸಂಪತ್ತು ಹ್ಯಾಗೆ ಬಂದೀತು ? ಬರಲಿಕ್ಕಿಲ್ಲೆಂಬ ಭಾವವು.

ಮೂ । ಕಿಂಚೈಷವಿರುದ್ಧಧರ್ಮಾಕೃತ್ತಿವಾಸಾಃಕುತಃ *ಸ್ತೋತವ್ಯಃ ॥ ೪೬೭ ॥

ಟೀಕಾ ॥ ಕಿಮಿತಿ ॥ ವಿರುದ್ಧಧರ್ಮಾ ಅತಏವ ಕೃತ್ತಿವಾಸಾಶ್ಚೈಷಃ ॥

ಅರ್ಥ ॥ ಲೋಕಕ್ಕೆ ಹೊರತಾದ ನಡತೆಯುಳ್ಳವನಾಗಿ ತೊಗಲೇ ಬಟ್ಟೆಯಾಗಿ ಮಾಡಿಕೊಂಡಿರುವಂಥ ಈ ಮಹಾದೇವನ ಹೊಗಳಿಕೆ ಯಾಕೆ ಮಾಡಬೇಕು ?

ಮೂ । ಶೃಣು । ಶ್ಲೋ । ಧತ್ತೇಮಹೋಮೂರ್ಧ್ನಿಜಡೌಷಧೀಶಂ ಔಷರ್ಬುಧಂಭಾಲತಲೇಂಗಕೇಷು । ಫಣೀಂದ್ರಮೌಲಿಸ್ಥಮಣಿಪ್ರಸೂತಂಹರೋಽಂಧಕಾರಿತ್ವಮಥಾಪ್ಯುಪೈತಿ ॥ ೪೬೮ ॥

ಟೀಕಾ ॥ ಧತ್ತ ಇತಿ ॥ ಹರಃ— ಮೂರ್ಧ್ನಿ—ಜಡಂ ಶೀತಂ ಔಷಧೀಶಂ ಚಂದ್ರಸಂಬಂಧಿ— ಮಹಃ ತೇಜಃ— ಧತ್ತೇ—ಭಾಲತಲೇ— ಉಷರ್ಬುಧಸ್ಯ ಅಗ್ನೇಸ್ಸಂಬಂಧಿ ಔಷರ್ಬುಧಂ— ಮಹಃ— ಧತ್ತೇ—ಅಂಗಕೇಷು— ಫಣೀಂದ್ರ ಮೌಲಿಸ್ಥ ಮಣಿಪ್ರಸೂತಂ— ಮಹಃ—ಧತ್ತೇ— ಅಥಾಪಿ ಏವಮಪಿ—ಅಂಧಕಾರೋಸ್ಯಾಸ್ತೀತ್ಯಂಧಕಾರಿಣೋ ಭಾವಸ್ತದಂಧಕಾರಿತ್ವಂ ಅಂಧಕೋ ನಾಮಾಸುರಸ್ತಸ್ಯಾರಿತ್ವಂ ಶತ್ರುತ್ವಂಚ— ಉಪೈತಿ ಪ್ರಾಪ್ನೋತಿ ॥

ಅರ್ಥ ॥ ಕೇಳು. ಈ ಮಹಾದೇವನು ತಲೆಯ ಮೇಲೆ ತಂಪಾದ ಚಂದ್ರ ತೇಜ, ಹಣೆಯ ಮೇಲೆ ಅಗ್ನಿ ತೇಜ, ಮೈಯಲ್ಲಿ ಸರ್ಪರಾಜನ ಫಣೆಯ ಮೇಲಿನ ರತ್ನದಿಂದ ಹೊರಡುವ ಹೊಳಪು ಉಳ್ಳವನಾದಾಗ್ಯೂ ಅಂಧಕಾರಿತ್ವವೆಂದರೆ ಕತ್ತಲೆಯ ಧರ್ಮವನ್ನು ( ಅಥವಾ ಅಂಧಕನೆಂಬ ರಾಕ್ಷಸನ ಶತ್ರುತ್ವವನ್ನು ) ಪಡೆದವನಾಗಿರುತ್ತಾನೆ.

ಮೂ । ಅಪಿಚ । ಶ್ಲೋ । ತಾರಕಾರಿಂವಹನ್ನಂಕೇಮಸ್ತಕೇತಾರಕಾಧಿಪಂ । ಅಂಗೀಕುರ್ವನ್ಸುದೃಶಮಪ್ಯಲೀಕಾಕ್ಷೋವಿಭಾತ್ಯಯಂ ॥ ೪೬೯ ॥

ಟೀಕಾ ॥ ತಾರಕೇತಿ ॥ ಅಯಂಹರಃ— ಅಂಕೇ— ತಾರಕಸ್ಯ ರಕ್ಷಸಃ ಅರಿಂಸ್ಕಂದಂ— ಮಸ್ತಕೇ ಶಿರಸಿ— ತಾರಕಸ್ಯ ಅಧಿಪಂಚ— ತಾರಕಾಣಾಂ ನಕ್ಷತ್ರಾಣಾಮಧಿಪಂ ಚಂದ್ರಂಚ— ವಹನ್ ಯಥಾಸ್ಥಾನ ಸನ್ನಿವೇಶಾದಿನಾ ಶೋಭನಾಂ ದೃಶಂ ನೇತ್ರಮಂಗೀ ಕುರ್ವನ್ ಸ್ವೀಕುರ್ವನ್ನಪಿ— ಸುದೃಶಂ ಸ್ತ್ರಿಯಂ ಪಾರ್ವತೀಂ ಅಂಗೀಕುರ್ವನ್— ವಾಮಾಂಗತ್ವೇನ ಕುರ್ವಂತ್ಸನ್ನಪೀತಿಚ— ಅಲೀಕೇಲಲಾಟೇ ಅಯಥಾಸ್ಥಾನೇ ಅಕ್ಷಿಯಸ್ಯತಥೋಕ್ತಸ್ಸನ್—ವಿಭಾತಿವಿರುದ್ಧಂ ಪ್ರಕಾಶತೇ—ವಿಶೇಷೇಣರಾಜತ ಇತಿಚ ॥

ಅರ್ಥ ॥ ಮತ್ತು ಈ ಮಹಾದೇವನು ತೊಡೆಯ ಮೇಲೆ ಷಣ್ಮುಖನನ್ನೂ, ತಲೆಯ

---

* ನಸ್ತೋತವ್ಯಃ ಇತಿಪಾಠಾಂತರಂ ॥

ಮೇಲೆ ತಾರಕೆದ ಅರಸನನ್ನೂ (ಚಂದ್ರನನ್ನೂ) ಕುಂಡ್ರಿಸಿಕೊಂಡಿರುತ್ತಾನೆ. ಮತ್ತು ತಕ್ಕವಾದ ಸ್ಥಳದಲ್ಲಿ ಶೋಭಾಯಮಾನವಾದ ಕಣ್ಣುಗಳನ್ನು (ಅಥವಾ ಸ್ತ್ರೀ ಅಂದರೆ ಪಾರ್ವತಿಯನ್ನು) ಇಟ್ಟುಕೊಂಡಿರುತ್ತಾನೆ. ಆದಾಗ್ಯೂ ಹಣೆಯಲ್ಲಿ ಅಂದರೆ ತಕ್ಕದ್ದಲ್ಲದ ಸ್ಥಳದಲ್ಲಿ ಮತ್ತೊಂದು ಕಣ್ಣು ಇಟ್ಟುಕೊಂಡು ವಿಪರೀತವಾಗಿ ಶೋಭಿಸುತ್ತಾನೆ.

ವಿಶ್ವಾವಸುಃ ॥

ಮೂ। ಕಿಮೇಭಿಶ್ಶಬ್ದಶ್ಲೇಷೈಕಶರಣೈರ್ದೂಷಣೈರಸ್ಯಖಲುಮೃತ್ಯುಂಜಯಸ್ಯವಿಶ್ವಸ್ತುತ್ಯಮನ್ಯಾದೃಶಂವದಾನ್ಯತ್ವಂ ॥ ೪೨೦ ॥

ಟೀಕಾ ॥ ಕಿಮಿತಿ ॥ ಸ್ತುತ್ಯಂ ಸ್ತೋತು ಮರ್ಹಂ– ವದಾನ್ಯತ್ವಂ ದಾತೃತ್ವಂ– ಅನ್ಯಾದೃಶ ಮಸದೃಶಂ ॥

ಅರ್ಥ ॥ ಈ ತರದ ಅನೇಕಾರ್ಥ ಶಬ್ದಗಳನ್ನು ಆಶ್ರಯಿಸಿಕೊಂಡು ಮಾಡುವ ನಿಂದೆಯಿಂದ ಏನು ಪ್ರಯೋಜನ? ಸಮಸ್ತರಿಂದಲೂ ಶ್ಲಾಘನೆಗೆ ಅರ್ಹವಾದ ಈ ಮಹಾದೇವನ ಔದಾರ್ಯಕ್ಕೆ ಜೋಡಾದ ಔದಾರ್ಯ ಉಂಟೇ?

ಶ್ಲೋ। ದೀರ್ಘಾಯುರ್ಮುನಿಸೂನವೇಸ್ಮದದತೇದಿವ್ಯಂತಥಾಭೀಷ್ಟದಂ ಪ್ರಖ್ಯಾತಾಯಭಗೀರಥಾಯಭಗವತ್ಪಾದಾಮೃತಂಪ್ರಾದದಾತ್ । ಪಾಪೇಭ್ಯೋಪಿಚಬಾಣಪಙ್ಕ್ತಿವದನಪ್ರಷ್ಠೇಭ್ಯಇಷ್ಟಂಫಲಂ ಪ್ರಾದಾತ್ತಸ್ಯಶಿವಸ್ಯಭಾತಿಜಗದಾಹ್ಲಾದಾಯವಾದಾನ್ಯಕಂ ॥ ೪೨೧ ॥

ಟೀಕಾ ॥ ದೀರ್ಘೇತಿ ॥ ಯಶ್ಶಿವಃ–ಮುನಿಸೂನವೇ ಮಾರ್ಕಂಡೇಯಾಯ– ದೀರ್ಘಾಯುಶ್ಚಿರಜೀವಿತ್ವಂ– ದದತೇಸ್ಮದತ್ತವಾನ್– ಪ್ರಖ್ಯಾತಾಯೇತಿ– ಪೂರ್ವತಾಪ್ರಿ ವಿಶೇಷಣಂ– ಭಗೀರಥಾಯರಾಜ್ಞೇ– ಅಭೀಷ್ಟದಂ ಭಗವತ್ಪಾದಾ ಮೃತಂ ಗಂಗಾಂ– ಪ್ರಾದದಾತ್ ದತ್ತವಾನ್–ಬಾಣಃ ಬಲಿಪುತ್ರಃ ಪಙ್ಕ್ತಿವದನಃ ರಾವಣಃ ತೌಪ್ರಷ್ಠೌ ಪುರಸ್ಸರೌ ಯೇಷಾಂ ತೇಭ್ಯಃ ಪಾಪೇಭ್ಯೋಪಿ–ಇಷ್ಟಂ ಫಲಂ ಪ್ರಾದಾತ್– ತಸ್ಯ ಶಿವಸ್ಯ ವಾದಾನ್ಯಕಂ– ಜಗದಾಹ್ಲಾದಾಯ– ಭವತಿ ॥

ಅರ್ಥ ॥ ಈ ಮಹಾದೇವನು ಮಾರ್ಕಂಡೇಯ ಮುನಿಗೆ ಚಿರಂಜೀವಿತ್ವ ಕೊಟ್ಟನು. ಹೆಸರು ಹೋದ ಭಗೀರಥನಿಗೆ ಇಷ್ಟಾರ್ಥವನ್ನೀವ ವಿಷ್ಣುಪಾದಾಮೃತವಾದ ಸ್ವರ್ಗ ನದಿ ಅಂದರೆ ಗಂಗಾ ನದಿಯ ಜಲವನ್ನು ಕೊಟ್ಟನು. ಬಾಣಾಸುರ ಮತ್ತು ರಾವಣರೇ ಮುಖ್ಯವಾದ ಪಾಪಿಷ್ಠರ ಬಯಕೆಗಳನ್ನು ನೆರವೇರಿಸಿದನು. ಈ ಪ್ರಕಾರವಾದ ಮಹಾದೇವನ ಔದಾರ್ಯವು ಲೋಕಕ್ಕೆ ಸಂತೋಷಕಾರಕವಾದದ್ದು.

ಕೃಶಾನುಃ ॥

ಮೂ। ತದೇತ *ದಾಹತಂಭಾಷಿತಂಯನ್ಮಹಾದೇವಸ್ಯವಾದಾನ್ಯಕಂಜಗದಾಹ್ಲಾದಯತಿ ॥ ೪೨೨ ॥

* ವ್ಯಾಹತಂ ಇತಿಪಾಠಾಂತರಂ ॥

ಟೀಕಾ ॥ ತದಿತಿ ॥ ಅಹತಂ ವ್ಯಾಷಾರ್ಥಕಂ ॥

ಅರ್ಥ॥ ಮಹಾದೇವನ ಔದಾರ್ಯವು ಲೋಕಕ್ಕೆ ಸಂತೋಷಕಾರಕವಾದದ್ದೆಂತ ನೀನು ಹೇಳಿದ ಮಾತು ಯಥಾರ್ಥವಲ್ಲವು.

ಮೂ। ಯತಃ । ಶ್ಲೋ। ದತ್ವಾ *ವರಂದಾನವರಾಕ್ಷಸೇಭ್ಯೋವಿಶ್ವಸ್ಯಚಸ್ವಸ್ಯಚಯೋವಿಷಾದಂ । ಸಂಪಾದಯಾಮಾಸಶಶಾಂಕಮೌಲೇಃದಾತೃತ್ವಮೇತಸ್ಯತವೈವಹೃದ್ಯಂ ॥೪೭೩॥

ಟೀಕಾ ॥ ದತ್ವೇತಿ ॥ ಯಃಶಶಾಂಕಮೌಲಿಃ_ ದಾನವ ರಾಕ್ಷಸೇಭ್ಯಃ_ ವರಂಪ್ರಾರ್ಥಿತಂ ದತ್ವಾ_ ವಿಶ್ವಸ್ಯ ಸ್ವಸ್ಯಚ_ವಿಷಾದಂ ದುಃಖಂ ಸಂಪಾದಯಾಮಾಸ_ ಭಸ್ಮಾಸುರವರ ದಾನಸ್ಯ ಸ್ವವಿಷಾದ ಜನಕತ್ವಾದಿತಿ ಭಾವಃ_ ಏತಸ್ಯ ಶಶಾಂಕಮೌಲೇರ್ದಾತೃತ್ವಂ_ ತವೈವ ಹೃದ್ಯಂ_ ನಮಮೇತ್ಯರ್ಥಃ ॥

ಅರ್ಥ ॥ ಯಾಕೆಂದರೆ ದೈತ್ಯರಿಗೂ ರಾಕ್ಷಸರಿಗೂ ಇಷ್ಟಾರ್ಥವನ್ನಿತ್ತು ತನ್ನ ಮೇಲಿಯೂ ಜನರ ಮೇಲೆಯೂ ವಿಪತ್ತುಗಳನ್ನು ತರಿಸಿ ಕೊಂಡ ಈ ಚಂದ್ರಮೌಳಿಯ ಔದಾರ್ಯಕ್ಕೆ ನೀನೇ ಮೆಚ್ಚಬೇಕು ಹೊರತು ಮತ್ತ್ಯಾರೂ ಮೆಚ್ಚಲಿಕ್ಕಿಲ್ಲವು.

ವಿಶ್ವಾವಸುಃ ॥

ಮೂ। ಕುಟಿಲಧಿಷಣಗುಣಮಪಿದೋಷಇತಿಘೋಷಯತಿಭವಾನ್ ॥೪೭೪॥

ಅರ್ಥ॥ ಎಲೈ ಡೊಂಕು ಬುದ್ಧಿಯೇ, ಗುಣವನ್ನು ಕೂಡ ಕೊರತೆಯೆಂದುಸುರುತ್ತೀಯಾ?

ಮೂ। ತಥಾಹಿ। ಶ್ಲೋ। ದೈತ್ಯೇಭ್ಯೋನವರಾನದಾಸ್ಯತಯದಿತ್ರ್ಯಕ್ಷೋಮುಹುಸ್ತರ್ಹಿತೇನಾಶಕ್ಷ್ಯನ್ಭುವನಾನಿಪೇಷ್ಟುಮುದಯಂನಾಪ್ಸ್ಯದ್ಧಯಾಶಾರ್ಙ್ಗಿಣಃ । ನೋದಾಯಿಷ್ಯತಮಾನುಷಾದಿಷುಹರಿರ್ನೋಸೇತುಗೀತಾದಿಕಂ ಪ್ರಾಭಂತ್ಸ್ಯದ್ಭಗವಾನ್ಭವಾರ್ಣವಮಮೀನಾಲಂಘಯಿಷ್ಯನ್ನರಾಃ ॥೪೭೫॥

ಟೀಕಾ ॥ ದೈತ್ಯೇಭ್ಯಇತಿ ॥ ತ್ರ್ಯಕ್ಷಶ್ಶಿವಃ_ದೈತ್ಯೇಭ್ಯೋ ರಾಕ್ಷಸೇಭ್ಯೋ ವರಾನ್ ನಾದಾಸ್ಯತಯದಿ_ತರ್ಹಿ_ತೇದೈತ್ಯಾಃ_ ಭುವನಾನಿಮುಹುಃ_ ಪೇಷ್ಟುಂ ನಾಶಯಿತುಂ_ನಾಶಕ್ಷ್ಯನ್ ಸಮರ್ಥಾನಾಭವಿಷ್ಯನ್_ತತಶ್ಚ_ ಶಾರ್ಙ್ಗಿಣೋದಯಾ ಉದಯ ಮುತ್ಪತ್ತಿಂ ನಾಪ್ಸ್ಯತ್_ ಪ್ರಾಪ್ತಾನಾಭವಿಷ್ಯತ್_ ತತಶ್ಚ_ಮಾನುಷಾದಿಷು ಜಾತಿಷು_ ಹರಿಃ ನೋದಾಯಿಷ್ಯತ ನಾವಿರಭವಿಷ್ಯತ್_ ತತಶ್ಚ ಭಗವಾನ್_ ಸೇತುಸ್ಸಾಮುದ್ರಃ_ ಗೀತಾಭಗವಚ್ಛಬ್ದ ಪೂರ್ವಾ ಆದಿರ್ಯಸ್ಯ ತದಾದಿಕಂ_ ಪ್ರಾಭಂತ್ಸ್ಯತ್ ಬದ್ಧಂನಾಕರಿಷ್ಯತ್_ ಕಾದಾನಿರತ ಆಹ_ ಅಮೀನರಾಃ ಭವಾರ್ಣವಂ ನಾಲಂಘಯಿಷ್ಯನ್_ ಅತ್ರಲಿಜ್ನಿಮಿತ್ತೇ ಲೃಙ್ ಕ್ರಿಯಾತಿ ಪತ್ತಾವಿತಿ ಹೇತುಹೇತು ಮದ್ಭಾವೇ ವಿಹಿತಸ್ಯ ಲೃಙಃ ರೂಪಾಣ್ಯಾದಾಸ್ಯತೇತ್ಯಾದೀನಿ ॥

---

* ವರಾನ್ ಇತಿಪಾಠಾಂತರಂ ॥

ಅರ್ಥ ॥ ಮಹಾದೇವನು ದೈತ್ಯರಿಗೂ ರಾಕ್ಷಸರಿಗೂ ಬೇಡಿದನ್ನು ಕೊಡದಿದ್ದರೆ ಅವರು ಲೋಕಗಳನ್ನು ಪದೇಪದೇ ಕಾಡಲಿಕ್ಕೆ ಶಕ್ಯರಾಗುತ್ತಿದ್ದಿಲ್ಲವು. ಶ್ರೀ ವಿಷ್ಣುವಿನ ಕೃಪೆಯು ಪ್ರಕಟವಾಗುತ್ತಿದ್ದಿಲ್ಲವು. ಶ್ರೀ ವಿಷ್ಣುವು ಮನುಷ್ಯನಾಗಿ ಅವತರಿಸುತ್ತಿದ್ದಿಲ್ಲವು. ಸೇತು ಭಗವತ್‌ಗೀತೆ ಮುಂತಾದ ಸಾಧನಗಳನ್ನು ಕಟ್ಟುತ್ತಿದ್ದಿಲ್ಲವು. ಮತ್ತು ಮನುಷ್ಯರು ಸಂಸಾರ ಸಮುದ್ರವನ್ನು ದಾಟುತ್ತಿದ್ದಿಲ್ಲವು.

ಮೂ । ಕಿಂಚ । ಶ್ಲೋ । *ಕಂಪಾತರಂಗಶಿಶಿರಾನಿಲಡಿಂಭಜಾತಕಂ
ಪಾಮ್ರನಿಷ್ಪತಿತಪುಷ್ಪರಸಾಭಿಷಿಕ್ತಃ । ಸಂಪಾದಯತ್ಯತುಲ
ಸಂಪದಮರ್ಥಿನೋನು ಕಂಪಾಸುಧಾಂಬುಧಿರಯಂಪತಿರಂಬಿಕಾ
ಯಾಃ ॥ ೪೭೬ ॥

ಟೀಕಾ ॥ ಕಂಪೇತಿ ॥ ಕಂಪಾಯಾ ನಾಮನದ್ಯಾಃ ತರಂಗೈಶ್ಶಿಶಿರೈಃ ಅನಿಲಡಿಂಭೈರ್ಮಂದಮಾರುತೈಃ ಜಾತಕಂಪಾತ್ ಆಮ್ರಾತ್ ಚೂತವೃಕ್ಷಾತ್ ನಿಷ್ಪತಿತೇನ ಪುಷ್ಪರಸೇನ ಅಭಿಷಿಕ್ತಃ ಅನುಕಂಪಾಸುಧಾಂಬುಧಿಃ— ಅಂಬಿಕಾಯಾಃ ಪತಿರೇಕಾಮ್ರೇಶ್ವರಃ— ಅರ್ಥಿನಃ ಪ್ರಾರ್ಥಕ ಜನ್ಯ— ಅಖಿಲಾಂ ಸಂಪದಂ— ಸಂಪಾದಯತಿ ॥

ಅರ್ಥ ॥ ಕಂಪಾ ಎಂಬ ಹೊಳೆಯ ತೆರೆಗಳಿಂದ ತಂಪಡೆದ ಎಳೆಪೆಲರುಗಳಿಂದ ಅಲ್ಲಡಿಕೆ ಹೊಂದಿದ ಮಾಮರಗಳಿಂದ ಸುರಿಯುವ ಹೂರಸದಿಂದ ಎರಪಿಸಲ್ಪಡುವಂಥಾವನಾದ, ಕರುಣಾಮೃತದ ಸಮುದ್ರನಾದಂಥಾವನಾದ ಈ ಅಂಬಿಕಾಪತಿಯು ಬೇಡುವವರಿಗೆ ಸಕಲ ಸಂಪತ್ತಿಯನ್ನು ಕೊಡುತ್ತಾನೆ.

ಮೂ । ಪುರೀಂನಿರೀಕ್ಷ್ಯಸಶ್ಲಾಘಂ ॥
ಶ್ಲೋ । ಅಲ್ಪೋಪಿಕಾಂಚ್ಯಾಮಾವಾಸಾದಾಸಾದಯತಿಗೌರವಂ ।
ಯತ್ರಪತತ್ಪುರಸ್ಥಾಣುರ್ಗಿರೀಶಇತಿಗೀಯತೇ ॥ ೪೭೭ ॥

ಟೀಕಾ ॥ ಅಲ್ಪಇತಿ ॥ ಅಲ್ಪಸ್ಸೂಕ್ಷ್ಮೋಪಿ ಪದಾರ್ಥಃ— ಕಾಂಚ್ಯಾ ಮಾವಾಸಾದ್ಧೇತೋಃ—ಗೌರವಂ ಮಹತ್ವ ಮಾಸಾದಯತಿ ಪ್ರಾಪ್ನೋತಿ— ಯತಃ—ಏತಸ್ಮಿನ್ ಪುರೇ ಕಾಂಚ್ಯಾಂ— ತಿಷ್ಠತೀತಿ ಸಚಾಸಾವಣುಃ— ಏತತ್ಪುರೇ ಸ್ಥಾಣುರೇಕಾಮ್ರೇಶಶ್ಚ— ಗಿರೀಶಃ ಪರ್ವತ ಶ್ರೇಷ್ಠಃ ಕೈಲಾಸನಾಥಶ್ಚ ಇತ್ಯುಕ್ತ ಪ್ರಕಾರೇಣ— ಗೀಯತೇವ್ಯವ ಹ್ರಿಯತೇ ॥

ಅರ್ಥ ॥ ಪಟ್ಟಣವನ್ನು ನೋಡಿ, ( ವಿಶ್ವಾವಸು ) ಹೊಗಳಿಕೆ ಮಾಡುತ್ತಾನೆ.

ಸಣ್ಣ ವಸ್ತುವಾದಾಗ್ಯೂ ಕಾಂಚಿಯಲ್ಲಿದ್ದರೆ ದೊಡ್ಡಸ್ಥಿಕೆಯನ್ನು ಪಡೆಯುತ್ತದೆ. ಹ್ಯಾಗೆಂದರೆ ಈ ಕಾಂಚಿಪಟ್ಟಣದಲ್ಲಿರುವ ಸ್ಥಾಣು ಅಂದರೆ ಏಕಾಮ್ರೇಶ್ವರನು ( ಅಥವಾ ಅಣುವು ) ಗಿರೀಶ ಅಂದರೆ ಕೈಲಾಸದೊಡೆಯ ( ಅಥವಾ ಬೆಟ್ಟಗಳ ಅರಸು ) ಎಂದು ಕರೆಯಲ್ಪಡುತ್ತಾನೆ.

---

* ಪಂಪಾ ಇತಿಪಾಠಾಂತರಂ ಇದಂಚ ಏಕಾಮ್ರೇಶ್ವರ ಸಮೀಪವರ್ತಿ ಸರೋವರಮಿತಿಕೇಚಿತ್ ॥

ಕೃಶಾನುಃ ॥

ಮೂ । ಅನ್ಯೋನ್ಯವಿರುದ್ಧಸ್ವಭಾವಾಭ್ಯಾಂದೇವಾಭ್ಯಾಮಾಕ್ರಾಂತಾಮೇನಾಂನಗರೀಂಕಿಂವಿಸ್ತೌಷಿ ॥ ೪೭೮ ॥

ಟೀಕಾ ॥ ಅನ್ಯೋನ್ಯೇತಿ ॥ ಏನಾಂನಗರೀಂ ಕಾಂಚೀಂ ॥

ಅರ್ಥ ॥ ಪರಸ್ಪರ ಶೇರಿಕೆಯಿಲ್ಲದ ಗುಣಗಳುಳ್ಳ ಇಬ್ಬರು ದೇವರುಗಳು ಬಲಕಾಯಿಸಿಕೊಂಡಿರುವ ಈ ಪಟ್ಟಣವನ್ನು ಯಾಕೆ ಹೊಗಳುತ್ತಿ ?

ಶ್ಲೋ । ದೇವೌದ್ವಾವಧಿಕಾಂಚಿಪಶ್ಯಲಸತಃ ಪ್ರಾಚೀಪ್ರತೀಚ್ಯಾಶಯೋ ಸ್ತತ್ರೈಕಃಕುರುತೇವಿನಾಯಕಮಧಶ್ಚಿತ್ರಂಪುರಶ್ಚಾಪರಃ । ಏಕೋನಿತ್ಯಮನಷ್ಟಮೂರ್ತಿರಿತರಃಖ್ಯಾತೋಷ್ಟಮೂರ್ತಿರ್ಜಗತ್ಯೇಕೋವಾರಿತವಾನ್‌ಗಜಾರ್ತಿಮಚಿರಾ *ದ್ರತ್ತ್ಯಾಗಜಾರ್ತಿಂಪರಃ ॥ ೪೭೯ ॥

ಟೀಕಾ ॥ ದೇವಾವಿತಿ ॥ ಅಧಿಕಾಂಚಿ ಕಾಂಚ್ಯಾಂ– ಪ್ರಾಚ್ಯಾಮಾಶಾಯಾಂ ಪ್ರತೀಚ್ಯಾಮಾಶಾಯಾಂ ಚದ್ವಯೋಃ– ಯೌದೇವೌ ವರದರಾಜೈಕಾಮ್ರೇಶ್ವರೌ–ಲಸತಃರಾಜೇತೇ–ತತ್ರತಯೋರ್ಮಧ್ಯೇ– ಏಕಃ ವರದರಾಜಃ–ವೀನಾಂನಾಯಕಂ ಗರುಡಂ– ಅಧಃಕುರುತೇ–ವಾಹನತ್ವಾದಿತ್ಯರ್ಥಃ– ಅಪರಃ ಏಕಾಮ್ರೇಶಃ– ವಿನಾಯಕಂ ಗಣಾಧಿಪಂಚ– ಪುರಸ್ಕುರುತೇ– ಪುತ್ರತ್ವಾದಿತಿಭಾವಃ– ಏಕಃ ನಿತ್ಯಂ ಅನಷ್ಟಮೂರ್ತಿಃ ಅಷ್ಟಮೂರ್ತಿರ್ನ ಭವತಿ– ಅವಿನಾಶಿಸ್ವರೂಪಶ್ಚ ಇತಿಖ್ಯಾತಃ ಪ್ರಸಿದ್ಧಃ–ಇತರಃ ನಿತ್ಯಂ ಅಷ್ಟೌ ಭೂತಾರ್ಕಚಂದ್ರಯಜ್ವಾನಃ ಮೂರ್ತಯಃ ಯಸ್ಯತಥೋಕ್ತಃ ಇತಿಖ್ಯಾತಃ– ಜಗತೀತ್ಯುಭಯತ್ರಯೋಜ್ಯಂ– ಏಕಃ–ಗಜಸ್ಯ ಗಜೇಂದ್ರಸ್ಯ ಆರ್ತಿಂ ನಕ್ರಕೃತಾಂ–ವಾರಿತವಾನ್–ಪರಃ–ಅಗಜಾಯಾಃ ಪಾರ್ವತ್ಯಾಃ ಆರ್ತಿಂ ಮಾನ್ಮಥೀಂ– ಗಜಭಿನ್ನಾರ್ತಿಂಚ– ರತ್ಯಾಪ್ರೇಮ್ಣಾ– ವಾರಿತವಾನ್–ಏತಚ್ಚಿತ್ರಂ ಪಶ್ಯ ॥

ಅರ್ಥ ॥ ಕಾಂಚಿಯಲ್ಲಿ ಮೂಡಣ ಮತ್ತು ಪಡುವಣ ದಿಕ್ಕಿನಲ್ಲಿಸೆಯುವ ಈ ಇಬ್ಬರಲ್ಲಿ ಒಬ್ಬನು ಅಂದರೆ ವರದರಾಜ ಸ್ವಾಮಿಯು ವಿನಾಯಕ ( ಅಂದರೆ ಗರುಡ) ನನ್ನು ಕೆಳಕ್ಕೆ ಮಾಡಿಕೊಂಡಿರುತ್ತಾನೆ. ಅಂದರೆ ವಾಹನ ಮಾಡಿಕೊಂಡಿರುತ್ತಾನೆ. ಮತ್ತೊಬ್ಬನು ಅಂದರೆ ಏಕಾಮ್ರೇಶ್ವರ ಸ್ವಾಮಿಯು ವಿನಾಯಕ ( ಅಂದರೆ ಗಣಪತಿ ) ನನ್ನು ( ಪುತ್ರಭಾವದ ಮೂಲಕವಾಗಿ ) ಎದುರಿಗಿಟ್ಟುಕೊಳ್ಳುತ್ತಾನೆ. ವರದರಾಜ ಸ್ವಾಮಿಯು ಸರ್ವದಾ ಅನಷ್ಟ ಮೂರ್ತಿಯಾಗಿದ್ದಾನೆ. ಅಂದರೆ ಅಷ್ಟಮೂರ್ತಿಯಾಗಿರುವದಿಲ್ಲ, ಅಥವಾ ನಾಶವಾಗದ ಮೂರ್ತಿಯಾಗಿದ್ದಾನೆ ಎಂಬ ಭಾವವು. ಏಕಾಮ್ರೇಶ್ವರನು ಅಷ್ಟಮೂರ್ತಿಯಾಗಿದ್ದಾನೆ. ಅಂದರೆ ಪಂಚ ಮಹಾಭೂತಗಳು ಸೂರ್ಯ ಚಂದ್ರ ಮತ್ತು ಅಗ್ನಿ ಕೂಡಿ

---

* ಧತ್ತೇ ಗಜಾರ್ತಿಂ ಪರಇತಿಪಾಠಾಂತರೆ ಗಜಾರ್ತಿಂ ಗಜಚರ್ಮಧತ್ತೇ ಪರಿಧಾನೀ ಕರೋತೀತಿ ಅಥವಾ ಗಜ ನಾಮ್ನೋಽಸುರಸ್ಯ ಆರ್ತಿಂ ಪೀಡಾಂ ಧತ್ತೇ ಕರೋತೀತಿ ವ್ಯಾಖ್ಯೇಯಂ ॥

ಎಂಟು ಮೂರ್ತಿಗಳುಳ್ಳವನಾಗಿರುತ್ತಾನೆ. ಒಬ್ಬನು ಅಂದರೆ ವರದರಾಜ ಸ್ವಾಮಿಯು ಗಜಾರ್ತಿ ( ಅಂದರೆ ನಕ್ರನಿಂದ ಗಜೇಂದ್ರನಿಗುಂಟಾದ ಉಪದ್ರವ ) ಯನ್ನು ದೂರಪಡಿಸಿದವನಾಗಿರುತ್ತಾನೆ. ಮತ್ತೊಬ್ಬನು ಅಂದರೆ ಏಕಾಮ್ರೇಶ್ವರನು ಅಗಜಾರ್ತಿ ( ಅಂದರೆ ಗಜಾರ್ತಿಯಲ್ಲದ ಆರ್ತಿ ಅಂದರೆ ಅಗಜಾ ಅಂದರೆ ಹಿಮಾಚಲನ ಕುಮಾರ್ತಿಯಾದ ಪಾರ್ವತಿಯ ಆರ್ತಿ ಅಂದರೆ ಕಂತುವಿನ ಬಾಧೆ ) ಯನ್ನು ಹೋಗಲಾಡಿಸಿದವನಾಗಿರುತ್ತಾನೆ.

ಮೂ । ಯದ್ವಾ । ಶ್ಲೋ । ಕಾಂಚೀನಾಮ್ನಿಪುರೇಸುರೇಶಮಹಿತೇ
ಪ್ರಾಕ್ಪಶ್ಚಿಮೋದ್ದೇಶಯೋಶ್ಚಿತ್ರಂದೈವತಯೋಶ್ಚಿರನ್ನಿವಸತೋ
ರೀತಿರ್ವಿರುದ್ಧಾಮಿಥಃ । ಏಕೋಯದ್ದ್ವಿಜರಾಜಮಪ್ಯಧರಯ
ತ್ಯನ್ಯಸ್ತಮುತ್ತಂಸಯತ್ಯಂಘ್ರೌಹಂತಬಿಭರ್ತಿಕಶ್ಚಿದಪರಃಸ್ವೇ
ಮೂರ್ಧನಿಸ್ಪರ್ಧಿನೀಂ ॥೪೮೦॥

ಟೀಕಾ ॥ ಕಾಂಚೇತಿ ॥ ಸುರೇಶೇನ ಮಹಿತೇ ಪೂಜಿತೇ– ಕಾಂಚೀನಾಮ್ನಿಪುರೇ– ಪ್ರಾಗುದ್ದೇಶೇ ಪಶ್ಚಿಮೋದ್ದೇಶೇಚದ್ವಯೋಶ್ಚಿರಂ ನಿವಸತೋಃ ದೈವತಯೋರ್ವರದರಾಜೈಕಾಮ್ರೇಶಯೋಃ ರೀತಿಶ್ಚರಿತ್ರಂ–ಮಿಥಃ ಅನ್ಯೋನ್ಯಂ–ವಿರುದ್ಧಾ–ಯದ್ಯಸ್ಮಾದೇಕಃ ವರದರಾಜಃ ದ್ವಿಜಾನಾಂ ಬ್ರಾಹ್ಮಣಾನಾಂ ಪಕ್ಷಿಣಾಂಚ ರಾಜಾ– ತಂಚಂದ್ರಂ ಗರುಡಂಚ–ಅಧರಯತಿ ತಿರಸ್ಕುರುತೇ–ವಾಹನತ್ವೇನಾಧಃ ಕುರುತೇ–ಅನ್ಯಃ ಏಕಾಮ್ರೇಶಃ–ತಂದ್ವಿಜರಾಜಂ–ಉತ್ತಂಸಯತಿ ಪೂಜಯತಿ ಚೂಡಾಮಣೀ ಕರೋತೀಚ–ಕಶ್ಚಿತ್ಸ್ವೇ ಅಂಘ್ರೌ– ಸ್ಪರ್ಧಿನೀಂ ಗಂಗಾಂ ಬಿಭರ್ತಿ–ಅಪರಃ–ಮೂರ್ಧನಿಸ್ಪರ್ಧಿನೀಂ ಬಿಭರ್ತಿ ಹಂತ್ರೇತಿ ಖೇದೇ ॥

ಅರ್ಥ ॥ ಅಥವಾ ಇಂದ್ರನಿಂದ ಪೂಜಿಸಲ್ಪಟ್ಟ ಈ ಕಾಂಚಿ ನಗರದಲ್ಲಿ ಮೂಡಣ ಮತ್ತು ಪಡುವಣ ದಿಕ್ಕುಗಳಲ್ಲಿ ಬಹಳ ಕಾಲದಿಂದ ನೆಲೆಗೊಂಡಿರುವ ಇಬ್ಬರು ದೇವರ ನಡತೆಯು ಪರಸ್ಪರ ಸರಿಬೀಳುವದಿಲ್ಲವು. ಹ್ಯಾಗೆಂದರೆ ಒಬ್ಬನು ದ್ವಿಜರಾಜ ( ಗರುಡ ) ನನ್ನು ಕೆಳಕ್ಕೆ ಇರಿಸಿಕೊಂಡಿದ್ದಾನೆ. ಮತ್ತೊಬ್ಬನು ದ್ವಿಜರಾಜ ( ಚಂದ್ರ ) ನನ್ನು ತಲೆಯ ಮೇಲಿಟ್ಟುಕೊಂಡಿದ್ದಾನೆ. ಗಂಗೆಯನ್ನು ಒಬ್ಬನು ಅಡಿಯಲ್ಲಿಟ್ಟುಕೊಂಡಿದ್ದಾನೆ. ಮತ್ತೊಬ್ಬನು ನೆತ್ತಿಯ ಮೇಲೆ ಹೊತ್ತುಕೊಂಡಿದ್ದಾನೆ. ಅಯ್ಯೋ ಇದೇನು ವಿಚಿತ್ರವು!

ಮೂ । ವಿರುದ್ಧದೇವಾಕ್ರಾಂತಕಾಂಚೀನಗರಸಮಾಗಮಾದ್ವಾರಣ
ಧರಾಧರೋಽಪ್ಯೇವಂ ॥ ೪೮೧ ॥

ಟೀಕಾ ॥ ವಿರುದ್ಧೇತಿ ॥ ಸಮಾಗಮಸ್ಸಂಬಂಧಃ–ವಾರಣ ಧರಾಧರಃ ಹಸ್ತಿಶೈಲೋಽಪಿ–ಏವಂ ವಿರುದ್ಧ ಇತ್ಯರ್ಥಃ ॥

ಅರ್ಥ ॥ ಎದುರಾಳಿಗಳಾದ ದೇವರಿಂದ ಆಕ್ರಮಿಸಲ್ಪಟ್ಟಿರುವ ಈ ಕಾಂಚಿ ನಗರದ ಸಂಗತಿಯಿಂದ ವಾರಣಧರಾಧರ ಅಂದರೆ ಹಸ್ತಿ ಬೆಟ್ಟ ಕೂಡ ಎದುರಿಸುವಂಥಾವನಾದನು.

ಶ್ಲೋ । ಭೇತ್ತಾಗೋಪ್ತಾಚಹರಿರ್ಮಹಾಸವಜುಷೋಹಿರಣ್ಯಗರ್ಭಸ್ಯ । ಭಯಕೃದಿಭಸ್ಯಾಭಯಕೃನ್ಮೂಲಾಂಚಲಯೋಶ್ಚಕಾಸ್ತಿಹಸ್ತಿಗಿರೇಃ ॥ ೪೮೨ ॥

ಟೀಕಾ ॥ ಭೇತ್ತೇತಿ ॥ ಮಹಾಂತಂ ಆಸವಂ ಮದ್ಯಂ ಸವಮಶ್ವಮೇಧಂಚ ಜುಷತ ಇತಿತಜ್ಜುಷಃ–ಹಿರಣ್ಯಂ ಚಾಸೌಗರ್ಭಃ ಅನ್ನಂ ಹಿರಣ್ಯ ಕಶಿಪುಃ–ಹಿರಣ್ಯಗರ್ಭಃ ಬ್ರಹ್ಮಾ ಚತಸ್ಯ–ಭೇತ್ತಾಗೋಪ್ತಾ ನಾಶಕೋರಕ್ಷಕಶ್ಚ– ಇಭಸ್ಯ ಗಜಸ್ಯ ಭಯಕೃದ ಭಯಕೃಚ್ಚ– ಹರಿರ್ವಿಷ್ಣುಃ ನರಸಿಂಹಶ್ಚ ಹಸ್ತಿಗಿರೇರ್ಮೂಲೇ ಅಂಚಲೆ ಶಿಖರೇ ಚದ್ವಯೋಃ ಚಕಾಸ್ತಿ ಪ್ರಕಾಶತೇ ॥

ಅರ್ಥ ॥ ಮಹಾಸವಜುಷೊ ಹಿರಣ್ಯಗರ್ಭಸ್ಯ ಭೇತ್ತಾ ಅಂದರೆ ಅಮಲುಳ್ಳ ಸಾರಾಯಿಯನ್ನು ಕುಡಿಯುವ ಹಿರಣ್ಯಕಶಿಪುವನ್ನು ಕೊಂದಂಥಾವನಾದ ಭಯಕೃದಿಭಸ್ಯ ಅಂದರೆ ಆನೆಗಳಿಗೆ ದಿಗಲುಪಡಿಸುವಂಥಾವನಾದ ನರಶಿಂಹನು ಮತ್ತು ಮಹಾಸವಜುಷೊ ಹಿರಣ್ಯಗರ್ಭಸ್ಯ ಗೋಪ್ತಾ ಅಂದರೆ ದೊಡ್ಡ ಯಜ್ಞಮಾಡಿದ ಬ್ರಹ್ಮನನ್ನು ಕಾಪಾಡಿಸಿದಂಥಾವನಾದ ಇಭಸ್ಯ ಅಯಕೃತ್ ಅಂದರೆ ಗಜೇಂದ್ರನಿಗೆ ಅಭಯಪಾಲಿಸಿದಂಥಾವನಾದ ವಿಷ್ಣುವು ಈ ಹಸ್ತಿಗಿರಿಯ ಬುಡದಲ್ಲಿ ಮತ್ತು ಅಂಚಿನಲ್ಲಿ ಎಸೆಯುತ್ತಾನೆ.

ಅನ್ಯಚ್ಚ । ಅಯಂಚಾಪರೋದೋಷಃ । ಶ್ಲೋ । ದರಾನುಷಂಗಂಚಗದಾನ್ವಯಂಚತ್ಯಕ್ತುಂಜನಾಯೇನಿವಸಂತಿಕಾಂಚ್ಯಾಂ।ದಂತಾವಲಾದ್ರೀಶ್ವರಮಾಶ್ರಿತಾಸ್ತೇದೇಹಕ್ಷಯೆತೌನಿಯತಂ ಭಜಂತೇ ॥ ೪೮೩ ॥

ಟೀಕಾ ॥ ದರೇತಿ ॥ ಯೇಜನಾಃ–ದರಸ್ಯ ಭಯಸ್ಯಾನುಷಂಗಂ ಸಂಪರ್ಕಂ– ಗದಸ್ಯ ರೋಗಸ್ಯ ಅನ್ವಯಂ ಸಂಪರ್ಕಂಚ–ದ್ವಯಂತ್ಯಕ್ತುಂ ಕಾಂಚ್ಯಾಂ–ನಿವಸಂತಿ ತೇಜನಾಃ– ದಂತಾವಲಾದ್ರೀಶ್ವರಂ ವರದರಾಜ ಮಾಶ್ರಿತಾಸ್ಸಂತಃ ದೇಹಸ್ಯ ಕ್ಷಯೇ ಅಂತೆ ತೌದರಾನುಷಂಗ ಗದಾನ್ವಯೌ ವಿಷ್ಣು ಸಾರೂಪ್ಯಾತ್ಪಾಂಚ ಜನ್ಯ ಕೌಮೊದಕಿ ನಾಮಕ ಶಂಖಗದಾಯೋಗೌಚ–ನಿಯತಂ ಭಜಂತೇ ॥

ಅರ್ಥ ॥ ಮತ್ತು ಬೇರೆ ಇದೊಂದು ದೋಷವು. ದರಾನುಷಂಗ ( ಅಂದರೆ ಭಯ ತೆಗಲುವಿಕೆ ) ಮತ್ತು ಗದಾನ್ವಯ ( ಅಂದರೆ ರೋಗದಂಟುವಿಕೆ ) ಇವುಗಳನ್ನು ಹೋಗಲಾಡಿಸಿ ಕೊಳ್ಳುವದಕ್ಕಾಗಿ ಕಾಂಚಿಯಲ್ಲಿ ವಾಸಮಾಡುವವರು ವರದರಾಜಸ್ವಾಮಿಯ ಆಶ್ರಯದಿಂದ ದೇಹಾವಸಾನ ಹೊಂದಿದ ಬಳಿಕ ಅವುಗಳೆರಡನ್ನು ಪಡೆಯುತ್ತಾರೆ. ನಿಶ್ಚಯವಾಗಿ ಅಂದರೆ ವಿಷ್ಣು ಸಾರೂಪ್ಯವನ್ನು ಹೋಂದಿ ದರಾನುಷಂಗ ಮತ್ತು ಗದಾನ್ವಯ ಅಂದರೆ ಪಾಂಚಜನ್ಯ ಮತ್ತು ಕೌಮೋದಕಿ ಇವುಗಳ ಸಂಬಂಧವನ್ನು ಪಡೆಯುತ್ತಾರೆಂಬ ಭಾವವು.

ವಿಶ್ವಾವಸುಃ ॥

ಮೂ । ಸಖಿಮೈವಂಸಂಭಾಷಿಷ್ಠಾಃಯತಏಕರೂಪದೈವತಮಿದಂನಗರಮಿತಿಸಮರ್ಥ್ಯತೇ ॥ ೪೮೪ ॥

ಟೀಕಾ ॥ ಸಖಇತಿ ॥ ಇದಂ ನಗರಂ ಕಾಂಚೀ । ಏಕರೂಪೇ ಅವಿರುದ್ಧ ಧರ್ಮೇ ದೈವತೆಯಸ್ಮಿನ್ ತ ಥೋಕ್ತಮಿತಿ ಸಮರ್ಥ್ಯತೇ ಸಾಧ್ಯತೇ ॥

ಅರ್ಥ ॥ ಗೆಳೆಯನೇ ಹಾಗನ್ನ ಬೇಡ, ಯಾಕಂದರೆ ಇದು ಎದುರಾಳಿಗಳಲ್ಲದ ದೇವರು ಗಳ ಪಟ್ಟಣವೆಂದು ಹೇಳೋಣಾಗುತ್ತದೆ.

ಮೂ । ಶೃಣುತಾವತ್ । ಶ್ಲೋ । ಫಣಿಪತಿಸರಸ್ಸ್ಫುರಂತೀಭನಾಯ
ಕಧರೋತ್ತಮಾಂಗಶೋಭಿತನುಃ । ಭವ *ಹರಸಂಜ್ಞಾ ಕಾಂ
ಚ್ಯೋಃಪೂರ್ವಾಪರಯೋರ್ದೇವತಾಜಯತಿ ॥ ೪೮೫ ॥

ಟೀಕಾ ॥ ಫಣೀತಿ ॥ ಫಣಿಪತಿ ಸರಸಿ ಅನಂತಸರಸಿ–ಫಣಿಪತಿ ಸರ್ಪೈಸ್ಸರ್ಪರಾಜಹಾರೈಃ–ಸ್ಫುರಂತೀ–ಭ ನಾಯಕಂ ನಕ್ಷತ್ರೇಶಂ ಧರತೀತಿತದ್ಧರೇಣ ಉತ್ತಮಾಂಗೇನ ಶಿರಸಾ–ಇಭನಾಯಕ ಧರಸ್ಯ ಹಸ್ತಿಶೈಲಸ್ಯ ಉತ್ತಮಾಂಗೇ ಶಿರಸಿ ಶಿಖರೇಚ–ಶೋಭತ ಇತಿಶೋಭಿನೀ ತನುರ್ಯಸ್ಯಾ ಸ್ಸಾಭವಃ ಹರಶ್ಚೇತಿ ಸಂಜ್ಞಾ ನಾಮಪದೇ ಭವಂ ಸಂಸಾರ ಬಂಧಂ– ಹರಂತೀತಿ ತದ್ಧರಾಃ ಸಂಜ್ಞಾಃ ವರದರಾಮ ಕೃಷ್ಣೇತ್ಯಾದಿ ನಾಮ ಪದಾನಿಚಯ ಸ್ಯಾಸ್ಸಾ–ದೇವತಾ–ಪೂರ್ವಸ್ಯಾಂ ವೈಷ್ಣವ್ಯಾಂ ಅಪರಸ್ಯಾಂ ಶೈವ್ಯಾಂಚ ದ್ವಯೋಃ ಕಾಂ ಚ್ಯೋಃ ಹಿಯಸ್ಮಾತ್ ಜಯತಿ ತಸ್ಮಾದೇಕ ರೂಪದೈವತ ಮಿತಿ ಸಂಬಂಧಃ ॥

ಅರ್ಥ ॥ ಕೇಳು ಅನಂತ ಸರೋವರದಲ್ಲಿ ಪ್ರಕಾಶಿಸುವಂಥಾ ಹಸ್ತಗಿರಿಯ ಶಿಖರದ ಮೇಲೆ ಎಸೆಯುವ ಶರೀರ ಉಳ್ಳಂಥಾ ಪ್ರಪಂಚ ದುಃಖ ಪರಿಹರಿಸುವ ಹೆಸರುಗಳುಳ್ಳಂಥಾ ದೇವತೆಯು ( ವರದರಾಜ ದೇವರು ) ಮೂಡಲ ಭಾಗದಲ್ಲಿ, ಮತ್ತು ಸರ್ಪಗಳ ಹಾರಗ ಳಾಗಿ ಹೊಳೆಯುವಂಥ, ನಕ್ಷತ್ರ ರಾಜನಾದ ಚಂದ್ರನಿಂದ ಅಲಂಕೃತವಾದ ಶಿರಸ್ಸು ಉಳ್ಳ ದೇಹ ಇರುವಂಥ ಭವ ಹರ ಎಂಬ ಹೆಸರುಗಳುಳ್ಳಂಥ ದೇವತೆಯು ( ಏಕಾ ಮ್ರೇಶ್ವರ ದೇವರು ) ಪಡುವಣ ಭಾಗದಲ್ಲಿ ಈ ಪ್ರಕಾರವಾಗಿ ಉಭಯತರು ಕಾಂಚಿನಗರದಲ್ಲಿ ಉ ತ್ಕರ್ಷ ಪಡುತ್ತಾರೆ.

ಮೂ । ಅನ್ಯಚ್ಚಾಸ್ಯನಗರಸ್ಯಭೂಷಣಮೇವನತುದೂಷಣಮಿತ್ಯ
ನ್ಯತ್ರದೃಷ್ಟಿಮಾದಾಯಸಾನಂದಂ ॥ ೪೮೬ ॥

ಟೀಕಾ ॥ ಅನ್ಯದಿತಿ ॥ ಅನ್ಯತ್ ನಿರಸ್ತ ದೂಷಣೇಭ್ಯಃ ಇತರತ್ ಚಕಾರೋಪ್ಯರ್ಥಃ ॥

ಅರ್ಥ ॥ ಇದಲ್ಲದೆ ಮತ್ತು ನೀನು ಹೇಳಿದ್ದೆಲ್ಲ ಈ ನಗರಕ್ಕೆ ಶೋಭೆಯುಂಟು ಪಡಿಸು ವದೇ ಹೊರತು ಹೀನತೆಯುಂಟು ಪಡಿಸುವಂಥಾದ್ದಲ್ಲವು, ಇಂತೆಂದು ಬೇರೆ ಕಡೆಗೆ ದೃಷ್ಟಿ ಕೊಟ್ಟು ಹರ್ಷಯುಕ್ತನಾಗಿ ವಿಶ್ವಾವಸು ಹೇಳುತ್ತಾನೆ.

ಮೂ। ಅಹೋಖಲುಮಮಾದ್ಯಪಚೇಲಿಮಂಭಾಗಧೇಯಂ॥೪೮೭॥

ಟೀಕಾ ॥ ಅಹೋಇತಿ ॥ ಪಚೇಲಿಮಂ ಪಕ್ವಂ ॥

ಅರ್ಥ ॥ ಐಯ್ಯಾ ನಿಶ್ಚಯವಾಗಿ ನನ್ನ ಪುಣ್ಯವು ಈಗ ಹಂಣಾಯಿತು.

---

* ಹರಿರಿತಿಪಾಠಾಂತರಂ ॥

ಶ್ಲೋ । ಸುರಯೌವತೋಪಗೀತಃಪ್ರಾತಃಪದ್ಮಾನನೋಮುನಿ ಧ್ಯಾತಃ । ವ್ಯಾಸಕೃತೌಯಃಖ್ಯಾತಃಪಾಂಡವದೂತಸ್ಸದೃಕ್ಪಥಂ ನೀತಃ ॥ ೪೮೮ ॥

ಟೀಕಾ ॥ ಸುರೇತಿ ॥ ಸುರಯೌವತೇನ ದೇವಾಂಗನಾ ಸಮೂಹೇನ ಉಪಗೀತಃ ಸ್ತುತಃ—ಅರ್ಜುನೇನ ಹತಮಹಾ ವೀರನೂತನಾನೇಕದೇವ ಪ್ರಿಯದಾಯಕತ್ವಾದಿತಿಭಾವಃ— ಪ್ರಾತಃ ಪದ್ಮಾನನಃ—ಮುನಿಭಿರ್ನಾರದಾದ್ಯೈಃ ಧ್ಯಾತಃ— ಯಃಪಾಂಡವದೂತಃ ಶ್ರೀಕೃಷ್ಣಃ— ವ್ಯಾಸಕೃತೌ ಭಾರತೇ—ಖ್ಯಾತಃ—ಸಪಾಂಡವದೂತಃ—ದೃಕ್ಪಥಂ ಲೋಚನ ವಿಷಯತ್ವಂ ॥

ಅರ್ಥ ॥ ದೇವಾಂಗನೆಯರ ಸಮೂಹದಿಂದ ಹೊಗಳಿಸಲ್ಪಟ್ಟಂಥಾವನಾದ, ಉದಯ ಕಾಲದ ತಾವರೆಯೋಪಾದಿಯಿರುವ ಮೊಗಉಳ್ಳಂಥಾವನಾದ, ಋಷಿಗಳಿಂದ ಚಿಂತಿಸಲ್ಪಡುವಂಥಾವನಾದ, ವ್ಯಾಸ ಋಷಿಯು ರಚಿಸಿದ ಭಾರತ ಕಥೆಯಲ್ಲಿ ಹೊಗಳಿಸಲ್ಪಟ್ಟಂಥಾವನಾದ, ಪಾಂಡವರ ಆಳಾದ ಶ್ರೀ ಕೃಷ್ಣನು ನನ್ನ ಕಣ್ಣಿಗೆ ಬೀಳುತ್ತಾನೆ.

ಕೃಶಾನುಃ ॥

ಮೂ । ಅನುಚಿತಕರ್ಮಾಸೌಕಿಮರ್ಥಮನುವರ್ಣ್ಯತೇ ॥ ೪೮೯ ॥

ಟೀಕಾ ॥ ಅನುಚಿತೇತಿ ॥ ಅಸೌಪಾಂಡವದೂತಃ—ಅನುವರ್ಣ್ಯತೇ ಸ್ತೂಯತೇ ॥

ಅರ್ಥ ॥ ಕೆಟ್ಟ ಕೆಲಸ ಮಾಡಿದವನಾದ ಇವನ ಬಣ್ಣಿಕೆ ಯಾಕೆ ಮಾಡುತ್ತಿ?

ಶ್ಲೋ । ಸಕಲಜಗತಾಮೀಶಾನೋಪಿಸ್ವಯಂವಿಗತಶ್ರಿಯಾಮಿದ ಮನುಚಿತಂದೂತೋಜಾತೋಯದೇಷಪೃಥಾಭುವಾಂ । ಕಿಮಿ ಹಮಹತಾಂಹೃದ್ಯಾಖದ್ಯೋತಪೋತನಿಕೇತನೇಚಿರಮಧಿಪತೇ ರ್ಭಾಸಾಂದಾಸಾನುದಾಸತಯಾಸ್ಥಿತಿಃ ॥ ೪೯೦ ॥

ಟೀಕಾ ॥ ಸಕಲೇತಿ ॥ ಏಷಪಾಂಡವದೂತಃ ಸ್ವಯಂ ಸಕಲ ಜಗತಾಂ ಈಶಾನಃ ಪ್ರಭುರಪಿಸನ್—ವಿಗತ ಶ್ರಿಯಾಂ ನಷ್ಟೈಶ್ವರ್ಯಾಣಾಂ—ಪೃಥಾಭುವಾಂ ಪಾಂಡವಾನಾಂ ದೂತಃ ಜಾತಃ ಅಭೂದಿತಿಯತ್—ತದಿದಮನುಚಿತಂ—ಭಾಸಾ ಮಧಿಪತೇಃ ಸೂರ್ಯಸ್ಯ— ಖದ್ಯೋತಃ ಜ್ಯೋತಿಃ ಕೀಟಃ—ತತ್ಪಾಪಿ ಪೋತಃ ಶಿಶುಸ್ತಸ್ಯ ನಿಕೇತನೇ ಗೃಹೇ—ದಾಸಾನಾಂ ಭೃತ್ಯಾನಾಂ ಯೋದಾಸಃ ತಸ್ಯ ಭಾವಸ್ತತ್ತಾ ತಯಾ ದಾಸಾನುದಾಸಸ್ಸನ್ನಿತಿ ಯಾವತ್— ಸ್ಥಿತಿಃ— ಇಹಲೋಕೇ ಮಹತಾಂ ಹೃದ್ಯಾಕಿಂ— ಅಹೃದ್ಯೈವೇತ್ಯರ್ಥಃ ॥

ಅರ್ಥ ॥ ಈ ಕೃಷ್ಣನು ಎಲ್ಲ ಲೋಕಗಳೊಡೆಯನಾದಾಗ್ಯೂ ದೆಶೆಗೇಡಿಗಳಾದ ಪಾಂಡವರ ಆಳಾದನು. ಇದು ಸರಿಯೇ? ಮಿಣುಕು ಬೂಚಿಯ ಮರಿಯ ಮನೆಯಲ್ಲಿ ಸಕಲ ಕಾಂತಿಗಳಿಗೆ ಅರಸಾದ ಸೂರ್ಯನು ಆಳಿನಾಳಾಗಿರುವದು ಶ್ರೇಷ್ಠರ ಮನಸ್ಸಿಗೆ ಬಂದೀತೇ? ಬರಲಿಕ್ಕಿಲ್ಲೆಂಬ ಭಾವವು.

ವಿಶ್ವಾವಸುಃ ॥

ಮೂ । ಪುರೋಭಾಗೀಭಗವದ್ಗುಣೇಷುದೋಷಮನೀಷಯಾಭ ವಾನೇವದೂಷ್ಯತಿ । ಶ್ರೂಯತಾಮೇತತ್ ॥ ೪೯೧ ॥

ಅರ್ಥ ॥ ಎಲಾ ಪರರ ಕೊರತೆಗಳನ್ನೇ ನೋಡುವ ಕೃಶಾನುವೇ ಭಗವಂತನ ಗುಣಗಳಲ್ಲಿ ಕುಂದಿಡ ಬೇಕೆಂಬ ಇಚ್ಛೆಯಿಂದ ನೀನು ಜರಿಯುತ್ತಿ. ಕೇಳಿದನ್ನು:

ಶ್ಲೋ । ಕವಿತ್ವಸ್ಯಗಾಂಭೀರ್ಯಮೌದಾರ್ಯಮೃದ್ಧೇಃಪ್ರಭು
ತ್ವಸ್ಯಶೌರ್ಯಂಗುರುತ್ವಸ್ಯವಿದ್ಯಾಂ । ಮಹಾವಂಶ್ಯತಾಯಾಸ್ಸದಾ
ಚಾರಪೂರ್ತಿಂಮಹತ್ತ್ವಸ್ಯಸೌಲಭ್ಯಮಾಕಲ್ಪಮಾಹುಃ॥ ೪೯೨ ॥

ಟೀಕಾ ॥ ಕವಿತ್ವಸ್ಯೇತಿ ॥ ಕವಿತ್ವಸ್ಯ ಕಾವ್ಯರಚನಾಯಾಃ—ಗಾಂಭೀರ್ಯಂ—ಗುಣಾಲಂಕಾರ ವೈಶಿಷ್ಟ್ಯೇನವ್ಯಂಗ್ಯವ್ಯಂಜಕತ್ವಂ— ಆಕಲ್ಪಂ ಭೂಷಣಂ— ಆಹುರಿತಿಪದದ್ವಯಂ ಸರ್ವತ್ರಯೋಜ್ಯಂ— ಋದ್ಧೇಸ್ಸಂಪದಃ— ಔದಾರ್ಯಂ ದಾತೃತ್ವಂ ಪ್ರಭುತ್ವಸ್ಯ— ಶೌರ್ಯಂ—ಗುರುತ್ವಸ್ಯ ವಿದ್ಯಾಂ ಮಹಾವಂಶ್ಯತಾಯಾಃ ಸತ್ಕುಲೋತ್ಪತ್ತೇಃ— ಸದಾಚಾರೇಣ ಪೂರ್ತಿಂ ಪೂರ್ಣತಾಂ— ಮಹತ್ವಸ್ಯ ಸರ್ವೋನ್ನತ್ಯಸ್ಯ—ಸೌಲಭ್ಯಂ ಸುಲಭತ್ವಂ— ಆಶ್ರಿತ ವಿಧೇಯತ್ವ ಮಿತಿಯಾವತ್ ॥

ಅರ್ಥ ॥ ಕಾವ್ಯಕ್ಕೆ ಭಾವರಸಮೊದಲಾದ ಲಕ್ಷಣಗಳ ಆಳವೇ ಭೂಷಣವಂತೆ. ಸಂಪತ್ತಿಗೆ ದಾತೃತ್ವವೇ ಭೂಷಣವಂತೆ. ಅರಸುತನಕ್ಕೆ ಕಲಿತನವೇ ಭೂಷಣವಂತೆ. ಬೋಧಕನಿಗೆ ಕಲಿಪೆಯೇ ಭೂಷಣವಂತೆ. ಕುಲೀನತೆಗೆ ಸಲ್ಲುವ ನಡತೆಯೇ ಭೂಷಣವಂತೆ. ದೊಡ್ಡಸ್ಥಿಕೆಗೆ ಸಲಿಗೆಯೇ ಭೂಷಣವಂತೆ.

ಮೂ । ಇತ್ಯೇಕತ್ರವಿಮಾನಮಾನಯನ್ಸಾನಂದಂ ॥ ೪೯೩ ॥

ಅರ್ಥ ॥ ಬೇರೆ ಕಡೆಗೆ ವಿಮಾನವನ್ನು ನಡಿಸಿ ತುಂಬ ಸಂತೋಷದಿಂದ ( ವಿಶ್ವಾವಸು ಹೇಳುತ್ತಾನೆ. )

ಮೂ । ಅತ್ರಹಿ । ಶ್ಲೋ । ವಿಕಚರುಚಿರಪುಂಡರೀಕಷಂಡದ್ಯುತಿ
ಮದಮೋಚನಲೋಚನಪ್ರಭಾವಃ । ಜಯತಿವಿಜಯರಾಘವಸ್ಸ
ವಿಭುಃಶುಚಿತರಗೃಧ್ರಸರೋವರೋಪಕಂಠೇ ॥ ೪೯೪ ॥

ಟೀಕಾ ॥ ವಿಕಚೇತಿ ॥ ವಿಕಚಸ್ಯ ವಿಕಸಿತಸ್ಯ ರುಚಿರಸ್ಯಚಪುಂಡರೀಕ ಷಂಡಸ್ಯ ಶ್ವೇತ ಪದ್ಮರಾಶೇಃ ಯೋದ್ಯುತಿಮದಃ ತಂ ಮೋಚಯತಿನಾಶಯತೀತಿ ಮೋಚನಃ ಲೋಚನಯೋಃ ಪ್ರಭಾವಃ ಮಾಹಾತ್ಮ್ಯಂ ಯಸ್ಯ—ಸವಿಷಭುವನಪ್ರಸಿದ್ಧಃ—ವಿಜಯರಾಘವಃ—ಶುಚಿತರೇ ಪರಮಪವಿತ್ರೇ ಗೃಧ್ರಸರೋವರಸ್ಯ ಉಪಕಂಠೇತೀರೇಜಯತಿ ॥

ಅರ್ಥ ॥ ಇಗೋ ನೋಡಿಲ್ಲಿ, ಅರಳ್ದ ಮತ್ತು ಸುಂದರವಾದ ಬಿಳಿದಾವರೆಗಳ ಗುಂಪಿನ ಕಾಂತಿಯ ಸೊಕ್ಕನ್ನು ಮುರಿಯುವಂಥ ತೇಜಯುಕ್ತವಾದ ಕಣ್ಣುಗಳುಳ್ಳಂಥಾವನಾದ ಈ ವಿಜಯರಾಘವ ದೇವರು ಅತ್ಯಂತ ಶುದ್ಧವಾದ ಗೃಧ್ರಕೊಳದ ದಂಡೆಯಲ್ಲಿ ಉತ್ಕರ್ಷಬಡುತ್ತಾನೆ.

ಮೂ । ಕಿಂಚ । ಶ್ಲೋ । ಸಂಪಾತಿಸೋದರಸರಸ್ತಟಸಂಪ್ರರೂ
ಢೋಭಾತ್ಯದ್ಭುತೋವಿಜಯರಾಘವಪಾರಿಜಾತಃ । ಶಾಖಾತತೇರು

ಪರಿಸದ್ಭಿರುದೀಕ್ಷ್ಯತೇಯೋಯಸ್ಯಾಧಪವಸಕಲಸ್ಸುಮನಃಪ್ರ
ಪಂಚಃ ॥ ೪೫ ॥

ಟೀಕಾ ॥ ಸಂಪಾತೀತಿ ॥ ಸಂಪಾತಿಸೋದರಸ್ಯ ಜಟಾಯುಷಃ ಸಂಬಂಧಿಯತ್ಸರಃ ಗೃಧ್ರತೀರ್ಥಂ ತಸ್ಯ ತಟೇಸಂಪ್ರರೂಢಃ ಅದ್ಭುತಃ–ವಿಜಯರಾಘವಃ ಭಗವಾನೇವಪಾರಿಜಾತಃ ದೇವವೃಕ್ಷಃ–ಭಾತಿ–ಲೋಕೇ ವೃಕ್ಷಸ್ಯ ಉಪರಿಶಾಖಾಃ ತದುಪರಿಪುಷ್ಪಾಣಿ–ತದ್ವಿಪರ್ಯ ಯೋಽತ್ರೇತ್ಯದ್ಭುತತ್ವಂ ಪ್ರಪಂಚಯತಿ–ಯಃ ವಿಜಯರಾಘವ ಪಾರಿಜಾತಃ–ಸದ್ಭಿರ್ಯೋಗಿಭಿಃ–ಶಾಖಾನಾಂ ಶಿಖಾನಾಂ ವೇದಶಾಖಾನಾಂ ಆಶ್ವಲಾಯನಾಪಸ್ತಂಬೀ ಯಾದೀನಾಂತತೇರುಪರಿ ಊರ್ಧ್ವದೇಶೇ–ಉಪನಿಷತ್ಸುಚ ಉದೀಕ್ಷ್ಯತೇ–ಯಸ್ಯ ಅಧಏವ ಭಾಗೇ ಸಕಲಸ್ಸಂಪೂರ್ಣಸ್ಸಮಸ್ತಃ ಸುಮನಸಾಂಪುಷ್ಪಾಣಾಂ ದೇವಾನಾಂಚ–ಪ್ರಪಂಚಸ್ಸಮೂಹ ಉದೀಕ್ಷ್ಯತೇ–ಸರ್ವೇಽಪಿದೇವಾಸ್ತ ದಧೋಭಾಗ ಏವವರ್ತಂತ ಇತ್ಯರ್ಥಃ ॥

ಅರ್ಥ ॥ ಮತ್ತು ಸಂಪಾತಿಯ ಅಣ್ಣ ಜಟಾಯುಗೆ ಸಂಬಂಧ ಉಳ್ಳ ಈ ಗೃಧ್ರಕೊಳದ ದರೆಯಲ್ಲಿ ಬೆಳದ, ಚಮತ್ಕಾರವಾದ ಈ ವಿಜಯರಾಘವ ಎಂಬ ಪಾರಿಜಾತ ವೃಕ್ಷವು ಎಸೆಯುತ್ತದೆ. ಯೋಗಿಗಳು ಅದರ ಕೊಂಬೆಗಳಮೇಲೆ ವೀರರಾಘವ ದೇವರನ್ನೂ ಮತ್ತು ಬುಡದಲ್ಲಿ ಹೂಗಳನ್ನೂ ಅಂದರೆ ಸಕಲ ದೇವರುಗಳನ್ನೂ ಅಥವಾ ಸಕಲ ಪ್ರಪಂಚವನ್ನೂ ನೋಡುತ್ತಾರೆ. ಅಂದರೆ, ಆ ವೃಕ್ಷದ ಕೊಂಬೆಗಳಾದ ವೇದಗಳ ಮತ್ತು ಉಪನಿಷತ್ತುಗಳ ದ್ವಾರಾ ಸಾಧು ಜನರು ವೀರರಾಘವ ದೇವರನ್ನು ಕಂಡುಕೊಳ್ಳುತ್ತಾರೆ. ಮಿಕ್ಕಾದ ದೇವರುಗಳೆಲ್ಲ ವೃಕ್ಷದ ಬುಡದಲ್ಲಿ ಅಂದರೆ ವೀರರಾಘವ ಸ್ವಾಮಿಗೆ ಕೆಳಗಾಗಿರುತ್ತಾರೆ ಎಂಬ ತಾತ್ಪರ್ಯವು.

ಮೂ॥ ಪುನಸ್ಸಭಕ್ತಿಪ್ರಕರ್ಷಂಜನಾನುದ್ದಿಶ್ಯ। ಭೋಭೋಭುಕ್ತಿ
ಮುಕ್ತಿಪ್ರೇಪ್ಸವಇದಂಶೃಣ್ವಂತುಭವಂತಃ ॥ ೪೬ ॥

ಅರ್ಥ ॥ ಮತ್ತು ಭಕ್ತಿಯಿಂದ ಉಬ್ಬಿ, ಜನರನ್ನು ಕುರಿತು (ವಿಶ್ವಾವಸು ಹೇಳುತ್ತಾನೆ.)—ಮೋಕ್ಷ ಬಯಸುವ ಜನರುಗಳಿರಾ ಇದನ್ನು ಕೇಳಿರಿ.

ಶ್ಲೋ। ವಿಶ್ರುತಾಶ್ರಿತವಾತ್ಸಲ್ಯಂವೀರಂವಿಜಯರಾಘವಂ। ನಮ
ಸ್ಕುರುತಯೋಗೃಧ್ರಂಸಮಸ್ಕುರುತದಾಹತಃ ॥ ೪೭ ॥

ಟೀಕಾ ॥ ವಿಶ್ರುತೇತಿ ॥ ಯೋವಿಜಯರಾಘವಃ–ಗೃಧ್ರಂ ಜಟಾಯುಷಂ–ದಾಹತಃ ಸಮಸ್ಕುರುತ ದಾಹ ಸಂಸ್ಕಾರಂ ಚಕ್ರ ಇತ್ಯರ್ಥಃ–ವಿಶ್ರುತಂ ಪ್ರಸಿದ್ಧಂ ಆಶ್ರಿತೇಷು ವಾತ್ಸಲ್ಯಂ ಪ್ರೇಮಯಸ್ಯತಂ–ವೀರಂ–ವಿಜಯರಾಘವಂ ಭಗವಂತಂ–ನಮಸ್ಕುರುತ–ಯೂಯಂ ನಮಸ್ಕುರುಧ್ವಂ ॥

ಅರ್ಥ ॥ ಶರಣಾಗತರಲ್ಲಿ ಅಕ್ಕರತೆಯುಳ್ಳವನೆಂದು ಹೆಸರು ಹೊಂದಂಥಾತನಾದ ಜಟಾಯು ಪಕ್ಷಿಗೆ ಅಗ್ನಿ ಸಂಸ್ಕಾರ ಕೊಟ್ಟಂಥಾತನಾದ ಮತ್ತು ಶೂರನಾದ ಈ ವಿಜಯರಾಘವ ದೇವರ ಅಡಿಗೆ ಕೈ ಮುಗಿಯಿರಿ.

ಮೂ । *ಅತ್ರ ಗೃಧ್ರಸರಸ್ತೀರೇ ವಿಶ್ವಪ್ರಸಿದ್ಧಾ ಕಾಚಿದ್ವೈಚಿತ್ರೀ ॥ ೪೯೮ ॥

ಟೀಕಾ ॥ ಅತ್ರೇತಿ ॥ ವೈಚಿತ್ರೀ ಆಶ್ಚರ್ಯಂ ॥

ಅರ್ಥ ॥ ಇಲ್ಲಿ ಗೃಧ್ರಕೊಳದ ದಂಡೆಯಲ್ಲಿ ಇಡೀ ಲೋಕದಲ್ಲಿ ಪ್ರಸಿದ್ಧವಾದದ್ದೊಂದು ಆಶ್ಚರ್ಯವಿದೆ.

ಶ್ಲೋ । ತನಯಾರ್ಥನಯಾ ಸಮಾಗತಾಭಿಸ್ತರುಣೀಭಿಃ ಪರಿಭರ್ಜಿತಾಶ್ಚ ಮುದ್ಗಾಃ । ದೃಢಮಂಕುರಮತ್ರ ದೇವಶಕ್ತ್ಯಾ ಸಮಮಾಸಾಂ ಪುಲಕಾಂಕುರೈಃ ಫಲಂತಿ ॥ ೪೯೯ ॥

ಟೀಕಾ ॥ ತನಯೇತಿ ॥ ಅತ್ರ ವೀರರಾಘವಕ್ಷೇತ್ರೇ—ತನಯಾನಾಂ— ಅರ್ಥನಯಾ ಪ್ರಾರ್ಥನಯಾ— ಸಮಾಗತಾಭಿಃ ತರುಣೀಭಿರ್ವಂಧ್ಯಾಭಿಃ—ಪರಿಭರ್ಜಿತಾಃ †ಪಕ್ವಾಃ ಮುದ್ಗಾಃ— ದೇವಸ್ಯ ವಿಜಯರಾಘವಸ್ಯ ಶಕ್ತ್ಯಾ ಪ್ರಭಾವೇನ— ಅಂಕುರಂ— ಆಸಾಂ ಪುಲಕಾಂಕುರೈಸ್ಸಮಂ ದೃಢಂ— ಫಲಂತಿ ಜನಯಂತಿ ॥

ಅರ್ಥ ॥ ಮಕ್ಕಳಾಗಬೇಕೆಂತ ಹರಿಕೆ ಮಾಡಿ ಇಲ್ಲಿಗೆ ಬರುವ ಎಳೆ ಹೆಣ್ಗಳು ಹುರಿದ ಹೆಸರುಕಾಳುಗಳು ಆ ಹೆಣ್ಗಳ ಮೈಗಳ ರೋಮಾಂಚದಂತೆ ವೀರರಾಘವ ದೇವರ ಸಾಮರ್ಥ್ಯದಿಂದ ಚಿಗುರಿ ಕಾಯುತ್ತವೆ.

ಕೃಶಾನುಃ ॥

ಮೂ । ನಿಜರೂಪಮಹಿಮಾನನುರೂಪಸ್ಥಿತಿರಸೌ ವಿಜಯರಾಘವಃ ಕಿಮೀಡ್ಯತೇ ॥ ೫೦೦ ॥

ಟೀಕಾ ॥ ನಿಜೇತಿ ॥ ನಿಜಸ್ಯ ಸ್ವೀಯಸ್ಯ ರೂಪಸ್ಯ ಮಹಿಮ್ನಃ ಮಹಾತ್ಮ್ಯಸ್ಯ ಅನನುರೂಪಾ ಅನುಚಿತಾ ಸ್ಥಿತಿರ್ಮರ್ಯಾದಾ ಯಸ್ಯ ಸಃ— ಕಿಂಕುತ ಈಡ್ಯತೆ ಸ್ತೂಯತೆ ॥

ಅರ್ಥ ॥ ತನ್ನ ರೂಪಕ್ಕೂ ಹಿರಿಯತನಕ್ಕೂ ಸಲ್ಲದ ದೆಶೆಯುಳ್ಳ ಈ ವಿಜಯರಾಘವ ದೇವರ ಸ್ತುತಿ ಯಾಕೆ ಮಾಡುತ್ತಿ ?

ಶ್ಲೋ । ಶುಕಸ್ತುತೋ ಹಂಸಮಯೂರವಾಹಮುಖಪ್ರಗೀತೋ ಗರುಡಾಸನೋಸೌ । ಕ್ಷೀರಾಬ್ಧಿತೀರಾವಸಥೋಪಿ ವಾಸಂ ಕರೋತ್ಯಹೋ ಗೃಧ್ರಸರೋಂತಿಕೇಸ್ಮಿನ್ ॥ ೫೦೧ ॥

ಟೀಕಾ ॥ ಶುಕೇತಿ ॥ ಶುಕೇನ ಕೀರೇಣ ಶುಕಯೋಗಿನಾ ಚ ಸ್ತುತಃ—ಹಂಸನಾ ಹೊಬ್ರಹ್ಮಾ ಮಯೂರವಾಹಃ ಕುಮಾರಃ ತೌ ಮುಖಮಾದಿರ್ಯೇಷಾಂ ತೈಃ ಸುರೈಃ ಪ್ರಗೀತಃ ಕೀರ್ತಿತಃ— ಗರುಡಾಸನಃ— ಕ್ಷೀರಾಬ್ಧಿತೀರೆ

---

* ಅತ್ರ ಚ ಗೃಧ್ರಪತಿಕ್ಷೇತ್ರೆ ಇತಿ ಪಾಠಾಂತರಂ ॥ † ಅತ್ರ ಪಕ್ವಾ ಇತಿ ಪರ್ಯಾಯಃ ನ ಸಾಧೀಯಾನ್ ಭೃಷ್ಟಾ ಇತ್ಯೇವ ವಕ್ತುಮುಚಿತಂ ॥

ಆವಸಥಂ ನಿವಾಸಃ ಯಸ್ಯ ತಥೋಕ್ತೋಽಪಿ ಅಸೌ ವಿಜಯರಾಘವಃ ಅಸ್ಮಿನ್ ಗೃಧ್ರಸರಸಃ ಅಂತಿಕೇ ಸಮೀಪೇ ವಾಸಂ ಕರೋತಿ ಅಹೋ ಇತಿ ಖೇದೇ ಶುಕಾದಿಪಕ್ಷಿಭ್ಯಃ ಗೃಧ್ರಸ್ಯ ನೀಚತ್ವಾದಿತಿಭಾವಃ ಶ್ಲೇಷಾನುಪ್ರಾಣಿತೇನ ವಿರೋಧಾಭಾಸೇನ ಗೃಧ್ರೇಽಪಿ ಭಕ್ತೇ ವಾತ್ಸಲ್ಯಮಿತಿ ಪ್ರತೀತೇರಲಂಕಾರೇಣ ವಸ್ತುಧ್ವನಿಃ ॥

ಅರ್ಥ ॥ ಈ ವಿಜಯರಾಘವನು ಗಿಳಿಯಿಂದ ( ಶುಕಯೋಗಿಯಿಂದ ) ಸ್ತುತಿಸಲ್ಪಟ್ಟವನು. ಅಂಚೆದೇರನಾದ ಬ್ರಹ್ಮ ಮತ್ತು ನವಿಲ್ದೇರನಾದ ಕುಮಾರ ಸ್ವಾಮಿ ಇವರೇ ಮೊದಲಾದ ದೇವರಿಂದ ಸ್ತುತಿಸಲ್ಪಡುವವನು. ಗರುಡನೇ ವಾಹನವಾಗಿ ಉಳ್ಳವನು. ಹಾಲ್ಗಡಲಿನ ಕರೆಯಲ್ಲಿ ಮನೆ ಮಾಡಿ ಕೊಂಡಿರುವವನು. ಆದಾಗ್ಯೂ ಈ ಗೃಧ್ರಕೊಳದ ದಂಡೆಯಲ್ಲಿ ಬಂದು ವಾಸ್ತವ್ಯ ಮಾಡಿಕೊಂಡಿದ್ದಾನೆ. ಇದೇನು ಆಶ್ಚರ್ಯ !

ವಿಶ್ವಾವಸುಃ ॥

ಮೂ। ತದೇತ *ದ್ದಯಾಪಯೋನಿಧೇರಸ್ಯ ಭೂಷಣಮೇವ ॥

ಟೀಕಾ ॥ ತದಿತಿ ॥ ತದೇತತ್ತಾದೃಶಸ್ಯಾಪಿ ಗೃಧ್ರಸರಸ್ತೀರನಿವಾಸಃ ॥

ಅರ್ಥ॥ ಇದು ಕರುಣಾ ಸಮುದ್ರನಾದ ಈ ವಿಜಯರಾಘವ ದೇವರಿಗೆ ಭೂಷಣವೇ ಸರಿ.

ಶ್ಲೋ। ತತಾದ್ಯದೃಗುತ್ತಮಪದೇ ತಮಸಃ ಪುರಸ್ತಾದ †ಸ್ತಾಮಯೇಽಪ್ಯತುಲಸೂರಿಭಿರರ್ಚಿತೋಽಪಿ। ಅತ್ರಾವಿರಾಸ ಹರಿರೇಷ ಚಿರಂ ನರಾಣಾಂ ದೃಷ್ಟಿಂ ಕೃತಾರ್ಥಯಿತುಮೇವ ದೃಢಾನುಕಂಪಃ ॥ ೫೦೭ ॥

ಟೀಕಾ ॥ ತದಿತಿ ॥ ತಮಸಃ ಪರಸ್ತಾತ್ ಅಜ್ಞಾನಿನಾಂ ದೂರ ಇತ್ಯರ್ಥಃ ಅಸ್ತಾಮಯೇಽಪಿ ವಿಗತ ಸಮಸ್ತ ದೋಷೇ ತತ್ತಾದೃಶಿ ಅನುಪಮೇ ಉತ್ತಮಪದೇ ವೈಕುಂಠೇ ಅತುಲ್ಯೈಃ ಸೂರಿಭಿಃ ಸನಕಾದಿಭಿಃ ಅರ್ಚಿತಃ ಅರ್ಚ್ಯಮಾನಃ ಸ್ಥಿತೋಽಪೀತ್ಯರ್ಥಃ ದೃಢಾನುಕಂಪಃ ಶಾಶ್ವತ ಭಕ್ತವಾತ್ಸಲ್ಯಃ ಅತಏವ ಏಷ ಹರಿರ್ವಿಜಯ ರಾಘವಃ ನರಾಣಾಂ ಭಕ್ತಾನಾಂ ದೃಷ್ಟಿಂ ಕೃತಾರ್ಥಯಿತುಂ ದರ್ಶನೇನ ಸಫಲಯಿತುಮೇವ ಚಿರಮಾವಿರಾಸ ಆವಿರ್ಬಭೂವ ॥

ಅರ್ಥ ॥ ಅಜ್ಞಾನಿಗಳಿಗೆ ದೂರವಾಗಿರುವಂಥಾವನಾದ ಈ ಹರಿಯು ನಿರ್ದೋಷವಾದ ಮತ್ತು ಅನುಪಮ್ಯವಾದ ವೈಕುಂಠದಲ್ಲಿ ಅತಿ ಶ್ರೇಷ್ಠರಾದ ಜ್ಞಾನಿಗಳಿಂದ ಪೂಜಿಸಲ್ಪಡುವವನಾದಾಗ್ಯೂ ಸ್ಥಿರವಾದ ಭಕ್ತಾಭಿಮಾನದಿಂದ ಜನರುಗಳ ಕಂಣುಗಳನ್ನು ಸಾರ್ಥಕ ಮಾಡಲಿಕ್ಕೆ ಇಲ್ಲಿ ಬಹಳ ಕಾಲದಾರಭ್ಯ ಪ್ರಾದುರ್ಭವಿಸಿದ್ದಾನೆ.

ಮೂ । ಇತಿದಕ್ಷಿಣತೋ ವಿಮಾನಂ ಪುಸ್ತಾಪರ್ಯಸಹರ್ಷಂ ॥ ೫೦೮ ॥

---

* ದಯಾಪಯೋಧೇರೇತಸ್ಯ ಭೂಷಣಮೇವನತು ದೂಷಣಮ್ ಇತಿಪಾಠಾಂತರಂ ॥

† ಅಸ್ತಾಮಯೈರತುಲಸೂರಿಭಿಃ ಇತಿಪಾಠಾಂತರಂ ॥

ಅರ್ಥ ॥ ತೆಂಕಣ ದಿಕ್ಕಿಗೆ ವಿಮಾನವನ್ನು ನಡಿಸಿ ಆನಂದದಿಂದ (ವಿಶ್ವಾವಸು ಹೇಳುತ್ತಾನೆ.)

ಮೂ । ಇಯಂಹಿ । ಶ್ಲೋಕ । ಗಂಗಾಸಿಂಧುಸರಸ್ವತೀಭವಹರಾ ತುಂಗಾಪತಂಗಾತ್ಮಜಾರಂಗಾಭ್ಯಾಶತರಂಗಿಣೀವದಘತ್ರತ್ಯಂಗಾರ ಭಂಗಾವಹಾ । ಶುಗ್ಧಾರಾಶಮನೀಮನೀಷಿಜನತಾರಬ್ಧಾವಗಾಹಾ ಮುಹುರ್ಮುಗ್ಧಾನಾಮಪಿಶುದ್ಧಬುದ್ಧಿಜನನೀ ದುಗ್ಧಾಪಗಾದೃಶ್ಯತೇ ॥ ೫೦೫ ॥

ಟೀಕಾ ॥ ಗಂಗೇತಿ ॥ ಗಂಗಾಸಿಂಧುಃ ಗಂಗಾನದೀ– ಸಿಂಧುರಿತ್ಯುಚ್ಯಮಾನೀಪ್ರಾಂತೇಕಾಚಿನ್ನದೀವಾ– ಸರಸ್ವತೀ– ಭವಹರಾಭವನಾಶಿನೀ– ತುಂಗಾತುಂಗಭದ್ರಾ– ರಂಗಾಭ್ಯಾಶತರಂಗಿಣೀಕಾವೇರೀ–ತಾಇವತದ್ವತ್– ಅಘತ್ರತೇಃ ಪಾಪರಾಶೇರೇವಾಂಗಾರಾಣಾಂ ಉಲ್ಮುಕಾನಾಂ ಭಂಗಾವಹಾ–ಶುಚಾಂಶೋಕಾನಾಂ ಧಾರಾಯಾಃ ಪಂಕ್ತೇಃ ಶಮನೀನಾಶನೀ– ಮುಹುರ್ಮನೀಷಿಜನತಯಾ ವಿದ್ವತ್ಸಮೂಹೇನಆರಬ್ಧಃಅವಗಾಹಾಸ್ನಾನಾನಿಯಸ್ಯಾಂಸಾ– ಮುಗ್ಧಾನಾಂ ಮೂಢಾನಾಮಪಿ– ಶುದ್ಧಾಂ ಬುದ್ಧಿಂ ಜನಯತೀತಿಜನನೀ ದುಗ್ಧಾಪಗಾಕ್ಷೀರನದೀ–ದೃಶ್ಯತೇ ॥

ಅರ್ಥ ॥ ಗಂಗಾ, ಸಿಂಧು, ಸರಸ್ವತಿ, ಭವಹರಾ, ತುಂಗಭದ್ರಾ, ಕಾವೇರಿ, ನದಿಗಳಂತೆ ಪಾತಕಗಳ ಕೆಂಡಗಳನ್ನು ಆರಿಸುವಂಥಾವಳಾದ, ದುಃಖಗಳ ಸಾಲನ್ನು ತೊಳಿಯುವಂಥಾವಳಾದ, ಯಾವಾತಳಲ್ಲಿ ಯಾವಾಗಲೂ ತಿಳಿದವರು ಸ್ನಾನ ಮಾಡುತ್ತಾರೋ ಅಂಥಾವಳಾದ, ಮೂಢರಿಗೆ ಕೂಡ ಒಳ್ಳೇ ಬುದ್ಧಿಯನ್ನು ಹುಟ್ಟಿಸುವಂಥಾವಳಾದ, ದುಗ್ಧಾಪಗಾ ಅಂದರೆ ಹಾಲುತೊರೆಯು ಇಗೋ ಕಣ್ಣಿಗೆ ಬೀಳುತ್ತಾಳೆ.

ಮೂ । ಕಿಂಚ । ಶ್ಲೋ । ಮಮದುಗ್ಧನದೀಧನದೀಕೃತಮಜ್ಜನ್ಮಾನವಾನವಾಂಭೋಭಿಃ । ಬುಧಜಾತನುತಾತನುತಾಂತನುತಾಂತನುತಾಪಹೃದ್ಘನಾಘಾನಾಂ ॥ ೫೦೬ ॥

ಟೀಕಾ ॥ ಮಮೇತಿ ॥ ನವೈಃ ಅಂಭೋಭಿಃ ಜಲೈರ್ಧನದೀಕೃತಾಃ ಮಜ್ಜಂತಃ ಸ್ವಸ್ಮಿನ್ ಅವಗಾಹಮಾನಾಃ ಮಾನವಾ ಯಯಾಸಾ–ಬುಧಾನಾಂಜಾತೇನ ಸಮೂಹೇನನುತಾ–ತನೋಶ್ಶರೀರಸ್ಯ ತಾಪಹೃತ್– ದುಗ್ಧನದೀಕ್ಷೀರನದೀ– ಮಮಸಂಬಂಧಿನಾಂ ಘನಾಘಾನಾಂ ಮಹಾಪಾಪಾನಾಂತನುತಾಂಕ್ಷೀಣತ್ವಂ– ತನುತಾಂಕರೋತು ॥

ಅರ್ಥ ॥ ಮತ್ತು ನೂತನವಾದ ತನ್ನ ನೀರಲ್ಲಿ ಮಜ್ಜನ ಮಾಡುವವರಿಗೆ ಧನಸಂಪತ್ತಿ ಕೊಡುವಂಥಾವಳಾದ, ಬಲ್ಲಂಥಾವರ ಸಮೂಹದಿಂದ ನಮಸ್ಕರಿಸಲ್ಪಡುವಂಥಾವಳಾದ, ಶರೀರದ ಬೇನೆಯನ್ನು ನೊಂದಿಸುವಂಥಾವಳಾದ ಈ ಹಾಲುತೊರೆಯು ನನ್ನ ಬಲವಂತವಾದ ಪಾಪಗಳನ್ನು ನಶಿಸುವಂಥಾದ್ದಾಗಲೀ.

ಕೃಶಾನುಃ॥

ಮೂ । ಭವತ್ವೇವಮಥಾಪಿಅಸ್ಯಾಃಕ್ಷೀರತರಂಗಿಣ್ಯಾಃವಿಧಿನಾಕೃತಾ *ನೀರಸತಾ ॥ ೫೦೭ ॥

ಟೀಕಾ ॥ ಭವತ್ವಿತಿ ॥ ವಿಧಿನಾದೈವೇನ– ನೀರಸತಾಅಸಾಸ್ವಾದ್ಯತ್ವಂ ॥

ಅರ್ಥ ॥ ಅದು ಸರಿ. ಆದರೆ-ದೈವವು ಈ ಹಾಲ್ತೊರೆಯ ನೀರನ್ನು ಸೌಳಾಗಿ ಮಾಡಿಯದೆ.

ಶ್ಲೋ । ಕಾಲುಷ್ಯಲೇಶವಿಧುರಾಮಧುರಾಪಿಪಯೋನದೀ।ರೋಚತೇಸಾಧವೇಯುಕ್ತಾನೋಚೇಲ್ಲವಣಸಿಂಧುನಾ ॥ ೫೦೮ ॥

ಟೀಕಾ ॥ ಕಾಲುಷ್ಯೇತಿ ॥ ಕಾಲುಷ್ಯಸ್ಯ ಮಾಲಿನ್ಯಸ್ಯ ಲೇಶೇನಾಪಿವಿಧುರಾರಹಿತಾಪಿ–ಮಧುರಾಪಿ ಪಯೋನದೀಕ್ಷೀರನದೀ–ಲವಣಸಿಂಧುನಾಯುಕ್ತಾನೋಚೇತ್– ಸಾಧವೇಸಜ್ಜನಾಯರೋಚತೇ ॥

ಅರ್ಥ ॥ ಈ ಹಾಲ್ದೊರೆಯಲ್ಲಿ ಪೈಲಿಗೆಯ ಬಿಂದು ಕೂಡ ಇರುವದಿಲ್ಲವು. ಇದು ಹೊರತು ಈ ಹಾಲ್ದೊರೆಯ ನೀರು ಸವಿಯಾದದ್ದು. ಆದರೆ ಅದು ಉಪ್ಪು ಕಡಲಿಗೆ ಹೋಗಿ ಸೇರದೆ ಇದ್ದರೆ ಸತ್ಪುರುಷರಿಗೆ ಅದು ಪ್ರಿಯವಾಗುತಿತ್ತು.

ವಿಶ್ವಾವಸುಃ ॥

ಮೂ । ಗುಣಮಪಿದೋಷತಯಾಭಣಸಿ ॥

ಮೂ । ಯತಃ। ಶ್ಲೋ । ಕ್ವಚನಸಮಾಗತಸಿಂಧುನಿಧುನೀಜಲೇಸಾಧುನಿಸ್ನಾನಂ । ಪಂಕವಿಲೋಪಂಕಲಯತಿಸಂಘಟಯತಿ †ಧಿಯಮಿತಿಸ್ಮರಂತಿಬುಧಾಃ ॥ ೫೦೯ ॥

ಟೀಕಾ ॥ ಕ್ವಚನೇತಿ ॥ ಸಮಾಗತಃ ಸಂಗತಸ್ಸಿಂಧುಸ್ಸಮುದ್ರಃ ಯೇನತಸ್ಮಿನ್– ಅತಏವ ಸಾಧುನಿಪವಿತ್ರೇ– ಕ್ವಚನಕಸ್ಮಿನ್ನಪಿ– ಧುನೀಜಲೇ– ಸ್ನಾನಂ– ಪಂಕಸ್ಯಪಾಪಸ್ಯ ಕರ್ದಮಸ್ಯಚವಿಲೋಪಂನಾಶಂಕಲಯತಿ– ಧಿಯಂಜ್ಞಾನಂ– ಸಂಘಟಯತಿ– ಇತ್ಯುಕ್ತಪ್ರಕಾರಂ– ಬುಧಾಃ ಸ್ಮರಂತಿಜಾನಂತಿ ॥ ಶ್ಲೋ ॥ ಸಮುದ್ರಗಾನದೀಸ್ನಾನಂ ನರಾಣಾಂ ಶುದ್ಧಿಬುದ್ಧಿದಮಿತಿಸ್ಮರಣಾದಿತಿಭಾವಃ ॥

ಅರ್ಥ ॥ ಗುಣವನ್ನು ಕೊರತೆಯಾಗಿ ಜರಿಯುತ್ತಿ. ಯಾಕಂದರೆ ಯಾವ ನದಿಯ ನೀರೇ ಆಗಲಿ ಸಮುದ್ರಕ್ಕೆ ಕೂಡಿದರೆ ಅದು ಪವಿತ್ರವಾಗುತ್ತದೆ. ಮತ್ತು ಅದರ ಸ್ನಾನವು ಕೆಸರು ಅಥವಾ ಪಾಪ ಹೋಗಪಡಿಸುತ್ತದೆ ಎಂತಲೂ ಜ್ಞಾನ ಉಂಟು ಪಡಿಸುತ್ತದೆ ಎಂತಲೂ ಬಲ್ಲವರು ಹೇಳುತ್ತಾರೆ.

ಮೂ । ಕಿಂಚಿದ್ದಕ್ಷಿಣತೋಭಿಕ್ರಮ್ಯ ॥ ೫೧೦ ॥

ಅರ್ಥ ॥ ಸ್ವಲ್ಪ ದಕ್ಷಿಣಕ್ಕೆ ನಡದು.

---

* ವಿರಸತಾ ಇತಿಪಾಠಾಂತರಂ ॥ † ಶ್ರಿಯಮಿತಿಪಾಠಾಂತರಂ ॥

ಮೂ। ಶ್ಲೋ । ಮೋಹಾದಿದೋಷರಹಿತಾಂತಟವಾಸಿದೇಹಿವ್ಯೂಹಾಯಕಾಮಪಿಮತಿಂಮಹತೀಂದಿಶಂತೀ । ಸ್ವಾಹಾಕರೋತಿದುರಿತಾನಿಶುಭಪ್ರವಾಹೈರ್ಬಾಹಾನದೀಬುಧಸಮೂಹಕೃತಾವಗಾಹಾ ॥ ೫೧೧ ॥

ಟೀಕಾ ॥ ಮೋಹೇತಿ ॥ ತಟಯೋರ್ವಾಸಿನಾಂ ದೇಹಿನಾಂ ಜಂತೂನಾಂ ವ್ಯೂಹಾಯಸಮೂಹಾಯ– ಮೋಹಾದಿದೋಷರಹಿತಾಂ– ಕಾಮಪ್ಯನಿರ್ವಾಚ್ಯಾಂ– ಮಹತೀಂ– ಮತಿಂಜ್ಞಾನಂ– ದಿಶಂತೀದದತೀ– ಬುಧಸಮೂಹಕೃತಾವಗಾಹಾ–ಬಾಹಾನದೀ– ಶುಭೈಃ ಶುಭ್ರೈಃಪ್ರವಾಹೈಃ ದುರಿತಾನಿಸ್ವಾಹಾಕರೋತಿನಾಶಯತೀತ್ಯರ್ಥಃ ॥

ಅರ್ಥ॥ ಈ ಬಾಹಾನದಿಯು ತನ್ನ ತೀರದಲ್ಲಿ ಒಕ್ಕಲಾಗಿರುವವರ ಸಮೂಹಕ್ಕೆ ಮೋಹವೇಮೊದಲಾದ ಕುಂದುಗಳಿಲ್ಲದ ಅನುಪಮ್ಯವಾದ ತಿಳುಹುವನ್ನು ಕೊಡುತ್ತದೆ. ಬಲ್ಲವರು ಅನೇಕ ಮಂದಿ ಈ ಬಾಹಾ ನದಿಯಲ್ಲಿ ಸ್ನಾನ ಮಾಡುತ್ತಾರೆ. ಇಂಥಾ ಬಾಹಾನದಿಯು ತನ್ನ ಶುದ್ಧವಾದ ಜಲಪ್ರವಾಹಗಳಿಂದ ಪಾಪಗಳನ್ನು ನಶಿಸುತ್ತದೆ.

ಮೂ । ಅಸ್ಯಾಶ್ಚೋತರತೀರಶೋತ್ರಿಯೋತ್ತಂಸನಿವಾಸಯೋಗ್ಯಸ್ಸಮಗ್ರಗುಣೋಸಾವಗ್ರಹಾರಸ್ಸಂಲಕ್ಷ್ಯತೇ ॥ ೫೧೨ ॥

ಟೀಕಾ ॥ ಅಸ್ಯಾಇತಿ॥ ಅಸ್ಯಾಃ ಬಾಹಾನದ್ಯಾಃ– ಶೋತ್ರಿಯೋತ್ತಂಸಾನಾಂ ವೈದಿಕಶ್ರೇಷ್ಠಾನಾಂ ನಿವಾಸಯೋಗ್ಯಃ– ಸಮಗ್ರಾಸ್ಸಂಪೂರ್ಣಾಗುಣಾಸ್ತ್ರಿಣಕಾಷ್ಠಸಮೃದ್ಧ್ಯಾದಯೋಯಸ್ಮಿನ್ ಅಸಾ॰ಅಗ್ರಹಾರಃ ಬ್ರಾಹ್ಮಣಸ್ವಾಮಿಕೋಗ್ರಾಮಃ ॥

ಅರ್ಥ ॥ ಇದೇ ನೋಡು. ಈ ಬಾಹಾನದಿಯ ಬಡಗ ದಿಕ್ಕಿನ ಕರೆಯಲ್ಲಿ ಶ್ರೇಷ್ಠರಾದ ವೈದಿಕರ ವಾಸ್ತವ್ಯಕ್ಕೆ ಯೋಗ್ಯವಾದ ಮತ್ತು ಎಲ್ಲ ಗುಣಗಳಿಂದ ಯುಕ್ತವಾದ ಅಗ್ರಹಾರ ಇದೆ.

ಮೂ । ಪುಷ್ಯ । ಶ್ಲೋ । ಕರ್ಣಾನಂದಕರಸ್ಫುರನ್ಮಧುಕರವ್ಯಾಹಾರಬಾಹಾಪಗಾ ರೋಧಶ್ಶಾಖಿಮರಂದತುಂದಿಲಪಯಃಕಲ್ಯಾಣಕುಲ್ಯಾವೃತಃ। ಆತ್ರೇಯಾನ್ವಯವಿದ್ವದಧ್ವರಹವಿರ್ಗಂಧಾನುಬಂಧಾರ್ಪಿತಕ್ಷ್ಮೇಮೋಭಾತ್ಯರಶಾಣಿಪಾಲಇತಿಹಿ *ಗ್ರಾಮೋಭಿರಾಮೋಭುವಿ ॥ ೫೧೩ ॥

ಟೀಕಾ ॥ ಕರ್ಣೇತಿ ॥ ಕರ್ಣಾನಂದಕರಾಃ ಸ್ಫುರಂತಶ್ಚ ಮಧುಕರಾಣಾಂ ವ್ಯಾಹಾರಾಃ ಝುಂಕಾರಾಃ ಯೇಷುತೇಷಾಂ ಬಾಹಾಪಗಾಯಾಃ ರೋಧಸಿತಟೇ ಶಾಖಿನಾಂ ವೃಕ್ಷಾಣಾಂ ಸಂಬಂಧಿಭಿಃ ಮರಂದೈಸ್ತುಂದಿಲಸ್ಸಂಪೂರ್ಣಸ್ಯಪಯಸಃ ಜಲಸ್ಯ ಕಲ್ಯಾಣಾಭಿಃ ಕುಲ್ಯಾಭಿಃ ಕೃತ್ರಿಮಸರಿದ್ಭಿರ್ವೃತಃ ವೇಷ್ಟಿತಃ– ಅತ್ರೇಃ

---

* ಗ್ರಾಮೋಭಿರಾಮಾಭಿಧಃ ಇತಿಪಾಠಾಂತರಂ ॥

ಮೂರ್ನೇರಯಂ ಆತ್ರೇಯಃ ಅನ್ವಯಃ ಗೋತ್ರಂಯೇಷಾಂತೇಷಾಂ ವಿದುಷಾಂ ಅಧ್ವರೇಷುಯಾಗೇಷು ಹವಿಷಾಂಪುರೋಡಾಶವಪಾದೀನಾಂ ಗಂಧಸ್ಯ ಅನುಬಂಧೇನಸಂಬಂಧೇನ ಅರ್ಪಿತಂದತ್ತಂಕ್ಷೇಮಂಕುಶಲಂ ಯಸ್ಯಸಃ– ಅಭಿರಾಮಃ– ಭುವಿ–ಅರಶಾಣಿಪಾಲಇತಿತನ್ನಾಮಕಃಗ್ರಾಮಃ–ಭಾತಿಹಿ–ಹಿಪ್ರಸಿದ್ಧೌ–ಅಯಂ ಕವೇರಗ್ರಹಾರ ಇತಿಧ್ಯೇಯಂ||

ಅರ್ಥ ॥ ಥಳಥಳಿಸುವ ದುಂಬಿಗಳ ಕಿವಿಗಿಂಪಾದ ಉಲಿಗೂಡಿರುವ ಬಾಹಾನದಿಯ ದಂಡೇ ಮೇಲಿನ ವೃಕ್ಷಗಳ ಪುಷ್ಪರಸ ತುಂಬಿರುವ ನೀರಿನ ಸುಖಕರವಾದ ಕಾಲಿವೆಗ ಳಿಂದ ಸುತ್ತಲ್ಪಟ್ಟಿರುವಂಥಾ, ಅತ್ರಿಗೋತ್ರದ ಪಂಡಿತರಿಂದ ಮಾಡಲ್ಪಟ್ಟ ಯಜ್ಞಸಂಬಂಧಿ ಪರಿಮಳಿತವಾದ ಪುರೋಡಾಶವಪಾ ಮೊದಲಾದದರ ಪ್ರತಿಫಲವಾಗಿ ಕೊಡಲ್ಪಟ್ಟ ಸುಖ ವನ್ನು ಅನುಭವಿಸುವಂಥಾ, ರಮಣೀಯವಾದಂಥಾ ಅರಶಾಣಿಪಾಲೆಂಬ ಹೆಸರುಳ್ಳಂಥ ಅಗ್ರಹಾರವು ಪೃಥ್ವಿಯಲ್ಲಿ ಎಸೆಯುತ್ತದೆ.

ಮೂ। ಶ್ಲೋ । ಸಾಧ್ವಗ್ರೇಸರಯೂಪೇತಸ್ಸಾಕೇತನಗರಶ್ರಿಯ
ವ್। ಅಗ್ರಹಾರೋ *ವಹತ್ಯೇಷರಘುನಾಥಾಭಿರಕ್ಷಿತಃ ॥ ೫೧೪ ॥

ಟೀಕಾ ॥ ಸಾಧ್ವಿತಿ ॥ ಸಾಧುಷುಅಗ್ರೇಸರಾಣಾಂ ಶ್ರೇಷ್ಠಾನಾಂ ಆತ್ರೇಯ ಗೋತ್ರಾಣಾಂ ಯೂಪೈಃ ಯಜ್ಞ ಪಶುಬಂಧನ ದಾರುಭಿಃ–ಇತಃ ಪ್ರಾಪ್ತಃ– ಅನ್ಯತ್ರ–ಸಾಧು–ಅಗ್ರೇ–ಸರಯ್ವಾನಾಮನದ್ಯಾ ಉ ಪೇತಃ–ರಘುನಾಥೇನ ಕವೇಃ ಪಿತ್ರಾ ಶ್ರೀರಾಮೇಣಚ ಅಭಿರಕ್ಷಿತಃ–ಏಷಅಗ್ರಹಾರಃ–ಸಾಕೇತಸ್ಯ ನಗರಸ್ಯ ಅಯೋಧ್ಯಾಯಾಃ ಶ್ರಿಯಂ ಶೋಭಾಂ ವಹತಿ ॥

ಅರ್ಥ ॥ ಸಜ್ಜನರಲ್ಲಿ ಹಿರಿಯರಾದವರ ಯಜ್ಞಕಂಭಗಳಿಂದ ಯುಕ್ತವಾಗಿರುವಂಥಾ ಮತ್ತು ಈ ಗ್ರಂಥ ಕರ್ತರ ಪೂರ್ವಜರಾದ ರಘುನಾಥ ದೀಕ್ಷಿತರಿಂದ ಕಾಪಾಡಿಸ ಲ್ಪಟ್ಟಿರುವ ಈ ಅಗ್ರಹಾರವು ಅಯೋಧ್ಯಾ ಪಟ್ಟಣದ ಶಿರಿಯನ್ನು ತಳೆದದೆ.

ಮೂ। ಕಿಂಚಿದ್ವಿಮಾನಮುನ್ನಮಯ್ಯಸಶ್ಲಾಘಂ । ನದ್ಯೋಃಪಾ
ರ್ಶ್ವದ್ವಯಮವಲೋಕ್ಯ ॥ ೫೧೫ ॥

ಟೀಕಾ ॥ ಕಿಂಚಿದಿತಿ ॥ ನದ್ಯೋಃ ಬಾಹಾ ಕ್ಷೀರನದ್ಯೋಃ ॥

ಅರ್ಥ ॥ ವಿಮಾನವನ್ನು ತುಸು ಮೇಲಕ್ಕೆ ನಡಿಸಿ ಸ್ತುತಿ ಮಾಡಿ ಹಾಲು ನದಿ ಮತ್ತು ಬಾಹಾನದೀ ಇವುಗಳ ಇಕ್ಕೆಲದೊಳ್ನೋಡಿ ವಿಶ್ವಾವಸು ಹೇಳುತ್ತಾನೆ.

ಶ್ಲೋ । ಚಾರುಗುಣೈಸ್ಸನ್ಮಣಿಭಿರ್ಜುಷ್ಟಾಬಾಹಾನದೀಪಯಸ್ವಿ
ನ್ಯೋಃ। ಉಪಕೂಲಮಗ್ರಹಾರಾಉದಗ್ರಹಾರಾಇವಾವನೇರ್ಭಾಂ
ತಿ ॥ ೫೧೬ ॥

ಟೀಕಾ ॥ ಚಾರ್ವಿತಿ ॥ ಚಾರವಃ ಗುಣಾಃ ಸೌಜನ್ಯ ಸೌಶೀಲ್ಯಾದಯಃ ಸೂತ್ರಾಣಿ ಯೇಷಾಂತೈಃ–ಸ

* ವಿಭಾತಿ ಇತಿಪಾಠಾಂತರಂ ಅಸ್ಮಿಂಶ್ಚ ಪಾಠೇವಹನ್ನಿತಿ ಅಧ್ಯಾಹಾರ್ಯಂ ||

ನ್ಮಣಿಭಿಸ್ಸಜ್ಜನ ಶ್ರೇಷ್ಠೈಃ ಸದ್ಭಿರ್ಮಣಿಭಿಃ ರತ್ನೈಃ—ಜುಷ್ಟಾಃ ಯುಕ್ತಾಃ—ಬಾಹಾನದೀಪಯಸ್ವಿನ್ಯೋಃ ಬಾಹಾನದೀಕ್ಷೀರನದ್ಯೋರುಪಕೂಲಂ ಕೂಲೇಷು—ಅಗ್ರಹಾರಾಃ—ಅವನೇರ್ಭೂಮೇಃ—ಉನ್ನತಾಹಾರಾ ಉದಗ್ರಹಾರಾ ಇವಭಾಂತಿ ॥

ಅರ್ಥ ॥ ಒಳ್ಳೇ ಗುಣವಂತರಾದ ಸಜ್ಜನ ಶ್ರೇಷ್ಠರಿಂದ ಅಥವಾ ಒಳ್ಳೇ ಗುಣಗಳೆಂಬ ನೂಲುಗಳಲ್ಲಿ ಪೋಣಿಸಲ್ಪಟ್ಟ ರತ್ನಗಳಿಂದ ಕೂಡಿರುವಂಥಾ ಬಾಹಾ ಮತ್ತು ಹಾಲ ನದೀ ತೀರಗಳಲ್ಲಿರುವ ಅಗ್ರಹಾರಗಳು ಭೂದೇವಿಗೆ ಶ್ರೇಷ್ಠವಾದ ಮಾಲೆಗಳಂತೆ ಶೋಭಿಸುತ್ತವೆ.

## ಕೃಶಾನುಃ ॥

ಮೂ । ಅಮೂನ್ಗ್ರಾಮಾನ್ಕಥಂಕಾರಮಗ್ರಹಾರಾನ್ಪ್ರಚಕ್ಷತೇ ।
ಸುವೃತ್ತಮುಕ್ತಾರಹಿತಾಯದೇನಾನಾಶ್ರಿತಾಜನಾಃ ॥ ೫೧೭ ॥

ಟೀಕಾ ॥ ಅಮೂನಿತಿ ॥ ಅಮೂನ್ ನದೀದ್ವಯ ತೀರಸ್ಥಿತಾನ್ ಗ್ರಾಮಾನ್ ಅಗ್ರಹಾರಾನ್ ಕಥಂಕಾರಂ ಕಥಮಿತ್ಯರ್ಥಃ—ಪ್ರಚಕ್ಷತೇ ವದಂತಿ—ಬುಧಾಇತಿಶೇಷಃ—ಯದ್ಯಸ್ಮಾ ದೇನಾನ್ ಗ್ರಾಮಾನ್ ಆಶ್ರಿತಾಜನಾಃ ಶೋಭನಾಭಿಃ ವೃತ್ತಾಭಿಃ ವರ್ತುಲಾಭಿಃ ಮುಕ್ತಾಭಿ ರ್ಮೌಕ್ತಿಕೈಃ ರಹಿತಾಃ ಸುವೃತ್ತೈಃ ಸಾಧ್ವಾಚಾರೈಃ ಮುಕ್ತೈರ್ವಿಗತಭವಪಾಶೈಶ್ಚ ಜನೈಃ ಅರಹಿತಾಸ್ಸಂಗತಾಶ್ಚ ॥

ಅರ್ಥ ॥ ಈ ಗ್ರಾಮಗಳಿಗೆ ಅಗ್ರಹಾರಗಳೆಂಬ ಹೆಸರು ಯಾಕೆ ಕೊಡೋಣಾಯಿತು. ಈ ಗ್ರಾಮವಾಸಿ ಜನರುಗಳಲ್ಲಿ ಗುಂಡಾದ ಚೆಲೋ ಮುತ್ತುಗಳಾಗಲೀ ಅಥವಾ ಉತ್ತಮ ನಡತೆಯಿಂದಲೂ ಮುಕ್ತಿಯಿಂದಲೂ ರಹಿತರಾದವರಾಗಲೀ ಇರುವದಿಲ್ಲವು.

## ವಿಶ್ವಾವಸುಃ ॥

ಮೂ । ಸಖೇಭವತಾಸ್ತುತಿರೇವೈಷಾಂಭಂಗ್ಯಂತರೇಣಕೃತೇತಿವಿ
ಮೃಷ್ಯಾಮಿತುಷ್ಯಾಮಿಚ ॥ ೫೧೮ ॥

ಟೀಕಾ ॥ ಸಖಇತಿ ॥ ಭಂಗ್ಯಂತರೇಣ ಅನ್ಯಯಾರೀತ್ಯಾವ್ಯಾಜಸ್ತುತಿವಿಧಯೇತಿ ಯಾವತ್— ವಿಶೇಷೇಣ ಮೃಷ್ಯಾಮಿಸಹೇ ॥

ಅರ್ಥ ॥ ಗೆಳೆಯನೇ ಅನ್ಯಾಭಿಪ್ರಾಯದ ಮಾತುಗಳಿಂದ ನೀನು ಈ ಗ್ರಾಮಗಳ ಸ್ತುತಿಯನ್ನೇ ಮಾಡಿದಿ. ಆದದರಿಂದ ನಾನು ಸೈರಿಸುತ್ತೇನೆ. ಮತ್ತು ಸಂತೋಷ ಪಡುತ್ತೇನೆ.

ಮೂ । ಅಥಸರ್ವತ್ರಸ್ತುಂಡೀರಮಂಡಲಮವಲೋಕಯನ್ ಸಹ
ರ್ಷಾತಿರೇಕಂ ॥ ೫೧೯ ॥

ಟೀಕಾ ॥ ಅಥೇತಿ ॥ ತುಂಡೀರಮಂಡಲಮಿತಿ ದೇಶವಿಶೇಷನಾಮ— ಭಾಷಾಯಾಂ ತೊಂಡಮಂಡಲಮಿತಿ ॥

ಅರ್ಥ ॥ ಎಲ್ಲ ಕಡೆಯಲ್ಲಿಯೂ ತೊಂಡಮನಾಡನ್ನು ನೋಡುವಂಥಾತನಾಗಿ ವಿಶ್ವಾವಸುವು ತುಂಬ ಸಂತೋಷದಿಂದ ಹೇಳುತ್ತಾನೆ.

ಮೂ । ವಯಸ್ಯಸ್ಫುಟಮಸ್ಯತುಂಡೀರಮಂಡಲಸ್ಯಕಶ್ಯತುಭವಾನ್
ಪಾವನತ್ವಂಗಾಮಣೀಯಕಂಚ ॥ ೫೨೦ ॥

ಟೀಕಾ ॥ ವಯಸ್ಯೇತಿ ॥ ರಾಮಣೀಯಕಂಸೌಂದರ್ಯಂ ॥

ಅರ್ಥ ॥ ಗೆಳೆಯನೇ ಈ ತೊಂಡಮನಾಡಿನ ಪವಿತ್ರತೆ ಮತ್ತು ಸೊಬಗು ತೇಟಿಯಾಗಿವೆ ನೋಡು.

ಶ್ಲೋ । ತೀರೇತೀರೆಸ್ಫುರತಿಸರಿತಾಮಗ್ರಹಾರೋತ್ರಭೂಯಾನ
ಗ್ರ್ಯೇವರ್ಗೋಧರಣಿಮರುತಾಮಗ್ರಹಾರೇಗ್ರಹಾರೇ । ವರ್ಗೇ
ವರ್ಗೇಧರಣಿಮರುತಾಂವರ್ಧತೆಸಾಧುಯಜ್ಞೋಯಜ್ಞೇಯಜ್ಞೇ
ಶ್ರವಣಸುಭಗಃಸ್ತೋತ್ರಶಸ್ತ್ರಾದಿಘೋಷಃ ॥ ೫೨೧ ॥

ಟೀಕಾ ॥ ತೀರೇತೀರೇಇತಿ ॥ ಸರಿತಾಂ ಜಾಹ್ನವ್ಯಾದೀನಾಂ ಅತ್ರಾಸ್ಮಿನ್ – ತೀರೇತೀರೇಪ್ರತಿತೀರಂ– ಭೂಯಾನ್ ಬಹುಶಃ ಅಗ್ರಹಾರಃ– ಸ್ಫುರತಿ– ಅಗ್ರಹಾರೇಗ್ರಹಾರೇಪ್ರತ್ಯಗ್ರಹಾರಂ– ಅಗ್ರ್ಯಃಪೂಜ್ಯಃ– ಧರಣಿಮರುತಾಂ ಬ್ರಾಹ್ಮಣಾನಾಂ– ವರ್ಗಃವೃಂದಂಸ್ಫುರತಿ– ವರ್ಗೇವರ್ಗೇ–ಯಜ್ಞಃಜ್ಯೋತಿಷ್ಟೋಮಾದಿಃ– ಸಾಧುವರ್ಧತೇ– ಯಜ್ಞೇಯಜ್ಞೇ ಸರ್ವತ್ರವೀಪ್ಸಾಯಾಂ ದ್ವಿರ್ಭಾವಃ– ಶ್ರವಣಯೋಸ್ಸುಭಗಃ ಮನೋಜ್ಞಃ– ಸ್ತೋತ್ರಶಸ್ತ್ರಮಂತ್ರವಿಶೇಷಾವಾದೀ ಯೇಷಾಂತೇಷಾಂ ವೈದಿಕಮಂತ್ರಾಣಾಂ ಘೋಷಃ ನಾದಃ ವರ್ಧತೇ ॥

ಅರ್ಥ ॥ ಪ್ರತ್ಯೇಕ ನದೀ ತೀರದಲ್ಲಿ ಬಹಳವಾಗಿ ಅಗ್ರಹಾರಗಳು ಎಸೆಯುತ್ತವೆ. ಪ್ರತ್ಯೇಕ ಅಗ್ರಹಾರದಲ್ಲಿ ಶ್ರೇಷ್ಠವಾದ ಬ್ರಾಹ್ಮಣರ ಕೂಟಗಳು ಎಸೆಯುತ್ತವೆ. ಪ್ರತ್ಯೇಕ ಬ್ರಾಹ್ಮಣರ ಕೂಟದಲ್ಲಿ ಜ್ಯೋತಿಷ್ಟೋಮಾದಿಯಜ್ಞಗಳು ನಡಿಯುತ್ತವೆ. ಪ್ರತ್ಯೇಕ ಯಜ್ಞದಲ್ಲಿ ಕಿವಿಗಿಂಪಾದ ಸ್ತೋತ್ರಮಂತ್ರಗಳ ಸ್ವರವು ಏಳುತ್ತದೆ.

ಮೂ । ಕಿಂಚ । ಶ್ಲೋ । ತುಂಡೀರಮಂಡಲನಿವಾಸಿಷುದುಗ್ಧಸಿಂಧು
ಡಿಂಡೀರಖಂಡನಿಭಕೀರ್ತಿಷುಪಂಡಿತೇಷು।ಆಪ್ಯಾಯಮಾನಮಖಿ
ಲೈರವಿಗೀತಮೇತ ದ್ರೋಚೇತಧೂತದುರಿತಂ ಚರಿತಂನಕಸ್ಮೈ
॥ ೫೨೨ ॥

ಟೀಕಾ ॥ ತುಂಡೀರೇತಿ ॥ ತುಂಡೀರಮಂಡಲೇನಿವಾಸಿಷು–ದುಗ್ಧಸಿಂಧೋಃ ಕ್ಷೀರಾಬ್ಧೇಃ ಡಿಂಡೀರಖಂಡೈಃ ಫೇನರಾಶಿಭಿಃ ಸದೃಶಾನಿಭಾತುಲ್ಯಾಕೀರ್ತಿರ್ಯೇಷಾಂತೇಷು–ಪಂಡಿತೇಷು– ಆಪ್ಯಾಯಮಾನಂ ವ್ಯಾಪ್ನುವಾನಂತೈಃ ಕ್ರಿಯಮಾಣಮಿತಿಯಾವತ್– ಅಖಿಲೈಃ ವೇದಶಾಸ್ತ್ರಪುರಾಣಾದಿಭಿಃ–ಅವಿಗೀತಂಅನಿಂದಿತಂ– ಅತಏವ–ಧೂತದುರಿತಂ ಅಪಹತದೋಷಂ–ಏತಚ್ಚರಿತಂಸತ್ಕರ್ಮ– ಕಸ್ಮೈನರೋಚೇತ ಸರ್ವಸ್ಮಾಅಪಿ ರೋಚೇತೈವೇತ್ಯರ್ಥಃ ॥

ಅರ್ಥ ॥ ಮತ್ತು ತೊಂಡಮನಾಡಿನ ಜನರುಗಳಲ್ಲಿ ಹಾಲ್ಗಡಲಿನ ನೊರೆಯ ರಾಶಿಗೆ ಜೋಡಾದ ಹೆಸರುವಾಸಿ ಎತ್ತ ಜಾಣರಲ್ಲಿ ನಡಿಯುವ ಸಕಲ ವೇದಶಾಸ್ತ್ರವಿಹಿತವಾದಂಥ ಮತ್ತು ನಿಷ್ಪಾಪವಾದಂಥ ಕರ್ಮಾಚರಣವು ಯಾರ ಮನಸ್ಸಿಗೆ ಬರಲಿಕ್ಕಿಲ್ಲವು? ಎಲ್ಲರ ಮನಸ್ಸಿಗೂ ಬರುವದೆಂಬ ತಾತ್ಪರ್ಯವು.

ಕೃಶಾನುಃ ॥

ಮೂ। ಹಂತೈತಸ್ಮಿನ್ನಂತಿಮಯುಗೇಽಪ್ಯಧ್ವರಕರ್ಮಾಚರತಾಮ
ಮೀಷಾಂಚರಿತಾನಿಕಥಮಿವರೋಚೇರನ್ಕೋವಿದೇಭ್ಯಃ॥೫೨೩॥

ಟೀಕಾ ॥ ಹಂತೇತಿ ॥ ಅಂತಿಮಯುಗೇ–ಕಲಿಯುಗೇಽಪಿ–ಕೋವಿದಾಃ ಅಭಿಜ್ಞಾಃತೇಭ್ಯಃ ॥

ಅರ್ಥ ॥ ಐಯ್ಯೋ ! ಈ ಕಲಿಯುಗದಲ್ಲಿ ಕೂಡ ಯಜ್ಞಗಳನ್ನು ಮಾಡುವ ಈ ಜನರ ನಡತೆಗೆ ತಿಳಿದವರು ಹ್ಯಾಗೆ ಮೆಚ್ಚುಗೊಳ್ಳುವರು ? ಮೆಚ್ಚುಗೊಳ್ಳಲಿಕ್ಕಿಲ್ಲೆಂಬ ತಾತ್ಪರ್ಯವು.

ಶ್ಲೋ । ನಋತ್ವಿಕ್ಸಂಪತ್ತಿರ್ನಚಕುಶಲತಾಯಷ್ಟುರನಘಾನಚ
ದ್ರವ್ಯಂಶುದ್ಧಂನಚಹೃದಯಶುದ್ಧಿಃಕಲಿಯುಗೇ । ಪ್ರಸಿದ್ಧಿಂಕಾಂ
ಕ್ಷಂತಃಪರಿಮಿತಧನಾಹಂತಕೃಪಣಾವೃಥಾಪಶ್ವಾಲಂಭಂವಿದಧತಿ
ತಥಾಪಿಕ್ಷಿತಿಸುರಾಃ ॥ ೫೨೪ ॥

ಟೀಕಾ ॥ ನೇತಿ ॥ ಕಲಿಯುಗೇ– ಋತ್ವಿಜಾಂ ಮಂತ್ರಮಂತ್ರಾರ್ಥವಿದಾಂ ಸಂಪತ್ತಿರ್ಲಾಭೋನಾಸ್ತಿ– ಯಷ್ಟುಃಯಜಮಾನಸ್ಯ ಇದಮಗ್ರಮವಾಕ್ಯದ್ವಯೇಽಪಿ– ಅನಘಾನಿರ್ದೋಷೇತಿಪೂರ್ವತ್ರಾಪಿಯೋಜ್ಯಂ ಕುಶಲತಾಕರ್ಮಕರಣನೈಪುಣ್ಯಂನಾಸ್ತಿ–ಕಿಂಚ–ಶುದ್ಧಂದ್ರವ್ಯಂನಾಸ್ತಿ–ಹೃದಯಸ್ಯಶುದ್ಧಿಃ ಕಾಮಾದಿದೋಷರಾಹಿತ್ಯಂಚನಾಸ್ತಿ– ತಥಾಪಿಪರಿಮಿತಧನಾಃ ಅಲ್ಪದ್ರವ್ಯಾಃ–ಕೃಪಣಾಲುಬ್ಧಾಃ–ಕ್ಷಿತಿಸುರಾಃ ಬ್ರಾಹ್ಮಣಾಃ– ಪ್ರಸಿದ್ಧಿಂ– ಅಯಂದೀಕ್ಷಿತೋಽಯಂ ಸೋಮಯಾಜೀತ್ಯಾದಿಖ್ಯಾತಿಂ ಕಾಂಕ್ಷಂತಸ್ಸಂತಃ– ವೃಥಾಅಯಥಾನುಷ್ಠಾನಾನ್ನಿಷ್ಫಲಂ–ಪಶೋರ್ಮೇಷಾದೇರಾಲಂಭಂವಧಂ– ವಿದಧತಿಕುರ್ವಂತಿ ॥

ಅರ್ಥ ॥ ಕಲಿಯುಗದಲ್ಲಿ ಋತ್ವಿಜರಿಗೆ ಅಂದರೆ ವೇದಮಂತ್ರಗಳನ್ನೂ ಅವುಗಳ ಅರ್ಥವನ್ನೂ ತಿಳಿದ ಬ್ರಾಹ್ಮಣರಿಗೆ ಹಣವಿಲ್ಲವು. ಯಷ್ಟುಗಳಿಗೆ ಅಂದರೆ ಯಜ್ಞಮಾಡಿಸುವ ಯಜಮಾನರಿಗೆ ಕುಂದಿಲ್ಲದ ಜಾಣ್ಮೆಯಿಲ್ಲವು, ದೋಷರಹಿತವಾದ ದ್ರವ್ಯವಿಲ್ಲವು, ಮನೋನೈರ್ಮಲ್ಯವೆಂದರೆ ಕಾಮ ಕ್ರೋಧಾದಿ ಅವಗುಣಗಳಿರದೆ ಇರೋಣ ಇರುವದಿಲ್ಲವು. ಆದಾಗ್ಯೂ ಮಟ್ಟು ಹಣವುಳ್ಳ ಆಶಾಮಾರಿಗಳಾದ ಹಾರವರು ಹೆಸರು ಪಡೆಯಬೇಕೆಂಬ ಬಯಕೆಯಿಂದ ಸುಮ್ಮನೆ ಕುರಿಗಳನ್ನು ಕೊಯ್ಯುತ್ತಾರಲ್ಲ. ಅಯ್ಯೋ!

ಶ್ಲೋ । ಶೌಚಂನಾಚರಿತುಂಯಥಾವಿಧಿಕಲೌಶಕ್ತಾದ್ವಿಜಾಃಕಿಂ
ಚತೇಯಃ *ಖಲ್ವಾಚಮನಾಪ್ಲವಾದಿನಿಯಮಸ್ತಂಸ್ಮರ್ತುಮಪ್ಯ
ಕ್ಷಮಾಃ।ಕ್ವಾಮೀಷಾಂಪುನರಗ್ನಿಹೋತ್ರನಿಯಮಃಕ್ವೇಷ್ಟಯಃ †ರ
ನುಷ್ಠಾನಗೀಃಕ್ವಾಗ್ನಿಷ್ಟೋಮಮುಖಾಮಖಾಸ್ಸಪಶುಕಾಃ ‡ಕ್ವ
ತ್ಯಾಗ್ನಿಚಿತ್ಯಾತ್ರುಸಾ ॥ ೫೨೫ ॥

---

* ಯಃಖಲ್ವಾಚಮನಾಪ್ಲವಾದಿನಿಯಮಾ ಮಾಸ್ತಾನ್ † ಅನುಷ್ಠಾನಧೀಃ ‡ ಕ್ವಾತ್ಯಗ್ನಿಚಿತ್ಯಾದಯಃ ಇತಿಪಾಠಾಂತರಾಣಿ ॥

ಟೀಕಾ ||ಶೌಚಮಿತಿ || ಕಿಂಚ_ಕಲೌಯುಗೇ_ಯೇದ್ವಿಜಾಃ_ಶೌಚಂಪಾದಪ್ರಕ್ಷಾಲನಾದಿಕಂ_ಯಥಾವಿಧಿ ಶಾಸ್ತ್ರಮನತಿಕ್ರಮ್ಯ_ಆಚರಿತುಂನಶಕ್ತಾಃ_ತೇದ್ವಿಜಾಃ_ಆಚಮನಂಆಪ್ಲವಃ ಸ್ನಾನಂಚಆದಿಯಸ್ಯ ಸಚಾಸೌನಿಯಮಃ ಯಃಖಲು_ ತನ್ನಿಯಮಂ_ ಸ್ಮರ್ತುಮಪಿ_ ಕಿಮುತಕರ್ತುಮಿತಿಭಾವಃ_ ಅಕ್ಷಮಾಃ ಅಶಕ್ತಾಃ_ ಅವಿೋಷಾಂ ದ್ವಿಜಾನಾಂ ಶೌಚಾಚರಣೆಪ್ಯಶಕ್ತಾನಾಂ ಪುನಶ್ಶಬ್ದಸ್ತ್ವರ್ಥೇ_ ಅಗ್ನಿಹೋತ್ರಂಸಾಮನಿಯಮಕರ್ಮ_ ಕ್ವ_ನಾಸ್ತ್ಯೇವೇತ್ಯರ್ಥಃ_ ಇಷ್ಟೇಃದರ್ಶಪೂರ್ಣಮಾಸಾದೇಃ_ ಅನುಷ್ಠಾನಗೀಃ ಅನುಷ್ಠಾನಾಂಗೀಕರಣವಾರ್ತಾಕ್ವ_ ಪಶುಭಿಸ್ಸಹಿತಾಸ್ಸಪಶುಕಾಃ_ ಅಗ್ನಿಷ್ಟೋಮಮುಖಾಃಮಖಾಃಕ್ವ_ ಸಾಪ್ರಸಿದ್ಧಾ_ಅಗ್ನಿಚಿತ್ಯಾಸ್ಥಂಡಿಲವಿಶೇಷಕ್ರಿಯಮಾಣಾ ಹೋಮಕರ್ಮಕ್ವತ್ಯಾಕ್ವಭವತಿ ||

ಅರ್ಥ || ಕೈಕಾಲು ತೊಳಕೊಳ್ಳೋಣ ಮೊದಲಾದ ಶೌಚಾಚಾರವನ್ನು ಶಾಸ್ತ್ರಕ್ಕನುಸಾರವಾಗಿ ಮಾಡಲರಿಯದ ಈ ಬ್ರಾಹ್ಮಣರು ಆಚಮನಸ್ನಾನಪೇ ಮೊದಲಾದ ಕರ್ಮಕಟ್ಟಳೆಗಳನ್ನು ನೆನಪಿನಲ್ಲಿ ತರಲಿಕ್ಕೆ ಕೂಡ ಅಸಮರ್ಥರು ಇಂಥಾ ಬ್ರಾಹ್ಮಣರಿಗೆ ಅಗ್ನಿಹೋತ್ರದ ಕಟ್ಟಳೆ ಹ್ಯಾಗೆ ತಿಳದೀತು? ದರ್ಶಪೂರ್ಣಮಾಸಾದಿ ಇಷ್ಟಿಗಳ ಸುದ್ದಿ ಎಲ್ಲಿಂದ ಬಂದೀತು? ಪಶುಗಳ ವಧದಿಂದಾಗುವ ಅಗ್ನಿಷ್ಟೋಮವೇ ಮೊದಲಾದ ಯಜ್ಞಗಳೆಲ್ಲಿಂದ ಬಂದಾವು? ಮತ್ತು ಆ ಪ್ರಸಿದ್ಧವಾದ ಅಗ್ನಿಚಿತಿಹೋಮ ಹ್ಯಾಗೆ ಕೈಗೂಡುವದು?

ವಿಶ್ವಾವಸುಃ ||

ಮೂ | ಸ್ಥೂಲಮನೀಷಮೃಷಾಕಿಮಿತಿಭಾಷಸೇ || ೫೧೬ ||

ಟೀಕಾ || ಸ್ಥೂಲೇತಿ || ಹೇಸ್ಥೂಲಮನೀಷ ಮಂದಬುದ್ಧೇ ||

ಅರ್ಥ || ಮಂದಬುದ್ಧಿಯವನೇ ಹೀಗ್ಯಾಕೆ ಸಟೆಯಾಡುತ್ತೀ?

ಮೂ | ಯತಃ | ಶ್ಲೋ | ಶಿಷ್ಟೇಭ್ಯಃಪ್ರತಿಗೃಹ್ಯವಿತ್ತಮುಚಿತಂಸಂಪಾದ್ಯವಿದ್ಯಾಃಕಲೌ ಶ್ರದ್ಧಾಲೂನ್ಶ್ರುತಿಕಲ್ಪಸೂತ್ರಚತುರಾನ್ಲಬ್ಧ್ವಾಶುಚೀನೃತ್ವಿಜಃ| ಪ್ರೀತಿಂಭಾಗವತೀಂಪ್ರಕಾಮಮಭಿಸಂಧಾಯಾಹರಂತಃಕ್ರತೂನ್ಧೀಮಂ ತೋಯುಗಮಂತಿಮಂತುಕೃತಯಂತ್ಯಂತಮ್ರ್ಮಖಾಸ್ಸಂತತಂ || ೫೧೭ ||

ಟೀಕಾ|| ಶಿಷ್ಟೇಭ್ಯಇತಿ || ಧೀಃತತ್ವನಿರ್ಣಯಶಾಲಿನೀಬುದ್ಧಿರೇಷಾ ಮಸ್ತೀತಿಧೀಮಂತಃ_ ಅತಏವ_ ಅಂತಃದಹರಾಕಾಶೇಮುಖಂ ಮನೋಗತಿರ್ಯೇಷಾಂತೇ ಬ್ರಹ್ಮಪರಾಯಣಾಃ_ ಬ್ರಾಹ್ಮಣೇಭ್ಯಃ ಶಿಷ್ಟೇಭ್ಯ ಉಚಿತಂ ಅನಿಂದ್ಯತ್ವೇನ ಪರ್ಯಾಪ್ತತ್ವೇನವಾಅನುರೂಪಂವಿತ್ತಂ ಪ್ರತಿಗೃಹ್ಯ_ 'ವಿದ್ಯಾಃಸಂಪಾದ್ಯಫಲವದರ್ಥಾವಬೋಧಪರ್ಯಂತಂಅಧೀತ್ಯ_ ಶ್ರದ್ಧಾಲೂನ್ಕ್ರತುಸಾದ್ಗುಣ್ಯಾಸಾಂಪಾದಿಕೇಚ್ಛಾವತಃ_ಶ್ರುತಿಷು ಕಲ್ಪಸೂತ್ರೇಷು_ ಶ್ರೌತೇಷು ಆಶ್ವಲಾಯನಾಪಸ್ತಂಬೀಯಾದಿಷು ಚತುರಾನ್ ಕುಶಲಾನ್_ಶುಚೀನ್ ಪರಿಶುದ್ಧಾನ್ ಋತ್ವಿಜಃ ಅಧ್ವರ್ಯೂದ್ಗಾತ್ರಾದೀನ್_ ಲಬ್ಧ್ವಾ_ ಭಗವತಃ ಪರಮೇಶ್ವರಸ್ಯ ಇಮಾಂ ಭಾಗವತೀಂ_ ಪ್ರೀತಿಂಸಂತೋಷಂ_ ಅಭಿಸಂಧಾಯಸಂಕಲ್ಪ್ಯ_ಕಲೌಯುಗೇಕ್ರತೂನ್ ಸಂತತಂ ಆಹರಂತಃ ಕುರ್ವಂತಸ್ಸಂತಃ_ಅಂತಿಮಂಯುಗಂಕಲಿಂ_ ಕೃತಯಂತಿಕೃತಯುಗಂಕುರ್ವಂತಿ ||

ಅರ್ಥ ॥ ಸದ್ಗುಣವಂತರಿಂದ ಯಥಾನ್ಯಾಯವಾಗಿ ಬಂದ ಹಣವನ್ನು ತೆಗದುಕೊಂಡು ವಿದ್ಯೆಗಳನ್ನು ಕಲಿತು ಭಕ್ತಿಯುಕ್ತರಾದ ಮತ್ತು ಶ್ರೌತಸ್ಮಾರ್ತ ಕರ್ಮಗಳಲ್ಲಿ ಕುಶಲರಾದ ಋತ್ವಿಜರನ್ನು ಕರಸಿಕೊಂಡು ಭಗವಂತನ ಪ್ರೀತ್ಯರ್ಥವಾಗಿ ಕಲಿಯುಗದಲ್ಲಿ ಯಾವಾಗಲು ಯಜ್ಞಗಳನ್ನು ಮಾಡುವ ತತ್ವವೇತ್ತಿಗಳಾದ ಬ್ರಹ್ಮನಿಷ್ಠರು ಕೊನೆಯುಗ ಅಂದರೆ ಕಲಿಯುಗವನ್ನು ಕೃತಾಯುಗವಾಗಿ ಮಾಡುತ್ತಾರೆ.

ಮೂ । ಕಿಂಚ । ಶ್ಲೋ । ಅಯಜ್ಞಾರ್ಹದ್ರವ್ಯಾವಯಮಿತಿತು
ಯಜ್ಞಾದ್ವಿರಮತಾಂನಕಲ್ಪೇತ್ರಸ್ವೈರನ್ನೈರ್ನನುಭಗವದಾರಾಧನ
ಮಪಿ । ಪ್ರಯತ್ನೇನದ್ರವ್ಯಂಶುಚಿಕಿಮಪಿಲಬ್ಧ್ವಾಭಗವತಃಕೃತಂ
ಚೇತ್ಕೈಂಕರ್ಯಂಕಿಮಿತಿನತದೇ *ವಾಧ್ವರಸಮಮ್ ॥ ೫೨೮ ॥

ಟೀಕಾ ॥ ಅಯಜ್ಞೇತಿ ॥ ವಯಂ– ಯಜ್ಞಸ್ಯಅರ್ಹಂ ಯೋಗ್ಯಂದ್ರವ್ಯಂ ಯೇಷಾಂತೇ ನಭವಂತೀತಿ ಅಯಜ್ಞಾರ್ಹದ್ರವ್ಯಾಃ– ಇತಿಹೇತೋಃ ಯಜ್ಞಾದ್ವಿರಮತಾಂ ಯಜ್ಞಂತ್ಯಜತಾಮಿತ್ಯರ್ಥಃ– ಜುಗುಪ್ಸಾವಿರಾಮೇತ್ಯಾದಿನಾಅಪಾದಾನತ್ವಂ– ಸ್ವೈಃಸ್ವೀಯೈರನ್ನೈಃ– ಭಗವತಃ– ಆರಾಧನಂನಿವೇದನಮಪಿ– ನಕಲ್ಪೇತನಕ್ರಿಯೇತ– ನನ್ವಿತಿಪ್ರಶ್ನೇ.ಸ್ವದ್ರವ್ಯಮಾತ್ರಸ್ಯ ದೇವಪೂಜಾತ್ಮಕ ಯಜ್ಞಾನರ್ಹತ್ವಾದಿತಿಭಾವಃ– ಪ್ರಯತ್ನೇನ ಅನಿಂದ್ಯೇನ– ಶುಚಿಕಿಮಪಿಕಿಂಚಿದ್ದ್ರವ್ಯಂಲಬ್ಧ್ವಾ– ಭಗವತಃ ಕೈಂಕರ್ಯಂ ಪೂಜನಂ ಕೃತಂಚೇತ್ತೇನೇತಿಶೇಷಃ– ತತ್ಭಗವತ್ಕೈಂಕರ್ಯಮೇವ– ಅಧ್ವರಸಮಂಕಿಮಿತಿನಭವತಿ– ಭವೇದೇವೇತ್ಯರ್ಥಃ– ತಥಾಚಭಗವತ್ಕೈಂಕರ್ಯಾಧ್ವರಯೋರ್ಯಜ್ಞತ್ವಾವಿಶೇಷಾದಧ್ವರತ್ಯಾಗೇಭಗವತ್ಕೈಂಕರ್ಯಸ್ಯಾಪಿತ್ವನ್ಮತೇತ್ಯಾಗಾಪತ್ತಿರಿತಿಭಾವಃ ॥

ಅರ್ಥ ॥ ಇದಲ್ಲದೆ: ತಮ್ಮ ಹತ್ತರ ಯಜ್ಞಕ್ಕೆ ಯೋಗ್ಯವಾಧ ಧನಯಿರುವದಿಲ್ಲೆಂದು ಬ್ರಾಹ್ಮಣರು ಯಜ್ಞಗಳನ್ನು ಬಿಟ್ಟುಗೊಟ್ಟರೆ ಅವರು ತಮ್ಮ ಸ್ವಂತ ಅನ್ನದಿಂದ ದೇವರ ನೈವೇದ್ಯ ಕೂಡ ಮಾಡುವದು ನಿಂತು ಹೋದೀತಲ್ಲವೇ ? ಕಷ್ಟಬಿಟ್ಟು ಎಷ್ಟಾದರೂ ನಿರ್ದೋಷವಾದ ಧನಕೂಡಿಸಿ ಅದರಿಂದ ಭಗವಂತನ ಸೇವೆಮಾಡಿದರೆ ಅದೇ ಯಜ್ಞತುಲ್ಯವಾಗದೋ ? ಆಗುವದು ಯಂಬ ತಾತ್ಪರ್ಯವು.

ಶ್ಲೋ । ಹಿಂಸಾಕೃತ್ಪ್ರತ್ಯವೇಯಾದಿತಿಕಥಯತಿಯೋವೇದವಿ
ವೈಷಯಾಗೇ ಪಶ್ವಾಲಂಭಂ ವಿಧತ್ತೇಯದಿಕಇಹಮುಖೈವೈದಿಕ
ಸ್ಸಂಶಯೀತ । ಹಿಂಸಾತ್ವಾಭಾವಮೇವಾಧ್ವರಪಶುನಿಹತೇರಾಹ
ರಾಮಾನುಜಾರ್ಯಃ ತತ್ಪಕ್ಷಸ್ಥೋಪಿಯೋನಪ್ರಸಜತಿಯಜನೇ
ಕಸ್ತದನ್ಯೋಗುರುದ್ವಿಟ್ ॥ ೫೨೯ ॥

ಟೀಕಾ ॥ ಹಿಂಸೇತಿ ॥ ಹಿಂಸಾಕೃತ್ಪ್ರಾಣಿಹಂತಾ– ಪ್ರತ್ಯವೇಯಾತ್ ಪಾಪೋಭವೇತ್– ನಹಿಂ

* ಅಧ್ವರಮುಮಿತಿ ಪಾಠಾಂತರಂ ॥

ಸ್ಯಾತ್ಸರ್ವಭೂತಾನೀತ್ಯಾದಿನಾ ಹಿಂಸಾಯಾನಿಷಿದ್ಧತ್ವಾದಿತಿಭಾವಃ— ಇತ್ಯುಕ್ತಪ್ರಕಾರಂಯೋ ವೇದಃ ಕಥಯತಿ— ಏಷಸಏವವೇದಃ— ಯಾಗೇಪಶೋಸ್ತ್ಯಾಗಾದೇಃ ಆಲಂಭಂಹಿಂಸಾಂ— ವಿಧತ್ತೆಪ್ರೇರಯತಿಯ ದಿ— ಅಗ್ನೀಷೋಮೀಯಂ ಪಶುಮಾಲಭೇತೇತ್ಯಾದಿನೇತಿಭಾವಃ— ತರ್ಹಿ— ವೇದಮಧೀತೇವೇದವಾವೈ ದಿಕಃ ಕಃ— ಮಖೇವಿಷಯೇಸಂಶಯಿತಸಂದೇಹಂ ಕುರ್ಯಾತ್— ನಕೋಪೀತ್ಯರ್ಥಃ— ಉಭಯತ್ರಪ್ರಾ ಮಾಣ್ಯೇ ಪ್ರಾಮಾಣ್ಯಸಂಶಯೇವಾ ಯಾಗೀಯಹಿಂಸಾಯಾ ಅವರ್ಜನೀಯತ್ವಮಿತಿಹೃದಯಂ—ಕಿಂಚ— ರಾಮಾನುಜಾರ್ಯೈಃ— ಯಾಗದೂಷಕಾಣಾಂ ತೆಂಗಲಾಖ್ಯಾನಾಂ ಗುರುಭಿರೇವ— ಅಧ್ವರೇಪಶೋರ್ನಿ ಹತೇರ್ವಧಸ್ಯ— ಹಿಂಸಾತ್ವಾಭಾವಮಾಹ— ತತ್ಪಕ್ಷಸ್ಥಃ— ರಾಮಾನುಜಮತೇ ವರ್ತಮಾನೋಪಿಯೋ ಜನಃ— ಯಜನೇಸಪಶುಕೆಯಾಗೇ— ನಪ್ರಸಜತಿನೋದ್ಯುಙ್ತೇ— ತದನ್ಯಃ ಗುರುದ್ವಿಟ್ಗುರುದ್ವೇಷೀ—ಕಃ— ನಕೋಪಿ—ಕಿಂತುಸಏವೇತ್ಯರ್ಥಃ ||

ಅರ್ಥ || ಕೊಲ್ಲುವವನಿಗೆ ಪಾಪ ಬರುತ್ತದೆಂದು ಯಾವ ವೇದ ಹೇಳುತ್ತದೆಯೋ ಆ ವೇದವೇ ಯಜ್ಞದಲ್ಲಿ ಪಶುವನ್ನು ಕೊಲ್ಲಬಹುದೆಂದು ಹೇಳುತ್ತೆ. ಆದದರಿಂದ ವೈದಿಕ ನಾದವನ್ಯಾರು ಯಜ್ಞದ ವಿಷಯದಲ್ಲಿ ಸಂಶಯ ಬಡುವನು? ಯಾರೂ ಸಂಶಯ ಬಡ ಲಿಕ್ಕಿಲ್ಲ. ಯಜ್ಞಕ್ಕೋಸ್ಕರವಾಗಿ ಪಶುವನ್ನು ಕೊಂದರೆ ಕೊಲೆಪಾತಕ ಉಂಟಾಗದೆಂತಾ ರಾಮಾನುಜಾಚಾರ್ಯರೇ ಹೇಳಿರಲು ಅವರ ಮತದವನು ಪಶುಯಜ್ಞದಲ್ಲಿ ಉದ್ಯುಕ್ತ ನಾಗದಿದ್ದರೆ ಅವನಲ್ಲದೆ ಬೇರೆ ಯಾರು ಲೋಕದಲ್ಲಿ ಗುರುದ್ವೇಷಿ ? ಅವನೇ ಗುರುದ್ವೇ ಷಿ ಎಂಬ ತಾತ್ಪರ್ಯ.

ಮೂ । ಇದಂಚಾವಧೇಯಮ್ ||

ಶ್ಲೋ । ಹಿಂಸಾಂತರೇಷ್ವಿವಮಖಾಶ್ರಿತಹಿಂಸನೇಪಿಜೈನೇತರೋ
ಯದಿಜನೋಭಜತೇಜುಗುಪ್ಸಾಂ। ನಾರ್ಯಂತರೇಷ್ವಿವನನಿಂದತಿ
ನಂದನಾನಾಂನಿಷ್ಪಾದನಂಕಿಮನಘೇಪಿನಿಜೇಕಲತ್ರೇ || ೫೩೦ ||

ಟೀಕಾ || ಹಿಂಸೇತಿ || ಜೈನಾತ್ ಬೌದ್ಧಾದಿತರಃ ಜನಃ ಹಿಂಸಾಂತರೇಷು ಯಾಗೀಯಾತಿರಿಕ್ತ ಹಿಂಸಾ ಸ್ವಿವ—ಮಖಾಶ್ರಿತೇಯಾಗೀಯೇಹಿಂಸನೇಪಿ—ಜುಗುಪ್ಸಾಂ ಉಪಕ್ರೋಶಂ ಭಜತೇಯದಿತರ್ಹಿ—ನಾರ್ಯಂ ತರೇಷು ಪರಾಂಗನಾಸ್ವಿವ— ಅನಘೇನಿರ್ದೋಷೇ— ನಿಜೇಕಲತ್ರೇಭಾರ್ಯಾಯಾಮಪಿ— ನಂದನಾನಾಂನಿ ಷ್ಪಾದನಂ— ಪುತ್ರೋತ್ಪಾದನಂ ಕಿಂಕಸ್ಮಾನ್ನನಿಂದತಿ— ಹಿಂಸಾಪುತ್ರೋತ್ಪಾದನತ್ವಯೋರುಭಯತ್ರಾ ವಿಶೇಷಾದಿತಿಭಾವಃ ||

ಅರ್ಥ || ಇದನ್ನಾಲೈಸು. ಜೈನರ ಹೊರತಾಗಿ ಬೇರೆ ಜನರಿಗೆ ಯಜ್ಞಸಂಬಂಧಿ ವಧವು ಯಜ್ಞಕ್ಕೆ ಸಂಬಂಧವಿಲ್ಲದವಧವಂತೆ ನಿಂದ್ಯವಾದರೆ, ಪರಸ್ತ್ರೀಯಲ್ಲಿ ಪುತ್ರೋ ತ್ಪತ್ತಿ ಹ್ಯಾಗೆ ನಿಂದ್ಯವೋ ಹಾಗೆಯೇ ದೋಷರಹಿತವಾದ ಸ್ವಂತ ಹೆಂಡತಿಯಲ್ಲಿ ಸಂತಾ ನೋತ್ಪತ್ತಿ ಯಾಕೆ ನಿಂದ್ಯವಾಗಬಾರದು ? ಅಂದರೆ ಪಶುವಧವು ಯಜ್ಞಕ್ಕೆ ಸಂಬಂಧವಾ ಗಿರಲೀ ಅಥವಾ ಯಜ್ಞಕ್ಕೆ ಸಂಬಂಧವಿಲ್ಲದ್ದಾಗಿರಲೀ ಸರ್ವಥಾ ನಿಂದ್ಯವಾದರೆ ಅದೇ ರೀತಿ ಯಾಗಿ ಪರಸ್ತ್ರೀಯಲ್ಲ್ಯಾಗಲೀ ಸ್ವಂತ ಹೆಂಡತಿಯಲ್ಲ್ಯಾಗಲೀ ಮಾಡುವ ಪುತ್ರೋತ್ಪತ್ತಿಯು ದೋಷಕ್ಕೊಳಗಾದದ್ದೆನ್ನಬೇಕು ಎಂಬ ತಾತ್ಪರ್ಯವು.

ಮೂ । ಇದಮವಗಂತವ್ಯಮ್ ॥

ಶ್ಲೋ । ಋತ್ವಿಗ್ವಿಶುದ್ಧಿವಿರಹಾದಿ *ವಿಶಂಕಯಾಯೇ ಕೇಚಿತ್ಕಲೌ
ಜಹತಿ ನಿತ್ಯಮಪಿ ಕ್ರತುಂ ತೇ । ಮುಂಚಂತಿ ಗುರ್ವಶುಚಿತಾವಿಷಯೇ
ನ ಕಿನ್ನು ಚಕ್ರಾಂಕವೈಷ್ಣವಮನುಗ್ರಹಣಾದಿ ಸರ್ವಮ್ ॥ ೫೩೧ ॥

ಟೀಕಾ ॥ ಋತ್ವಿಗಿತಿ ॥ ಯೇ ಕೇಚಿತ್ತೆಂಗಲಾಖ್ಯಾಃ—ಕಲೌ— ಋತ್ವಿಜಾಂ ವಿಶೇಷೇಣ ವಿಶುದ್ಧೇಃ ವಿರಹಃ ಅಭಾವಃ ಆದಿರ್ಯೇಷು ತೇಷು ವಿಶಂಕಯಾ ಸಂದೇಹೇನ— ನಿತ್ಯಮಪಿ ಕ್ರತುಂ— ಜಹತಿ ತ್ಯಜಂತಿ ಚೇತ್ತರ್ಹಿ— ತೇ ಗುರೋರಾಚಾರ್ಯಪುರುಷಸ್ಯ ಅಶುಚಿತಾಯಾಂ ವಿಷಯೇನ ಸಂಶಯೇನ— ಚಕ್ರಾಂಕಃ ವೈಷ್ಣವಮನೋಃ— ನಾರಾಯಣಾಷ್ಟಾಕ್ಷರಸ್ಯ ಗ್ರಹಣಂ ಚಾದಿರ್ಯಸ್ಯ ತತ್ಸರ್ವಂ ಪಂಚಸಂಸ್ಕಾರಾನ್— ಕಿಂ ನ ಮುಂಚಂತಿ—ಅಪರಿಶುದ್ಧಿಸಂಶಯಯೋರು ಭಯತ್ರ ತುಲ್ಯತ್ವಾದಿತಿ ಭಾವಃ ॥

ಅರ್ಥ ॥ ಇದನ್ನು ತಿಳಿ. ಏನೆಂದರೆ:

ದೋಷರಹಿತರಾದ ಋತ್ವಿಜರೇ ಮೊದಲಾದ ಸಾಧನ ದೊರಿಯುವದು ಅಸಾಧ್ಯವೆಂಬ ಸಂದೇಹದಿಂದ ನಿತ್ಯ ಯಜ್ಞ ಕೂಡ ಬಿಟ್ಟು ಬಿಡುವ ತೆಂಗಲೆವೈಷ್ಣವರು ಗುರುವಿನ ಪವಿತ್ರತೆಯ ವಿಷಯದಲ್ಲಿ ಸಂದೇಹಗೊಂಡು ಚಕ್ರಾಂಕನೆ ಮಂತ್ರೋಪದೇಶಗಳೇ ಮೊದಲಾದ ಪಂಚಸಂಸ್ಕಾರಗಳನ್ನೆಲ್ಲ ಬಿಡುವರೋ ?

ಮೂ । ಕಿಂಚ । ಶ್ಲೋ । ಸರ್ವೈರ್ವೇದೈಃ ಸ್ಮೃತಿಗಣಯುತೈಸ್ಸೇ
ತಿಹಾಸೈಃ ಪುರಾಣೈಶ್ಶಿಷ್ಟಾಚಾರೈರಪಿ ನಿಯಮಿತಾನಧ್ವರಾನ್ಮಧ್ವ
ರಾತೇಃ । ಆಜ್ಞಾಸಿದ್ಧಾನಹಹ ಜಹತಸ್ತದ್ವಿರುದ್ಧಾನಿ ಕೃತ್ಯಾನ್ಯಾ
ತನ್ವಂತಃ ಕತಿಚಿದಪರಾನಪ್ಯಮೀ ಶಿಕ್ಷಯಂತಿ ॥ ೫೩೨ ॥

ಟೀಕಾ ॥ ಸರ್ವೈರಿತಿ ॥ ಸರ್ವೈರ್ವೇದೈಃ ಸ್ಮೃತಯಃ ಮಾನವ್ಯಾದಯಃ ತದ್ಗಣಯುತೈಸ್ಸೇತಿಹಾಸೈಃ ಪುರಾಣೈಃ ಶಿಷ್ಟಾಚಾರೈರಪಿ— ನಿಯಮಿತಾನ್ ಕರ್ತವ್ಯತ್ವೇನ ಜ್ಞಾಪಿತಾನ್— ಮಧ್ವರಾತೇರ್ಭಗವತಃ ಆಜ್ಞಾಸಿದ್ಧಾನಪಿ— ಅಹಹೇತ್ಯಾಶ್ಚರ್ಯೇ— ಅಧ್ವರಾನ್— ಜಹತಃ ತ್ಯಜಂತಃ— ಸಾಭ್ಯಾಸಾದಿತಿ ನುಮ್ನಿಷೇಧಃ—ತೇಷಾಂ ಶ್ರುತಿಸ್ಮೃತೀತಿಹಾಸಪುರಾಣಶಿಷ್ಟಾಚಾರ ಭಗವದಾಜ್ಞಾನಾಂ ವಿರುದ್ಧಾನಿ ಕೃತ್ಯಾನಿ—ಸ್ವಸಂಕೇತಸಿದ್ಧಾನಿ— ಆತನ್ವಂತಃ ಕುರ್ವಂತಃ— ಕತಿಚಿದಮೀ ಅಪರಾನ್ ಶ್ರೌತಸ್ಮಾರ್ತಾನುಷ್ಠಾತೄನ್— ಶಿಕ್ಷಯಂತಿ— ಅಪಿ ಗರ್ಹಾಯಾಂ— ಸ್ವಯಂ ಭ್ರಷ್ಟಸ್ಯ ಕಪೇರ್ವನಭಂಜನಮಿವೈ ತದ್ವೃತ್ತಮಿತ್ಯುಪಹಾಸೇ ವಾ ॥

ಅರ್ಥ ॥ ನಾಲುಕು ವೇದಗಳಿಂದಲೂ ಸ್ಮೃತಿಸಮೂಹದಿಂದಲೂ ಪುರಾಣ ಇತಿಹಾಸಗಳಿಂದಲೂ ಶ್ರೇಷ್ಠರ ಆಚಾರದಿಂದಲೂ ಮಾಡಲ್ಪಟ್ಟಿರುವ ಕಟ್ಟಿನ ಮೇರಿಗೆ ಮತ್ತು ಶ್ರೀವಿಷ್ಣುವಿನ ಅಪ್ಪಣೆ ಮೇರಿಗೆ ನಡಿಯತಕ್ಕ ಯಜ್ಞಗಳನ್ನು ಬಿಟ್ಟುಗೊಟ್ಟು, ವೇದಶಾಸ್ತ್ರಾದಿಗಳಿಗೆ ವಿರೋಧವಾದ ಕರ್ಮಗಳನ್ನು ಮಾಡುವಂಥಾವರಾದ ಕೆಲವರಿವರು ಪೆರರನ್ನು ಕೂಡ ಉಪದೇಶಮಾಡುತ್ತಾರೆ. ಅಹಹ ಏನು ಆಶ್ಚರ್ಯವಿದು !

---

* ಅತಿಶಂಕಯಾ ಇತಿಪಾಠಾಂತರಂ ॥

ಮೂ। ಕಿಂಬಹುನಾ। ಶ್ಲೋ। ಯಾಗಂಯೇಬತೆವೈಷ್ಣವಾವಿಜ ಹತಿಛಾಗಚ್ಛಿದಾಭೀತಿತಃ ಶಿಷ್ಯಕ್ಲೇಶನಸಾಧ್ವಸಾಜ್ಜಹತುತೇಚ ಚಕ್ರಾಂಕನಪ್ರಕ್ರಿಯಾಂ। ಪೂರ್ವಸ್ಮಿನ್ಬಹುಸಮ್ಮತಿರ್ಭಗವತಃ ಪ್ರೀತಿಃಫಲಂನೋಧನಾ ನ್ಯಲ್ಪೀಯೋಭಿಮತಿಃಪರತ್ರಫಲಮಸ್ಯ ರ್ಥಾಪ್ತಿರಿತ್ಥಂಭಿದಾ ॥ ೫೭೭ ॥

ಟೀಕಾ ॥ ಯಾಗಮಿತಿ ॥ ಯೇವೈಷ್ಣವಾಃ ಛಾಗಸ್ಯ ಛಿದಾಭೀತಿತಃ ಹಿಂಸಾಭಯಾತ್–ಯಾಗಂ–ವಿಜಹತಿ–ಬತೇತ್ಯಾಶ್ಚರ್ಯೇ–ತೇತೆಂಗಲಾಖ್ಯಾಃ ಶಿಷ್ಯಾಣಾಂ ಕ್ಲೇಶನಂ ತಾಪನಂ ತಸ್ಮಾತ್ ಸಾಧ್ವಸಾದ್ಭಯಾತ್–ಚಕ್ರಾಂಕನಸ್ಯ ಪ್ರಕ್ರಿಯಾಂಕರಣಮಪಿ–ಜಹತು–ಪ್ರಾಪ್ತಕಾಲೇಲೋಟ್–ದ್ವಯೋಸ್ಸಾಧಕ ತಾರತಮ್ಯ ವಿಮರ್ಶೇತು ಚಕ್ರಾಂಕನಮೇವತ್ಯಾಜ್ಯಂ ಸ್ಯಾದಿತ್ಯಾಹ–ಕಿಂಚ–ಪೂರ್ವಸ್ಮಿನ್ ಯಾಗೇ ವಿಷಯೇ–ಬಹೂನಾಂ ವಾದಿನಾಂ ಅಖಿಲಮತಸ್ಥಾನಾಂ ಸಮ್ಮತಿಃ ಅಂಗೀಕಾರಃ–ಭಗವತಃ ಪ್ರೀತಿಃ ಫಲಂ–ಧನಾನಿರಾಗದ್ವೇಷ ಜನಕಾನಿ– ಫಲಂನೋಭವಂತಿ–ಪರತ್ರಚಕ್ರಾಂಕನೇತು–ಅಲ್ಪೀಯಸೀ ಏಕದ್ವಾನಾಂ ಅಭಿಮತಿಃ–ಅರ್ಥಾನಾಂ ಆಪ್ತಿಃ ಜಾರಚೋರ ಕಿರಾತಾದಿ ದುಷ್ಟಶಿಷ್ಯೇಭ್ಯಃ ಲಾಭಃ ಫಲಂ–ನತುಭಗವತ್ ಪ್ರೀತಿಃ–ಇತ್ಥಂ ಉಕ್ತಪ್ರಕಾರಾಭಿದಾ ವಿಶೇಷತಃ ತಾರತಮ್ಯ ಮಸ್ತೀತಿಯೋಜ್ಯಂ ॥

ಅರ್ಥ ॥ ಬಹಳ ಹೇಳುವದ್ಯಾಕೆ.

ಕುರಿಕೊಲೆಯ ಅಂಜಿಕೆಯಿಂದ ಯಜ್ಞವನ್ನು ಬಿಟ್ಟುಬಿಡುವ ಈ ತೆಂಗಲೆ ವೈಷ್ಣವರು ಶಿಷ್ಯರಿಗೆ ಉರಿ ಉಂಟುಪಡಿಸುವ ಭಯದಿಂದ ಚಕ್ರಾಂಕನ ಸಂಸ್ಕಾರವನ್ನು ಬಿಟ್ಟುಗೊಡಲೀ ! ಯಜ್ಞಗಳ ವಿಷಯದಲ್ಲಿ ಎಲ್ಲ ಮತದವರ ಒಪ್ಪಿಗೆಯುಂಟು. ಯಜ್ಞಗಳಿಂದ ನಮಗೆ ಭಗವಂತನು ಪ್ರಸನ್ನನಾಗುತ್ತಾನೆ, ಮತ್ತು ಸಂಪತ್ತಿ ಸಿಗುತ್ತದೆ. ಚಕ್ರಾಂಕನ ಸಂಸ್ಕಾರದ ವಿಷಯದಲ್ಲಿ ಒಂದೆರಡು ಮತದವರ ಒಪ್ಪಿಗೆ ಮಾತ್ರ ಉಂಟು. ಮತ್ತು ಅದರಿಂದ ಚಕ್ರಾಂಕನ ಮಾಡಿ ಕೊಳ್ಳುವವರು ಕೊಡುವ ದುಡ್ಡಿನ ಹೊರತು ಬೇರೆ ಲಾಭವಿಲ್ಲವು. ಈ ಪ್ರಕಾರವಾಗಿ ಯಜ್ಞಗಳು ಚಕ್ರಾಂಕನದಿಂದ ಭೇದಉಳ್ಳವು.

ಕೃಶಾನುಃ ॥

ಮೂ। ವಿಹಸ್ಯ। ಶ್ಲೋ। ತಪ್ತಾಭ್ಯಾಂಶಂಖಚಕ್ರಾಭ್ಯಾಂತಾಪನಂ ಪ್ರಾಣಿನಾಮಿದಮ್। ಛಾಗಾಲಂಭಸಮತ್ವೇನಸಾಧೋ *ಕಿಮುಪ ವರ್ಣ್ಯತೇ ॥ ೫೭೮ ॥

ಟೀಕಾ ॥ ತಪ್ತಾಭ್ಯಾಮಿತಿ ॥ ಪ್ರಾಣಿನಾಂ ಶಿಷ್ಯಾಣಾಂ ಸಂಬಂಧಿ–ತಪ್ತಾಭ್ಯಾಂ ಶಂಖಚಕ್ರಾಭ್ಯಾಂ ತಾಪನಂ– ಛಾಗಾಲಂಭಸ್ಯ ಪಶುಹಿಂಸಾಯಾಸ್ಸಮತ್ವೇನ ತುಲ್ಯತ್ವೇನ– ಹೇಸಾಧೋ ಇತ್ಯುಪಹಾಸಃ–ತ್ವಯಾ ಕಿಂ ಕುತಃ ಉಪವರ್ಣ್ಯತೇ ॥

ಅರ್ಥ ॥ ಕೃಶಾನುವು ನಗೆಮಾಡಿ ಹೇಳುತ್ತಾನೆ.

---

* ಕಿಮಿತಿವರ್ಣ್ಯತೆ ಇತಿಪಾಠಾಂತರಂ ॥

ಎಲಾ ಮಹಾಪುರುಷನೇ, ಶಿಷ್ಯರಿಗೆ ಶಂಖಚಕ್ರಗಳಿಂದ ಸುಡುವದು ಕುರಿಕೊಲೆಗೆ ಸರಿಮಾಡುತಿಯೊ ?

ವಿಶ್ವಾವಸುಃ ॥

ಮೂ । ಗುಣದೋಷತಾರತಮ್ಯಾನಭಿಜ್ಞಶ್ಶೃಣುತಾವದಿದಮ್ ॥ ೫೩೫ ॥

ಅರ್ಥ ॥ ಇದು ಒಳ್ಳಿತು ಇದು ಕೆಟ್ಟದ್ದು ಎಂತ ತಿಳಕೊಳ್ಳುವಷ್ಟು ಬುದ್ಧಿ ಇಲ್ಲದವನೇ, ಹೇಳುತ್ತೇನೆ ಕೇಳು.

ಶ್ಲೋ । ಛಾಗಾಲಂಭಸಹಸ್ರತಃಕ್ಷಿತಿಸುರಸ್ಯೈಕಸ್ಯಹಿಂಸಾಧಿಕಾ ತಸ್ಮಾದ್ಬ್ರಾಹ್ಮಣತಾಪನಂನಕಿಮಿದಂತುಲ್ಯಂಪಶೋರ್ಹಿಂಸಯಾ । ಶಾಸ್ತ್ರಾತ್ತಪ್ತರಥಾಂಗ *ಧಾರಣಮಿದಂಶ್ರೇಯಸ್ಕರಂ ಚೇತ್ತದಾ †ವೇದಾದೇವಮಖೇಪಶೋರ್ವಿಶಸನಂನ್ಯೈತೇನಕಿಮ್ರಿಯತೆ ॥ ೫೩೬ ॥

ಟೀಕಾ ॥ ಛಾಗೇತಿ ॥ ಯಸ್ಮಾದೇಕಸ್ಯ ಕ್ಷಿತಿಸುರಸ್ಯ ಹಿಂಸಾ ಏಕಾಬ್ರಹ್ಮಹತ್ಯಾ—ಛಾಗಾಲಂಭಸಹಸ್ರತಃ—ಅಧಿಕಾ—ತಸ್ಮಾತ್ ಏಕಬ್ರಹ್ಮಹತ್ಯಾಯಾಃ ಸಹಸ್ರ ಪಶುಹತ್ಯಾ ತುಲ್ಯತ್ವಾದ್ಧೇತೋಃ—ಇದಂ ಬ್ರಾಹ್ಮಣಸ್ಯ ತಾಪನಂ ತಪ್ತಶಂಖ ಚಕ್ರಮುದ್ರಾಕರಣಂ—ಪಶೋರೇಕಸ್ಯ ಹಿಂಸಯಾ ನ ತುಲ್ಯಂಕಿಂ—ತುಲ್ಯಂಭವೇದೇವೇತ್ಯರ್ಥಃ—ಶಾಸ್ತ್ರಾತ್ ತಪ್ತಶಂಖಚಕ್ರ ಮುದ್ರಾವಿಧಾಯಕ ಪಾಂಚರಾತ್ರಾಗಮಂ ಅವಲಂಬ್ಯ—ಲ್ಯಬ್ಲೋಪೆ ಪಂಚಮೀ—ಏವಮಗ್ರೇಪಿ । ಇದಂತಪ್ತೇನ ರಥಾಂಗೇನ ಚಕ್ರೇಣ ಧಾರಣಂ ಮುದ್ರಾಧಾರಣಂ—ಶ್ರೇಯಸ್ಕರಂಚೇತ್— ತದಾವೇದಾತ್ವೇದಮವಲಂಬ್ಯೈವ ಮಖೇಪಶೋರ್ವಿಶಸನಂ ಹಿಂಸಾ—ಏತೇನ ತಪ್ತಶಂಖಚಕ್ರ ಮುದ್ರಾಧಾರಣೇನ ನಮ್ರಿಯತೇಕಿಂ ನಸದೃಶೀಕ್ರಿಯತೇ ಕಿಮಿತಿಕಾಕುಃ ॥

ಅರ್ಥ ॥ ಒಬ್ಬ ಬ್ರಾಹ್ಮಣನ ವಧವು ಸಾವಿರ ಕುರಿಗಳ ಕೊಲೆಗಿಂತಲೂ ಹೆಚ್ಚು (ಅಂದರೆ ಒಬ್ಬ ಬ್ರಾಹ್ಮಣನ ವಧ ಸಾವಿರ ಕುರಿಗಳ ವಧಕ್ಕೆ ಸರಿಯಾದದ್ದು ಎಂಬ ಭಾವವು ), ಹಾಗಾದ ಮೇಲೆ ಒಬ್ಬ ಬ್ರಾಹ್ಮಣನನ್ನು ಸುಟ್ಟರೆ ಒಂದು ಪಶು ವಧಕ್ಕೆ ಸಮನಾಗಲಿಕ್ಕಿಲ್ಲವೋ ? ( ಆದೀತೆಂಬ ತಾತ್ಪರ್ಯವು ) ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಈ ಚಕ್ರಾಂಕನವು ಪುಣ್ಯವನ್ನುಂಟುಪಡಿಸುವಂಥಾದ್ದಾದರೆ ಸ್ವತಹಾ ವೇದಗಳಿಂದೇರ್ಪಟ್ಟ ಯಜ್ಞಗಳಲ್ಲಿ ಮಾಡುವ ಪಶುವಧವು ಶಂಖಚಕ್ರ ಮುದ್ರಾಧಾರಣೆಗೆ ಸರಿಯಾಗಲಾರದೋ? (ಸರಿಯಾಗುವದೆಂಬ ತಾತ್ಪರ್ಯ.)

ಮೂ । ಇತ್ಯಲಂಶ್ರುತ್ಯಯುತವಿಹಿತ ‡ಸದಾಚರಣಾವಶ್ಯಕತಾಸು

---

* ಧಾರಣಮಪಿ † ವೇದ್ಯೈರೇವ ಸವೆಪಶೋರ್ವಿಶಸನಾತ್ ಘನೋಪಿಕಿಂ ಹೀಯತೆ ಇತಿಪಾಠಾಂತರೆ ॥ ‡ ಸವನಕರಣಾವಶ್ಯಕತಾ ಇತಿಪಾಠಾಂತರಂ ॥

ಮರ್ಥನೇನ ಕರಬದರಾಸ್ತಿತ್ವಸಾಧಕಪ್ರಮಾಣಾಂತರಪರಿಕ
ಲ್ಪನಕಲ್ಪೇನೇತಿದಕ್ಷಿಣತೋ ವಿಮಾನಮಾನೀಯಸಶಿರಃಕಂಪಮ್

॥ ೫೩೭ ॥

ಟೀಕಾ ॥ ಇತೀತಿ ॥ ಶ್ರುತೀನಾಂ ಅಯುತಂ ದಶಸಹಸ್ರಾಣಿತೈರ್ವಿಹಿತಸ್ಯ ಸತಃಕರ್ಮಣಃ ಯಾಗಸ್ಯಾಚರಣ ಮನುಷ್ಠಾನಂ ತದಾವಶ್ಯಕತಾಯಾಸ್ಸಮರ್ಥನೇನ ಸಾಧನೇನ— ಕರೇವರ್ತಮಾನಸ್ಯ ಬದರಸ್ಯ ಫಲಸ್ಯ ಅಸ್ತಿತ್ವಂ ಸತ್ತಾತತ್ಸಾಧಕಸ್ಯ ಪ್ರಮಾಣಾಂತರಸ್ಯ ಪ್ರತ್ಯಕ್ಷಾನ್ಯ ಪ್ರಮಾಣಸ್ಯ ಪರಿಕಲ್ಪನಮುಪನ್ಯಾಸಃ ತತ್ಸದೃಶೇನ ತತ್ಕಲ್ಪೇನೇತಿ ಶ್ರುತ್ಯಯುತೇತ್ಯಾದೇರ್ವಿಶೇಷಣಂ ॥

ಅರ್ಥ ॥ ಅಂಗೈಯಲ್ಲಿರುವ ಬೋಗರಿ ಕಾಯಿಯ ಇರುವಿಕೆಯನ್ನು ಧಿಟಪಡಿಸಿಕೊಡುವದಕ್ಕೆ ಬೇರೆ ಪ್ರಮಾಣಗಳನ್ನು ಹುಡುಕುವಂತೆ, ಹತ್ತುಸಾವಿರ ಸಂಖ್ಯಾಕ ಶ್ರುತಿಗಳಿಂದ ವಿಧಿಸಲ್ಪಟ್ಟಿರುವ ಕಾರ್ಯವನ್ನು ಅವಶ್ಯವಾಗಿ ಮಾಡಲೇ ಬೇಕೆಂದು ಇಷ್ಟು ಮಟ್ಟಿಗೆ ಘಟ್ಟಿಪಡಿಸಿದ್ದು ಸಾಕೆಂದು ವಿಮಾನವನ್ನು ದಕ್ಷಿಣದಿಕ್ಕಿಗೆ ನಡಿಸಿ ತಲೆದೂಗಿಸುವಂಥಾವನಾಗಿ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ । ಖಂಜೀಕೃತಾಖಿಲಹೃದಾಂರಮಣೀಮಣೀನಾಂಮಂಜೀರ
ಮಂಜುತರಶಿಂಜಿತರಂಜಿತೇನ।ಚಂಜೀಪುರೀಯುವಗಣೇನಚಕಾಸ್ತಿ
ಪೂರ್ಣಾಸಂಜೀವಿತೋಗ್ರಪರಿವಂಚಿತಪಂಚಬಾಣಾ ॥ ೫೩೮ ॥

ಟೀಕಾ ॥ ಖಂಜೀಕೃತೇತಿ ॥ ಖಂಜೀಕೃತಂ ಗರ್ವಶೂನ್ಯೀಕೃತಂ—ಅಖಿಲಸ್ಯ ಸಾರ್ವತ್ರಿಕ ಸ್ತ್ರೀಜನಸ್ಯ ಹೃತ್ಮನೋಯಾಭಿಸ್ತಾಸಾಂ— ರಮಣೀಮಣೀನಾಂ ಸ್ತ್ರೀರತ್ನಾನಾಂ— ಮಂಜೀರಯೋರ್ನೂಪುರಯೋರ್ಮಂಜುತರೇಣ ಅತಿಮನೋಜ್ಞೇನ ಶಿಂಜಿತೇನ ಶಬ್ದೇನ ರಂಜಿತೇನ ಅನುರಕ್ತೀಕೃತೇನ— ಯುವಗಣೇನ—ಪೂರ್ಣಾ—ಅತಏವಸಂಜೀವಿತಃ ಉಗ್ರೇಣ ಶಿವೇನ ಪರಿವಂಚಿತಃ ಭಸ್ಮಿತಃ ಪಂಚಬಾಣೋಮನ್ಮಥಃ ಯಸ್ಯಾಂಸಾ—ಚಂಜೀನಾಮಪುರೀ—ಚಕಾಸ್ತಿರಾಜತೇ ॥

ಅರ್ಥ॥ ಬೇರೆ ಎಲ್ಲಾ ಸ್ತ್ರೀಯರುಗಳ ಮನಸ್ಸಿನ ಹೆಮ್ಮೆಕೆ ಇಳಿಸಿದಂಥಾವರಾದ ಚೆಲ್ವೆಯರ ಕಾಲ್ಗಡಗಗಳ ನುಣುಪಾದ ಸ್ವರದಿಂದ ಓಲ್ದ ಎಳೆಯರ ಗುಂಪಿನಿಂದ ನೆರತ ಈ ಚಂಜೀಪುರವೆಂಬ ಪಟ್ಟಣವು ಶಿವನು ಸುಟ್ಟು ಬೂದಿ ಮಾಡಿದ ಕಾಮನನ್ನು ತಿರಿಗಿ ಹುಟ್ಟಿಸುವಂಥಾದ್ದಾಗಿ ಎಸೆಯುತ್ತದೆ.

ಶ್ಲೋ । ಋಕ್ಸಾಮಯೋಶ್ಚಯಜುಷಾಂಚನಿವಾಸಭೂತಾಃ ಪೂ
ತಾದ್ವಿಜಾಸ್ಸ್ಮೃತಿಪುರಾಣಕಲಾಧುರೀಣಾಃ । ಕುರ್ವಂತಿವಾಸಮಿ
ಹಕರ್ಕಶತರ್ಕಶಬ್ದತಂತ್ರತ್ರಯೀಶಿಖರಸಿಂಧುತಲಸ್ಪೃಶೋಮೀ

॥ ೫೩೯ ॥

ಟೀಕಾ ॥ ಋಗಿತಿ ॥ ಋಚಸ್ಸಾಮ್ನಾಶ್ಚ ಯಜುಷಾಂಚ—ವೇದಾನಾಂ ತ್ರಯಾಣಾಂ—ನಿವಾಸಭೂತಾಸ್ಸಂಪೂರ್ಣಮರ್ಥ್ಯೇತಾರ ಇತ್ಯರ್ಥಃ— ಅತಏವ ಪೂತಾಃ ಪವಿತ್ರಾಃ ಸ್ಮೃತಿಷು ಪುರಾಣೇಷು ಕಲಾಸು ಚತುಃಷ

ಷ್ವಿಷು ಧುರೀಣಾಃ ಸಮರ್ಥಾಃ— ಕರ್ಕಶಾನಾಂ ದುರವಗಾಹಾನಾಂ ನ್ಯಾಯಸ್ತರ್ಕಃ ಶಬ್ದೋ ವ್ಯಾಕರಣಂ ತಂತ್ರಂ ಮೀಮಾಂಸಾ ತ್ರಯೀಶಿಖರಂ ವೇದಾಂತ ಶಾಸ್ತ್ರಂ ತೇಷಾಮೇವ ಸಿಂಧೂನಾಂ ಸಮುದ್ರಾಣಾಂ ತಲಮಧಃಪ್ರದೇಶಮಂತರ್ಭಾಗಮಿತಿಯಾವತ್ ಸ್ಪೃಶಂತೀತಿ ತತ್ಸ್ಪೃಶಃ— ತತ್ಪಾರದೃಶ್ವಾನ ಇತ್ಯರ್ಥಃ— ಅಮೀದ್ವಿಜಾಃ ಪಂಡಿತಾಃ ಇಹಚಂಜೀಪುರ್ಯಾಂ ವಾಸಂಕುರ್ವಂತಿ ||

ಅರ್ಥ || ಋಗ್ವೇದ, ಯಜುರ್ವೇದ, ಸಾಮವೇದ, ಈ ಮೂರು ವೇದಗಳ ನಿವಾಸಸ್ಥಾನ ಅಂದರೆ ಅವುಗಳನ್ನು ಸಂಪೂರ್ಣವಾಗಿ ಕಲಿತು ಪವಿತ್ರರಾದಂಥ, ಧರ್ಮಶಾಸ್ತ್ರ, ಪುರಾಣ, ಮತ್ತು ಆರವತ್ತುನಾಲುಗು ಕಲೆಗಳಲ್ಲಿ ಮುಂದೋರುವಂಥ, ಕಡು ಕಠಿಣವಾದ ನ್ಯಾಯಶಾಸ್ತ್ರ, ವ್ಯಾಕರಣಶಾಸ್ತ್ರ, ಮೀಮಾಂಸಾಶಾಸ್ತ್ರ, ಮತ್ತು ವೇದಾಂತ ಶಾಸ್ತ್ರಗಳೆಂಬ ಸಮುದ್ರದ ನೆಲೆಗಂಡವರಾದಂಥಾ ಬ್ರಾಹ್ಮಣರು ಈ ಚಂಜೀಪುರದಲ್ಲಿ ಒಕ್ಕಲಾಗಿರುತ್ತಾರೆ.

### ಕೃಶಾನುಃ ||

ಮೂ। ಸಹಾಸಂ। ಶ್ಲೋ। ನೈತದ್ವಿಭಾತಿನಗರಂ ನಗರವ್ಯದುರ್ಗಪ್ರಾಕಾರಸಾಧನದಶಾಸುವಿಶಾಂಪತೀನಾಂ। *ಯುದ್ಧೋನ್ನಟದ್ಭಟಶಿರಸ್ತಟನಿಸ್ಸ್ರುತಾಸೃಸ್ರೋತಸ್ಸಹಸ್ರಭರವಿಸ್ರ †ಪಲಾಬ್ಧಿಸಾಂದ್ರಂ || ೫೪೦ ||

ಟೀಕಾ || ನೇತಿ || ವಿಶಾಂ ಮನುಷ್ಯಾಣಾಂ ಪತೀನಾಂ ರಾಜ್ಞಾಂ ಸಂಬಂಧಿನೀಷು ನಗವದ್ರುವ್ಯಸ್ಯ ಅತ ಏವ ದುರ್ಗಸ್ಯ ಗಂತುಮಶಕ್ಯಸ್ಯ ಪ್ರಾಕಾರಸ್ಯ ಸಾಲಸ್ಯ ಸಾಧನದಶಾಸು ಆಕ್ರಮಣಾವಸ್ಥಾಸು ಯುದ್ಧಉನ್ನಟತಾಂ ಪರಾಕ್ರಮಮಾಣಾನಾಂ ಭಟಾನಾಂ ಶಿರಸ್ತಟೇಭ್ಯಃ ನಿಸ್ಸ್ರುತಾನಾಂ ಅಸೃಸ್ರೋತಸಾಂ ರಕ್ತಪ್ರವಾಹಾನಾಂ ಸಹಸ್ರಾಣಾಂ ಭರೇಣ ಅತಿಶಯೇನ ವಿಸ್ರೈರಾಮಗಂಧಿಭಿಃ ಪಲಾಬ್ಧಿಭಿಃ ಮಾಂಸರಾಶಿಭಿಃ ಸಾಂದ್ರಂ ನಿಬಿಡ ಮೇತನ್ನಗರಂ ಚಂಜೀಪುರೀ—ನಭಾತಿ—ಅತಿಜುಗುಪ್ಸಾ ಕರತ್ವಾದಿತಿಭಾವಃ ||

ಅರ್ಥ || ನಗೆಯಾಡಿ ( ಕೃಶಾನುವು ಹೇಳುತ್ತಾನೆ. ) ಅರಸುಗಳು ಬೆಟ್ಟದಂತೆಸೆಯುವ ಕೋಟೆಯ ಅಲಂಗಗಳನ್ನು ಕೈವಶ ಮಾಡಿಕೊಳ್ಳುವಾಗ್ಯೆ ನಡದ ಕಾಳಗಗಳಲ್ಲಿ ಕಾದಾಡಿದ ಬಂಟರ ಮೋಲ್ದಲೆಗಳಿಂದ ಹರಿದ ನೆತ್ತರದ ಸಾವಿರಗಟ್ಲೆ ಧಾರೆಗಳ ಅತಿಶಯದೊಡನೆ ನಾರುವ ಬಾಡಿನ ಕುಪ್ಪೆಗಳಿಂದ ತುಂಬಿದ ಈ ಚಂಜೀಪುರವು ಶೋಭಿಸುವದಿಲ್ಲವು.

### ವಿಶ್ವಾವಸುಃ ||

ಮೂ । ವಯಸ್ಯಗುಣಾನ್ವಯಸ್ಯಕುನರಸ್ಯನಗರಸ್ಯನಿಂದಾಭದ್ರಮಾಪ್ರಶಂಸಾಮೇವಭವಾನ್ಕೃತವಾನ್—ಯತಃ || ೫೪೧ ||

---

* ಯುದ್ಧೋನ್ನಮತ್ ಇತಿಪಾಠಃ † ಪಲಾಸ್ಥಿಸಾಂದ್ರ ಮಿತಿಪಾಠಃ ಅಯಮೇವ ಸಾಧೀಯಾನಿತಿಭಾತಿ ||

ಟೀಕಾ ॥ ಮರುಸ್ಯೇತಿ ॥ ಅಸ್ಯನಗರಸ್ಯ ನಿಂದಾಯಾಃ ಛದ್ಮನಾ—ಗುಣಾನ್ವಯಸ್ಯ ಮಾಹಾತ್ಮ್ಯಯೋಗಸ್ಯ—ಪ್ರಶಂಸಾಮೇವ ಕೃತವಾನಸೀತಿಯೋಜ್ಯಂ ॥

ಅರ್ಥ ॥ ಗೆಳೆಯನೇ, ಗುಣಗಳಿಂದ ಕೂಡಿರುವ ಈ ಪಟ್ಟಣವನ್ನು ಜರೆಯುವ ನೆವ ಮಾಡಿ ಅದರ ಹೊಗಳಿಕೆಯನ್ನೇ ಮಾಡಿದಿ.

ಶ್ಲೋ । ಪುರಾತನಾನಾಂಹಿಪುರಾಂತರಾಣಾಂಪ್ರಶಾಸಿತಾರೋಪಿ ದಿಶಾಸುಭೂಪಾಃ । ಪುರಂತದೇತದ್ವಪುರಂತಮಾಜೌಹಂತಾಭ್ಯುಪೇತ್ಯಾಪ್ಯಲಮರ್ಥಯಂತಿ ॥ ೫೪೨ ॥

ಟೀಕಾ ॥ ಪುರಾತನಾನಾಮಿತಿ ॥ ದಿಶಾಸುದಶಸುವರ್ತಮಾನಾನಾಂ— ಪುರಾತನಾನಾಂ— ಪುರಾಂತರಾಣಾಂ ಅನ್ಯನಗರೀಣಾಂ— ಪ್ರಶಾಸಿತಾರಃ ಪಾಲಕಾಅಪಿ— ಭೂಪಾಃ ಸರ್ವೇ— ಆಜೌಯುದ್ಧೇವಪುಷಃ ಅಂತಂ ನಾಶಮಭ್ಯುಪೇತ್ಯ ಅಂಗೀಕೃತ್ಯಾಪಿ—ತದೇತತ್ಪುರಂ—ಅಲಮರ್ಥಯಂತಿಭೃಶಂ ಕಾಂಕ್ಷಂತೆ—ಲೋಕೋತ್ತರ ಸಂಪದಾವಾಸತ್ವಾ ತ್ಪ್ರಾಣೇಭ್ಯೋಪಿ ಪ್ರಿಯಮೇತತ್ಪುರ ಮಿತಿಭಾವಃ ॥

ಅರ್ಥ ॥ ದೆಸೆ ದೆಸೆಯಲ್ಲಿರುವ ಹಳೆಗಾಲದ ಬೇರೆ ನಾಡುಗಳ ಅರಸರುಗಳು ಕೂಡಕಾಳೆಗದಲ್ಲಿ ಜೀವ ಹೋದರೂ ಹೋಗಲೀ ಈ ನಗರವು ತಮ್ಮದಾಗಲೀ ಎಂದು ಬಹಳ ಆಸೆ ತಾಳಿಕೊಂಡಿರುವರು.

ಕೃಶಾನುಃ॥

ಮೂ । ನಿರೂಪಣಮಭಿನೀಯಸಸಾಧ್ವಸಂ ॥ ೫೪೩ ॥

ಅರ್ಥ ॥ ಚನ್ನಾಗಿ ಲಕ್ಷ್ಯಕೊಟ್ಟು ನೋಡಿ ಅಂಜಿಕೆಯಿಂದೊಡಗೂಡಿ—

ಮೂ । ಹಂತಚಿರಂತನಾನಾಂಇದಾನೀಂತನಾನಾಂಚವಸುಂಧರಾಧುರಂಧರಾಣಾಂ ಅವಾರಣೀಯೋಸಾವವಿವೇಕಃ ॥ ೫೪೪ ॥

ಟೀಕಾ ॥ ಹಂತೇತಿ ॥ ವಸುಂಧರಾಧುರಂಧರಾಣಾಂ ಭೂಭಾರಧೂರ್ವಹಾನಾಂ— ಅಸೌವಕ್ಷ್ಯಮಾಣಃ— ಅವಾರಣೀಯಃ ದುಸ್ತ್ಯಾಜ್ಯಃ ॥

ಅರ್ಥ ॥ ಹಳೆಗಾಲದ ಮತ್ತು ಈಗಿನ ಅರಸುಗಳ ಈ ಬುದ್ಧಿಗೇಡಿತನಕ್ಕೆ ಉಪಾಯವಿಲ್ಲವಲ್ಲ!

ಮೂ । ಪದ್ಯ । ಶ್ಲೋ । ಪ್ರಾಜ್ಯೇಹಂತಧನೇಸ್ಥಿತೇಪಿನೃವರೋರಾಜ್ಯೇಪಿಸತ್ರ್ಯೂರ್ಜಿತೇ ಸಂಭೋಗಾನುಗುಣಾವಿಲೋಚನಗುಣೈರಂಭೋಜದಂಭದ್ರುಹಃ । ಕಲ್ಯಾಣೀಸ್ತರುಣೀರುಪೇಕ್ಷ್ಯಕರುಣಾಹೀನಸ್ಸನೇನಃಸ್ವಯಂ ಹರ್ತುಂಶತ್ರುಧರಾಂಚಿರಾದಭಿಲಷನ್ಮರ್ತುಂರಣೇಜೃಂಭತೆ ॥ ೫೪೫ ॥

ಟೀಕಾ ॥ ಪ್ರಾಜ್ಯಮಿತಿ ॥ ನೃವರಃ ನೃಪಃ– ಪ್ರಾಜ್ಯೇಬಹುಲೇ– ಧನೇಸ್ಥಿತೇವರ್ತಮಾನೇಸತ್ಯಪಿ–ಊರ್ಜಿತೇಸಮೃದ್ಧೇ– ರಾಜ್ಯೇಸ್ಥಿತೇಸತ್ಯಪಿ– ವಿಲೋಚನಯೋಃ ಗುಣೈರ್ದೈರ್ಘ್ಯಚಾಕಚಕ್ಯಾದಿಭಿಃ ಅಂಭೋಜಾನಾಂ ದಂಭದ್ರುಹಃ ಗರ್ವಹಂತ್ರ್ಯಃ–ಸಂಭೋಗಸ್ಯ ಅನುಗುಣಾಃ– ನತುವಾಮಾಃ– ಕಲ್ಯಾಣೀಶ್ಶುಭಶೀಲಾಃ– ವಿಶೇಷಣತ್ರಯೇಣ ಉಪೇಕ್ಷಾನರ್ಹತ್ವಂಸೂಚ್ಯತೇ– ತರುಣೀರುಪೇಕ್ಷ್ಯಾನಾದೃತ್ಯ– ಅತಏವ ಕರುಣಾಹೀನಸ್ಸನ್– ಶತ್ರೋಃ ಧರಾಂಭುವಂಚಿರಾತ್ ಅಭಿಲಷನ್ ಕಾಮಯಮಾನಸ್ಸನ್– ರಣೇಸ್ವಯಂ ಸಸೇನಸ್ಸನ್– ಮರ್ತುಂಜೃಂಭತೇ ಉದ್ಯುಙ್ಕ್ತೇ– ಪ್ರಾಣೇಭ್ಯೋಪಿಗರೀಯಸೀ ರಾಜ್ಯತೃಷ್ಣೇತ್ಯತ್ರ ಅವಿವೇಕಏವ ಮೂಲಮಿತಿಭಾವಃ ॥

ಅರ್ಥ ॥ ನೋಡು. ಹೇರಳ ಧನ, ಸಮೃದ್ಧಿಯುಳ್ಳ ರಾಜ್ಯ, ಮತ್ತು ತಾವರೆಯ ಗರ್ವವನ್ನಿಳಿಸುವ ಕಣ್ಣುಳುಳ್ಳ ಶುಭವಾದ ಸ್ವಭಾವವುಳ್ಳ ಮತ್ತು ಅನುಭವಿಸಲಿಕ್ಕೆ ಯೋಗ್ಯವಾದ ಸ್ತ್ರೀ; ಇಷ್ಟೆಲ್ಲ ಸಂಪತ್ತಿಯಿದ್ದಾಗ್ಯೂ ಅರಸುಗಳು ಅದರ ಮೇಲೆ ಮನಸ್ಸಿಡದೆ ಎದೆಯನ್ನು ಕಲ್ಲುಮಾಡಿ ಪರರಾಜನ ಭೂಮಿಯನ್ನು ಬಹಳ ಕಾಲದಿಂದ ಎಳಸಿ, ಯುದ್ಧದಲ್ಲಿ ತಾವು ಸ್ವತಃ ದಂಡೆತ್ತಿಕೊಂಡು ಹೋಗಿ ಸಾಯುವ ಉದ್ಯೋಗ ಮಾಡುತ್ತಾರೆ. ಏನು ಆಶ್ಚರ್ಯವಿದು!

ವಿಶ್ವಾವಸುಃ ॥

ಮೂ । ವಿರುದ್ಧಬುದ್ಧೇವಿವೇಕಮೇವತಾವದವಿವೇಕಮಾಕಲಯತಿಭವಾನ್ ॥ ೫೪೬ ॥ ತಥಾಹಿ ।

ಅರ್ಥ ॥ ಎಲಾ ಅಡ್ಡಬುದ್ಧಿಯೇ ವಿವೇಕವನ್ನು ಅವಿವೇಕವಾಗಿ ತಿಳಿಯುತ್ತಿ. ಹ್ಯಾಗಂದರೆ.

ಮೂ । ಶ್ಲೋ । ಸಂಪದ್ವನ್ಯಸರಿಜ್ಝರೀಸಹಚರೀಶಂಪಾಸಮಃ ಪ್ರಾಭವಂ ನಾರ್ಯಸ್ಸೂರ್ಯಕರಾವಲೀಢಜಲದಚ್ಛಾಯಾಸುಹೃದ್ಯೌವನಾಃ । ದೇಹಸ್ಸ್ನೇಹವಿಹೀನದೀಪಸಖಇತ್ಯಾಲೋಚ್ಯಪೃಥ್ವೀಶ್ವರಾಃ ಪ್ರಾಣಾನ್ ಜುಹ್ವತಿನಾಕಮಾಕಲಯಿತುಂಶುದ್ಧಾಹಿಯುದ್ಧಾನಲೇ ॥ ೫೪೭ ॥

ಟೀಕಾ ॥ ಸಂಪದಿತಿ ॥ ಶುದ್ಧಾಃ– ನಿರ್ಮಲಾಂತಃಕರಣಾಃ– ಅತಏವಪೃಥ್ವೀಶ್ವರಾಃ– ಸಂಪತ್–ವನೇಭವಾಯಾಃ ವನ್ಯಾಯಾಃ ಸರಿಜ್ಝರ್ಯಾಃವಾರ್ಷಿಕಕುಲ್ಯಾಯಾಃ ಸಹಚರೀಸದೃಶೀ–ಪ್ರಾಭವಂಪ್ರಭುತ್ವಂ– ಶಂಪಯಾತಡಿತಾಸಮಂ–ನಾರ್ಯಃಸೂರ್ಯಸ್ಯಕರೈಃ ಕಿರಣೈರವಲೀಢಸ್ಯ ಆಕ್ರಾಂತಸ್ಯ ತದಾಚ್ಛಾದಕಸ್ಯೇತಿಯಾವತ್– ಜಲದಸ್ಯಮೇಘಸ್ಯ ಛಾಯಾಯಾಅನಾತಪಸ್ಯಸುಹೃತ್ ಸದೃಶಂಯೌವನಂ ಯಾಸಾಂತಥೋಕ್ತಾಃ– ದೇಹಃ ಸ್ನೇಹರಸೇನತೈಲೇನವಿಹೀನಸ್ಯ ದೀಪಸ್ಯ ಸಖಾಸದೃಶಃ ತತ್ಸಖಃ–ವನ್ಯಸರಿಜ್ಝರ್ಯಾದೀನಾಂ ಕ್ಷಣಿಕತ್ವೇನತತ್ತತ್ಸಾಮ್ಯಂ ಅತ್ಯಂತಾನಿತ್ಯತ್ವಸೂಚಕಂ– ಇತ್ಯುಕ್ತಪ್ರಕಾರಮಾಲೋಚ್ಯ– ನಾಕಂನಿತ್ಯಸುಖಾಸ್ಪದಂ ಸ್ವರ್ಗಮಾಕಲಯಿತುಂ– ಯುದ್ಧವಿಷಾನಲೇ– ಪ್ರಾಣಾನ್ ಜುಹ್ವತಿತ್ಯಜಂತೀತ್ಯರ್ಥಃ– ಅತ್ರಸಂಪದಾದೀನಾಮನಿತ್ಯತ್ವಾಲೋಚನಸ್ಯ ಸ್ವರ್ಗಪ್ರಾಪ್ತೀಚ್ಛಾಯಾಶ್ಚಪ್ರಾಣಹೋಮೇಹೇತುತ್ವಾದನೇಕ ಪದಾರ್ಥಹೇತುಕಂ ಕಾವ್ಯಲಿಂಗಮ್ ॥

ಅರ್ಥ ॥ ಏಳಿಗೆಯುಮಳೆಗಾಲದಲ್ಲಿ ಕೆಲವು ಕಾಲಹರಿದು ನಂತರ ಆರಿಹೋಗುವ ಅಡವಿ ಹಳ್ಳಗಳಿಗೆ ಸರಿಯಾದ್ದೆಂತಲೂ, ಒಡೆತನವು ತೋರಿಯಡಗುವ ಮಿಂಚಿಗೆ ಸರಿಯಾದ್ದೆಂತಲೂ, ಹೆಣ್ಣಳು ಸೂರ್ಯನ ಕದಿರುಗಳಿಗೆ ತೆರೆಯಾ ದಮೋಡದ ನೆರಳಿನೋಪಾದಿ ಇರುವ ಹರೆತನ ಉಳ್ಳವರೆಂತಲೂ, ಶರೀರವು ಎಣ್ಣೆ ಆರಿದ ಸೊಡಲಿಗೆ ಸರಿಯಾದದ್ದೆಂತಲೂ ಒಳ್ಳೇ ಅರಸರು ತಿಳಿದು ಸ್ವರ್ಗವನ್ನ ಡೆಯುವದಕ್ಕೆ ಕಾಳಗವೆಂಬ ಕಿಚ್ಚಿನಲ್ಲಿ ತಮ್ಮ ಜೀವಗಳನ್ನು ಬಲಿಯಾಗಿ ಅರ್ಪಿಸುತ್ತಾರೆ.

ಮೂ। *ಶೃಣುಚೇದಂಚಮತ್ಕಾರಂ॥

ಅರ್ಥ ॥ ಈ ಆಶ್ಚರ್ಯವನ್ನು ಕೇಳು.

ಶ್ಲೋ। ರಕ್ತೈರ್ಭಟೀರಣಮುಖೇರುಧಿರೇಣತಸ್ಮಿನ್ರಕ್ತಾಭವತ್ಯಮರ ಯೋಷಿದನುವ್ರತೇವ। ಶೂರಸ್ಸಚೇದತನುಸಾಯಕಖಂಡಿತಾಂ ಗಸ್ಸಾಪ್ಯುಚ್ಚೈರತನುಸಾಯಕಖಂಡಿತಾಂಗಾ ॥ ೫೪೮ ॥

ಟೀಕಾ ॥ ರಕ್ತಇತಿ ॥ ಅಮರಯೋಷಿದ್ದೇವಾಂಗನಾಪಿ—ಅನುವ್ರತಾಪತಿವ್ರತೇವ—ರಣಮುಖೆ ಯುದ್ಧಾರಂಭೆ— ಭಟೇರುಧಿರೇಣರಕ್ತೆಸತಿ—ರಕ್ತಾಅರುಣಾ— ತಸ್ಮಿನ್ನನುರಾಗಿಣೀಚಭವತಿ—ಕಿಂಚ—ಸಶೂರಃ—ಅತನುಭಿರ್ಮಹದ್ಭಿಸ್ಸಾಯಕೈಃ ಬಾಣೈಃ ಖಂಡಿತಾಂಗಶ್ಚೇತ್— ಸಾದೇವಾಂಗನಾಪಿ—ಅತನೋರ್ಮನ್ಮಥಸ್ಯ ಸಾಯಕೈಃ ಖಂಡಿತಾಂಗಾಭವತಿ ॥

ಅರ್ಥ ॥ ಯುದ್ಧದ ಆರಂಭದಲ್ಲಿ ರಕ್ತದಿಂದ ಕೆಂಪಾದ ವೀರನಲ್ಲಿ ಸ್ವರ್ಗಲೋಕದ ಹೆಣ್ಣು ಪತಿವ್ರತೆಯಂತೆ ಪ್ರೀತಿಯುಳ್ಳವಳಾಗುತ್ತಾಳೆ. ಆ ವೀರನು ಅತನು ಸಾಯಕೈಃ ಅಂದರೆ ಕಠಿಣವಾದ ಬಾಣಗಳಿಂದ ಖಂಡಿತಾಂಗನಾದರೆ ತುಂಡುಗಳಾಗಿ ಬಿದ್ದ ಶರೀರುಳ್ಳವನಾದರೆ ಆ ಸ್ವರ್ಗಲೋಕದ ಹೆಣ್ಣು ಕೂಡ ಅತನುಸಾಯಕೈಃ ಖಂಡಿತಾಂಗಾ ಅಂದರೆ ಮದನನ ಅಂಬುಗಳಿಂದ ಇರಿದ ಮೈಯುಳ್ಳವಳಾಗುತ್ತಾಳೆ.

ಶ್ಲೋ। ದೀಪ್ತೋವಿಪ್ರಭಮಾಶ್ರಿತಕ್ಷಿತಿತಲಂದಿವ್ಯೆವಿಮಾನೇಸ್ಥಿತೋ ಗಾಢಾಶ್ಲಿಷ್ಟಕೃಪಾಣಪಾಣಿಚಕರಗ್ರಸ್ತಾಮರಸ್ತ್ರೀಸ್ತನಃ। ತತ್ಸಂದತ್ತನಖಕ್ಷತೋಬಹುತರಪ್ರತ್ಯರ್ಥಿಬಾಣಕ್ಷತಂ ಯುದ್ಧಾಗ್ನೌಹುತಜೀವಿತೋನಿಜವಪುರ್ವೀರೋ ಮುದಾವೀಕ್ಷತೇ ॥ ೫೪೯ ॥

ಟೀಕಾ ॥ ದೀಪ್ತಇತಿ ॥ ಯುದ್ಧವಿವಾಗ್ನೌ— ಹುತಜೀವಿತಃ— ಅತಏವದೀಪ್ತಃ ಉಜ್ವಲಃ—ದಿವ್ಯೇವಿಮಾನೇಸ್ಥಿತಃ— ಕರಗ್ರಸ್ತಾಮರಸ್ತ್ರೀಸ್ತನಃ— ತತ್ಸಂದತ್ತನಖಕ್ಷತಃ— ವೀರಃ—ಕ್ರಮೇಣ— ವಿಪ್ರಭಂನಿಸ್ತೇಜ

* ಶೃಣುಸಖೇ ಚಮತ್ಕಾರ ಮಿತಿಪಾಠಾಂತರಮ್ ॥

ಸ್ಕಂ– ಆಶ್ರಿತಕ್ಷಿತಿತಲಂ–ಗಾಢಾಶ್ಲಿಷ್ಟಕೃಪಾಣಿ ಪಾಣಿ–ಬಹುತರಪ್ರತ್ಯರ್ಥಿ ಬಾಣಕ್ಷತಂ–ನಿಜಂವಪುಃ ಪಾರ್ಥಿವಂ–ಮುದಾಉಪಲಕ್ಷಿತಃ– ವೀಕ್ಷತೇ ॥

ಅರ್ಥ ॥ ಕಾಳಗವೆಂಬ ಕಿಚ್ಚಿನಲ್ಲಿ ಜೀವವನ್ನು ಸುಟ್ಟುಕೊಂಡು ಬೆಳಗಿ ವಿಮಾನವನ್ನೇರಿ ಕೈಯಿಂದ ಸ್ವರ್ಗದ ಹೆಣ್ಣಿನ ಮೊಲೆಯನ್ನು ಹಿಡಿದು, ಅದಕ್ಕೆ ಉಗುರುಗಳಿಂದ ಘಾಯಮಾಡುವಂಥಾವನಾದ ಶೂರನು, ಕಂದಿದ ಕಾಂತಿಯುಳ್ಳದ್ದಾಗಿಯೂ ಬಿಂಮುಗೆ ಕತ್ತಿಯನ್ನು ಹಿಡಿದ ಕೈಯುಳ್ಳದ್ದಾಗಿಯೂ ಹಲವು ಪರಿಯಿಂದ ವೈರಿಗಳು ಎಸೆದ ಅಂಬುಗಳಿಂದ ಘಾಯಗೊಂಡಂಥಾದ್ದಾಗಿಯೂ ಭೂಮಿಯ ಮೇಲೆ ಬಿದ್ದಿರುವ ತನ್ನ ಜಡದೇಹವನ್ನು ಸಂತೋಷದಿಂದ ನೋಡುತ್ತಾನೆ.

ಮೂ । ಇತ್ಯನ್ಯತ್ರವಿಮಾನಂಸಂಚಾರಯನ್ಪರಿತೋದೃಷ್ಟ್ವಾ ॥

ಅರ್ಥ ॥ ಇಂತೆಂದು ವಿಮಾನವನ್ನು ಬೇರೆ ಕಡೆಗೆ ನಡಿಸಿ, ಸುತ್ತಲು ನೋಡಿ (ವಿಶ್ವಾವಸು ಹೇಳುತ್ತಾನೆ)

ಶ್ಲೋ । ಪಿನಾಕಿನೀಂಪಶ್ಯಘನಾಘನಾಶಿನೀಂಜಲಾಚ್ಛಲಘ್ವೀಂಗರುಡಾಪಗಾಮಪಿ । ಇದಂತಟೇರಾಜತಿದೇವನಾಯಕಃ *ಪರತ್ರಸರ್ಗಾದಿವದೇವನಾಯಕಃ ॥ ೫೫೦ ॥

ಟೀಕಾ ॥ ಪಿನಾಕಿನೀಮಿತಿ ॥ ಘನಾಘಾನಾಂ ನಾಶಿನೀಂ– ಜಲಾಲ್ಲಘ್ವೀಂ ಲಘೂಜಲಾವಿತ್ಯರ್ಥಃ– ಪಿನಾಕಿನೀಂಚ ದಕ್ಷಿಣಾಂ–ಗರುಡಾಪಗಾಂ ಗರುಡನದೀಮಪಿಪಶ್ಯ– ಸರ್ಗಾದ್ವೈಕಾರಿಕ ಪ್ರಪಂಚಾತ್– ಪರತ್ರಪರಸ್ಮಿನ್– ಅಪ್ರಾಕೃತ ವೈಕುಂಠಇವಸ್ಥಿತ ಇತ್ಯುತ್ ಪ್ರೇಕ್ಷಾ–ಅನಯೋಃ ಪಿನಾಕಿನೀ ಗರುಡನದ್ಯೋಃ ತಟೆ ಇದಂತಟೇ–ದೇವಾನಾಂ ನಾಯಕಃ ಪ್ರಭುಃ ಕಃ ವಿಷ್ಣುಃ–ದೇವನಾಯ ಕ್ರೀಡಾರ್ಥಂ–ರಾಜತಿದೀವ್ಯತೀತ್ಯರ್ಥಃ ॥

ಅರ್ಥ ॥ ಮಹಾಪಾತಕಗಳನ್ನು ಅಳಿಸುವಂಥಾ ಹಗುರವಾದ ನೀರುಳ್ಳಂಥ ಪಿನಾಕಿನಿ ಎಂಬ ನದಿಯನ್ನೂ ಗರುಡಾಪಗಾ ಎಂಬ ನದಿಯನ್ನೂ ನೋಡು. ವಿಕಾರಉಳ್ಳ ಪ್ರಪಂಚದಿಂದ ಪರವಾದ ವೈಕುಂಠದೋಪಾದಿಯಿರುವ ಆ ನದಿಗಳ ತೀರದಲ್ಲಿ ದೇವತೆಗಳೊಡೆಯನಾದ ವಿಷ್ಣುವು ಕ್ರೀಡಾರ್ಥವಾಗಿ ಶೋಭಿಸುತ್ತಾನೆ.

ಮೂ । ಇತರತ್ರವಿಮಾನಂಸ್ಪಂದಯನ್ಸಾನಂದಮ್ ॥

ಅರ್ಥ ॥ ಬೇರೆ ಕಡೆಗೆ ವಿಮಾನವನ್ನು ನಡಿಸಿ, ಸಂತೋಷದಿಂದ (ವಿಶ್ವಾವಸು ಹೇಳುತ್ತಾನೆ)

ಶ್ಲೋ । ಅದ್ಯಪ್ರತ್ನಂಪಕ್ಷಿಮುನಶ್ಚರಿತ್ರಂದೇವಃಪ್ರೀತಸ್ಸು

* ಪರೋತ್ರ ಇತಿಪಾಠಾಂತರಂ ॥

ಪ್ರಭಾತಾನಿಶಾಮೇ । ಶ್ರೀಮುಷ್ಣಂಯದಂಹಸ್ಸಹಸ್ರಂ
ಕ್ಷೇತ್ರಂಪ್ರಾಪ್ತಂನೇತ್ರಯೋಃಪಾತ್ರಭಾವಮ್ ॥ ೫೫೧ ॥

ಟೀಕಾ ॥ ಅದ್ಯೇತಿ ॥ ನಃಅಸ್ಮತ್ಸಂಬಂಧಿ–ಪ್ರತ್ನಂ ಪುರಾತನಂ– ಚರಿತ್ರಂ ಸುಕೃತಂ–ಅದ್ಯಇದಾನೀಂ– ಪಕ್ತ್ರಿಮಂ ಫಲಿತಂ– ದೇವಃ ಭಗವಾನ್– ಪ್ರೀತಃ ಪ್ರಸನ್ನಃ– ನಿಶಾಮೇಸುಪ್ರಭಾತಾ ಶೋಭನಫಲದಾಯಕ ಚರಮಭಾಗಾ–ಯದ್ಯಸ್ಮಾತ್– ಮುಷ್ಣತ್ ನಾಶ್ಯಮಾನಂ ಅಂಹಸಾಂ ಪಾಪಾನಾಂ ಸಹಸ್ರಂ ಯೇನತತ್–ಶ್ರೀಮುಷ್ಣಂ ನಾಮಕ್ಷೇತ್ರಂ– ತಿರುಮುಷ್ಣೀತಿಭಾಷಾನಾಮ– ನೇತ್ರಯೋರ್ಮದೀಯಯೋಃ ಪಾತ್ರಭಾವಂ ವಿಷಯತ್ವಂ ॥

ಅರ್ಥ ॥ ನಾವು ಹಿಂದೆ ಮಾಡಿದ ಪುಣ್ಯ ಈಗ ಫಲಕ್ಕೆ ಬಂತು. ಭಗವಂತನು ಒಲಿದನು. ನನ್ನ ರಾತ್ರಿಯು ಬೆಳಗಿತು. ಹ್ಯಾಗೆಂದರೆ ಅಸಂಖ್ಯಾತ ಪಾಪಗಳನ್ನು ನಶಿಸುವಂಥ ತಿರುಮುಷ್ಣಿಯೆಂಬ ಕ್ಷೇತ್ರವು ನನ್ನ ಕಣ್ಗಳಿಗೆ ವಿಷಯವಾಗಿ ಒದವಿತು.

ಮೂ । ಅತ್ರಹಿ । ಶ್ಲೋ । ವರಾವರಾಹರೂಪಿಣೀಚರಾಚರಾಂತರ
ಸ್ಥಿತಾ ಸುರಾಸುರಾನುಸೇವಿತಾಧರಾಧರಾದಿದೇವತಾ । ಸದಾಸದಾ
ವಲಿಸ್ತುತಾಮುದಾಮುದಾರಶೇವಧಿರ್ ಹಿತಾಹಿತಾರ್ಕ್ಷ್ಯಕೇತನಾ
ನತಾನತಾಗತಿಂನಯೇತ್ ॥ ೫೫೨ ॥

ಟೀಕಾ ॥ ವರೇತಿ ॥ ವರಾಸರ್ವೋತ್ತಮಾ– ಚರಾಚರಯೋಃ ಸ್ಥಾವರಜಂಗಮಯೋಃ ಅಂತರೆ ಹೃದಯೇಸ್ಥಿತಾ– ಸರ್ವಾಂತರ್ಯಾಮಿನೀತ್ಯರ್ಥಃ– ಸುರಾಸುರಾನುಸೇವಿತಾ–ಧರಾಂ ಭುವಂ ಧರತೀತಿ ಧರಾಧರಾ–ಸದಾ–ಸತಾಂ ಆವಲ್ಯಾಸಮೂಹೇನಸ್ತುತಾ–ಮುದಾಂ ಬ್ರಹ್ಮಾನಂದಾನಾಂ–ಉದಾರಃ ಮಹಾನ್ಶೇವಧಿಃ ನಿಧಿಃ–ಹಿತಾಜಗದಾಪ್ತಾ–ತಾರ್ಕ್ಷ್ಯಕೇತನಾಗರುಡಧ್ವಜಾ– ನತ್ಯಾಃ ಭಕ್ತ್ಯಾರಾನತಾ ನಮಸ್ಕೃತಾ–ವರಾಹರೂಪಿಣೀ– ಆದಿದೇವತಾ– ಗತಿಂ ಅಪುನರಾವರ್ತಿನೀಂ– ನಯೇತ್ ಪ್ರಾಪಯೇತ್– ಹಿರೇವಾರ್ಥೇ ॥

ಅರ್ಥ ॥ ಇಲ್ಲಿ ಸರ್ವಶ್ರೇಷ್ಠನಾದಂಥಾ ಸ್ಥಿರಚರ ಪದಾರ್ಥಗಳಲ್ಲಿ ವ್ಯಾಪಕನಾಗಿರುವಂಥ ಸಕಲ ದೇವತೆಗಳಿಂದ ಪೂಜಿಸಲ್ಪಡುವಂಥ ನಿತ್ಯದಲ್ಲೂ ಸಜ್ಜನರ ಸಮುದಾಯದಿಂದ ಹೊಗಳಿಸಲ್ಪಡುವಂಥಾ ಶ್ರೇಷ್ಠವಾದ ಆನಂದಗಳ ಖನಿಯಾಗಿರುವಂಥ ಲೋಕಕ್ಕೆ ಒಳ್ಳಿತವನ್ನು ಮಾಡುವಂಥ, ಗರುಡನೇ ಧ್ವಜವಾಗಿ ಉಳ್ಳಂಥ ಭಕ್ತರಿಂದ ನಮಸ್ಕಾರ ಮಾಡಲ್ಪಡುವಂಥ ವರಾಹ ದೇವರು ನಮ್ಮನ್ನು ಶಾಶ್ವತವಾದ ಮುಕ್ತಿಯನ್ನು ಕುರಿತು ಮುಟ್ಟಿಸಲೀ.

ಮೂ । ಕವೀಂದ್ರಶ್ಚಾತ್ರಕಶ್ಚಿದಿತ್ಥಮನುಸಂಧತ್ತೇ ॥
ಅರ್ಥ ॥ ಒಬ್ಬಾನೊಬ್ಬ ಕವಿಶ್ರೇಷ್ಠನು ಈ ವಿಷಯದಲ್ಲಿ ಹೇಳುತ್ತಾನೆ ಏನೆಂದರೆ.

ಶ್ಲೋ । ಸದಾವದಾತನಿಮ್ನಗಾತಪೀಕುಪೀರವಾಸಿನೀ ಕಟಿಸ್ಫು
ಪೀಭವತ್ಕರಾಕಿಪೀಶ್ವರೀಪಪೀಯುಸಿ । ರಸಾರಸಾದಿಹೋದಿತಾ

ರಸಾಲಸಾಲ ಸಂವೃತೇವನೇವನೇಷುದೀಕ್ಷಿತಾ ಮದೀಕ್ಷಿತಾದಿದೇ
ವತಾ ॥ ೫೫೩ ॥

ಟೀಕಾ ॥ ಸದೇತಿ ॥ ರಸಾಯಾಂ ಭೂಮೌ ರಸಾದನುರಾಗಾದ್ಧೇತೋಃ ಇಹಾಸ್ಮಿನ್—ರಸಾಲೈಶ್ಚೂತ ವೃಕ್ಷೈಃ ಸಾಲೈಶ್ಚ ಸಂವೃತೇ— ವನೇ—ಉದಿತಾ ಆವಿರ್ಭೂತಾ— ಸದಾ ಅವದಾತಾಯಾ ನಿರ್ಮಲಾಯಾಃ ನಿಮ್ನಗಾಯಾಃ ಪಿನಾಕಿನ್ಯಾಃ ತಟ್ಯಾಂಕುಟೀರೇ ಆಲಯೇವಾಸಿನೀ—ಕಟ್ಯಾಂಸ್ಫುಟೀಭವನ್ ದೃಶ್ಯಮಾನಃ ಕರಃ ಯಸ್ಯಾಸ್ಸಾ—ಪಟೀಯಸೀಸಮರ್ಥಾ ಅತಏವ ಅವನೇಷು ಭಕ್ತರಕ್ಷಣೇಷು— ದೀಕ್ಷಿತಾಕೃತ ಸಂಕಲ್ಪಾ— ಕಿಟೀಶ್ವರೀ ಆದಿವರಾಹ ರೂಪಿಣೀ—ಆದಿದೇವತಾ— ಮದೀಕ್ಷಿತಾಮಯಾ ಈಕ್ಷಿತಾದೃಷ್ಟಾ ॥

ಅರ್ಥ ॥ ಭೂಮಿಯಲ್ಲಿ ಅನುರಕ್ತಿಯುಳ್ಳವನಾಗಿ ಮಾವಿನ ಮರಗಳಿಂದಲೂ ಸಾಲವೃಕ್ಷಗಳಿಂದಲೂ ವ್ಯಾಪ್ತವಾದ ಅಡವಿಯಲ್ಲಿ ಪೈದೋರಿ ಯಾವಾಗಲೂ ನಿರ್ಮಲವಾದ ಪಿನಾಕಿನಿ ನದಿಯ ತೀರದಲ್ಲಿ ಒಂದು ಚಿಕ್ಕ ಮನೆಯಲ್ಲಿ ವಾಸಮಾಡಿಕೊಂಡಿರುವಂಥ ನಡುವಿನಲ್ಲಿ ಕೈಗಳನ್ನಿಟ್ಟುಕೊಂಡಿರುವಂಥ ಸಾಮರ್ಥ್ಯವಂತನಾದಂಥ ಭಕ್ತರ ಪರಿಪಾಲನೆಯಲ್ಲಿ ಕಂಕಣಬದ್ಧನಾದಂಥ ದೇವರುಗಳಲ್ಲಿ ಮೊದಲನೇ ಯವನಾದಂಥ ವರಾಹ ದೇವರನ್ನು ಇಲ್ಲಿ ನಾನು ನೋಡಿದೆನು.

ಕೃಶಾನುಃ ॥

ಶ್ಲೋ । ಸೋಯಂಹೇಯಪ್ರತ್ಯನೀಕೋಪಿಶಾರ್ಙ್ಗೀ ಕಷ್ಟಂಪೃ
ಥ್ವೀಕಾಂಕ್ಷಯಾಭೂದ್ವರಾಹಃ । ಇತ್ಥಂಸಿದ್ಧೆಬ್ರೂಹಿಭೂಲಾಭಲೋ
ಭಾತ್ಕಂಕಂವೇಷಂಮಾನುಷೋನೇಹಧತ್ತೇ ॥ ೫೫೪ ॥

ಟೀಕಾ ॥ ಸಇತಿ ॥ ಹೇಯಾನಾಂ ರಾಗದ್ವೇಷಾದಿ ದೋಷಾಣಾಂ ಪ್ರತ್ಯನೀಕಃ ವಿರೋಧೀತಚ್ಛೂನ್ಯೋಪೀತಿಯಾವತ್— ಸೋಯಂ ಶಾರ್ಙ್ಗೀ ವಿಷ್ಣುಃ— ಪೃಥ್ವ್ಯಾಃ ಕಾಂಕ್ಷಯಾಲಾಭಲೋಭೇನ— ವರಾಹಃ ತಿರ್ಯಗ್ಜಂತುರಭೂತ್—ಕಷ್ಟಂ ಇತಿಖೇದೇ— ಇತ್ಥಂ ಭಗವತೋಪಿ ಭೂಲೋಭೇನ ತಿರ್ಯಕ್ತ್ವಸ್ವೀಕಾರೇಸಿದ್ಧೇಸತಿ— ಇಹಲೋಕೇ—ಮಾನುಷಃ ಭೂಲಾಭಲೋಭಾತ್— ಕಂಕಂ ಅತಿನೀಚ ಮಪೀತ್ಯರ್ಥಃ—ವೇಷಂ ಕೃತ್ಯಂ ಸೇವಕತ್ವ ಯಾಚಕತ್ವಾದಿ ರೂಪಂವಾ—ನಧತ್ತೆನಸ್ವೀಕರೋತಿ— ಕಿಂತು ಸ್ವೀಕರೋತ್ಯೇವೇತ್ಯರ್ಥಃ ॥

ಅರ್ಥ ॥ ರಾಗದ್ವೇಷಾದಿ ತುಚ್ಛಗುಣಗಳಿಲ್ಲದ ಆ ಪ್ರಸಿದ್ಧನಾದ ವಿಷ್ಣುವು ಭೂಮಿಯನ್ನೆಳಸಿ ಹಂದಿ ರೂಪವನ್ನು ತಳೆದನು. ಅಹಹ! ಹೀಗಾದ ಮೇಲೆ ನೆಲಘಳಿಸುವ ಅತ್ಯಾಶೆಯಿಂದ ಮನುಷ್ಯನು ಯಾವ್ಯಾವ ರೂಪತೆಕ್ಕೊಳ್ಳಲಿಕ್ಕಿಲ್ಲ ? ಬೇಕಬೇಕಾದ ರೂಪ ತೆಕ್ಕೊಳ್ಳುವನೆಂಬ ತಾತ್ಪರ್ಯ.

ವಿಶ್ವಾವಸುಃ ॥

ಮೂ । ಅನಭಿಜ್ಞೋಭವಾನ್ ಭಗವದವತಾರರಹಸ್ಯಸ್ಯ ॥೫೫೫॥

ಅರ್ಥ ॥ ಶ್ರೀ ವಿಷ್ಣುವು ಅವತಾರಗಳನ್ನು ತೆಕ್ಕೊಂಡ ಗುಟ್ಟು ನೀನರಿಯೆ.

ಮೂ । ಶೃಣು । ಶ್ಲೋ । ಪಾಠೀನೀಯಂಕಮಠಂಕ್ರೈಟಭಾರಿಃ ಕ್ರೈಟಂರೂಪಂಯಾತುಕಾಂಠೀರವಂವಾ । ಅನ್ಯದ್ವಾಯತ್ಸರ್ವಮಪ್ರಾಕೃತಂತನ್ನಾಸೌ ತೇಷ್ವಪ್ಯುಜ್ಝಿತಿಸ್ವಸ್ವಭಾವಮ್ ॥ ೫೫೬ ॥

ಟೀಕಾ ॥ ಪಾಠೀನೀಯಮಿತಿ ॥ ಕೈಟಭೋಸುರಸ್ತಸ್ಯಾರಿರ್ಭಗವಾನ್— ಪಾಠೀನಸ್ಸಹಸ್ರದಂಷ್ಟ್ರಃ ಮತ್ಸ್ಯಃ—ಕಮಠಃ ಕೂರ್ಮಃ ಕಿಟಿರ್ವರಾಹಃ—ಕಂಠೀರವಃ ಸಿಂಹಃ—ತತ್ತತ್ಸಂಬಂಧಿ—ರೂಪಂ ಶರೀರಮಿತಿ ಪ್ರತ್ಯೇಕ ಮನ್ವೇತಿ—ಯಾತುಗೃಹ್ಣಾತ್ವಿತ್ಯರ್ಥಃ—ಅನ್ಯತ್ ಉಕ್ತರೂಪೇಭ್ಯಃ ಅನ್ಯದ್ವಾರೂಪಂ ಅಶ್ವೀಯಾದಿ—ಯಾತು—ಅತಿಸರ್ಗೇಲೋಟ್—ತಥಾಪಿ—ಯದ್ಯಸ್ಮಾತ್ ಸರ್ವಂ ತತ್ತಜ್ಜಾತೀಯಂ ಸಕಲಂ ರೂಪಮಪ್ರಾಕೃತಂ ನಪ್ರಕೃತಿ ಪರಿಣಾಮ ಜನ್ಯಂ—ತಸ್ಮಾದಸೌಭಗವಾನ್—ತೇಷುಸರ್ವೇಷ್ವಪಿ ರೂಪೇಷು—ಸ್ವಂಸ್ವೀಯಂ ಸ್ವಭಾವಂ ಮಾಹಾತ್ಮ್ಯಂ ನೋಜ್ಝತಿನತ್ಯಜತಿ ॥

ಅರ್ಥ ॥ ಮತ್ಸ್ಯ, ಕೂರ್ಮ ವರಾಹ ಸಿಂಹ ಮತ್ತು ಬೇರೆ ರೂಪಗಳನ್ನು ಕೈಟಭಾರಿಯಾದ ಶ್ರೀ ವಿಷ್ಣುವು ತೆಕೊಂಡರೇನಾಯಿತು ? ಅವುಗಳೆಲ್ಲ ಪ್ರಕೃತಿಪರಿಣಾಮವಲ್ಲವು. ಮತ್ತು ಅವುಗಳಲ್ಲಿ ಶ್ರೀ ವಿಷ್ಣುವು ತನ್ನ ಮೂಲಸ್ವಭಾವವನ್ನು ಬಿಡಲಿಲ್ಲವು.

ಮೂ । ಕಿಂಚ । ಶ್ಲೋ । ಶ್ರೀಕೋಲಂಭುವಿಕೋಽಲಂಜಗದಾಲಂಬಮವೈತುಂ ಸ್ವಾಮೀಶುಭಕಾಮೀಕಿಲಭೂಮೀಮಸುರಾತ್ತಾಮ್ । ವಾರಾಶಿಗಭೀರಾಂಭಸಿಕಾರಾಭವನೇಭಿನ್ನ ಸ್ತಾಮಿವಯುಸ್ತಾಮಿವಮುಸ್ತಾಮುದಹಾರ್ಷೀತ್ ॥ ೫೫೭ ॥

ಟೀಕಾ ॥ ಶ್ರೀಕೋಲಮಿತಿ ॥ ಜಗತಃ ಆಲಂಬಂ ಆಧಾರಂ—ಕೋಲಂ ಆದಿವರಾಹಂ—ಅವೈತುಂಜ್ಞಾತುಂ—ಭುವಿಕಃ ಅಲಂಸಮರ್ಥಃ— ನಕೋಪೀತ್ಯರ್ಥಃ ಶುಭಾನಿಭಕ್ತಾನಾಂ ಕಾಮಯತೀತಿತತ್ಕಾಮೀ—ಯಸ್ಸ್ವಾಮೀಆದಿವರಾಹಃ— ಅಸುರೇಣ ಹಿರಣ್ಯಾಕ್ಷೇಣಆತ್ತಾಂಹೃತಾಂ— ವಾರಾಶೇಸ್ಸಮುದ್ರಸ್ಯ ಗಭೀರೇನಿಮ್ನೇ ಅಂಭಸಿ— ನಿಹಿತಾಮಿತಿಶೇಷಃ— ಅತಏವ ಕಾರಾಭವನೇ ಬಂಧನಾಲಯೇ— ಅಭಿನ್ನಸ್ತಾಮಿವಸಿದ್ಧಾಂ— ತಾಂಪ್ರಸಿದ್ಧಾಂ— ಭೂಮಿಂ *ಮುಸ್ತಾಂ ವರಾಹಭಕ್ಷ್ಯಕಂದವಿಶೇಷಮಿವ— ಉದಹಾರ್ಷೀತ್ ಉದ್ಧೃತವಾನ್—ಕಿಲೇತ್ಯೈತಿಹ್ಯೇ— ಶಂಕೋಲಮಿತಿಸಂಬಂಧಃ ॥

ಅರ್ಥ ॥ ಲೋಕಕ್ಕೆ ಆಧಾರನಾದ ವರಾಹ ದೇವರನ್ನು ತಿಳಿಯುವದು ಇಳೆಯಲ್ಲಿ ಯಾರಿಗೂ ಅಳವಲ್ಲವು. ಭಕ್ತರ ಒಳಿತನವನ್ನು ಬಗೆಯುವವನಾದ ಈ ವರಾಹ ಒಡೆಯನು ಹಿರಣ್ಯಾಕ್ಷನೆಂಬ ಅಸುರನಿಂದ ಶರಮನೆಯಲ್ಲಿ ಕಟ್ಟಿಡಲ್ಪಟ್ಟಂತೆ ಆಳವಾದ ಸಮುದ್ರದಲ್ಲಿ ವೈದಿಡಲ್ಪಟ್ಟಂಥ ಆ ಪ್ರಸಿದ್ಧವಾದ ಧರೆಯನ್ನು ಹಂದಿಗಳ ತಿಂಡಿಯಾದ 'ಮುಸ್ತ' ವೆಂಬ ಗಡ್ಡೆಯಂತೆ ಮೇಲಕ್ಕೆತ್ತಿ ತಂದನಲ್ಲವೋ ?

---

* ಅತ್ರಟೀಕಾಕೃತಾ ಮುಸ್ತಾ ಶಬ್ದೇನ ಕಂದವಿಶೇಷ ಇತ್ಯುಕ್ತಂ ತನ್ನಸಾಧು "ಮುಸ್ತಾಮುಸ್ತಕಮಸ್ತ್ರಿ ಯಾಮ್" ಇತಿಅಮರ ಸಿಂಹೇನ ದೂರ್ವಾನಾಮಸುಪರಿಗಣಿತತ್ವಾತ್— ತಟ್ಟೀಕಾಕೃದ್ಭಿಶ್ಚ ದೂರ್ವಾ ವಿಶೇಷತ್ವೇನೈವ ವ್ಯಾಖ್ಯಾತತ್ವಾತ್ ಮುಸ್ತಾ ಶಬ್ದೇನ ಮೋಥಾಸಂಜ್ಞಕಃ ದೂರ್ವಾವಿಶೇಷಏವಗ್ರಾಹ್ಯ ಇತಿಪ್ರತಿಭಾತಿ ॥

ಮೂ। ಸಭಕ್ತಿಪ್ರಕರ್ಷಂಯಜ್ಞವರಾಹಮಭಿಧ್ಯಾಯನ್ನೇತಮಾಮಂತ್ರ್ಯ ॥ ೫೫೪ ॥

ಟೀಕಾ ॥ ಸಭಕ್ತೀತಿ ॥ ತಂಯಜ್ಞವರಾಹಂ— ಆಮಂತ್ರ್ಯಸಂಬೋಧ್ಯ— ಹೇಯಜ್ಞವರಾಹೇತ್ಯುಕ್ತ್ವೇತಿಯಾವತ್ ॥

ಅರ್ಥ ॥ ಹೆಚ್ಚಿದ ಭಕ್ತಿಯಿಂದ ಯಜ್ಞವರಾಹ ದೇವರನ್ನು ಧ್ಯಾನಿಸಿ ಮತ್ತು ಕರೆದು (ವಿಶ್ವಾವಸು ಹೇಳುತ್ತಾನೆ.)

ಶ್ಲೋ। ದ್ರಾಘಿಷ್ಠಂಕುಹನಾವರಾಹಭಗವನ್ದಂಷ್ಟ್ರಾತ್ಮಕಂತೇ ದೃಢಂ ಸ್ತಂಭಂಸಂಪ್ರತಿಚಿಂತಯಾಮಿಜಲಧಿಸ್ನೇಹೌಘಸಂಪೂರಿತಾ। ಯಸ್ಮಿನ್ವಿಂದತಿದೀಪಭಾಜನವಿಧಾಮಾಮೋದಿನೀಮೇದಿನೀ ಚಿತ್ರಸ್ತತ್ರಚರತ್ನಸಾನುರಯತೇನಿಷ್ಕಂಪದೀಪಾಕೃತಿಮ್ ॥ ೫೫೫ ॥

ಟೀಕಾ ॥ ದ್ರಾಘಿಷ್ಠಮಿತಿ ॥ ಕುಹನಯಾಮಾಯಯಾವರಾಹಃ ವರಾಹರೂಪೀ ತಸ್ಯಸಂಬುದ್ಧಿರ್ಹೇಭಗವನ್— ತೇತ್ವದೀಯಂ— ದ್ರಾಘಿಷ್ಠಂಅತಿದೀರ್ಘಂ ದಂಷ್ಟ್ರಾತ್ಮಕಂ ದಂಷ್ಟ್ರಾರೂಪಂ— ದೃಢಂಸ್ತಂಭಂ ದೀಪಸ್ತಂಭಂ— ಸಂಪ್ರತಿಚಿಂತಯಾಮಿಧ್ಯಾಯಾಮಿ— ಯಸ್ಮಿನ್ಸ್ತಂಭೇ—ಜಲಧಿರೇವಸ್ನೇಹೌಘಸ್ತೈಲಪ್ರವಾಹಸ್ತೇನಸಂಪೂರಿತಾ— ಆಮೋದಿನೀಸಂತೋಷವತೀ— ಉದ್ಧಾರಸಾದಿತಿಭಾವಃ— ಮೇದಿನೀಭೂಮಿಃ— ದೀಪಭಾಜನಸ್ಯ ದೀಪಪಾತ್ರಸ್ಯವಿಧಾಂರೀತಿಂ— ವಿಂದತಿಪ್ರಾಪ್ನೋತಿ—ಕಿಂಚ— ತತ್ರದೀಪಪಾತ್ರೇ— ಚಿತ್ರಃ— ರತ್ನಸಾನುಃ ಮೇರುಃ ನಿಷ್ಕಂಪಸ್ಯ ನಿಶ್ಚಲಸ್ಯ ದೀಪಸ್ಯ ಆಕೃತಿಂರೂಪಂ— ಅಯತೆಪ್ರಾಪ್ನೋತಿ— ತಂ ಸ್ತಂಭಮಿತಿಸಂಬಂಧಃ ॥

ಅರ್ಥ ॥ ಹೇ ಮಾಯಾವರಾಹನಾದ ಭಗವಂತನೇ! ನಿನ್ನ ದೀರ್ಘವಾದ ದಾಡೆ ಎಂಬ ದೃಢವಾದ ದೀವಿಗೆಗಳ ಕಂಭವನ್ನು ಈಗ ನೆನಿಸುತ್ತೇನೆ. ಆ ಕಂಭದಲ್ಲಿ ಸಮುದ್ರವೇ ತೈಲವಾಗಿ ಸಂತೋಷಗೊಂಡ ಪೃಥ್ವಿಯೇ ದೀಪಪಾತ್ರದ ರೀತಿಯನ್ನಡೆಯುತ್ತೆ. ಆ ದೀಪ ಪಾತ್ರದಲ್ಲಿ ಅದ್ಭುತವಾದ ಮಣಿಮಯಶಿಖರ ಉಳ್ಳ ಮೇರು ಪರ್ವತವು ನೆಟ್ಟಗೆ ಉರಿಯುವ ದೀವಿಗೆಯ ರೂಪವನ್ನು ಹೊಂದುತ್ತದೆ.

ಮೂ। ಇತ್ಯನ್ಯತ್ರಾಭಿಕ್ರಾಮನ್ಮಂದಾನಿಲಸ್ಪರ್ಶಸುಖಮಭಿನೀಯಸಾನಂದಮ್ ॥ ೫೫೦ ॥

ಅರ್ಥ ॥ ಇಂತೆಂದು ಬೇರೆ ಕಡೆಗೆ ನಡೆದು ನಸು ಘಾಳಿಗೆ ಮೈಕೊಟ್ಟು ಸಂತೋಷದಿಂದ (ವಿಶ್ವಾವಸು ಹೇಳುತ್ತಾನೆ.)

ಶ್ಲೋ। ಕಲ್ಹಾರೋತ್ಪಲತಲ್ಲಜೋಲ್ಲಲನಕೃತ್ಕಲ್ಲೋಲನಿರ್ಲೋಲನಕ್ರೀಡಾಪಾಟವಗಾಢರೂಢಹಿಮತಾಸೌರಭ್ಯವಿಭ್ರಾಜಿತಃ। ಕಾ

ವೇರೀಸಲಿಲಾವಗಾಹರಸಿಕಃಕಸ್ಯೈಷನೇಡ್ಯೋಮರುತ್ ಕ್ಲಾಂ
ತಾನಾಂಪುನರಧ್ವನೀನವಪುಷಾಂ ಯನ್ನಿರ್ಧುನೀತೇಶ್ರಮಮ್
॥ ೫೬೧ ॥

ಟೀಕಾ ॥ ಕಲ್ಹಾರೇತಿ ॥ ಕಲ್ಹಾರೋತ್ಪಲ ತಲ್ಲಜಾನಾಂ ಪ್ರಶಸ್ತಸೌಗಂಧಿಕ ಕುವಲಯಾನಾಂ ಉಲ್ಲಲನಂ ಉತ್ಪ್ಲವನಂ ಕರೋತೀತಿ ತತ್ಕೃತ್—ಯತ್ಕಲ್ಲೋಲೇಷು ಪೃಥುತರಂಗೇಷು ನಿರ್ಲೋಲನಂ ಭ್ರಮಣಂ ತದೇವ ಕ್ರೀಡಾತಸ್ಯಾಂ ಪಾಟವೇನ ಪ್ರಾಬಲ್ಯೇನ ಗಾಢಮತ್ಯಂತಂ ರೂಢಾಭ್ಯಾಂ ಹಿಮತಯಾ ಶೈತ್ಯೇನ ಸೌರಭ್ಯೇಣಚ ವಿಭ್ರಾಜಿತಃ—ಕಾವೇರ್ಯಾಃ ನದ್ಯಾಃ ಸಲಿಲೇ ಅವಗಾಹೇ ಮಜ್ಜನೇರಸಿಕಃ ಅನುರಕ್ತಃ—ಏಷಮರುತ್ ವಾಯುಃ ಕಸ್ಯನೇಡ್ಯಃ ನಸ್ತುತ್ಯಃ ಯದ್ಯಸ್ಮಾದೇಷಪುನಃ—ಕ್ಲಾಂತಾನಾಂ ಗಮನೇನಶ್ರಾಂತಾನಾಂ—ಅಧ್ವನೀನಾನಾಂ ಪಥಿಕಾನಾಂ ವಪುಷಾಂ ಸಂಬಂಧಿನಂ ಶ್ರಮಂ ಖೇದಂ— ನಿಶ್ಶೇಷಂ ಧುನೀತೇವಾರಯತಿ ॥

ಅರ್ಥ ॥ ತನಿಗಂಪೊಗೆಯುವ ನೀರು ತಾವರೆಗಳನ್ನು ತೇಲಾಡಿಸುವಂಥ, ತೆರೆಗಳೊಳಗೆ ಬಲುಸುಳಿದಾಟದಿಂದ ತುಂಬಿದ ತಂಪು ಮತ್ತು ಪರಿಮಳದಿಂದೆಸೆಯುವಂಥ, ಕಾವೇರಿ ನೀರಲ್ಲಿ ಮಜ್ಜನ ಮಾಡುವ ಲೋಲುಪ್ತಿಯುಳ್ಳಂಥ, ಈ ಘಾಳಿಯು ಯಾರಿಂದ ಹೊಗಳಿಸಲ್ಪಡಲಿಕ್ಕೆ ಯೋಗ್ಯವಾದದ್ದಲ್ಲ? ಎಲ್ಲವರಿಂದಲೂ ಹೊಗಳಿಸಲ್ಪಡಲಿಕ್ಕೆ ಯೋಗ್ಯವಾದದ್ದೆಂಬ ತಾತ್ಪರ್ಯವು. ಇದು ಹೊರತು ಈ ಘಾಳಿಯು ಬಳಲಿದ ಹಾದಿಕಾರರ ಶರೀರಕ್ಕೆ ಉಂಟಾದ ಬಳಲಿಕೆಯನ್ನು ಸಂಪೂರ್ಣವಾಗಿ ಪರಿಹರಿಸುತ್ತದೆ.

ಮೂ । ಕಾವೇರೀಂಧುನೀಂನಿರೀಕ್ಷ್ಯಸಶಿರಃಕಂಪಂ ॥

ಅರ್ಥ ॥ ಕಾವೇರಿ ನದಿಯನ್ನು ನೋಡಿ ತಲೆದೂಗಿಸಿ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ । ಹಂತರಂಗಪುರಸಂಗತಮತ್ರಹಂತರಂಗಚಲಪಂಕಜ
ಸಂಘಂ । ಸಹ್ಯಜಾಯತರಘುರಂಬಹುಮನ್ಯೇಸಹ್ಯಜಾಯತತಮಶ್ಯ
ಮನಾರ್ಥಮ್ ॥ ೫೬೨ ॥

ಟೀಕಾ ॥ ಹಂತೇತಿ ॥ ಅತ್ರಪುರೋವರ್ತಿದೇಶೇ— ರಂಗಪುರೇಣಸಂಗತಂ— ತರಂಗೈಶ್ಚಲಾಃ ಪಂಕಜಾನಾಂ ಸಂಘಾಃರಾಶಯಃ ಯಸ್ಮಿಂಸ್ತಂ— ಸಹ್ಯಜಾಯಾಃ ಕಾವೇರ್ಯಾಃ ಆಯತಂ ದೀರ್ಘಂ ರಘುರಂಪ್ರವಾಹಂ—ಅಹಂ— ಬಹುಮನ್ಯೇಸಮ್ಮಾನಯಾಮಿ— ಹಿಯಸ್ಮಾತ್— ಸಃಕಾವೇರೀಪ್ರವಾಹಃ—ತಮಸಃ ಅಜ್ಞಾನಸ್ಯ ಶಮನಾರ್ಥಂ ನಾಶಯಿತುಂ— ಅಜಾಯತಆವಿರ್ಬಭೂವ ॥

ಅರ್ಥ ॥ ಶ್ರೀರಂಗ ಪುರಕ್ಕೆ ಹೋಗಿ ಕೂಡಿದಂಥ ತೆರೆಗಳಿಂದ ಬಳುಕುವ ತಾವರೆಗಳ ಹಿಂಡಿನಿಂದ ಯುಕ್ತವಾಗಿರುವಂಥ ಕಾವೇರಿನದಿಯ ದೀರ್ಘವಾದ ಶೆಳೆವು ಇಗೋ ನಮ್ಮ ಎದುರಿಗೆ ಓಡುತ್ತೆ! ಅದನ್ನು ನಾನು ಆದರಿಸುತ್ತೇನೆ. ಯಾಕಂದರೆ: ಈ ಕಾವೇರಿ ಶೆಳೆವು ಅಜ್ಞಾನವನ್ನಳಿಸುವದಕ್ಕಾಗಿ ಪ್ರಕಟವಾಗಿದೆ.

ಮೂ । ಏಷಾಕಿಲ *ದೋಷಾಕುಲಮನುಜಕುಲಸಕಲಕಲುಷಶೋಷಣ †ಬದ್ಧಕಂಕಣಾ । ನಿಜತಟನಿಬಿಡತಮಬಕುಲಧವಲಕುಲತಿಲಕಾಮಲಕಾ ವಿರಲಸರಲಕುಂದಚಂದನಮಂದಾರಸಹಕಾರಕೇಸರಸರಸಬದರಕದಂಬಕದಂಬಕಗಂಭೀರಜಂಬೀರಜಂಬೂಸಂಪೂರ್ಣ ಪರ್ಣಕುಸುಮಪಲಾಶಸಮೃದ್ಧಕಪಿತ್ಥಲೋಧ್ರನೀರಂಧ್ರಶಿಲೀಂಧ್ರಪಾಟಲಪಟಲಜಟಿಲ ಕ್ರಮುಕಪ್ರಮುಖವಿಶಂಕಟವಿಟಪಿಮಂಜರೀಪುಂಜಸಂಜರೀಜೃಂಭದುರುತರಶ್ರಮಶಮಕರಮಕರಂದರಸಸುಗ್ರಸನತಾತ್ಪರ್ಯ ಪರ್ಯಟದದಭ್ರವಿಭ್ರಮಾಲಂಬರೋಲಂಬನಿಕುರಂಬಕರಂಭಿತತಯಾ ಕಲಿಂದನಂದಿನೀಪ್ರತಿಚ್ಛಂದತಾಮನುವಿಂದತೀ । ನಿಶಾಕಲಿತವಿಶಾಲಸುರತದಶಾನುಭವಶ್ರಮಶಾಲಿಕ್ಷಿತೀಶನಿಶಾಂತಕೃಶಾಂಗೀಜನಮಜ್ಜನವೇಳಾಡೋಲಾಯಿತ ಪೃಥುಲಹಾರಪ್ರತ್ಯುಪ್ತಮುಕ್ತಾಫಲರುಚಿನಿಚಯ ಪರಿಚಯರಚಿತಯಾ ಶುಚಿತಯಾ ಪೀತಾಂಬರಪದಾಂಬುರುಹಸಂಭವಸರಿದಂಬುಡಂಬರಂ ವಿಡಂಬಯಂತೀ । ಸಂತತಮಂತರ್ಗತಚಿರಂತನಪುರುಷತಲ್ಪೀಭವದನಂತಫಣಾಮಣಿಶ್ರೇಣಿಶೋಣೀಭೂತತಯಾ ಸರಸ್ವತೀಮನುಕುರ್ವತೀ । ಪಾರ್ಶ್ವದ್ವಯ್ಯಾಮಪಿನೈಯಮಿಕಕರ್ಮಾನುಷ್ಠಾನಶ್ರದ್ಧಾಬದ್ಧಾಸನಶುದ್ಧಾವನೀಸುರಾರಬ್ಧಾನವದ್ಯಬ್ರಹ್ಮಯಜ್ಞಾಸಮಯಸಮಧಿಗತಮಂತ್ರಬ್ರಾಹ್ಮಣಾಮ್ರೇಡನಪೂರ್ವಕಮಜಸ್ರಂ ಸಹಸ್ರಪತ್ರಮಧ್ಯಮಧ್ಯಾಸೀನಾನಾಂ ಶ್ರೀರಂಗರಾಜನಾಭಿಸರೋಜವಿರಾಜಮಾನನಿಖಿಲನಿಗಮಪಠನಮುಖರಚತುರ್ಮುಖಮೈಖರೀಂ ವ್ಯಾಚಕ್ಷಮಾಣಾನಾಂ ಮದಕಲಮರಾಲಯೂನಾಂ ವರಟಾಪರಿರಂಭಚುಂಬನಮುಖಾನಂಗಸಂಗರಪ್ರಕ್ಷೋಭವಿಸೃತ್ವರೈಃ ಅಭಿರಾಮತಾಮರಸಪರಾಗೈಃ ಅಭಿನವಚಂದನರಸಮಸೃಣಶರೀರೇವ । ಸಲೀಲಮಾಕಂಠನಿಮಗ್ನಮೂರ್ತೀನಾಂ ಸುಗಾತ್ರೀಣಾಂ ವದನೈರದಸೀಯೇ ಪಯಸಿವೈಹಾಯಸಾಧ್ವನಾಸಮಾಗತಶ್ಚಂದ್ರಮಾಸ್ಸನ್ನಿಹಿತಶ್ರೀರಂಗಧಾಮಾಸ್ವಸಮಾನನಾಮಾವಿಧುರ್ವಿ

---

* ದೋಷಾಕುಲ ಸಕಲ ಇತಿಪುಸ್ತಕಾಂತರೇ ॥ † ಬದ್ಧಕಂಕಣಾ ಕಂಕಣೇತಿ ಪುಸ್ತಕಾಂತರೇ ॥

ರಚಿತಾನೇಕಾವತಾರ ಇತೀರ್ಷ್ಯಯಾಸ್ವಯಮಪಿಬಹೂನಿರೂಪಾ
ಣಿವಿದಧಾನೋವಿರಾಜತ ಇತಿಭ್ರಾಂತಾವನುರಾಗವಾಂದ್ಯಸಂಪಾ
ದಿಕಾಯಾಂ ಇತರೇತರದೃಢಾಶ್ಲೇಷವಿಶೇಷೋನ್ಮಿಷತ್ತೋಷಾ
ಭಿಃಕೋಕದಂಪತೀಪರಂಪರಾಭಿರ್ನಿರಾಕೃತಾಯಾಂಅಕುಂಠೋ
ತ್ಕಂಠೇನಯುವಲೋಕೇನನಿರ್ನಿಮೇಷಮವ ಲೋಕಮಾನೇನ
ಅಲಂಕೃತಾಸಾರಸ್ವತಾಭಿಮುಖ್ಯೇನಕವೇರಾತ್ಮಜೇತಿ ಪ್ರಸಿದ್ಧಿಂ
ಸಾರ್ಥಯಂತೀಶಾಂತನವಾಸ್ಪದತಯಾ ಗಾಂಗೇಯತರಂಗಿಣೀ
ಸಂಜ್ಞಾಮನ್ವರ್ಥಯಂತೀ ಮಜ್ಜನದುರಿತಹರಾಪಿನಮಜ್ಜನದು
ರಿತಹರಾನಿರಾಕೃತಪಥಿಕಶ್ರಾಂತಿಸ್ಸ್ರವಂತೀಚಕ್ಷುಷೋರಮಂ
ದಂಕಂದಳಯತ್ಯಾಮೋದಂ ॥ ೫೬೩ ॥

ಟೀಕಾ ॥ ಏಷೇತಿ ॥ ದೋಷೈರಶುಭೈರಾಕುಲಾನಾಂ ಮನುಜಾನಾಂ ಕುಲಸ್ಯವೃಂದಸ್ಯಸಕಲಾನಾಂ ಕಲುಷಾಣಾಂ ಪಾಪಾನಾಂಶೋಷಣೇನಾಶನೇ ಬದ್ಧಂಕಂಕಣಂದೀಕ್ಷಾಂಗಂ ಹಸ್ತಸೂತ್ರಂಯಯಾಸಾ—ತದರ್ಥಂಕೃತಸಂಕಲ್ಪೇತ್ಯರ್ಥಃ—ನಿಜತಟೇತ್ಯಾದ್ಯನುವಿಂದತೀತ್ಯಂತಸ್ಯ—ಅಳಿಸಮೂಹಕೃತನೈಲ್ಯೇನ ಯಮುನಾಸಾಮ್ಯಂಪ್ರಾಪ್ನುವಂತೀತ್ಯರ್ಥಃ— ನಿಬಿಡತಮಾಃ ಅತಿಸಾಂದ್ರಾಃ ವಕುಳಾದಯೋವೃಕ್ಷವಿಶೇಷಾಃ— ಕದಂಬಕಂಸಮೂಹಃ—ಸಂಪೂರ್ಣಾನಿಪರ್ಣಾನಿಚಕುಸುಮಾನಿಚಯೇಷಾಂ ತಾದೃಶಾಃ ಪಲಾಶಾಃ ಕಿಂಶುಕಾಃ ತೈಃ ಸಮೃದ್ಧಾಃ— ನೀರಂಧ್ರಾಃ ನಿರವಕಾಶಾಃ—ಪಟಲಂಸಮೂಹಃ—ಜಟಿಲಾಃ ನಿಬಿಡಾಃ ಕ್ರಮುಕಾಶ್ಚ ಪ್ರಮುಖಾಃ ಪುರಸ್ಸರಾಃ ಯೇಷಾಂತೇ— ವಿಶಂಕಟಾಮಹಾಂತಃ— ವಿಟಪಿನೋವೃಕ್ಷಾಃ— ಮಂಜರೀಭ್ಯಃ ಪುಷ್ಪಗುಚ್ಛೇಭ್ಯಃ— ಸಂಜರೀಜೃಂಭಣೇ ಭೃಶಂಪ್ರವರ್ಧನೇ—ಭ್ರಮಸ್ಯಶಮಕರಃ ನಾಶಕೃತ್ಸುಗ್ರಸನಂ ಸುಷ್ಠುಪಾನಂ— ತಾತ್ಪರ್ಯಂಇಚ್ಛಾ—ಪರ್ಯಟಂತಃ ಪರಿಭ್ರಮಂತಃ—ವಿಭ್ರಮಸ್ಯಪ್ರೇಮ್ಣಃ ಆಲಂಬಾಃಆಶ್ರಯಾಃ—ರೋಲಂಬಾ ಅಳಯಃ— ತೇಷಾಂನಿಕುರಂಬೇಣ ಸಮೂಹೇನ ಕರಂಬಿತತಯಾವ್ಯಾಪ್ತತಯಾ— ಪ್ರತಿಚ್ಛಂದತಾಂಸಾಮ್ಯಂ—ನಿಶೇತ್ಯಾದಿವಿಡಂಬಯಂತೀತ್ಯಂತಸ್ಯ— ಗಂಗಾವಿಲಾಸಂ ಪ್ರಕಟಯಂತೀತ್ಯರ್ಥಃ—ನಿಶಾಂತಕೃಶಾಂಗೀಜನಃ ಅಂತಃಪುರಸ್ತ್ರೀಜನಃ— ದೋಲಾಯಿತಾಃ ಚಲಂತಃ— ಪ್ರತ್ಯುಪ್ತಾನಿಸಂಘಟಿತಾನಿ— ನಿಚಯೇನಸಮೂಹೇನ—ರಚಿತಯಾಕೃತಯಾ—ಶುಚಿತಯಾಧಾವಳ್ಯೇನ—ಚಿರಂತನಪುರುಷಃ ಶ್ರೀರಂಗನಾಯಕಃ—ತಲ್ಪೀಭವತಃ ಶಯನೀಭೂತಸ್ಯ ಅನಂತಸ್ಯಶೇಷಸ್ಯ—ಫಣಾಸುಮಣಿಶ್ರೇಣ್ಯಾಮಾಣಿಕ್ಯ ಪಙ್ಕ್ತ್ಯಾಶೋಣೀಭೂತತಯಾ ಅರುಣೀಕೃತತ್ವೇನ-ಪಾರ್ಶ್ವದ್ವಯ್ಯಾಮಿತ್ಯಾದಿ ಶರೀರೇವೇತ್ಯಂತಸ್ಯ-ವೇದಪಾರಾಯಣೇನ ಪದ್ಮಸ್ಥಿತ್ಯಾಚಬ್ರಹ್ಮಾತುಲ್ಯೈಃ ಹಂಸೈಃತತ್ಸ್ತ್ರೀಸಂಭೋಗಸಮಯೇ ಕಂಪಿತೇಭ್ಯಃ ಪದ್ಮೇಭ್ಯೋಗಳಿತೈಃ ಪರಾಗೈಃ ಚಂದನಕುಂಕುಮಾಲಿಪ್ತದೇಹೇವೇತ್ಯರ್ಥಃ ಪಾರ್ಶ್ವದ್ವಯ್ಯಾಂತಟದ್ವಯೇಪಿ—ನಿಯಮೇನಭವತಿ ನೈಯಮಿಕಂನಿತ್ಯಂಕರ್ಮ—ಸಮಧಿಗತಾನಿಗೃಹೀತಾನಿ—ಆಮ್ರೇಡನಂ ದ್ವಿಸ್ತ್ರಿರುಚ್ಚಾರಣಂ ಪೂರ್ವಂ ಯಸ್ಮಿನ್ಕರ್ಮಣಿತತ್ತಥಾ—ಸಹಸ್ರಪತ್ರಂಕಮಲಂ ತನ್ಮಧ್ಯಮಧ್ಯಾಸೀನಾನಾಂ ಉಪವಿಷ್ಟಾನಾಮತಏವಚತುರ್ಮುಖಸ್ಯಬ್ರಹ್ಮಣಃ ವೈಖರೀಂರೀತಿಂ ವ್ಯಾಚಕ್ಷಮಾಣಾನಾಂ ಪ್ರಕಟಯತಾಂ—ಮರಾಲಯೂನಾಂ ತರುಣಹಂಸಾನಾಂ— ವರಟಾಃ ಹಂಸಸ್ತ್ರಿಯಃ—ಪರಿರಂಭಃ ಆಲಿಂಗನಂ—ಅನಂಗಸಂಗರೇಣಸುರತೇನ ವಿಸ್ಸೃತ್ವರೈರ್ಗಮಿತೈಃ— ತಾಮರಸಪರಾಗೈಃ ಪದ್ಮರೇಣುಭಿಃ— ಮಸೃಣಂಲಿಪ್ತಂ— ಸಲೀಲಂ ಯಥಾತಥಾ ಆಕಂಠಂ ಕಂಠಪರ್ಯಂತಂ ನಿಮಗ್ನಾ ಜಲಾಂತರ್ಹಿತಾ ಮೂರ್ತಿರ್ಯಾಸಾಂ ತಾಸಾಂ— ವ

ಕ್ಷ್ಯಮಾಣಾನೇಕಚಂದ್ರ ಭ್ರಾಂತಿಸಾಕಲ್ಯಾಯ ಇದಂ ವಿಶೇಷಣಂ— ಸುಗಾತ್ರೀಣಾಂ ಸುಂದರೀಣಾಂ ವದನೈಃ ಇತಿಭ್ರಾಂತಿ ಹೇತುತ್ವಾತ್ ತೃತೀಯಾ— ಅದಸೀಯ ಇತ್ಯಾದಿ ದ್ವಿತೀಯೇತಿ ಶಬ್ದಾಂತಂ ಭ್ರಾಂತಿ ಸ್ವರೂಪನಿರೂಪಣಂ— ಅಮುಷ್ಯಾಸ್ಸಂಬಂಧಿನಿ ಅದಸೀಯೇಪಯಸಿ— ದ್ವೈಪಾಯನಾಧ್ವನಾ ಆಕಾಶಮಾರ್ಗೇಣ—ಸಮಾಗತಃ ಶ್ರೀರಂಗಸಮೀಪಂ ಪ್ರಾಪ್ತಃ—ಅತಏವ ಚಂದ್ರಮಾಃ ಸನ್ನಿಹಿತೇತ್ಯಾದೀತಿಶಬ್ದಾಂತಂ ಈರ್ಷ್ಯಾಸ್ವರೂಪ ನಿರೂಪಣಂ—ಸ್ವೇನಸಮಾನಂ ತುಲ್ಯಂ ನಾಮವಿಧುರಿತಿ ಸಂಜ್ಞಾ ಯಸ್ಯಸಃ—ವಿಧುಃ ವಿಷ್ಣುಃ— ವಿಧುರ್ವಿಷ್ಣೌ ಚಂದ್ರಮಸೀತ್ಯಮರಃ— ಇತ್ಯುಕ್ತಪ್ರಕಾರಾಯಾಮತಏವ ಅನುರಾಗಸ್ಯ ಮಾಂದ್ಯಸಂಪಾದಿಕಾಯಾಂ ಕ್ಷೀಣತ್ವಪ್ರಯೋಜಿಕಾಯಾಂ ಭ್ರಾಂತೌ—ಇದಂ ನಿರಾಕೃತಾಯಾಂ ಸತ್ಯಾಂ ಇತ್ಯತ್ರಾನ್ವೇತಿ— ಉನ್ಮಿಷತ್ತ್ರೋಷಾಭಿರ್ಜಾಯಮಾನಸಂತೋಷಾಭಿಃ ಕೋಕದಂಪತೀನಾಂ ಚಕ್ರವಾಕ ಮಿಥುನಾನಾಂ ಪರಂಪರಾಭಿಃ ಪಙ್ಕ್ತಿಭಿರ್ನಿವಾರಿತಾಯಾಂ—ಚಂದ್ರತ್ವೇ ತೇಷಾಮನ್ಯೋನ್ಯ ಯೋಗಾ ಸಂಭವಾನ್ನೇಮಾನಿಚಂದ್ರಾಃ ಕಿಂತುಸ್ತ್ರೀಮುಖಾನ್ಯೇವೇತಿ ನಿಶ್ಚಯೇಜಾತೇ ಸತೀತ್ಯರ್ಥಃ— ಅಕುಂಠೋತ್ಕಂಠೇನ ಅಪ್ರತಿಹತಕೌತುಕೇನ—ಅತಏವ ನಿರ್ನಿಮೇಷಂ ಯಥಾತಥಾ ಅವಲೋಕ ಮಾನೇನ ಸ್ತ್ರೀಮುಖಾನೀತಿ ಶೇಷಃ—ಅಲಂಕೃತಾ—ಪಾರ್ಶ್ವದ್ವಯ್ಯಾ ಮಿತ್ಯನುಷಂಜನೀಯಂ—ಸರಸ್ವತ್ಯಾ ಇದಂ ಸಾರಸ್ವತಂ ವಿದ್ಯಾಜಾಲಂ—ಸರಸ್ವತಸ್ಸಮುದ್ರಸ್ಯೇದಂ ಸಾರಸ್ವತಂಚ—ತಸ್ಯಾಭಿಮುಖ್ಯೇನ ಅನಾಯಾಸಂಗ್ರಹಣೇನ—ಸಮುದ್ರಾನುಸರಣೇನಚ ಹೇತುನಾ—ಕವೇಃ ಕವಯಿತುಃ—ಆತ್ಮಜೇತ್ಯಾಕಾರಿಕಾಂ—ಕವೇರಸ್ಯಗಿರೇಃ ರಾಜ್ಞೋವಾತ್ಮಜೇತಿಚ ಪ್ರಸಿದ್ಧಿಂ ಸಾರ್ಥಯಂತೀ ಯಥಾರ್ಥೀಕುರ್ವಂತೀ—ಶಾಂತನವಸ್ಯ ಭೀಷ್ಮಸ್ಯ—ಶಾಂತಾನಾಂ ಯೋಗಿನಾಂ ನವಸ್ಯ ಸ್ತೋತ್ರಸ್ಯಚ—ಆಸ್ಪದತಯಾ ಆಶ್ರಯತ್ವೇನ—ಗಾಂಗೇಯಸ್ಯ ತರಂಗಿಣೀ ಭೀಷ್ಮಜನನೀ—ಗಂಗಾಯಾ ಇದಂ ಗಾಂಗೇಯಂ ಸುವರ್ಣಂ ತನ್ಮಯಊತರಂಗಿಣೀತಿಚ ಸಂಜ್ಞಾಮನ್ವರ್ಥಯಂತೀ ಸಾರ್ಥಯಂತೀ—ಮಜ್ಜನೇನದುರಿತಹರಾಪಿ ಮಜ್ಜನದುರಿತಪರಾ ನೇತಿವಿರೋಧಃ—ನಮತಃ ನಮಸ್ಕುರ್ವತಃ ಜನಸ್ಯ ದುರಿತಹರಾಚೇತಿ ಪರಿಹಾರಃ—ಏಷಾಸ್ರವಂತೀ ಕಾವೇರೀ—ಅಮಂದಂ ಅಧಿಕಂ—ಚಕ್ಷುಷೋರಾನಂದಂ—ಕಂದಲಯತಿ ಜನಯತಿ ||

ಅರ್ಥ ॥ ಪಾಪದಿಂದ ಗೋಳಾಡುವ ಮನುಷ್ಯ ಸಮುದಾಯದ ಪಾಪಗಳನ್ನೆಲ್ಲ ತೊಳೆಯುವದರಲ್ಲಿ ದೃಢ ಸಂಕಲ್ಪವನ್ನು ತಾಳಿದವಳಾದಂಥಾವಳಾಗಿಯೂ, ದಂಡೆಗಳಲ್ಲಿ ಅಡವಾಗಿ ಬೆಳೆಯುವ ಗೋಳಿ, ಧವ, ಎಳ್ಳು, ನೆಲ್ಲಿ, ಮಲ್ಲಿಗೆ, ಚಂದನ, ಮಂದಾರ, ಮಾವು, ನಾಗಸಂಪಿಗೆ, ಬೋರೆ, ಕಡವಾಲ, ನಿಂಬೆ, ನೀರಲು, ತುಂಬ ಎಲೆ ಮತ್ತು ಹೂಗಳುಳ್ಳ ಮುತ್ತಾಲ, ಬೆಳವಲ, ಲೋದಿ, ಆಳಂಬಿ, ಪಾಟಲ, ಮತ್ತು ಅಡಿಕೆ ಸಸಿಗಳೇ ಮೊದಲಾದ ಹೆಗ್ಗಿಡಗಳ ಹೂಗೊಂಚಲುಗಳ ಗುಂಪುಗಳ ಮೇಲೆರಗಿ, ಹೂರಸವನ್ನು ಕುಡಿದು ಬಳಲಿಕೆ ತೀರಿಸಿಕೊಳ್ಳುವ ಇಚ್ಛೆಯಿಂದ ಸುತ್ತಲು ಹಾರ್ಯಾಡುವಂಥ, ಮತ್ತು ಹೆಚ್ಚಿದ ಪ್ರೀತಿಯ ವಿಲಾಸಗಳಿಗೆ ನೆಲೆಯಾದಂಥ ದುಂಬಿಗಳ ಕಪಿಶೋಣದರಿಂದ ಯಮುನಾ ನದಿಯ ತೋರ್ಕೆಯನ್ನಡಪವಳಾದಂಥಾವಳಾಗಿಯೂ, ರಾತ್ರಿಯಲ್ಲಿ ತುಂಬ ಸುಶಿಲವನ್ನೆಸಗಿ ಬಳಲಿದ ಅರಸುಗಳ ಅಂತಃಪುರದ ಹೆಣ್ಗಳು ಜಳಕ ಮಾಡುವ ವೇಳೆಯಲ್ಲಿ ತೇಲಾಡುವ ಸರಗಳಲ್ಲಿ ಪೋಣಿಸಲ್ಪಟ್ಟ ಮುತ್ತಿನ ಮಣಿಗಳ ಪದಪಿನಿಂದ ಉಂಟಾದ ಬಿಳ್ಪಿನಿಂದ, ವಿಷ್ಣುವಿನ ಅಡಿದಾವರೆಯಲ್ಲಿ ಹುಟ್ಟಿದ ಗಂಗೆಯ ಜಂಭಕ್ಕೆ ಹಾಸ್ಯ ಮಾಡುವಂಥಾವಳಾಗಿಯೂ, ನಿರಂತರವಾಗಿ ತನ್ನೊಳಗಿರುವ ಪುರಾಣ ಪುರುಷನಾದ ಶ್ರೀರಂಗ ದೇವರ ಹಾಸಿಗೆಯಾದ ಸರ್ಪನ ಹೆಡೆಯೊಳಗೆ ಸಾಲಾಗಿರುವ ರತ್ನಗಳ ಕಾಂತಿಯಿಂದ ಕೆಂಬಣ್ಣವನ್ನಡದು ಸರಸ್ವತೀ ನದಿಯ ಹೋಲಿಕೆ

ಯಾಗಿರುವಂಥಾವಳಾಗಿಯೂ, ಉಭಯ ದಂಡೆಗಳಲ್ಲಿ ನಿಯಮಾನುಸಾರವಾಗಿ ಸ್ನಾನಸಂಧ್ಯಾ ಮೊದಲಾದ ಕಾರ್ಯಗಳನ್ನು ನಡಿಸುವದರಲ್ಲಿ ದೃಢನಿಷ್ಠಾವಂತರಾಗಿ ಕುಳಿತುಕೊಂಡಿರುವ ಪವಿತ್ರರಾದ ಬ್ರಾಹ್ಮಣರ ನಿಷ್ಪಾಪವಾದ ಬ್ರಹ್ಮಯಜ್ಞಗಳ ವೇಳೆಯಲ್ಲಿ ಪುನಃ ಪುನಹಾ ಪಠಿಸಲ್ಪಡುವ ಮಂತ್ರೋಚ್ಚಾರಣದಿಂದ, ಯಾವಾಗಲೂ ತಾವರೆಗಳ ಮಧ್ಯದಲ್ಲಿಯೇ ಕುಳಿತು ಕೊಂಡಿದ್ದು ಶ್ರೀರಂಗಸ್ವಾಮಿಯ ನಾಭಿಕಮಲದಲ್ಲೊಪ್ಪುವ ಬ್ರಹ್ಮದೇವರ ಸಂಪೂರ್ಣ ವೇದಪಠನದಲ್ಲಿ ಚಪಲವಾದ ವಾಕ್ಕುವನ್ನು ಬಯಲು ಪಡಿಸುವಂಥಾವರಾದ, ಸೊಕ್ಕೇರಿದ ಅಂಚೆಗಳು ತಮ್ಮ ಹೆಣ್ಣುಗಳನ್ನು ಬಿಗಿದಪ್ಪಿ ಮುದ್ದಾಡಿ ಜರುಗಿಸುವ ಕಾಮಯುದ್ಧದ ಕುದಿಕೆಯಿಂದುಂಟಾದ ತಲ್ಲಣಿಕೆಯ ದೆಶೆಯಿಂದ ಉದುರಿ ಬೀಳುವ ಸುಂದರ ಕಮಲಗಳವೂಳಿಯಿಂದ ಹೊಸತಾದ ಪನ್ನೀರೇರದ ಮೈಯುಳ್ಳವಳೆಂಬಂತೆ ತೋರುವಂಥಾವಳಾಗಿಯೂ, ವಿಲಾಸವಂತರಾಗಿ ಕೊರಳು ಮಟ್ಟಿಗೆ ನೀರಲಿಳಿದ ಚಲ್ವೆಯರ ಮೊಗಗಳನ್ನು ನೋಡಿ ಚಂದ್ರನು ಈ ನದಿಯ ನೀರಿನ ಮೇಲೆ ಆಕಾಶ ಮಾರ್ಗವಾಗಿ ಬಂದಿಳಿದು, ಶ್ರೀರಂಗದೇವಸ್ಥಾನದ ಸಮೀಪ ಮುಟ್ಟಲು, ತನ್ನ ಹೆಸರಿಗೆ ಸರಿಯಾದ ಹೆಸರು ಅಂದರೆ „ ವಿಧು ” ಎಂಬ ಹೆಸರುಳ್ಳ ಈ ಶ್ರೀರಂಗನು ಅನೇಕ ಅವತಾರಗಳನ್ನು ತೆಕ್ಕೊಂಡಿದ್ದಾನೆ, ನಾನು ಕೂಡ ಹಾಗೆ ಯಾಕೆ ಮಾಡಬಾರದೆಂಬ ಹುರುಡಿನಿಂದ ಅನೇಕ ರೂಪಗಳನ್ನು ಧರಿಸಿ ಒಪ್ಪುತ್ತಾನೆ ಎಂತೆ ಮರುಳುಗೊಂಡ ಚಕ್ರವಾಕ ಪಕ್ಷಿಗಳ ಜೊತೆಗಳು ತೀವಿದೊಲವಿಂದ ಪರಸ್ಪರ ಬಿಗಿದಪ್ಪಿ ಕೊಳ್ಳುತ್ತಿರುವಾಗ್ಯೆ, ಪ್ರೀತಿಯನ್ನು ಕುಂದಿ ಚಂದ್ರಭ್ರಾಂತಿಯನೀಗುತಿರಲು, ಊನವಿಲ್ಲದ ಅರ್ತಿಯಿಂದ ಕಣ್ರೆಪ್ಪೆ ಬಡಿಯದೆ ಬಿಟ್ಟಿಸಿ ನೋಡುವ ತರುಣ ಜನರುಗಳಿಂದೊಪ್ಪುವ ದಂಡೆಗಳುಳ್ಳಂಥಾವಳಾಗಿಯೂ, ಸಾರಸ್ವತಂ ಅಂದರೆ ಸಮುದ್ರ ಸಂಬಂಧದ ( ಅಥವಾ ವಿದ್ಯೆಯ ಸಂಬಂಧ ) ಕಡೆಗೆ ಮುಖ ಮಾಡಿದವಳಾಗಿ ಕವೇರಾತ್ಮಜಾ ಎಂಬ ಹೆಸರನ್ನು ಧಿಟಪಡಿಸುವಂಥಾವಳಾಗಿಯೂ, ಶಾಂತನವಾಸ್ಪದತಯೂ ಅಂದರೆ ಯೋಗಿಗಳಿಂದ ಸ್ತುತಿಗೆ ಅರ್ಹಳಾದದರಿಂದ ( ಅಥವಾ ಗಾಂಗೇಯನೆಂದರೆ ಭೀಷ್ಮನ ಆಶ್ರಯವಾದದರಿಂದ ) ಗಾಂಗೇಯತರಂಗಿಣಿ-ಸುವರ್ಣಮಯವಾದ ಅಥವಾ ಭೀಷ್ಮನಿಗೆ ಸಂಬಂಧ ಉಳ್ಳ ನದಿ ಎಂಬ ಹೆಸರನ್ನು ಯಥಾರ್ಥಪಡಿಸುವಂಥಾವಳಾಗಿಯೂ, ತನ್ನ ನೀರಲ್ಲಿ ಜಳಕ ಮಾಡಿದವರ ಮತ್ತು ತನ್ನ ಬಳಿಯಲ್ಲಿ ಮಣಿದವರ ಪಾಪಗಳನ್ನು ನಶಿಸುವಂಥಾವಳಾಗಿಯೂ, ಹಾದಿಕಾರರ ಬಳಲಿಕೆಯನ್ನು ಹೋಗಪಡಿಸುವಂಥಾವಳಾಗಿಯೂ, ಈ ಕಾವೇರಿ ನದಿಯು ಕಣ್ಣುಗಳಿಗೆ ತುಂಬ ಆನಂದವನ್ನೀಯುತ್ತಾಳೆ.

ಮೂ। ಶ್ಲೋ। ಪ್ರಹಸತಿಭವಶೋಷಕರೀಭವೇನಪರಿತೋಷಿತಾಂಸುವರ್ಣನದೀ । *ದುರ್ವರ್ಣರುಚಿಂಫೇನೈಸ್ಸ್ಪೃಹ್ಯಸುತಾಜಾಹ್ನವೀಮಸಹ್ಯಸುತಾವ್ ॥ ೫೬೪ ॥

---

* ದುರ್ವರ್ಣರುಚಿರಫೇನೈರಿತಿಪಾಠಾಂತರಮ್ ॥

ಯಾಕೆಂದರೆ ಈ ಶ್ರೀರಂಗಕ್ಷೇತ್ರದ ಬಳಿಯಲ್ಲೇ- ಕಾವೇರಿ ದಂಡೆಯಲ್ಲಿ ಸಪ್ತಪ್ರಾಕಾರವೇಷ್ಟಿತವಾದ ( ಸಪ್ತ್ಸ್ಯ ಅಂದರೆ ಜಟಾಧಾರಿಯಾದವನ ) ಶಿವಕ್ಷೇತ್ರವಾದ ಈ ಜಂಬುಕೇಶ್ವರ ಕ್ಷೇತ್ರವನ್ನು ನೋಡು.

ವಿಶ್ವಾವಸುಃ ॥

ಮೂ। ವಿಹಸ್ಯ । ಸತ್ಯಂಜಟಾಧರಪ್ರಾಕಾರಸಂವೃತಸ್ಯಾಸ್ಯಶ್ಲೇಷ
ನೈಪುಣ್ಯೇನೈವರಂಗಸಾಧರ್ಮ್ಯಂಸಮರ್ಥನೀಯಂ ॥ ೬೩೩ ॥

ಟೀಕಾ ॥ ಸತ್ಯಮಿತಿ ॥ ಜಟಾಧರಸ್ಯ ಶಿವಸ್ಯ ಸಂಬಂಧಿಭಿಃ ಪ್ರಾಕಾರೈಃ ಚತುರ್ಭಿಃ ಸಂವೃತಸ್ಯ ಅಸ್ಯಜಂಬುಕೇಶ್ವರಕ್ಷೇತ್ರಸ್ಯ– ಶ್ಲೇಷಸ್ಯಸಪ್ತಶಬ್ದಗತಸ್ಯ ನೈಪುಣ್ಯೇನ– ಸಪ್ತ್ರಯಾಜಟಯಾಸಹಿತಸ್ಸಪ್ತ್ರ ಇತಿ ಚಾತುರ್ಯೇಣೈವ ॥

ಅರ್ಥ ॥ ವಿಶ್ವಾವಸು ನಗೆ ಆಡಿ ಹೇಳುತ್ತಾನೆ: ಅಹುದೈಯಾ ಜಟಾಧರಪ್ರಾಕಾರ ಅಂದರೆ ಶಿವ ಸಂಬಂಧಿ ನಾಲುಗು ಪ್ರಾಕಾರಗಳಿಂದ ಸುತ್ತಲ್ಪಟ್ಟಿರುವ ಈ ಜಂಬುಕೇಶ್ವರ ಕ್ಷೇತ್ರಕ್ಕೆ ನಿನ್ನ ಶ್ಲೇಷ ಚಮತ್ಕಾರದಿಂದಲೇ ಶ್ರೀರಂಗಕ್ಷೇತ್ರದ ಸಮತ್ವ ಸಿದ್ಧವಾಗಬೇಕು.

ಮೂ। ನಿಪುಣಂವಿಭಾವ್ಯ । ಶ್ಲೋ। ನಂದತ್ಕಂದರ್ಪದರ್ಪಕ್ಷಪಣ
ನಿಪುಣದೃಗ್ವಹ್ನಿಸಂಪನ್ನಭಾಲಾರುಣ್ಯಃಫಣ್ಯಗ್ರಗಣ್ಯಪ್ರಕರಮ
ಯುತಯಾಭೀಷಣೋಭೂಷಣೈರ್ಯಃ । ಕಾಂತಸ್ಸಾಂತಃಪುರಸ್ಸ
ತ್ಕಬಳಿತಗರಳೋರಾಜತೇರಾಜತೇದ್ರಾವಮುಷ್ಯಾಂಸಹ್ಯಾತ್ಮಜಾಗ್ರೇ
ವಿಹರತಿಸುಚಿರಂಶಂಕರಶ್ಶಂಖರೋಚಿಃ ॥ ೬೩೮ ॥

ಟೀಕಾ ॥ ನಂದದಿತಿ ॥ ನಂದತಃ ಬ್ರಹ್ಮಾದಿಕೀಟಾಂತಜಯೇನಹೃಷ್ಯತಃ ಕಂದರ್ಪಸ್ಯ ಯೋದರ್ಪಃ ಗರ್ವೋಜಯಜನ್ಯಸ್ತಸ್ಯ ಕ್ಷಪಣೆನಾಶನೆನಿ ಪುಣಾಯಾಂ ದೃಶಿಯೊವಹ್ನಿಸ್ತೇನಸಂಪನ್ನಂ ಸಮೃದ್ಧಂಭಾಲೆ ಆರುಣ್ಯಂಯಸ್ಯಸಃ– ಫಣ್ಯಾಗ್ರಗಣ್ಯಾನಾಂ ಸರ್ಪಶ್ರೇಷ್ಠಾನಾಂ ಪ್ರಕರಮಯುತಯಾ ಸಮೂಹಾತ್ಮಕತ್ವೇನ– ಭೂಷಣೈಃ ಹಾರಕೇಯೂರಾದಿಭಿಃ–ಭೀಷಣಃ ಭಯಂಕರಃ– ಕಬಳಿತಗರಳಃ–ಯಃ ಶಂಕರಃ–ರಾಜತೆ ರಜತಮಯೇ– ಅದ್ರೌಕೈಲಾಸೇ– ರಾಜತೇಪ್ರಕಾಶತೆಸೋಯಂಶಂಖರೋಚಿಶ್ಶಂಕರಃ– ಸಾಂತಃಪುರಸ್ಸನ್ ಕಾಂತಃ ಮನೋಜ್ಞಸ್ಸನ್– ಅನೇನಸೇವಾಸೌಲಭ್ಯಂಸೂಚ್ಯತೆ– ಮುಷ್ಯಾಂಸಹ್ಯಾತ್ಮಜಾಗ್ರೇಜಂಬುಕೇಶ್ವರಕ್ಷೇತ್ರೇ– ಚಿರಂವಿಹರತಿಕ್ರೀಡತಿ ॥

ಅರ್ಥ ॥ ಚೆನ್ನಾಗಿ ಆಲೋಚಿಸಿ ( ವಿಶ್ವಾವಸು ಹೇಳುತ್ತಾನೆ, )

ಸಂತೋಷದಿಂದ ಹಾರ್‍ಯಾಡುವ ಮದನನ ಸೊಕ್ಕು ಮುರಿಯುವದರಲ್ಲಿ ಕುಶಲವಾದಂಥ ಕಣ್ಣಿನೊಳಗಿನ ಬೆಂಕಿಯಿಂದ ಕೆಂಪಾದ ನೊಸಲುಳ್ಳಂಥಾವನಾದ ಶ್ರೇಷ್ಠವಾದ ಸರ್ಪಸಮುದಾಯದ ತೊಡವುಗಳಿಂದ ಭಯಂಕರನಾದಂಥಾವನಾದ ವಿಷವನ್ನು ನುಂಗಿದಂಥಾವನಾದ- ಬೆಳ್ಳಿಯ ಪರ್ವತದ ಮೇಲೆ ಮೆರೆಯುವಂಥಾವನಾದ, ಶಂಖದಂತೆ ಬಿಳೆ ವರ್ಣ

ಉಳ್ಳವನಾದ ಸುಂದರನಾದ ಶಂಕರನು ಪಾರ್ವತಿಯಿಂದೊಡಗೂಡಿದಂಥಾತನಾಗಿ ಚಿರ ಕಾಲದಿಂದ ಪೃಥ್ವಿಯಲ್ಲಿ ಕಾವೇರಿ ನದಿಯ ಬಳಿಯಲ್ಲಿ ಕ್ರೀಡಿಸುತ್ತಾನೆ.

ಕೃಶಾನುಃ ॥

ಮೂ । ಸಖೇನಾತ್ರಸ್ಥಾತವ್ಯಂಯದಿಹವಿಶ್ವವಿಲಕ್ಷಣಾರೀತಿರಾಲ ಕ್ಷ್ಯತೇ ॥ಪಶ್ಯ ॥

ಟೀಕಾ ॥ ಸಖಇತಿ ॥ ವಿಶ್ವಸ್ಮಾತ್ ವಿಲಕ್ಷಣಾವಿಚಿತ್ರಾ ॥

ಅರ್ಥ ॥ ಗೆಳೆಯನೆ ಇಲ್ಲಿ ಇರಬಾರದು. ಯಾಕೆಂದರೆ- ಇಲ್ಲಿಯ ರೀತಿಯು ಲೋಕಕ್ಕೆ ಹೊರತಾದದ್ದು! ನೋಡು.

ಶ್ಲೋ । ಯೇತೋಯೈರ್ನಾದೇಯೈರಭಿಷಿಕ್ತಾಸ್ತೈಹಿತಾಪಮು ಜ್ಝಂತಿ । ಪ್ರತ್ಯುತಜಹಾತಿತಾಪಂಕಾವೇರೀಶಂಕರಾಭಿಷೇಕೇನ ॥ ೬೩೫ ॥

ಟೀಕಾ ॥ ಯಇತಿ ॥ ಹಿಯಸ್ಮಾತ್ ಯೇಜನಾಃ ನದ್ಯಾ ಇಮಾನಿ ನಾದೇಯಾನಿತೈಸ್ತೋಯೈಃ—ಅ ಭಿಷಿಕ್ತಾಃ— ತೇಜನಾಃ—ತಾಪಂಉಜ್ಝಂತಿ—ಪ್ರತ್ಯುತತದ್ವಿರುದ್ಧಮಿತ್ಯರ್ಥಃ— ಕಾವೇರೀನದೀ—ಶಂಕರಸ್ಯ ಅ ಭಿಷೇಕೇಣ ತಾಪಂಜಹಾತಿ—ಅತಃ ವಿಶ್ವವಿಲಕ್ಷಣೇತಿ ಸಂಬಂಧಃ ॥

ಅರ್ಥ ॥ ನದಿಯ ನೀರುಗಳಲ್ಲಿ ಸ್ನಾನ ಮಾಡಿದವರು ತಮ್ಮ ಉರಿಯನ್ನು ಕಳಕೊಳ್ಳುತ್ತಾರೆ. ಆದರೆ ಅದಕ್ಕೆ ವಿರೋಧವಾಗಿ ಶಂಕರನ ಅಭಿಷೇಕದಿಂದ ಕಾವೇ ರಿ ನದಿಯು ತನ್ನ ಉರಿಯನ್ನು ಹೋಗಗೊಡಿಸಿಕೊಳ್ಳುತ್ತಾಳೆ.

ವಿಶ್ವಾವಸುಃ ॥

ಮೂ । ಕುತಏವಂ ॥

ಅರ್ಥ ॥ ಅಧ್ಯಾಗೆ?

ಕೃಶಾನುಃ ॥

ಮೂ । ಶೃಣುತಾವತ್ । ಶ್ಲೋ । ಗಂಗಾನುಷಂಗಾದ್ಯಮುನಾಸದ ರ್ಪೇತ್ಯಸಹ್ಯತಾಪಾಬತೇಸಹ್ಯಕನ್ಯಾ । ಗಂಗಾಧರೇಸ್ವೈರಭಿಷಿಚ್ಯ ಮಾನೇತೋಯೈಸ್ಸ್ವಯಂತಾಪಮಿಯಂಜಹಾತಿ ॥ ೬೩೬ ॥

ಟೀಕಾ ॥ ಗಂಗೇತಿ ॥ ಯಮುನಾನದೀ—ಗಂಗಾಯಾ ಅನುಷಂಗಾತ್ ಸಂಗಮಾತ್—ಸದರ್ಪಾಇತ್ಯಾ ಲೋಚ್ಯೇತಿಶೇಷಃ—ಅಸಹ್ಯತಾಪಾ ದುರ್ಭರ ಮನಸ್ತಾಪಾ— ಬತೇತಿಖೇದೇ—ಇಯಂ ಸಹ್ಯಕನ್ಯಾಸ್ವೈಃ ಸ್ವೀಯೈಃ ತೋಯೈರುದಕೈಃ—ಗಂಗಾಧರೇ ಶಿವೇಅಭಿಷಿಚ್ಯ ಮಾನೇಸತಿ—ಸ್ವಯಂತಾಪಂ ಪೂರ್ವೋಕ್ತಂ— ಜಹಾತಿಸ್ವಸ್ಯಾ ಅಪಿಸಂಗಾನುಷಂಗ ಲಾಭಾದಿತಿಭಾವಃ ॥

ಅರ್ಥ ॥ ಹೇಳುತ್ತೇನೆ ಕೇಳು. ಗಂಗೆಯ ಸಂಗಮದಿಂದ ಯಮುನಾ ನದಿಯು ಹಿಗ್ಗಿ

ದ್ದಾಳೆಂತಾ ತಿಳಿದು ತಾಳಲಿಕ್ಕೆಶಕ್ಯವಾದ ಉರಿಯಿಂದ ಸಹ್ಯಪರ್ವತದ ಮಗಳಾದ ಕಾವೇರಿಯು ತನ್ನ ನೀರಿನಿಂದ ಮಹಾದೇವನಿಗೆ ಅಭಿಷೇಕಮಾಡಿ ತನ್ನ ಸ್ವಂತ ಉರಿಯನ್ನು ಇಲ್ಲಿ ಕಳಕೊಳ್ಳುತ್ತಾಳೆ.

## ಚೋಲದೇಶವರ್ಣನಮ್॥

### ವಿಶ್ವಾವಸುಃ ॥

ಮೂ। ಈದೃಶಂದೂಷಣಂಗುಣಗ್ರಾಹಿಣಾಮಭಿಮತಮೇವಇತ್ಯನ್ಯತೋವಿಮಾನಂಪ್ರಸ್ಥಾಪ್ಯಸಾನಂದಂ ॥

ಅರ್ಥ ॥ ಈ ಥರದ ನಿಂದೆಯು ಗುಣಗ್ರಾಹಿಗಳಿಗೆ ಸಲುವಳಿಯಾಗುತ್ತದೆ ಎಂತಾ ಹೇಳಿ ವಿಮಾನವನ್ನು ಬೇರೆ ಕಡೆಗೆ ನಡಿಸಿ ಸಂತೋಷದಿಂದ ( ವಿಶ್ವಾವಸು ಹೇಳುತ್ತಾನೆ. )

ಮೂ। ಅಮೀಖಲು। ಶ್ಲೋ। ವ್ಯಾಲಾಧಿಪೇಶಯಶುಭಸ್ಥಲಭೂಷಿತೇಲಾಃಕ್ಷ್ವೇಡಾಶನಾಯತನಸಾಂದ್ರತರಾಂತರಾಲಾಃ । ಚೋಲಾ ವಿಭಾಂತಿಪವಮಾನವಿಹಾರವೇಲಾ ದೋಲಾಯಮಾನಸಹಕಾರನವಪ್ರವಾಲಾಃ ॥ ೬೩೭ ॥

ಟೀಕಾ ॥ ವ್ಯಾಲೇತಿ ॥ ವ್ಯಾಲಾಧಿಪೇಶಯಸ್ಯ ವಿಷ್ಣೋಃ ಶುಭ್ರೈಃ ಸ್ಥಲೈರಾಲಯೈಃ ಭೂಷಿತಾ–ಇಳಾಭೂಮಿಃ ಯೇಷಾಂತೇ–ಕ್ಷ್ವೇಡಾಶನಸ್ಯ ಶಿವಸ್ಯ ಆಯತನೈರಾಲಯೈಸ್ಸಾಂದ್ರತರಾಣಿ ಅಂತರಾಲಾನಿ ಮಧ್ಯಭಾಗಾಃ ಯೇಷುತೇ– ಪವಮಾನಸ್ಯ ವಾಯೋರ್ವಿಹಾರವೇಲಾಸು ಸಂಚಾರಕಾಲೇಷು ದೋಲಾಯಮಾನಾನಿಚಲಂತಿ ಸಹಕಾರಾಣಾಂ ಚೂತವಿಶೇಷಾಣಾಂ ನವಾನಿ ಪ್ರವಾಲಾನಿ ಪಲ್ಲವಾ ಯೇಷುತೇ–ಚೋಲಾಃ ಜನಪದಾಃ–ವಿಭಾಂತಿ ॥

ಅರ್ಥ ॥ ನೋಡಿವರನ್ನ--

ಶೇಷಶಾಯಿಯಾದ ವಿಷ್ಣುವಿನ ಪವಿತ್ರವಾದ ಮಂದಿರಗಳಿಂದ ಶೋಭಿಸುವ ಸ್ಥಳಗಳುಳ್ಳಂಥಾದ್ದಾಗಿಯೂ, ಎಡೆ ಎಡೆಯಲ್ಲಿ ಒತ್ತಾಗಿ ಶಿವಾಲಯಗಳುಳ್ಳಂಥಾದ್ದಾಗಿಯೂ ಘಾಳಿ ಬೀಸುವ ವೇಳೆಗಳಲ್ಲಿ ಒಲೆದಾಡುವ ಮಾಮರಗಳ ಹೊಸತಾದ ಪಲ್ಲವಗಳುಳ್ಳಂಥಾದ್ದಾಗಿಯೂ ಚೋಳನಾಡು ಎಸೆಯುತ್ತದೆ.

ಮೂ॥ ನಿಪುಣಂವಿಭಾವ್ಯಸೋತ್ಕಂಠಂ ॥

ಅರ್ಥ ॥ಚೆನ್ನಾಗಿ ನೋಡಿ ಅತ್ಯಾನಂದದಿಂದ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ। ನಾಗವಲ್ಲೀಮತಲ್ಲೀಭಿಃಕಾಮಿನೀಭಿರಿವಾದರಾತ್ । ಪರಿರಬ್ಧಾಃ ಪ್ರಮೋದಂತೇಕ್ರಮುಕಾಃಕಾಮುಕಾಇವ ॥ ೬೩೮ ॥

ಟೀಕಾ ॥ ನಾಗೇತಿ ॥ ನಾಗವಲ್ಲೀಮತಲ್ಲೀಭಿಃ ಶ್ರೇಷ್ಠತಾಂಬೂಲೀಲತಾಭಿಃ–ಕಾಮಿನೀಭಿರಿವ–ಆದರಾತ್ –ಪರಿರಬ್ಧಾಃ ವೇಷ್ಟಿತಾಃ ಆಲಿಂಗಿತಾಶ್ಚ–ಕ್ರಮುಕಾವೃಕ್ಷಾಃ ಕಾಮುಕಾ ಇವ–ಪ್ರಮೋದಂತೆ ಹೃಷ್ಯಂತಿ ॥

ಅರ್ಥ ॥ ವೀಳ್ಯದೆಲೆ ಬಳ್ಳಿಗಳು ಹಬ್ಬಿಕೊಂಡಿರುವ ಅಡಿಕೆ ಮರಗಳು ಸೊಂಪಿನ ಚಲ್ವೆಯರು ಪ್ರೀತಿಯಿಂದಪ್ಪಿಕೊಂಡ ಕಾಮಾತುರ ಪುರುಷರಂತೆ ಕಣ್ಗೊಳಿಸುತ್ತವೆ.

ಮೂ ॥ ಇತಶ್ಚ ಭವಾನವೇಕ್ಷತಾಂ ॥

ಶ್ಲೋ । ಅಭ್ರಂಲಿಹಾನಹಹಪಶ್ಯಮರುದ್ವೃಧಾಯಾಃರೋಧೋರುಹಃಪೃಥುಫಲಾನಿಹನಾರಿಕೇಲಾನ್ । ಆಗಚ್ಛತೇಸವಿತೃಮಂಡಲಮಾಶ್ರಿತಾಯನಾಥಾಯಭಕ್ತಿತಇವಾತ್ತನವೋಪಹಾರಾನ್ ॥ ೬೩ ॥

ಟೀಕಾ ॥ ಅಭ್ರಮಿತಿ ॥ ಮರುದ್ವೃಧಾಯಾಃ ಕಾವೇರ್ಯಾಃ ರೋಧಸಿತೀರೇರುಹಂತಿ ಜಾಯಂತ ಇತಿರೋಧೋರುಹಃ–ಅಭ್ರಂ ಆಕಾಶಂ ಲಿಹಂತಿಸ್ಪೃಶಂತೀತಿ ತಲ್ಲಿಹಾನ್ ಅತ್ಯುನ್ನತಾನ್–ಪೃಥುಫಲಾನ್ ನಾರಿಕೇಲಾನ್–ಸವಿತುರ್ಮಂಡಲಂ ಸೂರ್ಯಬಿಂಬಮಾಶ್ರಿತಾಯ ಆಗಚ್ಛತೇ–ನಾಥಾಯಭಗವತೇ–ಭಕ್ತಿತಃ–ಆತ್ತಃ ನವಃ ಉಪಹಾರಃ ಉಪಾಯನಂ ಯೈಸ್ತಥೋಕ್ತಾ ನಿವೇಶ್ಯಶ್ಪ್ರೇಕ್ಷಾ–ಇಹಪಶ್ಯ–ಅಹಹೇತ್ಯಾಶ್ಚರ್ಯೇ ॥

ಅರ್ಥ ॥ ಇತ್ತಕಡೆಗೆ ನೋಡು.

ಕಾವೇರಿಯ ತೀರದಲ್ಲಿ ಹುಟ್ಟುವ ಮರಗಳು, ಅಕಾಶವನ್ನು ನೆಕ್ಕುವ ಎತ್ತರ ಮತ್ತು ತೋರವಾದ ತೆಂಗುಗಳನ್ನು ಸೂರ್ಯಮಂಡಲವನ್ನೇರಿ ಬರುವ ಒಡೆಯನಿಗೆ ಭಕ್ತಿಯಿಂದ ಕಾಣಿಕೆಯಾಗಿ ಅರ್ಪಿಸುವದಕ್ಕೆ ಹೊತ್ತುಕೊಂಡಿದ್ಧಾವೆ. ಈ ಆಶ್ಚರ್ಯ ನೋಡು.

ಕೃಶಾನುಃ ॥

ಮೂ । ಮಮತ್ವೇವಂಮತಿಃ ॥

ಟೀಕಾ ॥ ಮಮೇತಿ ॥ ಮತಿರಭಿಪ್ರಾಯಃ ॥

ಶ್ಲೋ । ಲೋಲದ್ದೀರ್ಘದಲಾಬೃಹತ್ತರಫಲಾಪಾತೋಲ್ಲಲದ್ಧೂಲಿಭಿಶ್ಛನ್ನಾಃಪ್ರಾಂಶುತಮಾಃಸ್ಫುರಂತಿಪುರತೋಯೇನಾರಿಕೇಲದ್ರುಮಾಃ । ಧೂಮಾಸ್ವಾದನಪಾತ್ರಭಾಜಿನಇಮೇದ್ರಾಘಿಷ್ಠಚಂಚಜ್ಜಟಾ ಭಸ್ಮೋದ್ಧೂಲಿತಮೂರ್ತಯೋವಿವಸನಾಃಪಾಷಂಡಭೇದಾಇವ ॥ ೬೪ ॥

ಟೀಕಾ ॥ ಲೋಲದಿತಿ ॥ ಲೋಲದ್ದೀರ್ಘದಲಾಃ–ಬೃಹತ್ತರಫಲಾಃ–ಪಾತೇನ ಉಲ್ಲಲಂತೀಭಿಃಉದ್ಗಚ್ಛಂತೀಭಿಃಧೂಲಿಭಿಶ್ಛನ್ನಾಃ ಪ್ರಾಂಶುತಮಾ ಅತ್ಯುನ್ನತಾಃ–ಯೇನಾರಿಕೇಲದ್ರುಮಾಃ ಪುರತಃಸ್ಫುರಂತಿ–ಇಮೇ ನಾರಿಕೇಲವೃಕ್ಷಾಃ–ದ್ರಾಘಿಷ್ಠಾಃ ಅತ್ಯಾಯತಾಃ ಚಂಚಂತ್ಯಃ ಪ್ರಕಾಶಮಾನಾಃ ಜಟಾಃ ಯೇಷಾಂತೇ– ಧೂಮಸ್ಯಆಸ್ವಾದನಸ್ಯ ಪಾತ್ರಂಭಜಂತಿ ಗೃಹ್ಣಂತೀತಿತದ್ಭಾಜಿನಃ-ಭಸ್ಮೋದ್ಧೂಲಿತಮೂರ್ತಯಃ–ವಿವಸನಾಃ–ಪಾಷಂಡಭೇದಾಃ ಗೋಸಾವಿನ ಇವ–ಸ್ಫುರಂತಿ ॥

ಅರ್ಥ ॥ ನನ್ನ ಬುದ್ಧಿಗೆ ತೋಚುತ್ತದೇನೆಂದರೆ-

ಉದ್ದವಾದ ಮೆಟ್ಟುಗಳಿಂದ ಓಲ್ಯಾಡುವ, ದೊಡ್ಡ ದೊಡ್ಡ ಕಾಯಿಗಳುಳ್ಳ ಘಾಳಿಗೆ ಹಾರಿದ ಧೂಳಿಗಟ್ಟಿದ ಅತಿ ಎತ್ತರವಾದ ತೆಂಗಿನ ಮರಗಳು ನಮ್ಮ ಎದುರಿನಲ್ಲಿ ನೆಯುತ್ತವಷ್ಟೆ. ಅವುಗಳು ಉದ್ದವಾದ ಮತ್ತು ಹೊಳೆಯುವ ಜಡೆಯುಳ್ಳಂಥಾ ಸೇದುವ ಪಾತ್ರೆಯನ್ನು ಕೈಯಲ್ಲಿ ಹಿಡಿದು ಒಯ್ಯುವಂಥಾ, ಬಟ್ಟೆ ಹೀನರಾದಂಥ ಬೂದಿಬಡಕರಾದಂಥ ವೇದಕ್ಕೆ ಎದುರಾಡಿ ನಡಿಯುವಂಥ ಗೋಸಾವಿಗಳಂತೆ ಕಂಗೊಳಿಸುತ್ತವೆ.

ವಿಶ್ವಾವಸುಃ ॥

ಮೂ। ಸಹಾಸಮನ್ಯತೋನಿರ್ದಿಶ್ಯ । ಶ್ಲೋ । ಪದ್ಮಿನ್ಯಾಕರ್ಷಣೋ ಚಿತಗಂಧಪ್ರಸವಾನ್ಪ್ರಪಶ್ಯಪುನ್ನಾಗಾನ್ । ಅತನೋರುಗ್ರಾಶುಗ ಕಲನಾತ್ಸಂಪ್ರಾಪ್ತಾನಧಿಕರೇಣುಸಂಪರ್ಕಂ॥ ೬೪೧ ॥

ಟೀಕಾ ॥ ಪದ್ಮಿನೀತಿ ॥ ಪದ್ಮಿನೀನಾಂ ಪದ್ಮಲತಾನಾಂ ಸ್ತ್ರೀಣಾಂಚ ಆಕರ್ಷಃ ಸ್ವಧರ್ಮವಶೀಕರಣಂಚ ತಸ್ಯೋಚಿತಾನಿ ಗಂಧ ಪ್ರಸವಾನಿ ಸುಗಂಧಕುಸುಮಾನಿ ಮದಪ್ರಸವಾನಿಚಯೇಷಾಂ ತಾನ್—ಅತನೂರ್ಮದನಃ ಉಗ್ರಸ್ಯಚ— ಆಶುಗಸ್ಯವಾಯೋಃ ಅತನೋರ್ಮನ್ಮಥಸ್ಯ ಉಗ್ರಾಣಾಂ ಆಶುಗಾನಾಂ ಬಾಣಾನಾಂಚ ಆಕಲನಾತ್ ಯೋಗಾತ್—ಅಧಿಕೇನರೇಣುನಾ ಕರೇಣುಷು ಗಜಸ್ತ್ರೀಷು ಅಧಿಕರೇಣು—ವಿಭಕ್ತ್ಯರ್ಥೇಽವ್ಯಯೀಭಾವಃ ಸಂಪರ್ಕಂ ಸಂಬಂಧಂ ಸಂಭೋಗಂಚ ಸಂಪ್ರಾಪ್ತಾನ್ ಪುನ್ನಾಗಾನ್ ವೃಕ್ಷಾನ್ —ಪುರುಷಗಜಾಂಶ್ಚ—ಪ್ರಪಶ್ಯ—ಅಥವಾ—ಪದ್ಮಿನೀಜಾತಿ ಸ್ತ್ರೀವಶೀಕರಣೋಚಿತ ಸುಗಂಧಕುಸುಮಾನ್ —ಅಧಿಕಃ ರೇಣುಃ ರಜೋಯಾಸಾಂ ತಾಸಾಂ ತರುಣೀನಾಂ ಸಂಪರ್ಕಂ ಸಂಭೋಗಂ ಸಂಪ್ರಾಪ್ತಾನ್ ಪುನ್ನಾಗಾನ್ ಪುರುಷಶ್ರೇಷ್ಠಾಂಶ್ಚ ಪ್ರಪಶ್ಯೇತಿ ಸಂಬಂಧಃ ॥

ಅರ್ಥ ॥ ನಗೆ ಆಡಿ ಬೇರೆ ಕಡೆ ತೋರಿಸಿ ವಿಶ್ವಾವಸು ಹೇಳುತ್ತಾನೆ.

ತಾವರೆ ಬಳ್ಳಿಗಳನ್ನು ( ಪದ್ಮಿನಿಜಾತಿಯ ಸ್ತ್ರೀಯರುಗಳನ್ನು ) ಎಳಕೊಳ್ಳಲಿಕ್ಕೆ (ವಶಮಾಡಿಕೊಳ್ಳಲಿಕ್ಕೆ) ಯೋಗ್ಯವಾದಂಥ ತನಿಗಂಪಿನ ಹೂಗಳು ( ಮದಸೋರಿಕೆಗಳು ) ಉಳ್ಳಂಥಾ, ಬಹಳ ಬಿರುಸಾದ ಘಾಳಿಯ ( ಮನ್ಮಥನ ಬಾಣಗಳ ) ಯೋಗದಿಂದ ಹೆಚ್ಚಾದ ಪರಾಗಗಳ ಸ್ಪರ್ಶ ಹೊಂದಿರುವ ಪುನ್ನಾಗ ವೃಕ್ಷಗಳನ್ನು ( ಹೆಂಣಾನೆಗಳಲಿ ಕೂಟಹೊಂದಿದ ಗಂಡು ಆನೆಗಳನ್ನು) ನೋಡು.

ಮೂ। ಪಾರ್ಶ್ವತೋವೀಕ್ಷ್ಯ । ಅಹೋಮಹೋನ್ನತಾಜನಪದಾನಾಮಮೀಷಾಮಭಿಜಾತತಾ ॥ ೬೪೨ ॥

ಟೀಕಾ ॥ ಅಹೋಇತಿ ॥ ಅಭಿಜಾತತಾ—ರಮಣೀಯತ್ವಂ ॥

ಅರ್ಥ ॥ ಇತ್ತಟ್ಟು ನೋಡಿ.-ಐಯ್ಯೋ ಈ ಜನರ ದೊಡ್ಡಸ್ಥಿಕೆ ಬಹಳೇಹಿರಿದಾದ್ದು.

ಮೂ । ಪಶ್ಯ । ಶ್ಲೋ । ಜ್ಯೋತಿಷ್ಟೋಮಸ್ಸಾಂಗಲುಕ್ತೋಽತಿರಾತ್ರೋಽಪ್ಯಪ್ತೋರ್ಯಾಮಷ್ಷೋಡಶೀವಾಜಪೇಯಃ । ಪ್ರಾ

ಢಾಯಜ್ಞಾಃಪೌಂಡರೀಕಾದಯೋವಾಚೋಲೇಷ್ವೇತೇ *ನಿತ್ಯ
ಮೇವಕ್ರಿಯಂತೇ ॥ ೬೪೩ ॥

ಟೀಕಾ ॥ ಜ್ಯೋತಿಷ್ಟೋಮಇತಿ ॥ ಜ್ಯೋತಿಷ್ಟೋಮಾದಯಃ ಯಜ್ಞಭೇದಾಃ ಪಂಚ ಚತುಸ್ತ್ರಿದ್ವ್ಯೇಕ ರಾತ್ರಸಂಸ್ಥಾಕಾಃ ಪ್ರೌಢಾಃ ಮಹಾಂತಃ ಅತಿಪಂಚರಾತ್ರ ಸಂಸ್ಥಾಕಾಃ ಪೌಂಡರೀಕಾದಯಶ್ಚ ಯೇ ಯಜ್ಞಾಸ್ಸಂತಿ–ತಏವೇಯಜ್ಞಾಃ ಚೋಲೇಷು ಜನಪದೇಷು–ನಿತ್ಯಂ– ಕ್ರಿಯಂತೇ–ದ್ವಿಜೈರಿತಿಶೇಷಃ ॥

ಅರ್ಥ ॥ ಜ್ಯೋತಿಷ್ಟೋಮ ಉಕ್ಥ್ಯ, ಅತಿರಾತ್ರ, ಅಪ್ತೋರ್ಯಾಮ ಷೋಡಶೀ, ವಾಜಪೇಯ ಮತ್ತು ಪೌಂಡರೀಕಾದಿ ದೊಡ್ಡ ಯಜ್ಞಗಳನ್ನು ಚೋಳದೇಶದಲ್ಲಿ ಬ್ರಾಹ್ಮಣರು ನಿತ್ಯದಲ್ಲೂ ಮಾಡುತ್ತಾರೆ.

ಮೂ । ಕಿಂಚ । ಶ್ಲೋ । ಗೃಹೇಗೃಹೇಪಶ್ಯಕೃತಾಗ್ನಿಹೋತ್ರಾ
ಶ್ಶಾಸ್ತ್ರೌಷಧೋಲ್ಲಾಘಹೃದೋವಿದೋಷಾಃ । ಪುಣ್ಯೋತ್ತ
ರಾಃಪಂಡಿತಪುಂಡರೀಕಾಃಪುನಂತಿವೇದೈಕಧನಾಜಗಂತಿ ॥ ೬೪೪ ॥

ಟೀಕಾ ॥ ಗೃಹಇತಿ ॥ ಶಾಸ್ತ್ರಾಣ್ಯೇವ ಔಷಧಾನಿ ತೈರುಲ್ಲಾಘಂ ನಿರ್ಮಲಂ ಹೃತ್ಯೇಷಾಂತೇ–ಅತಏವ–ಕೃತಾಗ್ನಿ ಹೋತ್ರಾಃ–ವಿದೋಷಾಶ್ಚ–ವೇದೈಕಧನಾಃ– ಪಂಡಿತಾಃ ಪುಂಡರೀಕಾಃ ವ್ಯಾಘ್ರಾಇವ ಪಂಡಿತಶ್ರೇಷ್ಠಾಃ–ಪುಣ್ಯೋತ್ತರಾಸ್ಸುಕೃತ ಪ್ರಧಾನಾಸ್ಸಂತಃ ಜಗಂತಿ–ಪುನಂತಿ–ಪಶ್ಯ ॥

ಅರ್ಥ ॥ ನೋಡು ಶಾಸ್ತ್ರಗಳೆಂಬ ಔಷಧಗಳಿಂದ ನಿರ್ಮಲವಾದ ಹೃದಯ ಉಳ್ಳಂಥಾವರಾಗಿ ಮನೆಮನೆಗಳಲ್ಲಿ ಅಗ್ನಿಹೋತ್ರಗಳನ್ನಿಟ್ಟಂಥಾವರಾದ, ದೋಷಗಳೆವಂಥಾವರಾದ, ವೇದಗಳೇ ಧನವಾಗಿ ಉಳ್ಳಂಥಾವರಾದ, ಪಂಡಿತರಲ್ಲಿ ಹುಲಿಗಳು ಅಂದರೆ ಶ್ರೇಷ್ಠರಾದಂಥಾವರಾದ, ಸುಕೃತ ಪ್ರಧಾನರಾದಂಥಾವರಾದ ಈ ಚೋಳದೇಶಸ್ಥರು ಲೋಕಗಳನ್ನು ಪವಿತ್ರಮಾಡುತ್ತಾರೆ.

ಕೃಶಾನುಃ ॥

ಮೂ । ಏತದ್ವಿಷಯವಿಷಯಾಶ್ಲಾಘಾನುಶ್ಲಾ †ಘಾನಕರ್ತವ್ಯಾ।ಯ
ತಏತದ್ದೇಶೇವಸತಾಂಸತಾಮಪ್ಯನೇಕಪ್ರಕಾರಾದುರಾಚಾರಾಉಪ
ಲಭ್ಯಂತೇ ॥ ೬೪೫ ॥

ಟೀಕಾ ॥ ಏತದಿತಿ ॥ ಏಷವಿಷಯಃ ಚೋಳದೇಶಃ ವಿಷಯಃ ಗೋಚರಃ ಯಸ್ಯಾಸ್ಸಾದೃಶೀ–ಶ್ಲಾಘಾನುಶ್ಲಾಘಾ ಸ್ತೋತ್ರಾನುಸ್ತೋತ್ರಂ ಮುಹುಃ ಸ್ತೋತ್ರಮಿತಿಯಾವತ್ ॥

ಅರ್ಥ ॥ ಈ ಚೋಳ ದೇಶವೇ ವಿಷಯವಾಗಿರುವಂಥಾ ಹೊಗಳಿಕೆ ತಿರಿಗಿ ತಿರಿಗಿ ಮಾಡಬಾರದು. ಯಾಕಂದರೆ, ಈ ದೇಶದ ಜನರಲ್ಲಿ ಕೂಡ ಅನೇಕ ವಿಧದ ದುರ್ನಡತೆಗಳಿರುತ್ತವೆ.

---

* ಚಿತ್ರಮೌಪಾಸನಂತೀತಿ ಪಾಠಾಂತರಮ್ † ಶಾಖಾನು ಶಾಖಮಿತಿ ಪಾಠಾಂತರಮ್ ॥

ಶ್ಲೋ । ಸ್ನಾಂತಿಪ್ರಾತರಧಿಸ್ರವಂತಿವಿಧಿವತ್ಸಂಧ್ಯಾದಿಕರ್ಮಾಚರಂತ್ಯಗ್ನೀನಾದಧತೇಮಖಾನ್ವಿದಧತೇಶಾಸ್ತ್ರಾಣಿಚಾಧೀಯತೇ । ಅಭ್ಯರ್ಚಂತಿಸುರಾನ್ಪರಾರ್ಧ್ಯಕುಸುಮೈರಂಚಂತಿಕಿಂಚಾತಿಥೀನನ್ನೈಃಕಿಂತುಪುರಾತನೈಸ್ತನುಮಮೀಷಾಂಪುಷ್ಣಂತಿದುಷ್ಯಂತ್ಯತಃ॥ ೬೪೬ ॥

ಟೀಕಾ ॥ ಸ್ನಾಂತೀತಿ ॥ ಅಮೀ ಚೋಳ ದೇಶವಾಸಿನೋ ಬ್ರಾಹ್ಮಣಾಃ—ಪ್ರಾತಃಕಾಲೇ— ಸ್ರವಂತ್ಯಾಂ ನದ್ಯಾಂ ಕಾವೇರ್ಯಾಂ ವಾ ಅಧಿಸ್ರವಂತಿ—ಸ್ನಾಂತಿ—ಸಂಧ್ಯಾದಿಕರ್ಮ ವಿಧಿವದಾಚರಂತಿ—ಅಗ್ನೀನ್ ತ್ರೀನ್— ಅದಧತೇ ಆಹಿತಾನ್ ಕುರ್ವಂತಿ—ಮಖಾನ್ ದರ್ಶ ಪೂರ್ಣ ಮಾಸಾದೀನ್—ವಿದಧತೆ ಕುರ್ವಂತಿ—ಕಿಂಚ— ಶಾಸ್ತ್ರಾಣಿ ಅಧೀಯತೇ ಅಭ್ಯಸ್ಯಂತಿ—ಸುರಾನ್ ಆದಿತ್ಯಾಂಬಿಕಾ ವಿಷ್ಣು ಗಣನಾಥ ಮಹೇಶ್ವರಾನ್—ಪರಾರ್ಧ್ಯೈಃ ಶ್ರೇಷ್ಠೈಃ ಕುಸುಮೈಃ ಅಭ್ಯರ್ಚಂತಿ—ಕಿಂಚ—ಅತಿಥೀನ್ ಅಂಚಂತಿ ಪೂಜಯಂತಿ—ಕಿಂತು ಪುರಾತನೈಃ ಪರ್ಯುಷಿತೈರನ್ನೈಃ ತನುಂ ಶರೀರಂ ಪುಷ್ಣಂತಿ ॥ ಪಾ ॥ ಪುಷ್ಯಂತಿ ಪೋಷಯಂತಿ ಅತಃ ಪರ್ಯುಷಿತಾನ್ನ ಭಕ್ಷಣಾತ್—ದುಷ್ಯಂತಿ ಪ್ರತ್ಯವಯಂತಿ ॥

ಅರ್ಥ ॥ ಈಚೋಳದೇಶದ ಬ್ರಾಹ್ಮಣರು ಹೊತ್ತಾರೆ ಕಾವೇರಿ ನದಿಯಲ್ಲಿ ಜಳಕ ಮಾಡುತ್ತಾರೆ. ಸಂಧ್ಯಾ ವಂದನಾದಿ ಕರ್ಮಗಳನ್ನು ವಿಧಿಯುಕ್ತವಾಗಿ ನಿರ್ವಹಿಸುತ್ತಾರೆ. ಮೂರು ವಿಧದ ಅಗ್ನಿಗಳ ಅಂದರೆ ದಕ್ಷಿಣಾಗ್ನಿ ಗಾರ್ಹಪತ್ಯ ಮತ್ತು ಆಹವನೀಯ ಎಂಬ ಮೂರು ಅಗ್ನಿಗಳ ಆರಾಧನ ಮಾಡುತ್ತಾರೆ. ದರ್ಶಪೂರ್ಣಮಾಸಾದಿ ಯಜ್ಞಗಳನ್ನು ಮಾಡುತ್ತಾರೆ. ಶಾಸ್ತ್ರಗಳನ್ನು ಕಲಿಯುತ್ತಾರೆ. ಉತ್ತಮವಾದ ಪುಷ್ಪಗಳಿಂದ ದೇವತೆಗಳನ್ನು ಪೂಜಿಸುತ್ತಾರೆ. ಬಾಗಲಿಗೆ ಬಂದ ಅಭ್ಯಾಗತರಿಗೆ ಸತ್ಕಾರ ಮಾಡುತ್ತಾರೆ. ಆದರೆ ತಮ್ಮ ಶರೀರಗಳನ್ನು ತಂಗಳನ್ನದಿಂದ ಸಾಕಿಕೊಂಡು ಪಾಪಕಾರಿಗಳಾಗುತ್ತಾರೆ.

ಮೂ । ಪುನರ್ನಿರೂಪ್ಯಸವಿಸ್ಮಯಂ । ಕಷ್ಟಮೇತದ್ದೇಶವಾಸಿನೀನಾಂನಿತ್ಯಮೇವಲಜ್ಜಾವ್ಯುತ್ಪತ್ತಿರಾಹಿತ್ಯಂ ॥ ೬೪೭ ॥

ಟೀಕಾ ॥ ಕಷ್ಟಮಿತಿ ॥ ವ್ಯುತ್ಪತ್ತಿಃ ಜ್ಞಾನಂ ॥

ಅರ್ಥ ॥ ತಿರಿಗಿ ಆಲೋಚಿಸಿ ಆಶ್ಚರ್ಯಗೊಂಡು ( ಕೃಶಾನುವು ಹೇಳುತ್ತಾನೆ. )

ಅರ್ಥ ॥ ಅಹಹ, ಕಷ್ಟ! ಈ ನಾಡಿನ ಹೆಂಗಸಿರಿಗೆ ಯಾವಾಗಲೂ ನಾಚಿಕೆ ಏನೆಂಬ ತಿಳುವಳಿಕೆ ಕೂಡ ಇರುವದಿಲ್ಲವು.

ಮೂ । ತಥಾಹಿ । ಶ್ಲೋ । ಅಪಿಹಂತಚೋಳವಾಸಸ್ಥೈರ್ಯಮವತೀನಾಂಚಿರಾಯಯುವತೀನಾಂ । ಅಪಕಂಚುಳಿಕಾಬಂಧೌಕುಚಕುಂಭಾವಿತಿವಿರುದ್ಧಮುಪಲಬ್ಧಂ ॥ ೬೪೮ ॥

ಟೀಕಾ ॥ ಅಪೀತಿ ॥ ಚಿರಾಯು—ಚೋಳಸ್ಯ ಕಂಚುಕಾಯಾಃ ವಾಸಸಃ ದ್ವಯೋಃ ಚೋಳೇದೇಶೇ ವಾಸಸ್ಯ ನಿವಾಸಸ್ಯ ಚ ಸ್ಥೈರ್ಯಂ ಸ್ಥಿರತ್ವಂ ತದ್ವತೀನಾಮಪಿಯುವತೀನಾಂ—ಕುಚಕುಂಭೌ ಅಪಗತಃ ಕಂಚುಕಾಯಾಃ ಬಂಧಃ ಸಂಬಂಧಃ ಯಾಭ್ಯಾಂತಥೋಕ್ತೌ— ಇತ್ಯಾಶ್ಚರ್ಯಕರಂ ವಿರುದ್ಧಂ ವಿಪರ್ಯಾಸಃ ಉಪಲಬ್ಧಂದೃಷ್ಟಂ ॥

ಅರ್ಥ ॥ ಹ್ಯಾಗಂದರೆ: ಇಲ್ಲಿ ಇದೊಂದು ಆಶ್ಚರ್ಯಕರವಾದ ವಿಪರೀತವನ್ನು ಕಂಡೆನು. ಏನೆಂದರೆ: ಚೋಳದೇಶವಲ್ಲಿ ಶಾಶ್ವತವಾಗಿ ವಾಸ್ತವ್ಯ ಮಾಡಿಕೊಂಡಿರುವ ಸ್ತ್ರೀಯರು ಬಹಳವಾಗಿ ಮೊಲೆಮುಕೆ ಹೀನವಾಗಿರುತ್ತಾರೆ.

ಮೂ । ಕಿಂಚ । ಶ್ಲೋ । ಅಗೂಢಗಾಢಸ್ತನಕುಂಭಿಕುಂಭಮಂಭೋಜಡಂಭೋದಯಜೈತ್ರನೇತ್ರಂ । ಚಿತ್ತೇನಧತ್ತೇಬತಚೋಳದೇಶಸ್ತ್ರೀಣಾಂಪ್ರವೀಣಂರತಿಕಾಂತಬಾಣಂ ॥ ೬೪೯ ॥

ಟೀಕಾ॥ ಅಗೂಢೇತಿ॥ ಅಗೂಢೌ ಅನಾಚ್ಛಾದಿತೌ ಗಾಢೌ ನಿರಂತರೌ ಸ್ತನೌಕುಂಭಿನಃ ಗಜಸ್ಯಕುಂಭಾವಿವಯಸ್ಯತತ್—ಅಂಭೋಜಸ್ಯ ಡಂಭೋದಯಜೈತ್ರೇ(ಗರ್ವಸಮೃದ್ಧಿಹರಣೇನೇತ್ರೇ)ಯಸ್ಯತತ್—ಚೋಳದೇಶೇಸ್ತ್ರೀಣಾಂ ಸ್ತ್ರೀಸಮೂಹಃ—ಪ್ರವೀಣಾಂನಿಪುಣಾಂ ರತಿಕಾಂತಸ್ಯಬಾಣಾಂ ಲಜ್ಜಾರೂಪಂ—ಚಿತ್ತೇ—ನಧತ್ತೇನವಹತಿ— ಬತೇತಿಖೇದೇ— ಕುಲಾಂಗನಾನಾಂ ಲಜ್ಜಾರಾಹಿತ್ಯಾದ್ವಿರುದ್ಧಮಿತಿಭಾವಃ ॥

ಅರ್ಥ ॥ ಮತ್ತು ಯಾವಾಗಲೂ ಶೀರೆ ಶರಗಿನಿಂದ ಮುಚ್ಚಲ್ಪಡದ ಆನೆಯ ಕುಂಭಸ್ಥಳಗಳೋಪಾದಿ ಇರುವ ಮೊಲೆಗಳುಳ್ಳಂಥಾ, ತಾವರೆಯ ಗರ್ವವನ್ನಿಳಿಸುವ ಕಣ್ಣುಗಳುಳ್ಳಂಥ ಚೋಳದೇಶದ ಹೆಂಗಸರು ನಾಚಿಕೆ ಎಂಬ ಮನ್ಮಥನ ಜಾಣ್ಮೆಯ ಬಾಣವನ್ನು ಮನಸ್ಸಿನಲ್ಲಿಟ್ಟುಕೊಳ್ಳುವದೇ ಇಲ್ಲವು.

ಮೂ । ಅಪಿಚ । ಶ್ಲೋ । ನವಾರ್ತವಮಹೋತ್ಸವೇನನುಸಹಸ್ರಶಸ್ಸಂಗತಾಃಗೃಹಾದ್ಬಹಿರಶಂಕಿತಂಗದಿತಕಾಮಗಾಥಾಶತಾಃ । ಅಹಾರ್ಯಕಠಿನಸ್ತನಪ್ರಕಟನಾದನಾಗಸ್ವಿನೋಮುನೇರಪಿಮ*ನೋಧೃತಿಂಚುಳುಕಯಂತಿಚೋಳಾಂಗನಾಃ ॥ ೬೫೦ ॥

ಟೀಕಾ ॥ ನವೇತಿ ॥ ಚೋಳಾಂಗನಾಃ—ನವಮಾರ್ತವಂ ಕನ್ಯಾಯಾಃ ಪ್ರಥಮರಜೋದರ್ಶನಂ ತದೇವ ಮಹಾನುತ್ಸವಃ ತಸ್ಮಿನ್— ಗೃಹಾದ್ಬಹಿರ್ಭಾಗೇ— ಸಹಸ್ರಶಃ ಅಸಹಸ್ರಸಂಖ್ಯಂ—ಸಂಗತಾಸ್ಸತ್ಯಃ— ಅಶಂಕಿತಂ ಯಥಾತಥಾ ಗದಿತಾನಿ ಭಾಷಿತಾನಿ ಕಾಮಗಾಥಾನಾಂ ಸಂಭೋಗಾಭಿಲಾಷಕಗ್ರಾಮ್ಯ ಶಬ್ದಾನಾಂ ಶತಾನಿಯಾಭಿಸ್ತಾಸ್ತಥೋಕ್ತಾಃ— ಅನಾಗಸ್ವಿನಃನಿರಪರಾಧಿನಃ ಮುನೇರಪಿ—ಮನಸೋಧೃತಿಂ ಧೈರ್ಯಂ—ಅಹಾರ್ಯಃ ಪರ್ವತಃ ತದ್ವತ್ಕಠಿನಯೋಃ ಸ್ತನಯೋಃ ಪ್ರಕಟನಾತ್ ಪ್ರತ್ಯಕ್ಷೀಕರಣಾದ್ಧೇತೋಃ—ಚುಳುಕಯಂತಿ ನಾಶಯಂತಿ—ಅತ್ರಮುನೇರಪೀತ್ಯಪಿನಾಕಿಮುತ ಕಾಮಿನ ಇತ್ಯರ್ಥಾ ಪತ್ತಿಃ ಪ್ರತೀಯತೇ ॥

---

* ಘನಾಂಧೃತಿಂ ಇತಿಪಾಠಾಂತರಮ್ ॥

ಅರ್ಥ ॥ ಇದು ಪೋರ್ಣ ಶೋಭನ ಪ್ರಸ್ತದ ಉತ್ಸವದಲ್ಲಿ ಚೋಳ ದೇಶದ ಸ್ತ್ರೀ ಯರು ಮನೆಯ ಹೊರಗೆ ಸಾವಿರಾರು ಮಂದಿ ಒಗ್ಗಾಗಿ ಅಳುಕಿಲ್ಲದವರಾಗಿ ಕಾಮೋದ್ರೇಕಕರವಾದ ಭಂಡ ಮಾತುಗಳ ಅನೇಕ ಹಾಡುಗಳನ್ನು ಹಾಡುವಂಥಾ ಈ ಚೋಳಾಂಗನೆಯರು ತಮ್ಮ ಬಿಗು ಮೊಲೆಗಳನ್ನು ತೋರಿಸಿ, ನಿರಪರಾಧಿಯಾದ ಋಷಿಯ ಮನಸ್ಸು ಕೂಡ ಮರುಳು ಮಾಡುತ್ತಾರೆ.

(ಮೂ। *ಕಿಂಚ।ಶ್ಲೋ। ನಕೇಶೇಷುಸ್ನೇಹೋನಚನಯನಯೋರಂಜನಕಥಾನವಾವೀಪೀವಕ್ತ್ರೇನಚಕುಚತಟೀಚಂದನರಸಃ। ನಚಾಲ್ಪೋಪ್ಯಾಕಲ್ಪೋನಚಸುವಸನಂನೈನಕುಸುಮಂಸ್ನುಷಾತ್ವಂಪಾಪಾನಾಂ †ಫಲಮಧನಗೇಹೇಷುಸುದೃಶಾಂ॥ ೬೫೧॥

ಅರ್ಥ ॥ ಇದಲ್ಲದೆ ಕೂದಲಿಗೆ ಎಣ್ಣೆಯಿಲ್ಲ. ಕಣ್ಣಿಗೆ ಕಾಡಿಗೆಯಿಲ್ಲ. ಮುಖಭೂಷಣಕ್ಕೆ ವಿಳ್ಯದೆಲೆಯಿಲ್ಲ. ಮೊಲೆಗೆ ಪೂಸಿಕೊಳ್ಳಲಿಕ್ಕೆ ಗಂಧಯಿಲ್ಲ. ಇಟ್ಟುಕೊಳ್ಳಲಿಕ್ಕೊಂದಾದರೂ ಒಡವೆ ಇಲ್ಲ. ಉಟ್ಟುಕೊಳ್ಳಲಿಕ್ಕೊಳ್ಳೆ ಶೀರೆಯಿಲ್ಲ. ಮುಡುಕೊಳ್ಳಲಿಕ್ಕೆ ಹೂವಿಲ್ಲ. ಹೆಂಗಸರಿಗೆ ಹಣವಿಲ್ಲದವರ ಮನೆಗಳಲ್ಲಿ ಸೊಸೆತನವು ಪಾಪಗಳ ಫಲವು.

ಮೂ। ಅಪಿಚ। ಶ್ಲೋ। ಅಂಸೌಚೇದುದಕುಂಭಭಾರಕಿಣಿತಾವಂಘ್ರೀಪುನರ್ಗೋಮಯಸ್ಫಾಯನ್ನಾಟ್ಯಮಲೀಮಸೌಕರತಲಂಘಾಸಚ್ಛಿದಾಕರ್ಕಶಂ। ಪಾಕಾಗ್ನ್ಯುತ್ಥಿತಧೂಮಮೇಲನಗಲದ್ಬಾಷ್ಪಾವಿಲೇಲೋಚಲೇಕಷ್ಟಂರಿಕ್ತಗೃಹಿಸ್ನುಷಾತ್ವನರಕಃಸ್ತ್ರೀಣಾಮಹೋದುಸ್ಸಹಃ॥ ೬೫೨॥

ಅರ್ಥ ॥ ಇದಲ್ಲದೆ ಹೆಗಲುಗಳ ಮೇಲೆ ನೀರ್ಕೊಡಗಳನ್ನು ಹೊತ್ತು ದಡ್ಡೆಗಟ್ಟುತ್ತದೆ ಸಗಣಿ ಮುಟ್ಟಿ ಮೆಟ್ಟಿ ಅಡಿಗಳು ಕಪ್ಪಾಗುತ್ತವೆ. ಹುಲ್ಲು ಕೊಯಿದು ಕೊಯಿದು ಅಂಗೈಗಳು

---

* ಅತಿದುಸ್ಸಹಮನ್ಯತ್; † ಫಲಮಿಹಬತಾತ್ರ್ಯಸುದೃಶಾಂ ಇತಿಪಾಠಾಂತರೆ॥

೬೫೧, ೬೫೨. ಶ್ಲೋಕದ್ವಯಮಿದಂ ಪ್ರಕ್ಷಿಪ್ತಮಿವಪ್ರತಿಭಾತಿಯತೋ ಉಪಲಬ್ಧಾದರ್ಶಪುಸ್ತಕಪಂಚಕೇನೈತಾ ಉಪಲಭ್ಯೇತೇ. ಕೇವಲಂಆಂಧ್ರಲಿಪಿಪುಸ್ತಕೆ ಏತತ್ ಶ್ಲೋಕದ್ವಯಂ, ಬಾಲಬೋಧಲಿಪಿಪುಸ್ತಕದ್ವಯೇಚ ಪ್ರಥಮಃ ಶ್ಲೋಕಃಉಪಲಭ್ಯತೇ. ಟೀಕಾ ಕೃತಾಚನೈತೌವ್ಯಾಖ್ಯಾತೌ; ವಿಷಯಸಂಗತ್ಯನುಸಾರೇಣಾಪಿ ನೈತಾವತ್ರಯುಜ್ಯೇತೆಯತಃ ಚೋಳದೇಶವರ್ಣನಾವಸರೆ ಸರ್ವದೇಶಸಾಮಾನ್ಯಸ್ಯ ದರಿದ್ರಸ್ನುಷಾತ್ವಗುಃಖಸ್ಯವರ್ಣನಮ್ಅಪ್ರಸಕ್ತಮಿವ ಪ್ರತಿಭಾತಿ, ಕಿಂಚ ಪೂರ್ವಕ್ರಮಾನುಸಾರೇಣ ವಿತ್ವಾಪಸುನಾ ಅಸ್ಯದೋಷಸ್ಯ ಗುಣಭೂತತ್ವವರ್ಣನಂ ಅಂಗೀಕಾರೋವಾಪಿನಕೃತಃ ಇತಿಅವಗಂತವ್ಯಂ ಸಹೃದಯೈಃ॥

ತರಕಲಾಗುತ್ತವೆ. ಅಡಿಗೆಬೆಂಗೆಯಿಂದೇಳುವ ಹೊಗೆಬಡಮ ಕಣ್ಣುಗಳಿಂದ ನೀರು ಸೋರುತ್ತದೆ. ಐಯ್ಯೋ! ಹಣವಿಲ್ಲದವನ ಮನೆಯಲ್ಲಿ ಹೆಂಗಸರಿಗೆ ಸೊಸೆತನವು ತಾಳಲಿಕ್ಕಶಕ್ಯವಾದ ನರಕವಲ್ಲವೇ ?

ವಿಶ್ವಾವಸುಃ ॥

ಮೂ॥ವಯಸ್ಯಮಾದೂಷಯಚೋಲಮಂಡಲವಾಸಿನೋಜನಾನ್॥

ಅರ್ಥ ॥ ಗೆಳೆಯನೇ ಚೋಳನಾಡಿನ ಜನರನ್ನು ಜರಿಯಬೇಡ.

ಶ್ಲೋ । ಯಾಭಿಸ್ಸರ್ವಪದಾರ್ಥಶುದ್ಧಿರುದಿತಾತಾಸ್ವಪ್ಸುದೇವಾರ್ಪಿತಂನಿಕ್ಷಿಪ್ತಂನಿಶಿರಕ್ಷಿತಂಶುಚಿಹವಿಃಭಕ್ಷ್ಯೇತಚೇತ್ಕಾಕ್ಷತಿಃ । ತ್ಯಾಜ್ಯಂಶಾಸ್ತ್ರನಿಷೇಧತಸ್ತದಿತಿಚೇತ್ಸಾಜ್ಯಂಸತೈಲಂಚತದ್ಭೋಜ್ಯಂಪರ್ಯುಷಿತಂಸ್ಮರಂತಿಯದತೋಯೋಜ್ಯಂನತದ್ದೂಷಣೈಃ॥ ೬೫೩ ॥

ಟೀಕಾ ॥ ಪರ್ಯುಷಿತಾನ್ನಭಕ್ಷಣೇ ದೂಷಣ ಮುದ್ಧರತಿ ॥ ಯಾಭಿರಿತಿ ॥ ಯಾಭಿರದ್ಭಿಃ—ಸರ್ವೇಷಾಂ ಪದಾರ್ಥಾನಾಂ ಪವಿತ್ರಾಣಾಂ ಅಪವಿತ್ರಾಣಾಂಚ ಶುದ್ಧಿರುದಿತಾ—ಶಾಸ್ತ್ರೇಣೇತಿ ಶೇಷಃ ತಾಸು ಅಪ್ಸು ನಿಕ್ಷಿಪ್ತಂ—ದೇವಾನಾಮರ್ಪಿತಂ ನಿವೇದಿತಂ—ನಿಶಿರಕ್ಷಿತಂ ಶ್ವಮಾರ್ಜಾರಾದಿಭ್ಯ ಇತ್ಯರ್ಥಃ—ಅತ ಏವ ಶುಚಿತ್ರಿಧಾ ಪರಿಶುದ್ಧಂ—ಹವಿರನ್ನಂ—ಭಕ್ಷ್ಯೇತಚೇತ್— ಕ್ಷತಿರ್ದೂಷಣಂ—ಕಾ—ನಕಾಪೀತ್ಯರ್ಥಃ—ತತ್ಪರ್ಯುಷಿತ ಮನ್ನಂ ಶಾಸ್ತ್ರೇಣ ನಿಷೇಧತಃ ತ್ಯಾಜ್ಯಂ ಚೇತ್—ಸಾಜ್ಯಂ ಸತೈಲಂ ಚ ತತ್ಪರ್ಯುಷಿತ ಮನ್ನಂ ಯದ್ಯಸ್ಮಾತ್ ಭೋಜ್ಯಂ ಸ್ಮರಂತಿ—ಘೃತಾಕ್ತಂ ತೈಲಸಂಗತ ಮಿತ್ಯಾದಿನೇತಿ ಭಾವಃ—ಅತಃ ಕಾರಣಾತ್ ತತ್ಪರ್ಯುಷಿತಾನ್ನಂ ದೂಷಣೈರ್ನಯೋಜ್ಯಂ ನಸಂಘಟನೀಯ ಮಿತ್ಯರ್ಥಃ ನಿಷೇಧವದ್ವಿಧೇರಪಿ ಶಾಸ್ತ್ರೀಯ ತ್ವಾದಿತಿಭಾವಃ ॥

ಅರ್ಥ ॥ ದೇವರಿಗೆ ನೈವೇದ್ಯ ಮಾಡಿ ಸಕಲ ಪದಾರ್ಥಗಳಿಗೂ ಶುಚಿತ್ವ ಉಂಟುಮಾಡಿಸುವ ನೀರಿನಲ್ಲಿ ರಾತ್ರಿ ಹೊತ್ತು ಇಟ್ಟ ಅನ್ನವನ್ನು ಉಂಡರೆ ಏನು ಕೊರತೆ? ಅಂಥ ಅನ್ನ ಉಣ್ಣಬಾರದೆಂತ ಶಾಸ್ತ್ರದ ಕಟ್ಟುಯಿರುತ್ತದೆಯೆಂತ ಹೇಳುತ್ತೀಯಾ? ಹಾಗಾದರೆ ತುಪ್ಪದಲ್ಲಿ ಮತ್ತು ಎಣ್ಣೆಯಲ್ಲಿ ಕರಿದ ಪದಾರ್ಥಗಳನ್ನು ತಂಗಳಾದಾಗ್ಯೂ ಚಿಂತಿಲ್ಲ ತಿನ್ನಬಹುದೆಂತ ಶಾಸ್ತ್ರದಲ್ಲಿ ಹೇಳಿರುತ್ತದೆ. ಆದದರಿಂದ ನೀರಲ್ಲಿ ಹಾಕಿಯಿಟ್ಟ ಅನ್ನಕ್ಕೆ ತಂಗಳನ್ನವೆಂಬ ದೋಷ ಹಚ್ಚಬಾರದು.

ಮೂ । ಕಿಂಚ । ಶ್ಲೋ । ಪಾತಿವ್ರತ್ಯಮುಪೇತ್ಯನಿತ್ಯಮನಘಾಚಾರಾವದಾತಾತ್ಮನಾಂಚೋಳೀನಾಂಯದಿಕಂಚುಕಂನಕುಚಯೋರ್ವರ್ಾಲೀಮಪೀಕಾತತಃ। ನಾರೀಣಾಂಸುರತೋಪಯೋಗ್ಯವಯವಸ್ಪಷ್ಟೀಕೃತಿರ್ದೋಷಇತ್ಯುಕ್ತಶ್ಚೇದಧರಾಪಿಧಾನಮಪಿಕಿಂನಸ್ಯಾತ್ಸದಾವಾಸಸಾ ॥ ೬೫೪ ॥

ಟೀಕಾ ॥ ನಿಷ್ಕಂಚುಳಿಕತ್ವಾದಿ ಸ್ತ್ರೀದೂಷಣಂ ನಿರಸ್ಯತಿ ॥ ಪಾತಿವ್ರತ್ಯಮಿತಿ ॥ ಪಾತಿವ್ರತ್ಯಂ ಧರ್ಮಮುಖೇತ್ಯ—ನಿತ್ಯಂ ಅನಘೇನ ಆಚಾರೇಣ ಅವದಾತಾತ್ಮನಾಂ ಶುದ್ಧಚಿತ್ತಾನಾಂ—ಅತಏವ— ಚೋಳೀನಾಂ ಚೋಳದೇಶ ಸ್ತ್ರೀಣಾಂ—ಕುಚಯೋಃ ಕಂಚುಕಂ ನಾಸ್ತಿಯದಿ—ತತಃ ಕಂಚುಕಾಭಾವಾತ್—ಮಾಲೀಮಸೀಮಾಲಿನ್ಯಂ—ಕಾ—ನಕಾಪೀತ್ಯರ್ಥಃ—ಸುರತೇ ಉಪಯೋಗಿನಾಂ ಅವಯವಾನಾಂ ಸ್ಪಷ್ಟೀಕೃತಿಃ ಪ್ರಕಾಶನಂ—ನಾರೀಣಾಂ ದೋಷಇತ್ಯುಕ್ತ ಇತಿಚೇತ್—ವಾಸಸಾ ಅಧರಸ್ಯ ಸುರತೋಪಯೋಗಿನಃ ಅಪಿಧಾನಂ ಆಚ್ಛಾದನಂ ಕಿಂಕುತಃ ಸದಾನಸ್ಯಾತ್ ನಭವೇತ್—ಸರ್ವದೇಶ್ಯಾನಾಮಿತಿ ಶೇಷಃ ॥

ಅರ್ಥ ॥ ಪಾತಿವ್ರತ್ಯದ ನಿಯಮವನ್ನು ಹಿಡಿದು ಸಲುವಳಿಯಾಗುವ ನಡತೆಯಿಂದ ನಡಕೊಳ್ಳುವ ಚೊಕ್ಕಮನಸ್ಸಿನ ಚೋಳದೇಶದ ಹೆಂಗಸರಿಗೆ ಮೊಲೆಮರೆ ಅಂದರೆ ರವಿಕೆ ಇಲ್ಲದಿದ್ದರೆ ಅದರಿಂದ ಕೊರತೆಯೇನು? ಭೋಗಕ್ಕೆ ಯೋಗ್ಯವಾದಂಥ ಸ್ತ್ರೀಯರ ಅಂಗಗಳಿಗೆ ಮರೆಯಿಲ್ಲದೆ ಇರುವದು ದೋಷವಾದರೆ ಎಲ್ಲಾ ದೇಶಗಳಲ್ಲಿ ತುಟಿಗಳನ್ಯಾಕೆ ಸರ್ವದಾ ವಸ್ತ್ರದಿಂದ ಮುಚ್ಚುವದಿಲ್ಲ?

## ಕುಂಭಕೋಣವರ್ಣನಮ್ ॥

ಮೂ। ಪಾರ್ಶ್ವತೋವಲೋಕ್ಯಸಶ್ಲಾಘಂ। ಅಸ್ಯದೇಶಸ್ಯಭಾಗ್ಯವ
ತ್ತಾಖಲ್ವಿಯತ್ತಾಪರಿತ್ಯಕ್ತಾ ॥ ೬೫೫ ॥

ಟೀಕಾ ॥ ಅಸ್ಯೇತಿ ಅಸ್ಯಚೋಳದೇಶಸ್ಯ—ಭಾಗ್ಯವತ್ತಾಧನ್ಯತಾ—ಇಯತ್ತಯಾಪರಿಮಿತ್ಯಾ ಪರಿತ್ಯಕ್ತಾ—ಅಪರಿಮಿತೇತ್ಯರ್ಥಃ ॥

ಅರ್ಥ ॥ ಪಕ್ಕೇಲಿ ನೋಡಿ ಸ್ತುತಿಮಾಡಿ (ವಿಶ್ವಾವಸು ಹೇಳುತ್ತಾನೆ.) ನಿಜವಾಗಿಯೂ ಈ ಚೋಳದೇಶದ ಪುಣ್ಯಕ್ಕೆ ಮೇರೆ ಇಲ್ಲವು.

ಮೂ। ಯತೋತ್ರ। ಶ್ಲೋ। ಮಣಿಮಯಫಣಿತಲ್ಪೇಮಲ್ಲಿಕಾ
ಪುಂಜಕಲ್ಪೇಶಮಿತಜಗದಭದ್ರಾಂಸಂಶ್ರಯನ್ಯೋಗನಿದ್ರಾಂ।
ದಹರಕುಹರವರ್ತೀದೇವತಾಚಕ್ರವರ್ತೀದಲಿತದುರಿತಬಾಣೋದೃ
ಶ್ಯತೇಕುಂಭಘೋಣೇ ॥ ೬೫೬ ॥

ಟೀಕಾ ॥ ಮಣೀತಿ ॥ ದಹರಕುಹರೇದಹರಾಕಾಶೇವರ್ತೀ ಅಂತರ್ಯಾಮೀತ್ಯರ್ಥಃ— ದೇವತಾನಾಂ ಚಕ್ರವರ್ತೀ ಭಗವಾನ್—ದಲಿತಃ ದುರಿತಂ ಬಾಣಇವತಸ್ಮಿನ್ ಕುಂಭಘೋಣೇ ನಾಮಕ್ಷೇತ್ರೇ—ಮಲ್ಲಿಕಾನಾಂ ಪುಷ್ಪಾಣಾಂ ಪುಂಜೇನತುಲ್ಯೇ ತತ್ಕಲ್ಪೇ—ಮಣಿಮಯಃ ಫಣೀಶೇಷ ಏವ ತಲ್ಪಂಶಯನಂ ತಸ್ಮಿನ್ ಶಮಿತಂ ನಾಶಿತಂ ಜಗತಃ ಅಭದ್ರಂ ಅಶುಭಂ ಯಯಾತಾಂ— ‡ಯೋಗಃ ಸ್ವಾತ್ಮನಿಮನೋಲಯಃ ತನ್ಮ

---

‡ ಅತ್ರ ಟೀಕಾಕೃತಾ "ಯೋಗಃ ಸ್ವಾತ್ಮನಿಮನೋಲಯಃ ತನ್ಮಯೀಂನಿದ್ರಾಂ" ಇತಿಯದುಕ್ತಂತತ್ ಅಸಮಂಜಸಂ। ಯೋಗನಿದ್ರಾಭಿದಾ ಈಶ್ವರಶಕ್ತಿಃ ಅನಯಾಯುಕ್ತಃ ಭಗವಾನ್ ಪ್ರಳಯಕಾಲೇಶೇಷ ತಲ್ಪೇಶೇತೇಇತಿಪುರಾಣೇಪ್ರಸಿದ್ಧಂ ಭಗವಾನ್ ಮಾಯಾಯುಕ್ತಏವಶೇತೇ ಅನ್ಯಥಾ ಅಲುಪ್ತಭಗಸ್ಯ ನಿತ್ಯಜ್ಞಾನಾನಂದರೂಪಿಣಃ ಈಶ್ವರಸ್ಯ ಪ್ರಾಕೃತವತ್ ಮನಸಃ ಕಲ್ಪನೆತಸ್ಯಚಯೋಗಾದಿ ಸಾಧನೇ ಲಯಕಲ್ಪನೆ ಈಶ್ವರತ್ವ ಹಾನಿಸ್ಸ್ಯಾದಿತಿದಿಕ್ ॥

ಯೋಂನಿದ್ರಾಂ ಸಂಶ್ರಯಂತ್ಸರ್ವ—ದೃಶ್ಯತೇ—ಅತ್ರತ್ಯೈರಿತಿಶೇಷಃ ||

ಅರ್ಥ || ಯಾಕಂದರೆ ಸರ್ವ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವಂಥಾವನಾದ ಮತ್ತು ದೇವತೆಗಳೊಡೆಯನಾದ, ಭಗವಂತನು ಪಾಪವೆಂಬ ಬಾಣಕ್ಕೆ ಬತ್ತಳಿಕೆಯಾದ ಈ ಕುಂಭಕೋಣ ಕ್ಷೇತ್ರದಲ್ಲಿ ಮಲ್ಲಿಗೆ ಹೂರಾಶಿಗೆ ಸರಿಯಾದ ರತ್ನಮಯವಾದ ಸರ್ಪದ ಹಾಸಿಗೆಯಲ್ಲಿ ಲೋಕದ ಪಾಪಗಳನ್ನೆಲ್ಲ ನಾಶಪಡಿಸಿದ ಯೋಗನಿದ್ರೆ ಅಂದರೆ ತನ್ನಲ್ಲೇ ಮನಸ್ಸು ಲೀನಮಾಡೋಣವನ್ನು ಅವಲಬಿಂಸಿದಂಥಾವನಾಗಿ ಜನರಿಂದಲೇ ನೋಡಲ್ಪಡುತ್ತಾನೆ.

ಮೂ| ಅಂತರ್ನಾಗರಿಕೀಂಜನತಾಮವೇಕ್ಷ್ಯಸಶಿರಃ ಕಂಪಂ||೬೫೭||

ಟೀಕಾ || ಅಂತರಿತಿ || ನಗರೇಭವಾಂ ನಾಗರಿಕೀಂ—ಜನತಾಂ ಜನಸಮೂಹಂ ||

ಅರ್ಥ || ಪಟ್ಟಣದೊಳಗಿನ ನಾಗರಿಕ ಜನಸಮುದಾಯವನ್ನು ನೋಡಿ ತಲೆದೂಗಿಸಿ ವಿಶ್ವಾವಸು ಹೇಳುತ್ತಾನೆ.

ಶ್ಲೋ | ಸ್ನಾತ್ವಾಸಹ್ಯಸುತಾಜಲೇಶುಚಿತಮಾಭೂತ್ವಾಜಪಾದಿ
ಕ್ರಿಯೈರ್ಹುತ್ವಾಗ್ನೌಚಹವಿಃಕೃತೇತರಗಿರಾಂಕೃತ್ವಾಚಪಾರಾ
ಯಣಾ | ನತ್ವಾಶಾರ್ಙ್ಗಧರಂಭವಾಮಯಹರಂಸ್ತುತ್ವಾಚತಂಭಕ್ತಿ
ತಶ್ಶ್ರೇಷ್ಠಾಃಕಾಲಮಮೀಕ್ಷಿಪಂತಿಬಹವಃಶ್ರೀಕುಂಭಘೋಣೇದ್ವಿ
ಜಾಃ ||೬೫೮||

ಟೀಕಾ || ಸ್ನಾತ್ವೇತಿ || ಶ್ರೀಕುಂಭಘೋಣೇ ಶ್ರೇಷ್ಠಾಃ ಬಹವಃ ಅಮೀದ್ವಿಜಾಃ—ಸಹ್ಯಸುತಾ ಜಲೇಸ್ನಾತ್ವಾ—ಜಪಾದಿಭಿಃ ಕ್ರಿಯೈಃ ಕರ್ಮಭಿಃ—ಶುಚಿತಮಾಃ ಭೂತ್ವಾ— ಅಗ್ನೌಹವಿರ್ಹುತ್ವಾಚ— ಕೃತಾಗ್ನಿಹೋತ್ರಾ ಇತ್ಯರ್ಥಃ—ಕೃತೇತರಗಿರಾಂ ವೇದಾನಾಂ ಪಾರಾಯಣಾಂ ಬ್ರಹ್ಮಯಜ್ಞಂ ಚ ಕೃತ್ವಾ—ಭವಸ್ಯ ಸಂಸಾರಸ್ಯೈವ ಆಮಯಸ್ಯ ರೋಗಸ್ಯ ಹರಂ ಶಾರ್ಙ್ಗಧರಂ ನತ್ವಾ—ತಂಭಗವಂತಂ ಭಕ್ತಿತಃ ಸ್ತುತ್ವಾಚ ಕಾಲಂಕ್ಷಿಪಂತಿ ಗಮಯಂತಿ ||

ಅರ್ಥ || ಕುಂಭಕೋಣ ಕ್ಷೇತ್ರದಲ್ಲಿ ಮಹಾಂತರಾದ ಬಹಳ ಜನ ಬ್ರಾಹ್ಮಣರು ಕಾವೇರಿ ನದಿಯಲ್ಲಿ ಜಳಕಮಾಡಿ ಜಪಾದಿಕರ್ಮಗಳಿಂದ ಶುದ್ಧರಾಗಿ ಅಗ್ನಿಯಲ್ಲಿ ಹವಿಯನ್ನರ್ಪಿಸಿ ವೇದಪಠನ ಮತ್ತು ಬ್ರಹ್ಮಯಜ್ಞ ಮುಗಿಸಿ ಸಂಸಾರವೆಂಬ ಬೇನೆಯನ್ನು ನಿವಾರಿಸುವ ಔಷಧರೂಪನಾದ ಶಾರ್ಙ್ಗಧರ ದೇವರನ್ನು ವಂದಿಸಿ ಮತ್ತು ಪ್ರೀತಿಯಿಂದ ಸ್ತುತಿಸಿ ವೇಳೆ ಕಳೆಯುತ್ತಾರೆ.

## ಚಂಪಕಾರಣ್ಯ ಶ್ರೀ ರಾಜ ಗೋಪಾಲ ವರ್ಣನಮ್ ||

ಶ್ಲೋ | ಕುಚೇಷುಗೋಪೀರುಚಿರಾಸುಯೋರ್ಕಭೂತಪೇಷು
ಗೋಪಾಲಇತಿಶ್ರುತಶ್ಚರ್ | ಅಕಂಪಕಾರುಣ್ಯಮುಪೇತ್ಯಮೋದ
ತೇಸಚಂಪಕಾರಣ್ಯಮಗಣ್ಯವೈಭವಃ || ೬೫೯ ||

ಟೀಕಾ ॥ ಕುಟೀಷ್ವಿತಿ ॥ ಅರ್ಕಭುವಃ ಯಮುನಾಯಾಃ ತಟೀಷು— ಗೋಪೀಭಿಃ ರುಚಿರಾಸುಕುಟೀಷು ಕುಂಜೇಷು— ಚರನ್ಯೋಭಗವಾನ್— ಗೋಪಾಲಇತಿಶ್ರುತಃ ಪ್ರಸಿದ್ಧಃ— ಅಗಣ್ಯವೈಭವಃ ಅಚಿಂತ್ಯಮಹಿಮಾ— ಸಃಗೋಪಾಲಃ— ಅಕಂಪಂಸ್ಥಿರಂ ಕಾರುಣ್ಯಂಯಸ್ಮಿಂಸ್ತತ್ತಥಾ— ಚಂಪಕಾರಣ್ಯಂ ನಾಮಕ್ಷೇತ್ರಂ— ಉಪೇತ್ಯಮೋದತೇ ಕ್ರೀಡತೀತ್ಯರ್ಥಃ ॥

ಅರ್ಥ ॥ ಯಮುನಾ ನದಿಯ ತೀರದಲ್ಲಿ ಗೊಲ್ಲಹೆಣ್ಣುಗಳಿಂದ ಯುಕ್ತವಾಗಿ ಕಂಗೊಳಿಸುವ ಬಳ್ಳಿಯ ಹಂದರುಗಳಲ್ಲಿ ಸಂಚರಿಸುವ ಗೋಪಾಲನೆಂಬ ಹೆಸರಿನಿಂದ ಪ್ರಸಿದ್ಧವಾದ ಮೇರೆಯಿಲ್ಲದ ಸಂಪತ್ತಿಯುಳ್ಳ ದೇವರು ಸ್ಥಿರವಾದ ದಯೆಯುಳ್ಳವನಾಗಿ ಚಂಪಕಾರಣ್ಯವೆಂಬ ಕ್ಷೇತ್ರದಲ್ಲಿ ಬಂದು ವಿನೋದ ಮಾಡುತ್ತಾನೆ.

ಮೂ । ಅತ್ರಕಿಲರಾಜಗೋಪಾಲಪಾದಕಮಲಮುಪಾಶ್ರಯತಃ
ಸಾಧುಜನಸ್ಯೇದಮನುಸಂಧಾನಂ॥

ಅರ್ಥ ॥ ಇಲ್ಲಿ ರಾಜಗೋಪಾಲನ ಅಡಿದಾವರೆಗಳ ಮರೆಹೊಕ್ಕಿಕೊಂಡಿರುವ ಸಜ್ಜನರು ಬೇಡಿಕೊಳ್ಳುತ್ತಾರಂತೆ. ಏನೆಂದರೆ:

ಶ್ಲೋ । ಕೋಪಾಟೋಪದಶಾವಿಶಾಲಪರುಷಾಲಾಪಾದಿರೂಪಾ
ಶುಭವ್ಯಾಪಾರಗ್ಲಪಿತಾರ್ಥಿ ಲೋಕಹೃದಯೈರ್ಭೂಪಾಲಪಾಶೈರ
ಲಂ । ತಾಪಾವಿಷ್ಟಸಕೃತ್ಪ್ರಪನ್ನಜನಮುಕ್ತ್ಯಾಪಾದನೇದೀ
ಕ್ಷಿತಂ ಪಾಪಾನಾಮಪನೋದನಾಯಕುಹನಾಗೋಪಾಲಮೇವಾ
ಶ್ರಯೇ ॥ ೬೬೦ ॥

ಟೀಕಾ ॥ ಕೋಪೇತಿ ॥ ಕೋಪಸ್ಯ ಆಟೋಪದಶಾಯಾಂ ಪ್ರಕಾಶಾವಸ್ಥಾಯಾಂ ವಿಶಾಲೈರ್ಬಹುಭಿಃ ಪರುಷಾದಾರುಣಾ ಆಲಾಪಾಃ ಆದಿಃ ಯೇಷಾಂತದ್ರೂಪೈಃ ಅಶುಭೈರ್ವ್ಯಾಪಾರೈಃ ಗ್ಲಪಿತಂ ಖೇದಿತಂ ಅರ್ಥಿಲೋಕಸ್ಯ ಯಾಚಕಜನಸ್ಯ ಹೃದಯಂ ಯೇಷಾಂತೈಃ— ಭೂಪಾಲಪಾಶೈಃ ರಾಜಾಧಮೈಃ ಅಲಮಿತಿನಿಷೇಧೇ— ತಾಪೈಸ್ತ್ರಿಭಿರಾವಿಷ್ಟಸ್ಯ ಆಕ್ರಾಂತಸ್ಯ ಸಕೃದೇವಪ್ರಪನ್ನಸ್ಯ ತವಾಸ್ಮೀತ್ಯರ್ಪಿತಾತ್ಮನಃ ಜನಸ್ಯ ಮುಕ್ತೇರಾಪಾದನೇ ದಾನೇದೀಕ್ಷಿತಂ— ಕುಹನಾಗೋಪಾಲಂ ಕಪಟಸ್ವೀಕೃತ ರಾಜಗೋಪಾಲರೂಪಂ ಭಗವಂತಮೇವ— ಪಾಪಾನಾಂ ಅಪನೋದನಾಯ ನಾಶನಾಯ— ಆಶ್ರಯೇ ॥

ಅರ್ಥ ॥ ಶಿಟ್ಟೇರಿದ ಕಾಲದಲ್ಲಿ ಬಹಳ ತೀಕ್ಷ್ಣವಾದ ನುಡಿತವೇ ಮೊದಲಾದ ಅನೇಕ ಕೃತ್ಯಗಳಿಂದ ಬೇಡಲಿಕ್ಕೆ ಬಂದವರ ಹೃದಯಗಳನ್ನಿರಿಯುವಂಥ ನೀಚ ಅರಸುಗಳ ದರ್ಶನ ನಮಗೆ ಬೇಡ. ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕವೆಂಬ ತಾಪತ್ರಯಗಳಿಂದ ಬೆಂದು ಶರಣ ಬಂದವನಿಗೆ ಕೂಡಲೆ ಮೋಕ್ಷ ಸುಖಪಾಲಿಸುವ ವ್ರತ ಮಾಡಿದವನಾದ ತೋರಿಕೆಗೆ ರಾಜಗೋಪಾಲ ವೇಷ ತೆಕ್ಕೊಂಡಿರುವಂಥಾವನಾದ ಭಗವಂತನನ್ನು ಮರೆಹೊಕ್ಕಿ ಪಾಪಗಳನ್ನು ಕಳಕೊಳ್ಳುವಾ.

ಕೃಶಾನುಃ ॥

ಮೂ । ಅತ್ರಾಪಿಮೇವಿರೋಧವಿವಪ್ರತಿಭಾತಿ ॥ ೬೬೧ ॥

ಟೀಕಾ ॥ ಅತ್ರರಾಜ ಗೋಪಾಲೇಪಿ ॥

ಅರ್ಥ ॥ ಈ ರಾಜಗೋಪಾಲನಲ್ಲಿ ಕೂಡ ವಿಪರೀತ ನಡತೆಯೇ ತೋರಿಬರುತ್ತೆ.

ಮೂ । ಯತಃ । ಶ್ಲೋ । ನ್ಯಸ್ತಪಾದಸ್ಸುಮನಸಾಂಶೀರ್ಷೇಷು ಮಧುಹಾರ್ಯಹೋ । ಮುರಾರಾತಿರ್ದ್ವಿರೇಫೋಪಿಚಂಪಕಾರ ಣ್ಯಮಾಶ್ರಿತಃ ॥ ೬೬೨ ॥

ಟೀಕಾ ॥ ನ್ಯಸ್ತೇತಿ ॥ ಸುಮನಸಾಂ ಪುಷ್ಪಾಣಾಂ ದೇವಾನಾಂಚ— ಶೀರ್ಷೇಷು ಅಗ್ರೇಷು ಶಿರಸ್ಸುಚ— ನ್ಯಸ್ತಪಾದಸ್ಸನ್— ತ್ಯಜಂತ್ಸನ್ನಿತಿಯಾವತ್— ಅಸೌಮುರಾರಾತಿಗೋಪಾಲಃ— ದ್ವಿರೇಫೋಭೃಂಗೋಪಿ ರೇಫದ್ವಯ ಘಟಿತಮುರಾರಾತಿಶಬ್ದವಾಚ್ಯಶ್ಚ— ಮಧುಹಾರೀಮಕರಂದಾದಾನೇಚ್ಛುಸ್ಸನ್ ಮಧುನಾಮ ಕಾಸುರಭಂಜಕಶ್ಚ— ಚಂಪಕಾರಣ್ಯಮಾಶ್ರಿತಃ ಅಹೋ ಇತ್ಯಾಶ್ಚರ್ಯೇ— ಭೃಂಗಚಂಪಕಯೋರ್ನಿಸರ್ಗ ವಿರೋಧಾದಿತಿಭಾವಃ ॥

ಅರ್ಥ ॥ ಯಾಕಂದರೆ: ಸುಮನಸಾಂ ಅಂದರೆ ಹೂಗಳ (ದೇವತೆಗಳ) ಶೀರ್ಷೇಷು ಅಂದರೆ ತುದಿಗಳಲ್ಲಿ (ಶಿರಸ್ಸುಗಳ ಮೇಲೆ) ಅಡಿಗಳನ್ನಿಟ್ಟು ಅಂದರೆ ಹೂಗಳನ್ನು (ದೇವರನ್ನು) ಬಿಟ್ಟು ಈ ಮುರಾರಾತಿಯಾದ ಗೋಪಾಲನು, ದ್ವಿರೇಫನಾದಾಗ್ಯೂ ಅಂದರೆ ದುಂಬಿಯಾದಾಗ್ಯೂ—(ಎರಡು ರಕಾರಗಳುಳ್ಳ ಹೆಸರು ಪಡೆದವನಾದಾಗೂ) ಮಧುಹಾರಿ ಅಂದರೆ ಪುಷ್ಪರಸವನ್ನು ಸೇವಿಸುವ ಇಚ್ಛೆಯಿಂದ (ಮಧು ಎಂಬ ದೈತ್ಯನನ್ನು ಕೊಂದಂಥಾವನಾಗಿ) ಚಂಪಕಾರಣ್ಯಕ್ಕೆ ಬಂದು ವಾಸಮಾಡುವಂಥಾವನಾದನು. ಇದೇನು ಆಶ್ಚರ್ಯ! (ದುಂಬಿಗೂ ಸಂಪಿಗೆ ಹೂವಿಗೂ ಸ್ವಾಭಾವಿಕವಾದ ಹಗೆಯಿರುವದರಿಂದ ಆಶ್ಚರ್ಯವೆಂಬ ತಾತ್ಪರ್ಯವು.)

ವಿಶ್ವಾವಸುಃ ॥

ಮೂ । ವಿರುದ್ಧಾನಾಮಪಿಸಹಾವಸ್ಥಾನಸಂಪಾದಕೇದೇವೇವಾಸು ದೇವೇಕಾನಾಮವಿರೋಧಕಥಾ ॥ ೬೬೩ ॥

ಟೀಕಾ ॥ ವಿರುದ್ಧಾನಾಮಿತಿ ॥ ವಿರುದ್ಧಾನಾಂ ಸ್ವಾಭಾವಿಕ ವಿರೋಧಾನಾಮಪಿ—ಸಹಾವಸ್ಥಾನಂ ಏಕತಃ ಸ್ವಸ್ಮಿನ್ನಿವಾಸಃ ॥

ಅರ್ಥ ॥ ಪರಸ್ಪರ ಶತ್ರುತ್ವ ಉಳ್ಳವರನ್ನು ಒಕ್ಕಟ್ಟಾಗಿರಿಸಿಕೊಂಡವನಾದ ವಾಸುದೇವನಿಗೆ ವಿಪರೀತತ್ವದ ಘಾಳಿ ಕೂಡ ಸೋಂಕದು.

ಶ್ಲೋ । ಯಸ್ಮಿನ್ವಿಲೋಚನತಯಾಸಹಪುಷ್ಪವಂತೌಪರ್ಯಂಕ ವಾಹನತಯಾಫಣಿಪಕ್ಷಿರಾಜೌ । ತೇಜಸ್ವಿನೌಪ್ರಮುದಿತೌಸ್ಥಿತಿ ಮಾಶ್ರಯೇತೇತಸ್ಮಿನ್ನಹೋಭಗವತಿಕ್ವವಿರೋಧಗಂಧಃ ॥ ೬೬೪ ॥

ಟೀಕಾ ॥ ಯಸ್ಮಿನ್ನಿತಿ ॥ ತೇಜಸ್ವಿನೌ ವೀರ್ಯವಂತೌ ಕಾಂತಿಮಂತೌಚ– ಪುಷ್ಪವಂತೌ ಚಂದ್ರಸೂರ್ಯೌ– ಪ್ರಮುದಿತೌ ಸಂತೌ– ಯಸ್ಮಿನ್ಭಗವತಿ– ವಿಲೋಚನತಯಾ ನೇತ್ರತ್ವೇನ ಸಹಸ್ಥಿತಿಂ ಆಶ್ರಯೇತೇ–ತೇಜಸ್ವಿನೌಫಣಿರಾಜಃ ಶೇಷಃ ಪಕ್ಷಿರಾಜಃ ಗರುಡಃ ದ್ವೌಪ್ರಮುದಿತೌ ಸಂತೌ–ಯಸ್ಮಿನ್ ಪರ್ಯಂಕತ್ವೇನ ವಾಹನತ್ವೇನ ಪರ್ಯಂಕವಾಹನತಯಾ– ಸಹಸ್ಥಿತಿಮಾಶ್ರಯೇತೇ– ತಸ್ಮಿನ್ ಭಗವತಿ ರಾಜಗೋಪಾಲೇ–ವಿರೋಧಸ್ಯ ಗಂಧಃ ಲೇಶೋಪಿಕ್ವ–ಕುತ್ರೋಪೀತ್ಯರ್ಥಃ–ಅಹೋ ॥

ಅರ್ಥ ॥ ತೇಜಸ್ವಿಗಳಾದ ಸೂರ್ಯ ಮತ್ತು ಚಂದ್ರರು ಕಣ್ಣುಗಳಾಗಿ ಶೇಷ ಮತ್ತು ಗರುಡ ಇವರು ವಾಹನಗಳಾಗಿ ಯಾವಾತನಲ್ಲಿ ಸೇರಿಕೊಂಡು ಸಂತೋಷದಿಂದಿರುತ್ತಾರೋ ಆಭಗವಂತನಲ್ಲಿ ವಿರೋಧದ ವಾಸನೆ ಕೂಡ ಹ್ಯಾಗೆ ಬಂದೀತು?

ಮೂ ॥ *ಕಿಂಬಹುನಾ ॥

ಶ್ಲೋ ॥ ಪರಿಗತಸಹಕಾರೈಃಪ್ರಾಂಶುಭಿರ್ನಾರಿಕೇಲೈರ್ದಿನಕರಕರಧಾರಾದುಪ್ರವೇಶಾಂತರೇಭ್ಯಃ। ಚುಳಕಿತದುರಿತೇಭ್ಯಶ್ಚೋಳದೇಶಸ್ಥಿತೇಭ್ಯೋನಮಇದಮಖಿಲೇಭ್ಯೋ ನಾಥದಿವ್ಯಸ್ಥಲೇಭ್ಯಃ ॥ ೬೬೫ ॥

ಟೀಕಾ ॥ ಪರೀತಿ ॥ ಪರಿಗತಾಸ್ಸರ್ವತೋ ವ್ಯಾಪ್ತಾಃ ಸಹಕಾರಾಶ್ಚೂತವಿಶೇಷಾ ಯೇಷು ತೈಃ–ಪ್ರಾಂಶುಭಿರುನ್ನತೈರ್ನಾರಿಕೇಳೈ ವೃಕ್ಷೈಃ–ದಿನಕರಸ್ಯ ಸೂರ್ಯಸ್ಯ ಕರಧಾರಯಾಕಿರಣಪಙ್ಕ್ತ್ಯಾ ದುಷ್ಪ್ರವೇಶಂ ಅಂತರಂ ಮಧ್ಯಭಾಗಃ ಯೇಷಾಂ ತೇಭ್ಯಃ– ಚೋಳದೇಶಸ್ಥಿತೇಭ್ಯಃ–ಅಖಿಲೇಭ್ಯಃ–ನಾಥಸ್ಯ ಭಗವತಃ ಶಿವಕೇಶವಾನ್ಯತರಾತ್ಮನಃ ದಿವ್ಯಸ್ಥಲೇಭ್ಯಃ–ಇದಂನಮಃ–ಕರೋಮೀತಿಶೇಷಃ ॥

ಅರ್ಥ ॥ ಬಹಳ ಪ್ರಸಂಗ ಯಾತಕೆ? ಎಲ್ಲಾ ಕಡೆಯಲ್ಲಿಯೂ ಮಾಮರಗಳು ತುಂಬಿರುವಂಥಾ, ಎತ್ತರವಾದ ತೆಂಗಿನ ಮರಗಳಿಂದ ಸೂರ್ಯನ ಕಿರಣಗಳ ಹೊಗುವಿಕೆಗೆ ಎಡೆ ಇಲ್ಲದಂಥಾ ಪಾಪಗಳನ್ನು ಗುಟುಕು ಮಾಡಿದಂಥ ಶ್ರೀಭಗವಂತನ ಎಷ್ಟು ಸ್ಥಾನಗಳು ಚೋಳನಾಡಿನಲ್ಲಿರುತ್ತವೋ: ಅವುಗಳಿಗೆಲ್ಲ ನಮಸ್ಕಾರ ಮಾಡುತ್ತೇನೆ.

ಕೃಶಾನುಃ ॥

ಮೂ ॥ ಭವತುಭವತಪತೇಃಪುನಮಸ್ಕೃತ್ಯತಾ ಮಮತುದೇವಲಕಾದಿದೇವಾಲಯೋಪಜೀವಿದುರಾಚಾರಾನಾಲೋಚಯತೋನಭವತಿನಮುಕ್ತಿಕೇಷಾಂ ॥ ೬೬೬ ॥

ಟೀಕಾ ॥ ಭವದ್ವಿತಿ ॥ ದೇವಲಕಾಃ ಸ್ಥಾವರಪೂಜಕಾಃ ಆದಿರ್ಯೇಷಾಂತಾ ದೃಕಾಃ ಯೇದೇವಾಲಯೋಪಜೀವಿನಃ– ಕಿಂಕರಾಃ ತೇಷಾಂ ದುರಾಚಾರಾನ್–ಆಲೋಚಯತಃ ಮಮತು– ನಮಸ್ಕರ್ತುಃ ವಿಚ್ಛಾನ ಮುಕ್ತಿ ಕೇಷಾಂನಭವತಿ ॥

---

* ಇತಿಪರಿಕ್ರಮ್ಯಾವಲೋಕ್ಯಪ್ರಾಂಜಲಿಃ ಇತಿಪುಸ್ತಕಾಂತರೆ ॥

ಅರ್ಥ ॥ ಅವರುಗಳಿಗೆ ನೀನು ಬೇಕಾದರೆ ನಮಸ್ಕಾರ ಮಾಡು. ದೇವಸ್ಥಾನಗಳಲ್ಲಿ ಪೂಜಾರಿತನದ ವೃತ್ತಿಯಿಂದ ಹೊಟ್ಟೆ ಹೊರಕೊಳ್ಳುವವರ ಕೆಟ್ಟ ನಡತೆಗಳನ್ನು ನೋಡಿ ನಮಸ್ಕಾರ ಮಾಡುವದಕ್ಕೆ ನನ್ನ ಮನಸ್ಸಂತೂ ಒಗ್ಗದು.

ತಥಾಹಿ। ಶ್ಲೋ। ವಾರಸ್ತ್ರೀಕುಚಮರ್ದಿಭಿರ್ವಿರಚಯಂತ್ಯರ್ಘ್ಯಾದಿ ದಾನಂ ಕರೈಸ್ತದ್ವೀಟೀರಸವಾಸಿತೈಶ್ಚ ವದನೈರ್ಜಲ್ಪಂತಿ ಮಂತ್ರಾನ್, ನವಿೂ । ದ್ರವ್ಯಂ ದೇವಲಕಾ ಹರಂತ್ಯಚಕಿತಾ ದೇವಸ್ಯ ತತ್ರ ಪೂಜಿತಾಸ್ವೇತಾಸು ಪ್ರತಿಮಾಸು ಹಂತ ಭವಿತಾ ಕಿಂ ದೇವತಾಸನ್ನಿಧಿಃ ॥ ೬೬೭ ॥

ಟೀಕಾ ॥ ವಾರಸ್ತ್ರೀತಿ ॥ ಅವಿೂ ದೇವಲಕಾಃ— ವಾರಸ್ತ್ರೀಣಾಂ ವೇಶ್ಯಾನಾಂ ಕುಚಮರ್ದಿಭಿಃ ಕರೈಃ— ದೇವಸ್ಯ ಹರೇರರ್ಘ್ಯಾದಿದಾನಂ ವಿರಚಯಂತಿ— ತಾಸಾಂ ವೀಟ್ಯಾಃ ಚರ್ವಿತದತ್ತತಾಂಬೂಲಸ್ಯ ರಸೇನ ವಾಸಿತೈಸ್ಸುರಭಿತೈಃ— ವದನೈರ್ವಕ್ತ್ರೈಃ— ಮಂತ್ರಾನ್ ಅರ್ಘ್ಯಾದಿಕರ್ಮಾಂಗಭೂತಾನ್— ಜಲ್ಪಂತಿ ಉಚ್ಚರಂತಿ— ಕಿಂಚ— ದ್ರವ್ಯಂ ಕೈಂಕರ್ಯಾರ್ಥಂ— ಭಕ್ತಾರ್ಪಿತಧನಂ— ಅಚಕಿತಾಃ ತ್ಯಕ್ತಪರಲೋಕಭಯಾ ಇತಿ ಪ್ರತಿವಾಕ್ಯಮನ್ವಯಃ— ಹರಂತಿ ಮುಷ್ಣಂತಿ ತೈರೀದೃಶೈರ್ದೇವಲಕೈಃ ಪೂಜಿತಾಸು— ಏತಾಸು ಪ್ರತಿಮಾಸು ಅರ್ಚಾವಿಗ್ರಹೇಷು— ದೇವತಾನಾಂ ಹರಿಹರಾದೀನಾಂ ಸನ್ನಿಧಿರಾವೇಶಃ— ಭವಿತಾ ಕಿಂ ಭವಿಷ್ಯತಿ ಕಿಮಿತಿ ಕಾಕುಃ— ನಭವಿಷ್ಯತ್ಯೇವೇತ್ಯರ್ಥಃ ಹಂತೇತಿ ಖೇದೇ ॥

ಅರ್ಥ ॥ ಹ್ಯಾಗೆಂದರೆ ಈ ಪೂಜಾರಿಗಳು ಪಾತ್ರದವರ ಮೊಲೆಗಳೊನ್ನೆತ್ತಿದ ಕೈಗಳಿಂದ ದೇವರಿಗೆ ಅರ್ಘ್ಯ ಮೊದಲಾದ ಉಪಚಾರಗಳನ್ನು ಮಾಡುತ್ತಾರೆ. ಪಾತ್ರದವರು ಕೊಟ್ಟ ವೀಳ್ಯದೆಲೆಯ ರಸದ ಕಂಪೊಗೆಯುವ ಬಾಯಿಯಿಂದ ಮಂತ್ರಗಳನ್ನು ಕೂಗುತ್ತಾರೆ. ದೇವರ ಗಂಟನ್ನು ಎಷ್ಟೊಂದೂ ಅಂಜಿಕೆಯಿಲ್ಲದೆ ಎತ್ತಿ ಹಾಕುತ್ತಾರೆ. ಇಂಥ ಅರ್ಚಕರಿಂದ ಪೂಜಿಸಲ್ಪಡುವ ಮೂರ್ತಿಗಳಲ್ಲಿ ದೈವತಾಸಾನ್ನಿಧ್ಯ ಹ್ಯಾಗೆ ಬರುವದು? ಬರಲಿಕ್ಕಿಲ್ಲ ಎಂಬ ಭಾವವು.

ಶ್ಲೋ। ಕಿಂಚ। ಆಘ್ರಾತಾ ಬತ ಪಣ್ಯಯೌವತಕಥಾ ನೋ ಕರ್ಮ ಸಂಧ್ಯಾದಿಕಂ ಯೈರಭ್ಯಸ್ತಮದಭ್ರಸಭ್ಯವಚನಂ ನತ್ವೇವ ವೇದಾಕ್ಷರಂ। ಅಂಧಶ್ಚೌರ್ಯಪರೈರ್ದುರನ್ವಯಭವೈಸ್ತದ್ದೈವಿಕಾಭಿಃ ಕೃತಾನ್ಯನ್ನಾದ್ಯಾನಿ ನಿವೇದಿತಾನಿ ಭಗವಾನಂಗೀಕರೋತ್ಯೇಷ ಕಿಮ್ ॥ ೬೬೮ ॥

ಟೀಕಾ ॥ ಆಘ್ರಾತೇತಿ ॥ ಯೈರ್ದೇವಾಲಯಪಾಚಕೈಃ— ಪಣ್ಯಾಯುವತೀನಾಂ ವಾರಸ್ತ್ರೀಣಾಂ ಸಮೂಹಃ ಪಣ್ಯಯೌವತಂ ತಸ್ಯ ಕಥಾಲಾಪವಿವ— ಆಘ್ರಾತಾ ಅನುಷ್ಠಿತಾ— ಸಂಧ್ಯಾದಿಕಂ ಕರ್ಮನೋ ಆಘ್ರಾತಂ —ಅದಭ್ರಂ ಬಹುಳಂ ಸಭ್ಯವಚನಂ ಪರಪ್ರತಾರಕ ಸವಿನಯಸುಕುಮಾರಂ ವಚನಂ ಅಭ್ಯಸ್ತಂ ಶಿಕ್ಷಿತಂ— ವೇದಾಕ್ಷರಂ ತು ನಾಭ್ಯಸ್ತಮೇವ— ಅಂಧಸಃ ಅನ್ನಸ್ಯ ಚೌರ್ಯಪರೈಃ ದುರನ್ವಯೇ ದುಷ್ಕುಲೇ ಭವೈರವಿೂಭಿಃ ಸೂ

ಶ್ಚೈರ್ದೇವಾಲಯ ಪಾಚಕೈಃ ಕೃತಾನಿ ಪಕ್ವಾನಿ ಅಸ್ವಾದ್ಯಾನಿ ಅನ್ನಸೂಪಾದೀನಿ ನಿವೇದಿತಾನಿ ಸಂತಿಪಿಷಭಗವಾನ್— ಅಂಗೀಕರೋತಿ ಕಿಮಿತಿಶಾಕುಃ ||

ಅರ್ಥ ॥ ಇದಲ್ಲದೆ, ಸೂಳೆಗಳ ಸುದ್ದಿಯನ್ನೆ ಆಡುತ್ತಿರುವಂಥಾವರಾದ, ಸಂಧ್ಯಾವಂದನೆ ಮೊದಲಾದ ಕರ್ಮ ವಾರ್ತೆ ಬಿಟ್ಟುಬಿಟ್ಟಂಥಾವರಾದ, ಸಭಾರಂಜಕವಾದ ಕೇನುಡಿಗಳನ್ನು ಬೇಕಾದಷ್ಟು ಕಲಿತಂಥಾವರಾದ, ವೇದಾಕ್ಷರ ಶೂನ್ಯರಾದಂಥಾವರಾದ, ಅನ್ನ ಕಳವುಮಾಡುವಂಥಾವರಾದ. ಮತ್ತು ನೀಚಕುಲದಲ್ಲಿ ಹುಟ್ಟಿದಂಥಾವರಾದ ಅಡಿಗೆಯವರಿಂದ ಬೇಯಿಸಲ್ಪಟ್ಟ ಪದಾರ್ಥಗಳನ್ನು ದೇವರಿಗೆ ನೈವೇದ್ಯ ಮಾಡುತ್ತಾರೆ. ಇಂಥ ನೈವೇದ್ಯಕ್ಕೆ ದೇವರು ಒಪ್ಪಾನೆ? ಒಪ್ಪಲಿಕ್ಕಿಲ್ಲ ಎಂಬ ಭಾವವು.

ಮೂ । ವಿಮೃಶ್ಯ । ಅಹೋಕಲಿಮಹಾತ್ಮ್ಯದಖಿಲಜನಾನಾಮನಿವಾರ್ಯೋವಿವೇಕವಿಪರ್ಯಯಃ ॥ ೬೪ ॥

ಟೀಕಾ ॥ ಅಹೋಇತಿ ॥ ವಿವೇಕವಿಪರ್ಯಯಃ— ಅವಿವೇಕಃ ಸದಸದ್ವಿಚಾರಮೂಢತ್ವಮಿತಿಯಾವತ್ ॥

ಅರ್ಥ ॥ ಆಲೋಚನೆ ಮಾಡಿ ( ಕೃಶಾನು ಮತ್ತು ಹೇಳುತ್ತಾನೆ. ) ಅಯ್ಯೋ! ಕಲಿಯ ಪ್ರತಾಪದಿಂದ ಎಲ್ಲಾ ಜನರಿಗೂ ಉಂಟಾದ ಅವಿವೇಕವನ್ನು ದೂರಪಡಿಸುವದಶಕ್ಯವು.

ಮೂ। ಯತಃ। ಶ್ಲೋ । ಸದ್ಮಸ್ವಾದರತೋರ್ಪಿತಾನಿಹರಯೆಸತ್ತ್ವೋತ್ತರೈರ್ಭೂಸುರೈರನ್ನಾನ್ಯತ್ರನಮಾನಯಂತಿವಿಧಿವತ್ಸಿದ್ಧಾನಿವೃದ್ಧಾಅಪಿ। ದೇವಸ್ಯಾಯತನೇಷ್ವದಂತಿ ವಿಭಯಾವ್ರಾತ್ಯೈಃ ಕೃತಾನೋದನಾನ್ಸ್ಪೃಷ್ಟಾನ್ದುಷ್ಟಜನೇನನೂನಮಖಿಲೈರ್ದುಷ್ಟಾನಶಿಷ್ಟಾಹೃತಾನ್ ॥ ೬೨೦ ॥

ಟೀಕಾ ॥ ಸದ್ಮಸ್ವಿತಿ ॥ ಸದ್ಮಸುಶಿಷ್ಟಗೃಹೇಷು— ವಿಧಿವದ್ಯಥಾಚಾರಂ ಸಿದ್ಧಾನಿಪಕ್ವಾನಿ— ಸತ್ತ್ವೇನ ಗುಣೇನ ಉತ್ತರೈಃಶ್ರೇಷ್ಠೈಃ— ಭೂಸುರೈಃ ಬ್ರಾಹ್ಮಣೈಃ—ಹರಯೇ ಆದರತಃ ಅರ್ಪಿತಾನಿ ನಿವೇದಿತಾನಿ ಅನ್ನಾನಿ— ಅತ್ರಲೋಕೇ— ಜ್ಞಾನೇನವಯಸಾವೃದ್ಧಾ ಅಪಿ— ನಮಾನಯಂತಿ ನಗೃಹ್ಣಂತಿ— ದೇವಸ್ಯಾಯತನೇಷು ಆಲಯೇಷು—ವ್ರಾತ್ಯೈಃಸಂಸ್ಕಾರಹೀನೈಃ—ಕೃತಾನ್ ಪಕ್ವಾನ್ ದುಷ್ಟಜನೇನಸ್ಪೃಷ್ಟಾನ್ ಅಖಿಲೈರ್ದುಷ್ಟಾನಶಿಷ್ಟೈಃ ದುರಾಚಾರೈರಾಹೃತಾನೋದನಾನ್ ಅನ್ನಾನಿ—ವೃದ್ಧಾ ಅಪಿ— ವಿಭಯಾಃಶಂಕಾಃ— ಅದಂತಿಭುಂಜತೇ— ಹಂತ ||

ಅರ್ಥ॥ ಯಾಕೆಂದರೆ: ಶ್ರೇಷ್ಠರಾದ ಬ್ರಾಹ್ಮಣರು ತಮ್ಮ ಮನೆಯಲ್ಲಿ ಶಾಸ್ತ್ರದ ಕಟ್ಟಳೆಯ ಮೇರೆಗೆ ಸವರಣೆ ಮಾಡಿ ಭಕ್ತಿಯಿಂದ ಶ್ರೀಹರಿಗೆ ಅರ್ಪಿಸಿದ ಅನ್ನವನ್ನು ತಿಳಿದವರು ಕೂಡ ಸ್ವೀಕರಿಸುವದಿಲ್ಲವು. ದೇವಾಲಯಗಳಲ್ಲಿ ಸಂಸ್ಕಾರ ಹೀನರಾದ ಅಡಿಗೆಯವರು ಬೇಯಿಸಿದಂಥ ದುಷ್ಟ ಜನರು ಮುಟ್ಟಿದಂಥ ಆಚಾರ ಹೀನರಾದವರು ತಂದಂಥ ಅನ್ನವನ್ನು ತಿಳಿದವರು ಕೂಡ ನಿಃಶಂಕರಾಗಿ ಸೇವಿಸುತ್ತಾರೆ.

ವಿಶ್ವಾವಸುಃ ॥

ಮೂ । ಮಾದೃಶೇಭ್ಯೋಹಿದಿವ್ಯಕ್ಷೇತ್ರಮಾಹಾತ್ಮ್ಯವೇದಿ
ಭ್ಯೋಭವದೀಯಮ್ಮೃಷಾಭಾಷಣದೂಷಣಂನರೋಚತೇ ॥ ೬೨೧ ॥

ಅರ್ಥ ॥ ದಿವ್ಯ ಕ್ಷೇತ್ರಗಳ ಪ್ರಭಾವ ತಿಳಿದವರಾದ ನನ್ನಂಥಾವರು ನಿನ್ನ ಸುಳ್ಳು ನಿಂದೆಗೆ ಒಪ್ಪರು.

ಶ್ಲೋ । ಯತಃ । ಉಷಸ್ಯೇವಸ್ನಾನಾದುಚಿತಸುಚಿತಾಶಾಲಿವಪು
ಷೋವಿನೀತಾಸ್ಸ್ವೇಶಾಸ್ತ್ರೇವಿಜಿತವೃಜಿನಾಃಪೂಜಕಜನಾಃ। ಪ
ರಿತ್ರಾತುಂಲೋಕಾನ್ವಿಧಿವದಪತಂದ್ರಾವಿದಧತೇಪವಿತ್ರೈರನ್ನಾ
ದ್ಯೈಃಪರಮಪುರುಷಾರಾಧನಮಮೀ ॥ ೬೨೨ ॥

ಟೀಕಾ ॥ ಉಷಸೀತಿ ॥ ಉಷಸಿಪ್ರಾತರೇವ– ಸ್ನಾನಾದುಚಿತಯಾ ಗೃಹೀತಯಾ ಶುಚಿತಯಾ ಶುದ್ಧ್ಯಾಶಾಲತಇತಿತಚ್ಛಾಲಿವಪುರ್ಯೇಷಾಂತೇ– ಸ್ವೇಸ್ವಮತಸಂಬಂಧಿನಿ ಶಾಸ್ತ್ರೇವಿನೀತಾಶ್ಶಿಕ್ಷಿತಾಃ ಅಧೀತಸ್ವಶಾಸ್ತ್ರಾ ಇತ್ಯರ್ಥಃ– ಅತಏವ– ವಿಜಿತಂನಿರಸ್ತಂ ವೃಜಿನಂದುರಾಚಾರಃ ಯೈಸ್ತೇ–ಅಮೀಪೂಜಕಜನಾಃ ದೇವಾಲಯೋಪಜೀವಿನಃ-ಲೋಕಾನ್ ಜನಾನ್ ಪರಿತ್ರಾತುಂ ಅಪತಂದ್ರಾಃ ಗತಪ್ರಮಾದಾಸ್ಸಂತಃ-ಪವಿತ್ರೈರನ್ನಾದ್ಯೈಃ– ವಿಧಿವತ್ಪರಮಪುರುಷಸ್ಯ ಭಗವತಃ ಆರಾಧನಂ ಅರ್ಚನಂ ವಿದಧತೇ– ಅತ್ರಲೋಕಪರಿರಕ್ಷಣಂ ಸ್ವನಿವೇದಿತ ಭಗವತ್ಪ್ರಸಾದಾನ್ನ ದಾನದ್ವಾರೇತಿಧ್ಯೇಯಂ ॥

ಅರ್ಥ ॥ ಹ್ಯಾಗೆಂದರೆ ಹೊತ್ತಾರೆ ಎದ್ದು ಜಳಕ ಮಾಡಿ ಶುದ್ಧವಾದ ಶರೀರ ಉಳ್ಳವರಾಗಿಯೂ, ಮರ್ಯಾದೆ ಶೀಲರಾಗಿಯೂ, ಸ್ವಧರ್ಮಕ್ಕೆ ಸಂಬಂಧ ಉಳ್ಳ ಶಾಸ್ತ್ರಗಳನ್ನು ಕಲಿತಂಥಾವರಾಗಿಯೂ ದುಷ್ಟ ನಡತೆ ಬಿಟ್ಟಂಥಾವರಾಗಿಯೂ ಇರುವ ಪೂಜಾರಿ ಜನಗಳು ಜನರನ್ನುದ್ಧರಿಸಲಿಕ್ಕೆ ತಪ್ಪಾಗದಂತೆ ಎಚ್ಚರಿಕೆಯಾಗಿ ಶುಚಿಯಾದ ಅನ್ನಾದಿಗಳಿಂದ ಪರಮೇಶ್ವರನ ಪೂಜೆಯನ್ನು ಮಾಡುತ್ತಾರೆ.

ಮೂ । *ಅವಕರ್ಣ್ಯತಾಮಿದಮಪಿಯದಭ್ಯುಪಗಮ್ಯಾಪ್ಯಭಿಧಾ
†ಸ್ಯಾಮಿ ॥ ೬೨೩ ॥

ಟೀಕಾ ॥ ಅವಕರ್ಣ್ಯತಾಮಿತಿ ॥ ಯದ್ವಾಚಃ ಅಭ್ಯುಪಗಮ್ಯಭವದೀಯದೂಷಣಮಂಗೀಕೃತ್ಯಾಪಿ– ಅಭಿಧಾಸ್ಯಾಮಿವಕ್ಷ್ಯಾಮಿ ॥

ಅರ್ಥ ॥ ನೀನಾಡಿದ ನಿಂದೆಯ ಮಾತಾದರೂ ಒಪ್ಪಿಕೊಂಡು ಹೇಳುತ್ತೇನೆ ಕೇಳು.

ಶ್ಲೋ । ವಿಧಿವದವಿಧಿವದ್ವಾಭಕ್ತಿತೋಭಕ್ತಿತೋವಾನನುಶುಚಿರ
ಶುಚಿರ್ವಾನಾಥಮರ್ಚತ್ಯಹತ್ಯಃ। ಅನುದಿನಮುಪಯಾತ್ರೈರರ್ಚ್ಯ

---

* ಆಕರ್ಣ್ಯತಾಮ್ ಇತಿಪಾಠಾಂತರಮ್ । † ರಹಸ್ಯಮಿತ್ಯಧಿಕಂಚ ॥

ಮಾನಾಸುದೇವೈರರುಚಿರಜಿತಮೂರ್ತಿಷಾ ್ವಸ್ತಿಕಸ್ಯಾಸ್ತಿಕಸ್ಯ
॥ ೧೨೪ ॥

ಟೀಕಾ ॥ ವಿಧಿವದಿತಿ ॥ ನನುಹೇಕೃಶಾನೋ ॥ ಇಹಭವಃ ಇಹತ್ಯಃ ಜನಃ ದೇವಲಕಾದಿಃ— ಶುಚಿರ್ವಾ ಅಶುಚಿರ್ವಾಽಸ್ತ— ನಾಥಂಭಗವಂತಂ ವಿಧಿವದ್ವಾ— ಭಕ್ತಿತೋವಾ ಅಭಕ್ತಿತೋವಾ— ಅರ್ಚತುಪೂಜಯತು ದಿನೇದಿನೇಅನುದಿನಂ— ಉಪಯಾತೈರಾಗತೈಃ ದೇವೈರಿಂದ್ರಾದಿಭಿರರ್ಚ್ಯಮಾನಾಸು ಅತಏವ ಅಜಿತಸ್ಯ ಭಗವತಃ ಮೂರ್ತಿಷು ಪ್ರತಿಮಾಸು ಅರುಚಿಃ ವಿಷಯೇ ಜುಗುಪ್ಸಾ—ಕಸ್ಯ— ಅಸ್ತಿದೈವಮಿತಿಜ್ಞಾನಂ ಯಸ್ಯತಸ್ಯಆಸ್ತಿಕಸ್ಯಅಸ್ತಿ—ನಕಸ್ಯಾಪಿ—ಕಿಂತುಅರುಚಿಃ ನಾಸ್ತಿಕಸ್ಯೈವೇತ್ಯರ್ಥಃ ॥

ಅರ್ಥ॥ ಎಲಾ ಕೃಶಾನುವೇ ಇಲ್ಲಿಯ ಜನರು ಶಾಸ್ತ್ರದ ಮೇರೆಗೆ ಆಗಲಿ ಶಾಸ್ತ್ರಕ್ಕೆ ವಿರೋಧವಾಗಿ ಆಗಲೀ ವಿಶ್ವಾಸದಿಂದಾಗಲೀ ಅವಿಶ್ವಾಸದಿಂದಾಗಲೀ ಶುದ್ಧವಾಗಿ ಆಗಲೀ ಅಶುದ್ಧವಾಗಿಯಾಗಲೀ ಪರಮೇಶ್ವರನನ್ನು ಪೂಜಿಸುವಂಥಾವರಾಗಲೀ, ನಿತ್ಯದಲ್ಲಿಯೂ ದೇವತೆಗಳು ಬಂದು ಪೂಜಿಸುವ ಪರಮೇಶ್ವರನ ಪ್ರತಿಮೆಗಳಲ್ಲಿ ದೇವರಿದ್ಧಾನೆಂದು ನಂಬುವಂಥಾಯಾವ ಆಸ್ತಿಕ ಪುರುಷನಿಗೆ ಅಪ್ರೀತಿಯುಂಟು ? ಅಂದರೆ ಆಸ್ತಿಕನಾದವನ್ಯಾರಿಗೂ ಅಂಥ ಪ್ರತಿಮೆಗಳಲ್ಲಿ ಅಪ್ರೀತಿ ಇರಲಿಕ್ಕಿಲ್ಲ ಎಂಬ ಅರ್ಥವು.

ಮೂ। ಇದಂಚಾವಧೇಯಂ ॥

ಶ್ಲೋ। ಕೇಚಿಚ್ಚಕ್ರಧರಾಪಚಾರಚಕಿತಾಃಕ್ಷ್ಮಾಪಾಲಭೀತಾಃಪರೇ
ಶ್ರದ್ಧಾತಃಕತಿಚಿತ್ಪಚಂತ್ಯವಹಿತಾಶ್ಶುದ್ಧಾಶ್ಚದಿವ್ಯಂಹವಿಃ। ಅಗ್ರೇ
ನ್ಯಸ್ತಮಿದಂಪ್ರಮುದೈವಭಗವಾನಾಲೋಕನೈಃ ಸ್ವೀಕರೋತ್ಯಂಹ
ಸ್ಸಂಹರಣಾಶಯಾಚತದಿದಂಪ್ರಾಶ್ನಂತಿಭಾಗ್ಯೋತ್ತರಾಃ॥೧೨೫॥

ಟೀಕಾ ॥ ಕೇಚಿದಿತಿ ॥ ಕೇಚಿದ್ದೇವಾಲಯಸೂದಾಃ— ಚಕ್ರಧರಸ್ಯಭಗವತಃ ಅಪಚಾರಾಚ್ಚಕಿತಾಃಭೀತಾಃ— ಅತಏವಶುದ್ಧಾಃ— ಅವಹಿತಾಃ ಅಪ್ರಮಾದಾಶ್ಚಸಂತಃ— ದಿವ್ಯಂಹವಿರನ್ನಾದ್ಯಂ— ಪಚಂತಿ— ಪದಪಂಚಕಮಿದಂ ವಾಕ್ಯತ್ರಯೇಪಿಯೋಜ್ಯಂ ಪರೇಅನ್ಯೇಕೇಚಿತ್— ಕ್ಷ್ಮಾಪಾಲಾತ್ ರಾಜ್ಞಃಭೀತಾಸ್ಸಂತಃ— ಕತಿಚಿತ್ಶ್ರದ್ಧಾತಃ—ಭಗವಾನ್— ಅಗ್ರೇನ್ಯಸ್ತಂತ್ರಯಾಣಾಮನ್ಯತಮೇನ ಪ್ರಕಾರೇಣಶುದ್ಧಂ ಇದಂಹವಿಃ— ಮುದಾಉಪಲಕ್ಷಿತೈಃ ಆಲೋಕನೈಃ ಸ್ವೀಕರೋತ್ಯಂಗೀಕರೋತಿ—ಭಾಗ್ಯೋತ್ತರಾಃ— ಅಂಹಸಾಂಸಂಹರಣೇಆಶಯಾ— ತದಿದಂಭಗವದಂಗೀಕೃತಂಹವಿಃ— ಪ್ರಾಶ್ನಂತಿಭುಂಜತೇ ॥

ಅರ್ಥ ॥ ಈ ಮಾತಿಗೆ ಲಕ್ಷ್ಯ ಕೊಡತಕ್ಕದ್ದು. ಅಡಿಗೆಯವರು ಕೆಲವರು ದೇವರಭೀತಿಯಿಂದ, ಕೆಲವರು ಅರಸನ ಭಯದಿಂದ, ಕೆಲವರು ಭಕ್ತಿಯಿಂದ ಎಚ್ಚರಿಕೆಯುಳ್ಳವರಾಗಿ ತಪ್ಪುಮಾಡದೆ ಅನ್ನವನ್ನು ಶುಚಿಯಾಗಿ ಸಿದ್ಧಮಾಡುತ್ತಾರೆ. ಅಂಥ ಅನ್ನವನ್ನು ನೈವೇದ್ಯಕ್ಕಾಗಿ ಎದುರಿಗಿಡಲು ದೇವರು ಅವನ್ನು ಪ್ರಸನ್ನತೆಯಿಂದ ನೋಡಿ ಅಂಗೀಕರಿಸುತ್ತಾನೆ. ಅಂಥ ಅನ್ನವನ್ನು ಪಾಪಗಳನ್ನು ಹೋಗಲಾಡಿಸಿಕೊಳ್ಳುವ ಆಶೆಯಿಂದ ಶ್ರೇಷ್ಠರಾದ ಪುಣ್ಯವಂತರು ಸೇವಿಸುತ್ತಾರೆ.

ಮೂ। ಪಶ್ಯತಾವತ್ಸ್ವಾನುಭವಸಿದ್ಧೌಪ್ರಕರ್ಷನಿಕರ್ಷೌಭಗವದಾಯತನತದಿತರಸ್ಥಲಪರಿಕಲ್ಪಿತಯೋರನ್ನಯೋಃ ॥ ೧೨೧ ॥

ಟೀಕಾ ॥ ಪಶ್ಯೇತಿ ॥ ಭಗವದಾಯತನೇ ಪರಿಕಲ್ಪಿತಾನ್ನಸ್ಯ ಪ್ರಕರ್ಷಃ ಉತ್ಕರ್ಷಃ—ತಸ್ಮಾದ್ದೇವಾಲಯಾದಿತರಸ್ಥಲೇಪರಿಕಲ್ಪಿತಸ್ಯ ಅನ್ನಸ್ಯನಿಕರ್ಷಶ್ಚ—ದ್ವೌಸ್ವೀಯೇನ ಅನುಭವೇನಸಿದ್ಧೌ—ತೌಪಶ್ಯೇತ್ಯನ್ವಯಃ॥

ಅರ್ಥ॥ ನೋಡು, ದೇವಸ್ಥಾನಗಳಲ್ಲಿ ಸಿದ್ಧವಾದ ಅನ್ನದ ಶ್ರೇಷ್ಠತ್ವ ಮತ್ತು ಬೇರೆ ಸ್ಥಳಗಳಲ್ಲಿ ಸಿದ್ಧವಾದ ಅನ್ನದ ನೀಚತ್ವ ಸ್ವಂತ ಅನುಭವ ಸ್ಥಾಪಿತವಾಗಿದೆ.

ಶ್ಲೋ। ಉಪಸ್ಕಾರೈಃಸ್ಫಾರೈರುಪಚಿತರಸಾಮೋದಭರಮಪ್ಯವೈತ್ಯನ್ನಂಗೇಹೇಕೃತಮಯಮಭೋಗ್ಯಂಬುಧಜನಃ।ಅಭೂಯಸ್ಸಂಸ್ಕಾರಿಣ್ಯಪಿಹವಿಷಿದೇವಾಲಯಭವೇತ್ವನಲ್ಪಂಭೋಗ್ಯತ್ವಂಪುನರಘಹರತ್ವಂಚಮನುತೇ ॥ ೧೨೨ ॥

ಟೀಕಾ ॥ ಉಪಸ್ಕಾರೈರಿತಿ ॥ ಸ್ಫಾರೈರ್ಬಹುಭಿರುಪಸ್ಕಾರೈಃ *ವ್ಯಂಜನೈಃ— ಉಪಚಿತಃ ಪ್ರವೃದ್ಧಃ ರಸಸ್ಯ ಮಧುರಾದೇಃ ಆಮೋದಸ್ಯ ಸುಗಂಧಸ್ಯಚ ದ್ವಯೋರ್ಭರಃ ಅತಿಶಯಃ ಯಸ್ಮಿನ್ ತಥೋಕ್ತಮಪಿ— ಗೇಹೆ ಶಿಷ್ಟಗೃಹೇ— ಕೃತಂಪಕ್ವಂಅನ್ನಂ— ಅಯಂಬುಧಜನಃ— ಅಭೋಗ್ಯಂಭೋಕ್ತುಮಯೋಗ್ಯಂ ಅವೈತಿಮನುತೇ— ಭೂಯಾಂಸಃ ಸಂಸ್ಕಾರಾಅಸ್ಮಿನ್ ನಸಂತೀತ್ಯಭೂಯಸ್ಸಂಸ್ಕಾರಿಣ್ಯಪಿ ದೇವಾಲಯಭವೇಹವಿಷಿಅನ್ನೇತು ಅನಲ್ಪಂಭೋಗ್ಯತ್ವಂ—ಪುನಃಕಿಂಚ— ಅಘಹರತ್ವಂ ಚಮನುತೇ ॥

ಅರ್ಥ ॥ ಬಾಡಿಸಿಕೊಳ್ಳಲಿಕ್ಕೆ ಕೋಸಂಬರಿ ಮೊದಲಾದ ಮೇಲೋಗರಗಳಿಂದ ಹೆಚ್ಚಿಸಲ್ಪಟ್ಟ ಸವಿ ಮತ್ತು ಸುಗಂಧ ತುಂಬಿ ಇರುವಂಥ ಅನ್ನ ಶಿಷ್ಟಪುರುಷರುಗಳ ಮನೆಯಲ್ಲಿ ಸಿದ್ಧ ಮಾಡಿದ್ದಂಥಾದ್ದಾದರೂ ಇರಲೀ, ಅದನ್ನು ತಿನ್ನಲಿಕ್ಕಯೋಗ್ಯವಾದದ್ದೆಂದು ಬಲ್ಲಂಥವರು ತಿರಸ್ಕರಿಸುತ್ತಾರೆ. ದೇವಸ್ಥಾನಗಳಲ್ಲಿ ಬೇಸಿದ ಅನ್ನ, ಅನೇಕ ಸಂಸ್ಕಾರಗಳಿಲ್ಲದ್ದಾದಾಗ್ಯೂ ಅಂದರೆ ಪೂರ್ವೋಕ್ತ ಗುಣಗಳಿಲ್ಲದ್ದಾದಾಗ್ಯೂ ಅದು ತಿನ್ನಲಿಕ್ಕೆ ಬಹಳ ಯೋಗ್ಯವಾದದೆಂತ ತಿಳಿಯುತ್ತಾರೆ. ಇಷ್ಟೇ ಅಲ್ಲಾ ಅದನ್ನು ಸೇವಿಸಿದರೆ ಪಾಪ ದೂರವಾಗುತ್ತದೆಂದೆಣಿಸುತ್ತಾರೆ.

ಮೂ। ಇದಂಚಬೋದ್ಧವ್ಯಂ ॥

ಶ್ಲೋ। ದೇವಾಗಾರನಿಷೇವಿಣಃಕಿಲಜನಾದುಷ್ಯಂತುಶುದ್ಧ್ಯಂತುವಾತೇಮೀಸ್ವಾಮಿಪರಿಗ್ರಹೇಣನಿಯತಂ ಮಾನ್ಯಾಮನೀಷಾಜು

---

* ಅತ್ರಟೀಕಾಯಾಂ ಉಪಸ್ಕಾರೈಃ ವ್ಯಂಜನೈಃ ಇತಿಯದುಕ್ತಂ ತತ್ಪ್ರಾಮಾದಿಕಮಿವ ಪ್ರತಿಭಾತಿ। ಯಥಾಹ ಅಮರ ಸಿಂಹಃ "ವೇಷ(ಶ)ವಾರ ಉಪಸ್ಕರಃ" ಶಾಕಾದಿ ಸಂಸ್ಕಾರಾರ್ಥಂ ರಚಿತ ಹರಿದ್ರಾಸರ್ಷಪಮರೀಚಾದಿ ಚೂರ್ಣಸ್ಯ ಭಾಷಾಯಾಂ "ಮಸಾಲಾ" ಇತಿಖ್ಯಾತಸ್ಯ ಉಪಸ್ಕಾರ ಇತಿಸಂಜ್ಞಾ। ತಥಾಚ "ವ್ಯಂಜನಂ ತೇಮನೇ, ಚಿಹ್ನೆ" ಇತಿಮೇದಿನಿ। ತೇಮನಂ ದಧ್ಯಾದೇರ್ವ್ಯಂಜನಂ ॥

ಷಾಂ । ಪ್ರಾಯೇಣಾಶ್ರಯಗೌರವೇಣಲಭತೇಹೀನೋಽಪಿಮಾನಾರ್ಹತಾಂ ಕುಬ್ಜಕ್ಲೀಬಮುಖೋಜನೋಽಪಿಭಜತೇಪೂಜಾಂಹಿರಾಜಾಶ್ರಯಾತ್ ॥ ೬೭೮ ॥

ಟೀಕಾ ॥ ದೇವೇತಿ ॥ ದೇವಾಗಾರೇ ದೇವಾಲಯೇ ನಿಷೇವಿಣಃ ಪರಿಚಾರಕಾಃ ಜನಾಃ ದುಷ್ಯಂತುವಾ ಭ್ರಷ್ಟಾಭವಂತುವಾ— ಶುಧ್ಯಂತು ಶುದ್ಧಾಭವಂತುವಾಕಿಲ—ಅತಿಸರ್ಗೇಲೋಟ್— ತೇವಿಭೂಪರಿಚಾರಕಾಃ— ಸ್ವಾಮಿನೋದೇವಸ್ಯಪರಿಗ್ರಹೇಣ ಹೇತುನಾಮನೀಷಾಜುಷಾಂ ಬುದ್ಧಿಮತಾಂ— ನಿಯತಮವಶ್ಯಂ— ಮಾನ್ಯಾಭವಂತಿ—ಹೀನೋಽಪಿಜನಃ— ಪ್ರಾಯೇಣ—ಆಶ್ರಯಗೌರವೇಣ— ಮಾನಸ್ಯಅರ್ಹತಾಂ ಯೋಗ್ಯತ್ವಂಲಭತೇ—ಹಿಯಸ್ಮಾತ್— ಕುಬ್ಜಕ್ಲೀಬಮುಖೋಽಪಿಜನಃ—ರಾಜಾಶ್ರಯಾತ್ ಪೂಜಾಂಭಜತೆಲಭತೆ ॥

ಅರ್ಥ ॥ ಇದು ತಿಳಿಯಲಿಕ್ಕೆ ಯೋಗ್ಯವಾದದ್ದು ಏನೆಂದರೆ: ದೇವಸ್ಥಾನಗಳಲ್ಲಿಯ ಸೇವಕರು ಸಂಸ್ಕಾರ ಹೀನರಾದಂಥವರಾಗಿರಲೀ ಅಥವಾ ಶುದ್ಧರಾದಂಥವರಾಗಿರಲೀ ಅವರು ದೇವರಿಂದ ಅಂಗೀಕರಿಸಲ್ಪಟ್ಟಂಥಾವರಾಗಿರುವದರಿಂದ ಅವರನ್ನು ಬುದ್ಧಿವಂತರು ಅವಶ್ಯವಾಗಿ ಮನ್ನಿಸಬೇಕು; ದೊಡ್ಡವರ ಮರೆಹೊಕ್ಕವನು ಕೀಳನಾದಾಗ್ಯೂ ಮಾನಕ್ಕೆ ಯೋಗ್ಯನಾಗುವದು ವಾಡಿಕೆಯು. ಚಂದಗೇಡಿಯಾಗಲೀ, ನಪುಂಸಕನಾಗಲೀ, ಅರಸಿನ ಬೆನ್ನುಬಲಯಿದ್ದರೆ ಮರ್ಯಾದೆ ಹೊಂದುತ್ತಾನೆ.

## ಸೇತುವರ್ಣನಮ್॥

ಮೂ । ಇತ್ಯನ್ಯತಃಪರಿಕ್ರಾಮನ್ನಗ್ರತೋಽವಲೋಕ್ಯಸಹರ್ಷಂ ಸಾಂಜಲಿಬಂಧಂ ॥

ಶ್ಲೋ । ಪಾತುಂಪಾತಕಿನೋಜನಾನಶರಣಾನ್ಪಾತುಂತಮಸ್ಸಾಗರಂ ಯಾತುಂಯಾತುಪುರೀಮರೀನ್ರಣಮುಖೇಜೇತುಂದಶಾಸ್ಯಾದಿಕಾನ್ । ನೇತುಂಭೂತನಯಾಂಮುದಂವಿರಹಿಣೀಮೇತುಂಯಶಶ್ಶಾಶ್ವತಂದಾತುಂಶರ್ಮ ಚರಾಘವೇಣರಚಿತಂಸೇತುಂನಮಸ್ಕುರ್ಮಹೇ ॥ ೬೭೯ ॥

ಟೀಕಾ ॥ ಪಾತುಮಿತಿ ॥ ಪಾತಕಿನಃ ಪಾಪಿನಃ—ಅಶರಣಾನ್ ರಕ್ಷಕ ಹೀನಾನ್ ಜನಾನ್ ಪಾತುಂ ರಕ್ಷಿತುಂ—ತಮಃ ಅಜ್ಞಾನಮೇವ ಸಾಗರಂ ಪಾತುಂ ಪಾನಂ ಕರ್ತುಂ ನಾಶಯಿತುಮಿತಿಯಾವತ್ ಯಾತುನಾಂ ರಕ್ಷಸಾಂ ಪುರೀಂ ಲಂಕಾಂ—ಯಾತುಂ ಗಂತುಂ ದಶಾಸ್ಯಾದಿಕಾನ್ ರಾವಣಾದೀನರೀನ್ ರಣಮುಖೇಜೇತುಂ—ವಿರಹಿಣೀಂ ವಿಯುಕ್ತಾಂ—ಭೂತನಯಾಂ ಸೀತಾಂ—ಮುದಂ ನೇತುಂ ಪ್ರಾಪಯಿತುಂ—ಶಾಶ್ವತಂ ಯಶಃ ಏತುಂ ಲಬ್ಧುಂ—ಶರ್ಮಸುಖಂ ಮಹಾಪಾತಕನಿರಸನ ಜನ್ಯಂ ದಾತುಂಚ—ರಾಘವೇಣ ಶ್ರೀರಾಮೇಣರಚಿತಂ ಸೇತುಂನಮಸ್ಕುರ್ಮಹೇ ॥

ಅರ್ಥ ॥ ಇಂತೆಂದು ಬೇರೆ ಕಡೆಗೆ ನಡದು ಮುಂದೆ ನೋಡಿ ಸಂತೋಷದಿಂದ ಕೈಜೋಡಿಸಿ ( ವಿಶ್ವಾವಸು ಹೇಳುತ್ತಾನೆ. ): ಗತಿಗೇಡಾದ ಪಾಪಿಷ್ಟರನ್ನು ಸಲಹುವದಕ್ಕೂ, ಅಜ್ಞಾನವೆಂಬ ಸಮುದ್ರವನ್ನು ಕುಡಿದು ಬಿಡಲಿಕ್ಕೂ ಅಂದರೆ ಆರಿಸಿ ಬಿಡಲಿಕ್ಕೂ, ರಾಕ್ಷ

ಸರ ಪಟ್ಟಣವಾದ ಲಂಕೆಯನ್ನು ಕುರಿತು ಹೋಗಲಿಕ್ಕೂ, ಕಾಳಗದಲ್ಲಿ ರಾವಣನೇ ಮೊದಲಾದ ಎದುರಾಳಿಗಳನ್ನು ಗೆಲ್ಲುವದಕ್ಕೂ, ಅಗಲಿಕೆಯಲ್ಲಿದ್ದ ಸೀತೆಯನ್ನು ಸಂತೋಷಪಡಿಸಲಿಕ್ಕೂ, ಅಳಿವಿಲ್ಲದ ಕೀರ್ತಿಯನ್ನು ಸಂಪಾದಿಸಲಿಕ್ಕೂ, ಜನರಿಗೆ ಸುಖಪ್ರಾಪ್ತಿ ಮಾಡಿಕೊಡುವದಕ್ಕೂ ಶ್ರೀ ರಾಮನಿಂದ ಕಟ್ಟಲ್ಪಟ್ಟ ಸೇತುವೆಗೆ ನಮಸ್ಕಾರವನ್ನು ಮಾಡುತ್ತೇವೆ.

ಮೂ । ಹಂತಕಠಿನಾನಾಮಪಿಅಮೀಷಾಮಪಿಅತೀವಮಹತೀಪ್ರೀತಿರನು ಬಂಧಿಜನೇ ॥ ೬೮೦ ॥

ಟೀಕಾ ॥ ಹಂತೇತಿ ॥ ಕಠಿನಾನಾಂ ನಿರ್ದಯಾನಾಮಪಿ ನಿಷ್ಠುರಾಣಾಂ ಚೇತಿಚ ಅಮೀಷಾಂ ನಲಸೇತುಶೈಲಾನಾಂ—ಅನುಬಂಧಿನಿ ದೇಹಸಂಬಂಧಿನಿ ಜನೇಸೀತಾಯಾಃ ವಿಷಯೇ—ಪ್ರೀತಿಃ ಅತಿಮಹತೀ ॥

ಅರ್ಥ ॥ ನಿಷ್ಠುರವಾದ ಈ ಕಲ್ಲುಗಳಿಗಾದರೂ ಬಂಧು ಜನಗಳಲ್ಲಿ ಮಿಗಿಲಾದ ಪ್ರೀತಿಯು.

ಮೂ ।ಯತಃ । ಶ್ಲೋ ।ಲಂಕಾಪುರೇಪಙ್ಕ್ತಿಮುಖೇನರುದ್ಧಾಂಭೂಮೇಃಸುತಾಂಭೂಮಿಭೃತೋನುಬಂಧಾತ್ । ಸೇತೂಭವಂತಃಸ್ವಯಮಾಪ್ಲವಂತೇ ಪತಿಂ ಪುನಃಪ್ರಾಪಯಿತುಂ ಪಯೋಧೌ ॥ ೬೮೧ ॥

ಟೀಕಾ ॥ ಲಂಕೇತಿ ॥ ಭೂಮಿಭೃತಃ ಶೈಲಾಃ—ಅನುಬಂಧಾತ್ ಸಂಬಂಧಾತ್ ಸ್ವಭೃತಭೂಮಿಜನ್ಯತ್ವರೂಪಾದ್ಧೇತೋಃ—ಪಙ್ಕ್ತಿ ಮುಖೇನ ದಶಾಸ್ಯೇನ—ಲಂಕಾಪುರೇರುದ್ಧಾಂ—ಭೂಮೇಸ್ಸುತಾಂ ಸೀತಾಂ—ಪತಿಂ ರಾಮಂ ಪ್ರಾಪಯಿತುಂ—ಸ್ವಯಂ ಪಯೋಧೌಸೇತೂ ಭವಂತಃ—ಆಪ್ಲವಂತೆ ಉನ್ಮಜ್ಜಂತಿ ॥

ಅರ್ಥ ॥ ಯಾಕೆಂದರೆ: ಪರ್ವತಗಳು ತಮ್ಮನ್ನು ಹೊತ್ತ ಭೂಮಿಯ ಮಗಳಾದ ಸೀತೆಯ ಮೇಲಿನ ಬಂಧುತ್ವ ಭಾವದಿಂದ, ಲಂಕಾಪಟ್ಟಣದಲ್ಲಿ ರಾವಣನಿಂದ ಸೆರೆಯಲ್ಲಿಡಲ್ಪಟ್ಟ ಸೀತೆಯನ್ನು ಅವಳ ಪತಿಯಾದ ರಾಮನನ್ನು ಕುರಿತು ಮುಟ್ಟಿಸುವದಕ್ಕೆ ಸಮುದ್ರದಲ್ಲಿ ಸೇತುವೆಯಾಗಿ ತೇಲುವಂಥಾವುಗಳಾದವು.

ಮೂ । ನಿರೂಪ್ಯ । ಪಯೋಧಿಮಧ್ಯೆಪ್ಲವಮಾನಮೂರ್ತಯಃತರಂಗವೇಗಾರ್ಪಿತಫೇನಚಿಹ್ನಿತಾಃ । ಹಸಂತಿಕಿಂಮಂದರಮಂತರರ್ಣವಂನಿಮಗ್ನಮೇತೇನಲಸೇತುಭೂಧರಾಃ ॥ ೬೮೨ ॥

ಟೀಕಾ ॥ ಪಯೋಧೀತಿ ॥ ಪಯೋಧೇರ್ಮಧ್ಯೆಪ್ಲವಮಾನಾ ಅನಿಮಗ್ನಾ ಮೂರ್ತಿರ್ಯೇಷಾಂತೇ—ತರಂಗಾಣಾಂ ಸಾಮುದ್ರಾಣಾಂ ವೇಗೇನಾರ್ಪಿತೈಃ ಫೇನೈಃ ಚಿಹ್ನಿತಾಃ—ಏತೇ—ನಲೋನಾಮ ಸುಗ್ರೀವ ಸೇನಾಪತಿಃ ತೇನಕೃತೇಸೇತೌಭೂಧರಾಃ ಶೈಲಾಃ—ಅರ್ಣವಸ್ಯಕ್ಷೀರಾಬ್ಧೇಃ ಮಧ್ಯೆ ಅಂತರರ್ಣವಂ ನಿಮಗ್ನಂ—ಮಂದರಂ ನಾಮಶೈಲಂ—ಹಸಂತೀವೇತ್ಯುತ್ಪ್ರೇಕ್ಷಾಯಾಂ ಕಿಂಶಬ್ದಃ ॥

ಅರ್ಥ ॥ ಚೆನ್ನಾಗಿ ಆಲೋಚಿಸಿ ( ವಿಶ್ವಾವಸು ಹೇಳುತ್ತಾನೆ ) ಸಮುದ್ರದಲ್ಲಿ ತೇಲಾ

ತುವ ಆ ಪ್ರಸಿದ್ಧವಾದ ನಲನಿಂದ ಕಟ್ಟಲ್ಪಟ್ಟ ಸೇತುವೆಯು ಪರ್ವತಗಳು ತೆರೆಗಳ ಒತ್ತರದಿಂದ ಹೊರಡುವ ನೊರೆ ತಗಲಿ ಸಮುದ್ರದಲ್ಲಿ ಮುಳುಗಿರುವ ಮಂದರಾಚಲ ಪರ್ವತನಿಗೆ ನಗುತ್ತಾರೋ ಎಂಬಂತೆ ತೋರುತ್ತವೆ.

ಮೂ। ಪುನರ್ವಿಮೃಶ್ಯ। ಶ್ಲೋ। ಲಂಕಾಪುರಾವಾಸಿರಘೂದ್ವಹಾರಿ ಸಂಪರ್ಕಪಾಪಾದಿವ ಸಿಂಧುರಾಜಃ । ಸಪಕ್ಷಭೂಭೃನ್ನಿಬಿಡಾಂತರೋಪಿ ವಿಪಕ್ಷಭೂಭೃದ್ಭಿರಬಂಧಿ ಕಷ್ಟಂ ॥ ೬೮೩ ॥

ಟೀಕಾ ॥ ಲಂಕೇತಿ ॥ ಸಿಂಧುರಾಜಸ್ಸಮುದ್ರಃ— ಲಂಕಾಪುರಾವಾಸಿನಃ ರಘೂದ್ವಹಾರೇಃ ರಾವಣಸ್ಯ ಸಂಪರ್ಕೇಣ ಯತ್ಪಾಪಂ ತಸ್ಮಾದಿವೇತ್ಯುತ್ಪ್ರೇಕ್ಷಾ— ಸಪಕ್ಷೈಃ ಆಪ್ತೈಃ—ಪಕ್ಷಸಹಿತೈಶ್ಚ ಭೂಭೃದ್ಭಿಃ ರಾಜಭಿಃ ಪರ್ವತೈಶ್ಚ—ನಿಬಿಡಂ ಸಾಂದ್ರಂ ಅಂತರಂ ಮಧ್ಯಭಾಗಃ ಯಸ್ಯ ತಥೋಕ್ತೋಪಿ—ಸಸಹಾಯೋಪಿ ಸನ್ನಿತ್ಯರ್ಥಃ—ವಿಪಕ್ಷೈಃ ಶತ್ರುಭಿಃ ಪಕ್ಷರಹಿತೈಶ್ಚ ಭೂಭೃದ್ಭಿಃ ರಾಜಭಿಃ ಪರ್ವತೈಶ್ಚ ಅಬಂಧಿ ಬಧ್ಯತೇ ಸ್ಮ—ಕಷ್ಟಮಿತಿ ಖೇದೇ ॥

ಅರ್ಥ ॥ ತಿರಿಗಿ ವಿಚಾರ ಮಾಡಿ ವಿಶ್ವಾವಸು ಹೇಳುತ್ತಾನೆ: ಸಮುದ್ರನು ಪಕ್ಷಸಹಿತೈಃ ( ರೆಕ್ಕೆಗಳುಳ್ಳ )ಆಪ್ತರಾದ ಭೂಭೃದ್ಭಿಃ, ಅರಸುಗಳಿಂದ ( ಪರ್ವತಗಳಿಂದ ) ತುಂಬಿರುವ ಮಧ್ಯಭಾಗ ಉಳ್ಳವನಾದಾಗ್ಯೂ ವಿಪಕ್ಷ ಭೂಭೃದ್ಭಿಃ ವೈರಿಗಳಾದ ಅರಸುಗಳಿಂದ (ರೆಕ್ಕೆಗಳಿಲ್ಲದ ಪರ್ವತಗಳಿಂದ ) ಕಟ್ಟಲ್ಪಟ್ಟನು. ಅಹಹ! ಕಷ್ಟವೇ ಇದು ಲಂಕಾಪಟ್ಟಣದಲ್ಲಿ ವಾಸ ಮಾಡಿಕೊಂಡಿದ್ದ ರಾವಣನ ಸಂಪರ್ಕ ಮೂಲಕವಾದ ಪಾಪದಿಂದಲೋ ಎಂಬಂತೆ ತೋರುತ್ತದೆ.

ಶ್ಲೋ। ಶುದ್ಧಾಸ್ಸಂಶ್ರಿತಧರ್ಮಸೇತವ ಇಮೇ ಸೋಢೋಗ್ರವರ್ಷಾತಪಾಸ್ಸ್ಥಿತ್ವಾ ಸಿಂಧುಜಲೇ ಸಮಂ ಕ್ಷಿತಿಭೃತೋ ಘೋರಂ ತಪಃ ಕುರ್ವತೇ। ನೃತ್ಯಂತೀರಿಹ ನಿತ್ಯಮೇವ ಚಪಲಾಸ್ತೀಕ್ಷ್ಣೈ ರತನ್ವಾಶುಗೈಃ ಲಾವಣ್ಯಂ ದಧತೀಃ ಕದಾಪಿ ನ ಚಲಂತ್ಯಾಲೋಕ್ಯ ವೀಚೀರಮೂಃ ॥ ೬೮೪ ॥

ಟೀಕಾ ॥ ಶುದ್ಧಾ ಇತಿ ॥ ಸಂಶ್ರಿತಃ ಧರ್ಮಸ್ಯ ಸೇತುರ್ಮರ್ಯಾದಾಯೈಸ್ತೇ ಸಂಶ್ರಿತಃ—ಧರ್ಮಣಾಶ್ರೀರಾಮ ಧನುಷ್ಕೋಟ್ಯಾಯುಕ್ತಃ ಸೇತುರ್ಯೈಸ್ತೇ ಇತಿಚ—ಸೋಢೌ ಕ್ಷಾಂತೌ ಉಗ್ರೌ ವರ್ಷಂಚ ಆತಪಶ್ಚ ವರ್ಷಾತಪೌ ಯೈಸ್ತೇ ಅತಏವ ಶುದ್ಧಾಃ ನಿಷ್ಕಲ್ಮಷಾಃ ಇಮೇ ಕ್ಷಿತಿಭೃತಃ ರಾಜಾನಃ ಪರ್ವತಾಶ್ಚ—ಸಿಂಧೋಸ್ಸಮುದ್ರಸ್ಯ ಜಲೇ ಸ್ಥಿತ್ವಾ—ಘೋರಂ ದುಷ್ಕರಂ ತಪಃ ಕುರ್ವತೇ—ಅತಃ ಏತೇ ಕ್ಷಿತಿಭೃತಃ ಇಹಲೋಕೇ ಸಮುದ್ರೇಚ ಲಾವಣ್ಯಂ ಸೌಂದರ್ಯಂ ಲವಣರಸಂಚ ದಧತೀಃ— ತೀಕ್ಷ್ಣೈಃ ರತನೋರ್ಮನ್ಮಥಸ್ಯ ಆಶುಗೈಃ ಬಾಣೈ ರತನುಭಿಃ ಮಹದ್ಭಿ ರಾಶುಗೈರ್ವಾಯುಭಿಶ್ಚ—ನಿತ್ಯಂ ನೃತ್ಯಂತೀಃ ಉಲ್ಲಸಂತೀಃ ಪ್ರವರ್ಧಿತಾಶ್ಚ—ಅಮೂರ್ವೀಚೀಃ ವ್ಯಾಪ್ನುವಾನಾಃ—ಚಪಲಾಃ ಪುಂಶ್ಚಲೀಃ ಚಪಲಾಃ ಚಂಚಲಾಃ ವೀಚೀಃ ತರಂಗಾಂಶ್ಚ ಆಲೋಕ್ಯ ದೃಷ್ಟ್ವಾಪಿ ನಚಲಂತಿ ನವಿಕುರ್ವಂತಿ ನಭ್ರಮಂತೀಚ— ಚಪಲಾ ಕಮಲಾ ವಿದ್ಯುತ್ಪುಂಶ್ಚಲೀ ಪಿಪ್ಪಲೀಷ್ವಿತಿ ಕೋಶಃ—

ನಿತ್ಯಮೇವಲುಲಿತಾ ಇತಿಪಾಠೇತುತೀಕ್ಷ್ಣೈರತನ್ವಾಶುಗೈಃ—ಲುಲಿತಾಃ ಕ್ಷುಭಿತಾಃ ನೃತ್ಯಂತೀಃ ನೃತ್ತಂಕುರ್ವಂತೀಃ ಉಚ್ಚಲಂತೀಶ್ಚ ಅಮೂಃಸ್ತ್ರಿಯ ಇತಿಸರ್ವಂ ಪೂರ್ವವತ್ ||

ಅರ್ಥ || 'ಸಂಶ್ರಿತಧರ್ಮಸೇತವಃ' ಧರ್ಮದಮರ್ಯಾದೆಯನ್ನಾಶ್ರೈಸಿದವರಾದ (ಶ್ರೀ ರಾಮ ಚಂದ್ರನ ಧನುಷ್ಕೋಟಿಯಿಂದ ಯುಕ್ತವಾದ ಸೇತುವನ್ನಾಶ್ರೈಸಿದವರಾದ) ಬಿರುಸಾದ ಮಳೆ ಮತ್ತು ಬಿಸಿಲಿನುಗಿ ಸೈರಿಸಿ ಪವಿತ್ರರಾದ ಈ ಅರಸರು (ಪರ್ವತಗಳು) ಸಮುದ್ರನ ನೀರಿನಲ್ಲಿ ಕುಳಿತುಕೊಂಡು ಕಠಿಣವಾದ ತಪಶ್ಚರ್ಯೆಯನ್ನು ಮಾಡುತ್ತಾರೆ. ಆದರೂ ಈ ಅರಸರು (ಪರ್ವತಗಳು) ಲೋಕದಲ್ಲಿ (ಸಮುದ್ರದಲ್ಲಿ) ಲಾವಣ್ಯಂ, ಸೌಂದರ್ಯವನ್ನು (ಉಪ್ಪಿನ ಗುಣವನ್ನು) ಧರಿಸಿದಂಥಾ, ಕಠಿಣವಾದ ಅತನ್ವಾಶುಗೈಃ ಅಂದರೆ ಮನ್ಮಥನಬಾಣಗಳಿಂದ (ದೊಡ್ಡ ಘಾಳಿಯಿಂದ) ನಿಸ್ಸದ ಲ್ಲುಕುಣಿದಾಡುತ್ತಾ ಹೆಚ್ಚು ವ್ಯಾಪಿಸಿಕೊಳ್ಳುವ ಚಪಲಾಃ ಸ್ತ್ರೀಯರನ್ನು (ತೆರೆಗಳನ್ನು) ನೋಡಿ ಧೈರ್ಯಗೆಡುವದಿಲ್ಲ.

ಮೂ | ಕ್ಷಣಮಭಿಧ್ಯಾಯನ್ನಂಜಲಿಂಬಧ್ವಾ ||

ಶ್ಲೋ | ಅಸ್ತೋಕದೃಪ್ತಿರಪಿವಾರಿಧಿರೇಷಯಸ್ಮಾತ್ತ್ರಸ್ತೋಬಿ
ಭರ್ತಿವಿಪುಲೋಪಲಸಾಂದ್ರಸೇತುಂ | ಗೋಪಾಯತೇದುರಿತವಂ
ತಿಜಗಂತಿತಸ್ಮೈರ್ಕೋಪಾಯತೇರಘುಪತೇ ಮಹತೇನಮೋಸ್ತು
|| ೬೪೫ ||

ಟೀಕಾ || ಅಸ್ತೋಕೇತಿ || ಅಸ್ತೋಕಃ ಅನಲ್ಪಃ ದೃಪ್ತಿರ್ಗರ್ವೋಯಸ್ಯ ತಥೋಕ್ತೋಪಿ ಏಷವಾರಿಧಿರ್ಯಸ್ಮಾತ್ಕೋಪಾತ್ ತ್ರಸ್ತಃಸ್ಸ—ವಿಪುಲೈ ರುಪಲೈಃ ಪಾಷಾಣೈಃ ಸಾಂದ್ರಂ ಸೇತುಂ ಬಿಭರ್ತಿ—ತಸ್ಮೈ—ದುರಿತವಂತಿ ಜಗಂತಿ ಗೋಪಾಯತೇಸ್ವತ್ರಸ್ತ ಸಮುದ್ರ ಧೃತ ಸೇತುದ್ವಾರಾರಕ್ಷತೇ—ಮಹತೇ—ಹೇರಘುಪತೇ—ತೇತವ ಕೋಪಾಯನಮೋಸ್ತು ||

ಅರ್ಥ || ಒಂದು ಕ್ಷಣಪರ್ಯಂತ ಧ್ಯಾನ ಮಾಡಿ ಕೈಜೋಡಿಸಿ (ವಿಶ್ವಾವಸು ಹೇಳುತ್ತಾನೆ) ಹೇ ಶ್ರೀ ರಾಮಚಂದ್ರನೇ ಈ ಸಮುದ್ರನು ತುಂಬ ಗರ್ವ ಉಳ್ಳವನಾದಾಗ್ಯೂ ನಿನ್ನ ಕೋಪಕ್ಕೆ ಬೆದರಿ ದೊಡ್ಡ ಕಲ್ಲುಗಳಿಂದ ದಟ್ಟವಾಗಿ ಕಟ್ಟಲ್ಪಟ್ಟ ಸೇತುವೆಯನ್ನು ಹೊತ್ತುಕೊಂಡಿದ್ದಾನೆ. ಹೇ ರಘುಪತೇ ಪಾಪದಿಂದ ಪೀಡಿತವಾದ ಜಗತ್ತನ್ನು ಸಲಹುವ ಆ ನಿನ್ನ ಕೋಪಕ್ಕೆ ನಮಸ್ಕಾರವಿರಲೀ.

ಕೃಶಾನುಃ ||

ಶ್ಲೋ | ಕಾಕುತ್ಸ್ಥರೋಷಚಕಿತೇಃಕಮಿತಾನದೀನಾಮಸಾಸೀದ್ಯ
ದಾನನುಗುರುಪ್ಲವನಾರ್ಹತೋಯಃ | ಶಕ್ಯಸ್ತದೈಷತರಿತುಂಹರಿ
ಭಿಃಪದಾಭ್ಯಾಂಕಿಂವಾಘಲಂಕಥಯಸೇತುಕೃತಿಶ್ರಮಸ್ಯ ||೬೪೬||

ಟೀಕಾ || ಕಾಕುತ್ಸ್ಥೇತಿ || ಕಾಕುತ್ಸ್ಥಸ್ಯ ಶ್ರೀರಾಮಸ್ಯ ರೋಷಾಚ್ಚಕಿತಃ—ನದೀನಾಂ ಕಮಿತಾಭರ್ತಾ

ಸಮುದ್ರಃ–ಯದಾಯರ್ಹಿಗಿರೀಣಾಂ ದುರ್ಭರಶೈಲಾನಾಂ ಪ್ಲವನಾಯ ಉಲ್ಲಲನಾಯ ಅರ್ಹಂ ಶ್ರೋಯಂ ಯಸ್ಯತಥೋಕ್ತಃ–ಆಸೀತ್–ನನುಪೃಚ್ಛೇ– ತದಾತರ್ಹಿ– ಏವಃ ಸಮುದ್ರಃ– ಹರಿಭಿರ್ವಾನರೈಃ ಪದಾಭ್ಯಾಮೇವತರಿತುಂ ಶಕ್ಯಇತಿ ಹೇತೋಃ–ಸೇತೋಃ ಕೃತೇಃ ಕರಣಾತ್ ಯತ್ನ್ಯಮುಕ್ತಸ್ಯ ಫಲಂ ಕಿಂವಾಭವೇತ್– ತತ್ಕಥಯ ||

ಅರ್ಥ || ಶ್ರೀ ರಾಮನ ಶಿಟ್ಟಿಗೆ ಅಳುಕಿ ನದಿಗಳ ಪತಿಯಾದ ಸಮುದ್ರನು ಭಾರವಾದ ಪರ್ವತಗಳನ್ನು ತೇಲಾಡಿಸುವಂಥಾ ಜಲ ಉಳ್ಳವನಾದನಷ್ಟೇ? ಹಾಗಾದರೆ ಅಂಥಾ ಸಮುದ್ರನನ್ನು ವಾನರಗಳು ಕಾಲುನಡೆಯಾಗಿ ದಾಟ ಕೊಡುತ್ತಿದ್ದರು. ಸೇತು ಕಟ್ಟುವ ಒಣಾ ಕಷ್ಟ ಯಾಕೆ? ಹೇಳು ನೋಡುವಾ.

ವಿಶ್ವಾವಸುಃ ||

ಮೂ| ತತ್ಕಥಿತಮೇವಮಯಾ| ಭವತಾತುನಸಮ್ಯಗವಧಾರಿತಂ|
ಶೃಣುತರ್ಹಿಪುನಸ್ಸಾವಧಾನಃ || ೬೮೭ ||

ಟೀಕಾ || ತದಿತಿ || ಅವಧಾರಿತಂಗೃಹೀತಂ ||

ಅರ್ಥ || ಅದನ್ನು ಮೊದಲೇ ನಾನು ಹೇಳಿದೆ, ಆದರೆ ನೀನು ಚೆನ್ನಾಗಿ ಮನಸ್ಸಿನಲ್ಲಿ ಟ್ಟುಕೊಳ್ಳಲಿಲ್ಲ. ಹಾಗಾದರೆ ತಿರುಗಿ ಚೆನ್ನಾಗಿ ಮನಸ್ಸು ಕೊಟ್ಟು ಕೇಳು.

ಶ್ಲೋ| ಅಂಭೋರಾಶಿಂವಾನರಾಲಂಘಯಂತ್ವಿತ್ಯೇತದ್ವ್ಯಾಜೀಕೃತ್ಯರಾಜೀವನೇತ್ರಃ | ಅಂಹೋರಾಶೇರ್ಲಂಘನಾರ್ಥಂನರಾಣಾಂ
*ಉದ್ನಾಂರಾಶೌಸೇತುಮುಚ್ಚೈರಬಧ್ನಾತ್ || ೬೮೮ ||

ಟೀಕಾ || ಅಂಭ ಇತಿ || ವಾನರಾಃ–ಅಂಭೋರಾಶಿಂ ಸಮುದ್ರಂ–ಲಂಘಯಂತು– ಇತ್ಯುಕ್ತ ಪ್ರಕಾರಂ ಏತತ್ ವಾನರಸಮುದ್ರ ಲಂಘನಂ ವ್ಯಾಜೀಕೃತ್ಯ–ರಾಜೀವನೇತ್ರಃ ಶ್ರೀರಾಮಃ–ನರಾಣಾಂ ಅಂಹಸಾಂ ಪಾಪಾನಾಂ ರಾಶೇಃ ಲಂಘನಾರ್ಥಂ ಉದ್ನಾಂ ಉದಕಾನಾಂ ರಾಶೌ–ಪದ್ದನ್ನಿತ್ಯಾದಿನಾ ಉದಕಶಬ್ದಸ್ಯ ಉದನ್ನಾದೇಶಃ–ಉಚ್ಚೈರುನ್ನತಂಸೇತುಂ–ಅಬಧ್ನಾತ್ ಬದ್ಧವಾನ್ ||

ಅರ್ಥ || ವಾನರಗಳು ಸಮುದ್ರದಾಟಲಿ ಎಂಬ ನೆವನ ತೋರಿಸಿ, ಮನುಷ್ಯರು ಪಾಪದ ಕಡಲನ್ನು ದಾಟುವದಕ್ಕೋಸ್ಕರವಾಗಿ ತಾವರೆಗಂಣನಾದ ಶ್ರೀ ರಾಮನು ಸಮುದ್ರದ ಮೇಲೆ ಎತ್ತರವಾದ ಸೇತುವನ್ನು ಕಟ್ಟುವಂಥಾವನಾದನು.

ಮೂ| ಪುನರ್ನಿರೂಪ್ಯ | ಶ್ಲೋ| ನಸಾಗರೋಸೌನಭವಪಿವಘೋ
ನವ್ರಜಾನಚಾಪಿಸಾಪಿಪುಲೋಡುವರ್ಗಾಃ | ನಸೇತುರೇಷೋಪಿ
ನಿಶಾಚರಾಣಾಂನೃಪಾತಕಾನಾಮಪಿಧೂಮಕೇತುಃ || ೬೮೯ ||

---

* ಅಂಭೋರಾಶೌ ಇತಿಪಾಠಾಂತರಮ್ ||

ಟೀಕಾ ॥ ನೇತಿ ॥ ಅಸೌಪ್ರರೋಽವಶಿಷ್ಟ—ಸಾಗರಃನ—ಕಿಂತುನಭಃ ಆಕಾಶಮೇವ— ಅವಿಶೇಷೇಣ ಪ್ರಜಾಃ ನ— ಕಿಂತುವಿಪುಲಾನಾಂ ಸ್ಥೂಲಾನಾಂ ಉಡೂನಾಂ ನಕ್ಷತ್ರಾಣಾಂ ವರ್ಗಾಃ ವೃಂದಾನಿ—ವಿಷೋಽಪಿನಸೇತುಃ ಕಿಂತು ನಿಶಾಚರಾಣಾಂ ನೃಪಾತಕಾನಾಂ ಮನುಷ್ಯ ಪಾಪಾನಾಂಚ ಧೂಮಕೇತುಃ ಉತ್ಪಾತವಿಶೇಷಃಬಾಲ ನಕ್ಷತ್ರರೂಪಃ ॥

ಅರ್ಥ ॥ ಮತ್ತು ಚೆನ್ನಾಗಿ ಆಲೋಚಿಸಿ ( ವಿಶ್ವಾವಸು ಹೇಳುತ್ತಾನೆ. ) ನಮ್ಮೆದುರಿಗೆ ಕಾಣಬರುವದು ಇದು ಸಮುದ್ರವಲ್ಲವು, ಆಕಾಶವೇ ; ಇವುಗಳು ನೊರೆಗುಂಪೆಗಳಲ್ಲವು ಸ್ಥೂಲವಾದ ನಕ್ಷತ್ರಗಳ ರಾಶಿಗಳೇ ; ಇದು ಸೇತುವಲ್ಲವು, ರಾಕ್ಷಸರ ಮತ್ತು ಮನುಷ್ಯ ಪಾಪಗಳ ಧೂಮಕೇತು ಅಂದರೆ ಬಾಲಚುಕ್ಕಿಯೇ.

ಮೂ । ಪಶ್ಯಾತ್ರಜಲಚರಭ್ರಮಚಮತ್ಕಾರಂ ॥ ೯೦ ॥

ಟೀಕಾ ॥ ಪಶ್ಯೇತಿ ॥ ಜಲಚರಾಣಾಂ ಮತ್ಸ್ಯಾದೀನಾಂ ಭ್ರಮಸ್ಯ ವಿಪರೀತ ಜ್ಞಾನಸ್ಯ ಚಮತ್ಕಾರಂ ಮಹಾತ್ಮ್ಯಂ ॥

ಅರ್ಥ ॥ ನೋಡು ಇಲ್ಲಿ ಮೀನುಗಳು ಮರುಳುಗೊಳ್ಳುವ ಆಶ್ಚರ್ಯ.

ಶ್ಲೋ । ಗಜೇಂದ್ರಬುದ್ಧ್ಯಾನಲಸೇತುಶೈಲಾನ್ ಗ್ರಾಹಾಗ್ರಸಂತೇ
ಜಲಧೌವಸಂತಃ। ತದಗ್ರಸಜಾಯಾಸಸಮುತ್ಥದಂಷ್ಟ್ರಾವ್ಯಥಾಃ
ಪ್ರಧಾವಂತಿಯಥಾಗತಂತೇ ॥ ೯೧ ॥

ಟೀಕಾ ॥ ಗಜೇತಿ ॥ ಜಲಧೌವಸಂತಃ ಗ್ರಾಹಾಃ ಮಕರಾಃ—ನಲಸ್ಯಸೇತೌ ಯೇಶೈಲಾಃ ತಾನ್—ಗಜೇಂದ್ರಾ ಇತಿಬುದ್ಧ್ಯಾ ಭ್ರಮೇಣ—ಗ್ರಸಂತೆ ಕಬಳಯಂತಿ—ತೇಷಾಂ ಶೈಲಾನಾಂ ಗ್ರಾಸಾಜ್ಜಾಯತ ಇತಿ ತಜ್ಜಾತ್ ಆಯಾಸಾತ್ ಸಮುತ್ಥಾದಂಷ್ಟ್ರಾಣಾಂ ವ್ಯಥಾಯೇಷಾಂ ತಥೋಕ್ತಾಸ್ಸಂತಃ—ತೇಗ್ರಾಹಾಃ— ಯಥಾಗತಂ ಆಗತದೇಶಮನತಿಕ್ರಮ್ಯ— ಪ್ರಧಾವಂತಿ ॥

ಅರ್ಥ ॥ ಸಮುದ್ರದೊಳಗಿರುವ ಮೊಸಳೆಗಳು ನಲಸೇತುವೆಯ ಪರ್ವತಗಳನ್ನು ಆನೆಗಳೆಂದು ತಿಳಿದು ಅವುಗಳನ್ನು ನುಂಗಬೇಕೆಂತ ಮಾಡಿ ಅದರಿಂದ ಉಂಟಾಗುವ ಬಳಲಿಕೆಯಿಂದ ನೋಯುವ ದಾಡೆಗಳುಳ್ಳವುಗಳಾಗಿ ಎಲ್ಲಿಂದ ಬಂದವೋ ಅಲ್ಲಿಗೆ ತಿರಿಗಿ ಓಡುತ್ತವೆ.

ಶ್ಲೋ । ಡಿಂಡೀರಖಂಡಾನ್ವಯಪಾಂಡುರಾಭಂದ್ರಾಘಿಷ್ಠಮುಚ್ಚೈಃ
ಪರಿಣಾಹವಂತಂ । ಕಾಕುತ್ಸ್ಥಸೇತುಂಕಲಯೇಗುಣಾಢ್ಯಂಧೌ
ತೋತ್ತರೀಯಂಧೃತಮರ್ಣವೇನ ॥ ೯೨ ॥

ಟೀಕಾ ॥ ಡಿಂಡೀರೇತಿ ॥ ಡಿಂಡೀರಖಂಡಾನಾಂ ಫೇನಪುಂಜಾನಾಂ ಅನ್ವಯೇನ ಸಂಪರ್ಕೇಣ ಪಾಂಡುರಾ ಆಭಾಯಸ್ಯತಂ—ದ್ರಾಘಿಷ್ಠಂ ಸುದೀರ್ಘಂ—ಉಚ್ಚೈಃ ಪರಿಣಾಹವಂತಂ ಅತಿವಿಸ್ತೀರ್ಣಂ—ಗುಣೈಃ ಪಾಪನಿರ್ಹರಣಾದಿಭಿಃ ತಂತುಭಿಶ್ಚ—ಆಢ್ಯಂ ಪೂರ್ಣಂ— ಕಾಕುತ್ಸ್ಥಸೇತುಂ ಅರ್ಣವೇನಧೃತಂ—ಧೌತಂ ಶುಭ್ರಂ ಉತ್ತರೀಯಂ—ಕಲಯೇಮನ್ಯೇ ॥

ಅರ್ಥ ॥ ನೊರೆಯ ಗುಂಪಿನ ಸಂಪರ್ಕದಿಂದ ಬಿಳುಪೇರಿದಂಥ, ಉದ್ದವಾದಂಥ ಬಹು

ಳ ವಿಸ್ತಾರವಾದಂಥ ಗುಣಗಳಿಂದ ( ನೂಲುಗಳಿಂದ ) ತುಂಬಿರುವಂಥ ಶ್ರೀರಾಮನ ಸೇತುವೆಯು ಸಮುದ್ರನು ಉಟ್ಟುಕೊಂಡ ಬಿಳೆ ಧೋತ್ರವೆಂದು ತಿಳಕೊಳ್ಳುತ್ತೇನೆ.

ಶ್ಲೋ । ಚಿರಾದ್ಧರಾಭೂರಿಭರಾರ್ತಮೂರ್ತಿರ್ಹರಿತ್ಕರಿಷ್ವರ್ಪಿತ ನೈಜಕೃತ್ಯಃ । ಶ್ರಮಕ್ಷಯಾಯಾರ್ಣವವಾರಿಶೀತೇ ಶೇತೆಸಕಿಂಸೇತುಮಿಷೇಣಶೇಷಃ ॥ ೭೩ ॥

ಟೀಕಾ ॥ ಚಿರಾದಿತಿ ॥ ಚಿರಾತ್ ಧರಾಯಾಃ ಭುವಃ ಸಂಬಂಧಿನಾಭೂರಿಣಾ ಭರೇಣ ಭಾರೇಣ ಆರ್ತಮೂರ್ತಿಃ— ಅತಏವಹರಿತ್ಕರಿಷು ದಿಗ್ಗಜೇಷು ಅರ್ಪಿತಂ ನೈಜಂ ಸ್ವೀಯಂ ಕೃತ್ಯಂ ಭೂಭರಣಕಾರ್ಯಂ ಯೇನ ತಥೋಕ್ತಃ— ಸಃಪ್ರಸಿದ್ಧಃಶೇಷಃ— ಶ್ರಮಸ್ಯ ಭೂಭರಣಾಯಾಸಸ್ಯ ಕ್ಷಯಾಯ— ಶೀತೇಅರ್ಣವಸ್ಯ ವಾರಿಜಲೇಸೇತೋರ್ಮಿಷೇಣ— ಶೇತೇಕಿಮಿತಿ ಸಾಪಹ್ನವೋತ್ಪ್ರೇಕ್ಷಾ ॥

ಅರ್ಥ ॥ ಬಹಳ ಕಾಲದಿಂದ ಭೂಮಿಯ ಮಿಗಲಾದ ಭಾರವನ್ನು ಹೊತ್ತುಕೊಂಡು ಬಸವಳಿದ ಶರೀರವುಳ್ಳವನಾಗಿ, ಆ ಪ್ರಸಿದ್ಧನಾದ ಮಹಾಶೇಷನು ತನ್ನ ಕೆಲಸವನ್ನು -ಅಂದರೆ ಭೂಮಿ ಹೊರುವ ಕೆಲಸವನ್ನು -ಅಷ್ಟದಿಗ್ಗಜಗಳಿಗೆ ಅಂದರೆ ಎಂಟು ದಿಕ್ಕುಗಳಾನೆಗಳಿಗೆ ಒಪ್ಪಿಸಿ, ದಣುವು ಆರಿಸಿಕೊಳ್ಳಲಿಕ್ಕೆ ತಂಪಾದ ಸಮುದ್ರ ನೀರಿನಲ್ಲಿ ಸೇತು ರೂಪದಿಂದ ಮಲುಗಿದ್ದಾನೋ ಎಂಬಂತೆ ತೋರಿ ಬರುತ್ತದೆ.

ಮೂ ॥ ವಿಮೃಶ್ಯಸಶ್ಲಾಘಂ ॥

ಶ್ಲೋ । ಯಃಪುರಾಪಾಪದಶಕಚ್ಛೇದೆಸಾಧನತಾಂಗತಃ । ಸಸೇತುರ್ನಕಥಂಶಕ್ತಃಪಾಪಪಂಚಕಭಂಜನೇ ॥ ೭೪ ॥

ಟೀಕಾ ॥ ಯಇತಿ ॥ ಯಸ್ಸೇತುಃ—ಪುರಾರಾಮಾವತಾರೇ— ಪಾಪಾನಾಂ ದಶಕಸ್ಯಚ—ಪಾಪಸ್ಯ ದಶಕಾನಿಶಿರಾಂಸಿಯಸ್ಯತಸ್ಯ ರಾವಣಸ್ಯ ಛೇದೇವಧೇ ಸಾಧನತಾಂ ಕಾರಣತ್ವಂಗತಃ— ಸಃಸೇತುಃ—ಪಾಪಾನಾಂ ಬ್ರಹ್ಮಹತ್ಯಾದೀನಾಂ ಪಂಚಕಸ್ಯ ಭಂಜನೇ ವಿಷಯೇ—ಕಥಂ ನಶಕ್ತಃ—ಶಕ್ತ ಏವೇತ್ಯರ್ಥಃ—ಶತೇ ಪಂಚಾಶದಿತಿ ಸಂಭವ ಪ್ರಮಾಣ ಸಿದ್ಧತ್ವಾದಿತಿಭಾವಃ ॥

ಅರ್ಥ ॥ ಆಲೋಚಿಸಿ ಸ್ತುತಿ ಪೂರ್ವಕವಾಗಿ ವಿಶ್ವಾವಸು ಹೇಳುತ್ತಾನೆ. ಯಾವ ಸೇತುವು ರಾಮಾವತಾರದಲ್ಲಿ ಪಾಪದಶಕದ ರಾಶಿಯಾದ ರಾವಣನನ್ನು ನಾಶಮಾಡಲಿಕ್ಕೆ ಸಾಧನವಾಯಿತೋ ಆ ಸೇತುವು ಪಾಪಪಂಚಕವಂದರೆ ಬ್ರಹ್ಮಹತ್ಯವೇ ಮೊದಲಾದ ಪಂಚ ಮಹಾಪಾತಕ ರಾಶಿಯನ್ನು ನಶಿಸಲಿಕ್ಕೆ ಯಾಕೆ ಶಕ್ತವಲ್ಲವು? ಶಕ್ತವಾಗಿದೆ ಎಂಬರ್ಥವು.

## ತಾಮ್ರಪರ್ಣೀ ವರ್ಣನಮ್ ॥

ಮೂ । ಇತಿಪರಾವೃತ್ತ್ಯಾನ್ಯತೋವಿಲೋಕ್ಯಸಾಮೋದಂ ॥ ೭೫ ॥

ಟೀಕಾ ॥ ಇತೀತಿ ॥ ಪರಾವೃತ್ಯ ಪಶ್ಚಾನ್ನಿವೃತ್ಯ ॥

ಅರ್ಥ ॥ ಇಂತೆಂದು ಹಿಂತಿರುಗಿ ಬೇರೆ ಕಡೆಗೆ ನೋಡಿ ಆನಂದದಿಂದ ( ವಿಶ್ವಾವಸು ಹೇಳುತ್ತಾನೆ. )

ಶ್ಲೋ। ತಾಪಂವಿಲುಂಪತಿನೃಣಾಮಿಹತಾಮ್ರಪರ್ಣೀತ್ಯಾಖ್ಯಾಂ ವಹನ್ಭವದವಾನಲಜೃಂಭಿತೋತ್ಥಂ । ಪಾಥೋನಿಧೇಸ್ತ್ರಿಜಗತಿಪ್ರಥಿತೋವರೋಧೋರೋಧೋಲ್ಲಸತ್ಪರಮಹಂಸಮಹರ್ಷಿಯೂಥಃ ॥ ೯೬ ॥

ಟೀಕಾ ॥ ತಾಪಮಿತಿ ॥ ರೋಧಸೋಸ್ತೀರಯೋರ್ಲಸತ್ ಪರಮ ಹಂಸಾನಾಂ ಮಹರ್ಷೀಣಾಂ ಯೂಥಂ ಯಸ್ಯಸಃ—ತ್ರಿಜಗತಿ ಲೋಕತ್ರಯೇ—ಪ್ರಥಿತಃ ಪ್ರಸಿದ್ಧಃ ತಾಮ್ರಪರ್ಣೀತ್ಯುಕ್ತ ಪ್ರಕಾರಾಂ ಆಖ್ಯಾಂ ನಾಮ—ವಹನ್—ಪಾಥೋನಿಧೇರಬ್ಧೇರವರೋಧಃ ಅಂತಃಪುರಸ್ತ್ರೀ—ತಾಮ್ರಪರ್ಣೀನದೀತಿಯಾವತ್—ಭವಸ್ಸಂಸಾರಏವ ದವಾನಲಃ ತಸ್ಯಜೃಂಭಿತಾತ್ ವೃದ್ಧೇರುತ್ಥಂ ನೃಣಾಂ ತಾಪಂ ಮನೋವ್ಯಥಾಂ—ವಿಲುಂಪತಿನಾಶಯತಿ ॥

ಅರ್ಥ ॥ ಸಂತೋಷಾತಿಶಯದಿಂದ ಶೋಭಿಸುವ ಮಹರ್ಷಿಗಳ ಸಮೂಹಕ್ಕೆ ನೆಲೆಯಾದ ದಂಡೆಗಳುಳ್ಳಂಥ ತಾಮ್ರಪರ್ಣಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿ ಸಮುದ್ರದಅಂತಃಪುರದ ಸ್ತ್ರೀತ್ವಪಡದಂಥ ಅಂದರೆ ಸಮುದ್ರಕ್ಕೆ ಕೂಡಿದಂಥ ತಾಮ್ರಪರ್ಣಿ ನದಿಯು ಸಂಸಾರವೆಂಬ ಬೆಂಕಿಯಿಂದ ಮನುಷ್ಯರಿಗೆ ಆಗುವ ಕೋಟಲೆಯನ್ನು ನಾಶಪಡಿಸುತ್ತದೆ.

ಮೂ। ತದಭ್ಯರ್ಣಂನಿರ್ವರ್ಣ್ಯ ॥ ೯೭ ॥

ಟೀಕಾ ॥ ತದಿತಿ ॥ ತಸ್ಯಾಃ ತಾಮ್ರಪರ್ಣ್ಯಾಃ ಅಭ್ಯರ್ಣಂ ಸಮೀಪದೇಶಂ ॥

ಅರ್ಥ ॥ ತಾಮ್ರಪರ್ಣಿ ನದಿ ಸಮೀಪದ ಪ್ರದೇಶವನ್ನು ನೋಡಿ (ವಿಶ್ವಾವಸು ಹೇಳುತ್ತಾನೆ.)

## ಕುರುಕಾನಗರ ಶ್ರೀ ಶಠಕೋಪಮುನಿ ವರ್ಣನಮ್ ॥

ಶ್ಲೋ। ಚಕಾಸ್ತಿಕುರುಕಾಪುರೀಶುಚಿನಿತಾಮ್ರಪರ್ಣೀತಟೀವಿರಕ್ತಿಪರಿಪಕ್ತ್ರಿಮತ್ರಿಯುಗಭಕ್ತಿಭಿರ್ವೈಷ್ಣವೈಃ। ದೃಢವ್ರತಶಠಾರ್ಯುರೋನಕುಳಸಂಪತದ್ಬಂಭರಧ್ವನಿದ್ವಿಗುಣಜೃಂಭಣದ್ರವಿಡವೇದಘೋಷೋಜ್ಜ್ವಲಾ ॥ ೯೮ ॥

ಟೀಕಾ ॥ ಚಕಾಸ್ತೀತಿ ॥ ಶುಚಿನಿಪರಿಶುದ್ಧೇ— ತಾಮ್ರಪರ್ಣೀತಟೇ— ದೃಢವ್ರತಸ್ಯ ಶಠಾರೇಃ ಶಠಕೋಪಸ್ಯ ನಾಮವೈಷ್ಣವಯೋಗಿನಃ ಉರೋಗತೇಬಕುಳಮಾಲ್ಯೇಸಂ ಪತತಾಂ ಪ್ರವಿಶತಾಂ ಬಂಭರಾಣಾಂ ಭೃಂಗಾಣಾಂ ಧ್ವನಿನಾದ್ವಿಗುಣಾಂ ದ್ವಿರಾವೃತ್ತಾಂ ಜೃಂಭಣಾಂ ವ್ಯಾಪನಂ ಯಸ್ಯ ತಾದೃಶೇನ ದ್ರವಿಡ ವೇದಸ್ಯ ಪ್ರಬಂಧಸ್ಯ ಘೋಷೇಣ ಅನುಸಂಧಾನ ಜನ್ಯೇನ ಉಜ್ಜ್ವಲಾ—ಕುರುಕಾನಾಮಪುರೀ—ವಿರಕ್ತೇರ್ವೈರಾಗ್ಯಸ್ಯ ಪರಿಪಕ್ತ್ರಿಮಾಫಲಾತ್ಮಿಕಾ ತ್ರಿಯುಗೇ ಭಗವತಿ ಭಕ್ತಿರ್ಯೇಷಾಂತೈಃ ವೈಷ್ಣವೈರುಪಲಕ್ಷಿತಾ—ಚಕಾಸ್ತಿ ಪ್ರಕಾಶತೇ ॥

ಅರ್ಥ ॥ ಸ್ಥಿರವಾದ ಭಕ್ತಿಯುಳ್ಳ ಶಠಗೋಪ ಮುನಿಯ ಕೊರಳಿನಲ್ಲಿರುವ ಬಕುಳ ಹೂಗಳ ಮಾಲೆಗೆರಗುವದುಂಬಿಗಳ ಧ್ವನಿಯಿಂದ ಇಮ್ಮಡಿಯಾಗಿ ಪರುವ ದ್ರವಿಡಪ್ರಬಂಧ ಘೋ

ಷದಿಂದೆಸೆಯುವಂಥ ಕುರುಕಾ ಎಂಬ ಪುರವು ತುಂಬ ವೈರಾಗ್ಯದಿಂದ ಹುಟ್ಟುವ ಭಗವದ್ಭಕ್ತಿಯಿಂದ ಯುಕ್ತರಾದ ವೈಷ್ಣವರಿಂದ ಒಪ್ಪುತ್ತದೆ.

ಮೂ। ಅತ್ರತ್ಯಾನಾಂಧರ್ಮನಿತ್ಯಾನಾಂಹರಿಭೃತ್ಯಾನಾಮಿತ್ಥಮನುಸಂಧಾನಂ ॥

ಶ್ಲೋ। ಪರಿಸ್ಫುಟವತೇಸಹಸ್ರಶಾಖಾಂಪರಮಾಂದ್ರಾವಿಡಸಂಹಿತಾಂಹಿತಾಂನಃ। ಗುರವೇಕರವಾಮನಿತ್ಯಮಸ್ಮೈಶಠಕೋಪಾಯಮಹರ್ಷಯೇಪ್ರಣಾಮಾನ್ ॥ ೧೯೯ ॥

ಟೀಕಾ ॥ ಪರೀತಿ ॥ ಸಹಸ್ರಾಣಿ ಚತ್ವಾರಿ ಶಾಖಾಃ ಖಂಡಿಕಾಃ ಯಸ್ಯಾಸ್ತಾಂ ಪರಮಾಂ ಸರ್ವೋತ್ಕೃಷ್ಟಾಂ ಹಿತಾಂ ದ್ರಾವಿಡೀಂ ದ್ರವಿಡ ಭಾಷಾಮಯೀಂ ಸಂಹಿತಾಂ ಪ್ರಬಂಧಂನಃ ಅಸ್ಮಭ್ಯಂ ಪರಿಸ್ಫುಟವತೇ ನಿರ್ಮಾಯ ಪ್ರದಾತ್ರೇ ಶಠಕೋಪಾಯ ಮಹರ್ಷಯೇ ಗುರವೇ ನಿತ್ಯಂ ಪ್ರಣಾಮಾನ್ ಕರವಾಮ ॥

ಅರ್ಥ ॥ ಇಲ್ಲಿಯ ನಿಶ್ಚಲವಾದ ಧರ್ಮನಿಷ್ಠೆಯುಳ್ಳ ವಿಷ್ಣುಭಕ್ತರ ಪ್ರಾರ್ಥನೆ ಏನಂದರೆ: ಸಾವಿರದ ನಾಲುಗು ಭಾಗಗಳುಳ್ಳಂಥಾ ಮತ್ತು ಸರ್ವಶ್ರೇಷ್ಠವಾದಂಥಾ ತಮಿಳು ಭಾಷೆಯ ಪ್ರಬಂಧವನ್ನು ನಮ್ಮಗೋಸ್ಕರವಾಗಿ ರಚಿಸಿ ಇತ್ತ ಮಹರ್ಷಿಯಾದ ಶಠಕೋಪ ಗುರುವಿಗೆ ನಿತ್ಯದಲ್ಲೂ ನಮಸ್ಕಾರಗಳನ್ನು ಮಾಡುವಾ.

ಶ್ಲೋ । ಅಂಚಾಮಚಿಂಚಾತರುಮದ್ಭುತಂತಂಪಂಚಾಮರದ್ರೂನವಧೀರಯಂತಂ। ಶಠಾರಿಸಂಜ್ಞಂಕಿಲಯಸ್ಯಮೂಲೇತಪಃಫಲಂಕಿಂಚಿದುದಂಚಿತಂನಃ ॥ ೨೦೦ ॥

ಟೀಕಾ ॥ ಅಂಚಾಮೇತಿ ॥ ಯಸ್ಯಚಿಂಚಾತರೋರ್ಮೂಲೇ ಶಠಾರಿಸಂಜ್ಞಂ ಕಿಂಚಿತ್ ಅನಿರ್ವಾಚ್ಯಂನಃ ಅಸ್ಮತ್ಸಂಬಂಧಿ ತಪಃ ಫಲಮುದಂಚಿತಂ ಆವಿರ್ಭೂತಂ– ತಂಪಂಚಅಮರದ್ರೂನ್ ಮಂದಾರಾದೀನ್ ಅವಧೀರಯಂತಂ ತಿರಸ್ಕುರ್ವಂತಂ ಅದ್ಭುತಂ ಚಿಂಚಾತರುಂತಿಂತ್ರಿಣೀವೃಕ್ಷಂ ಅಂಚಾಮಪೂಜಯಾಮಃ ॥

ಅರ್ಥ ॥ ಸ್ವರ್ಗವೃಕ್ಷಗಳಾದ ಮಂದಾರಾದಿಗಳನ್ನು ತಿರಸ್ಕರಿಸುವ ಯಾವ ಹುಣಸೆ ಮರದ ಬುಡದಲ್ಲಿ ಶಠಾರಿ ಎಂಬ ಹೆಸರಿನ ವರ್ಣಿಸಲಿಕ್ಕಶಕ್ಯವಾದಂಥ ತತ್ವದರವೆಷ್ಟು ಭಾಗವು ನಮ್ಮ ತಪಶ್ಚರ್ಯದ ಫಲವಾಗಿ ಕಾಣಿಸಿಕೊಂಡಿತೊ, ಆ ಆಶ್ಚರ್ಯಕರವಾದು ಹುಣಸೆ ಮರವನ್ನು ನಾವು ಪೂಜಿಸುವಾ.

ಮೂ। ಯದ್ವಾ। ಶ್ಲೋ। ದಿಶಕ್ಶ್ರಿತಾನಾಮಮೃತಾತ್ಮಕಂಫಲಂವಿಲಕ್ಷಣೋಭಾತಿಸತಿಂತ್ರಿಣೀತರುಃ। ಸಹಸ್ರಶಾಖಂದ್ರವಿಡಾಗಮಂಸೃಜನ್ಸಯಸ್ಯಮೂಲಂಸಮುಪಾಶ್ರಿತೋಮುನಿಃ ॥೨೦೧ ॥

ಟೀಕಾ ॥ ದಿಶನ್ನಿತಿ ॥ ಸಹಸ್ರಶಾಖಂದ್ರವಿಡಾಗಮಂ ಸೃಜನ್ ಸಪ್ರಸಿದ್ಧೋಮುನಿಃಶಠಾರಿಃ ಯಸ್ಯತಿಂತ್ರಿ

40

ಣೀತರೋರ್ಮೂಲಂ ಸಮುಪಾಶ್ರಿತಃ—ಸಂಶ್ರಿತಾನಾಂ ಸೇವಕಾನಾಂ ಅಮೃತಾತ್ಮಕಂ ಮೋಕ್ಷರೂಪಂ ಫಲಂ ದಿಶನ್ ಪ್ರಯಚ್ಛನ್— ದ್ರಾವಿಡವೇದದ್ರಷ್ಟೇತಿಶೇಷಃ— ಅತಏವ ವಿಲಕ್ಷಣಃ ಅದ್ಭುತಸ್ಸನ್—ಭಾತಿ ||

ಅರ್ಥ || ಅಥವಾ || ಸಹಸ್ರಖಂಡಗಳುಳ್ಳ ದ್ರಾವಿಡ ಪ್ರಬಂಧವನ್ನು ರಚಿಸಿ ಆ ಪ್ರಸಿದ್ಧನಾದ ಶಠಾರಿ ಮುನಿಯು ಯಾವ ಹುಣಸೆ ಮರದ ಬುಡದಲ್ಲಿ ಆಶ್ರಯ ತೆಗದುಕೊಂಡನೊ, ಆ ಹುಣಸೆ ಮರವು ಭಕ್ತರಿಗೆ ಅಮೃತರೂಪವಾದ ಮುಕ್ತಿಯನ್ನು ಪಾಲಿಸಿ ಆಶ್ಚರ್ಯಕರವಾಗಿ ಪ್ರಕಾಶಿಸುತ್ತದೆ.

ಶ್ಲೋ || ಹರಿಮಿವಕೃತಾವತರಣಂಬಕುಳಾಭರಣಂವೃಣೀಮಹೇಶರಣಂ ಧ್ಯೇಯಂಯಂವಿದುರಾರ್ಯಾಮುಮುಕ್ಷುಭಿರ್ಯತ್ಪ್ರಬಂಧಮಧ್ಯೇಯಂ || ೭೦೨ ||

ಟೀಕಾ || ಹರಿಮಿತಿ || ಬಕುಳಾಭರಣಂ ಶಠಕೋಪಂ ಶರಣಂ ರಕ್ಷಕಂ ವೃಣೀಮಹೇಸ್ವೀಕುರ್ಮಃ— ಯಂಶಠಕೋಪಂ—ಮುಮುಕ್ಷುಭಿಃ ಧ್ಯೇಯಂಧ್ಯಾತವ್ಯಂ—ಆರ್ಯಾಃ ಪೂಜ್ಯಾಃ ಯಸ್ಯಪ್ರಬಂಧಂ ದ್ರಾವಿಡಂ ಮುಮುಕ್ಷುಭಿಃ ಅಧ್ಯೇಯಂ ಅಧ್ಯೇತುಂ ಯೋಗ್ಯಂ— ವಿದುಃ— ತಮಿತಿಸಂಬಂಧಃ ||

ಅರ್ಥ || ಬಕುಳಪುಷ್ಪ ಮಾಲೆಯಿಂದ ಅಲಂಕೃತನಾದ ಧ್ಯಾನಿಸಲ್ಪಡಲಿಕ್ಕೆ ಯೋಗ್ಯನೆಂದು ಶ್ರೇಷ್ಠರಿಂದೆಣಿಸಲ್ಪಡುವಂಥಾವನಾದ, ಮೋಕ್ಷವನ್ನೆಳೆಸುವವರು ಅಧ್ಯಯನ ಮಾಡತಕ್ಕಂಥ ಪ್ರಬಂಧವನ್ನು ರಚಿಸಿದಂಥಾವನಾದ ಶಠಗೋಪ ಮುನಿಯನ್ನು ಅವತಾರವನ್ನು ಧರಿಸಿ ಪ್ರಕಟನಾದ ವಿಷ್ಣುವಿನಂತೆ ರಕ್ಷಕನಾಗಿ ಸ್ವೀಕರಿಸುತ್ತೇವೆ.

ಶ್ಲೋ || ತಸ್ಮಿನ್ಮತಿರ್ಮೇಸ್ತುದೃಢಾಶಠಾರೌಗಾಯಂತಿಉಚ್ಚೈರ್ಯದಿಹಯಸ್ಯಗಾಥಾಃ | ಪ್ರಹಾಯದೇಹಂಪ್ರಥಯಂತಿದಿವ್ಯೇಪದೇಹಮನ್ನಾದಇತಿಪ್ರಗೀತೇ ||೭೦೩ ||

ಟೀಕಾ || ತಸ್ಮಿನ್ನಿತಿ || ಯಸ್ಯಶಠಾರೇಃ ಸಂಬಂಧಿನೀಃ ಗಾಥಾಃ ಪ್ರಬಂಧರೂಪಾಃ ಉಚ್ಚೈಃಗಾಯಂತಃ ಪಠಂತಃ ಜನಾಃ ಇಹದೇಹಂಮಾನುಷಂ ಪ್ರಹಾಯ—ಅಹಮನ್ನಾದಇತಿಶ್ರುತ್ಯೇತಿಶೇಷಃ—ಪ್ರಕರ್ಷೇಣಗೀತೇ ಪ್ರಸಿದ್ಧೇಪದೇವೈಕುಂಠೇ—ಪ್ರಥಯಂತಿವರ್ಧಯಂತೆ—ತಸ್ಮಿನ್ ಶಠಾರೌಮೇದೃಢಾಮತಿರಸ್ತು ||

ಅರ್ಥ || ಈ ಲೋಕದಲ್ಲಿ ಜನರು ಯಾವ ಶಠಾರಿ ಮುನಿಯ ಪ್ರಬಂಧವನ್ನು ಘಟ್ಟಯಾದ ಸ್ವರದಿಂದ ಹಾಡಿ ಸ್ಥೂಲ ಶರೀರವನ್ನು ತ್ಯಜಿಸಿ „ ಅಹಮನ್ನಾದ " ಎಂಬ ಶ್ರುತಿಯಿಂದ ಹಾಡಲ್ಪಡುವ ಪ್ರಸಿದ್ಧವಾದ ವೈಕುಂಠದಲ್ಲಿ ಏಳಿಗೆಯನ್ನು ಸಂಪಾದಿಸುತ್ತಾರೊ, ಆ ಶಠಾರಿ ಮುನಿಯಲ್ಲಿ ನನ್ನ ಚಿತ್ತವು ಸ್ಥಿರವಾಗಿ ಇರಲೀ.

ಶ್ಲೋ || ಕೃತದುರಿತನಿರೋಧಾನಾಂಕಲಿತಶ್ರುತಿಮೌಳಿಭಾವಬೋಧಾನಾಂ | ವಶಿತರಮಾನಾಥಾನಾಂನಸುಧಾಪಿಸಮಾಶಠಾರಿಗಾಥಾನಾಂ || ೭೦೪ ||

ಟೀಕಾ ॥ ಕೃತೇತಿ ॥ ನಿರೋಧಃ ವಾರಣಂ ಶ್ರುತಿಮೌಳಿಭಾವಃ ಉಪನಿಷದಭಿಪ್ರಾಯಃ—ಪತಿತಃಪತತಾಂ ಸ್ವಾಧೀನೀಕೃತಃ— ಶಠಾರಿಗಾಥಾನಾಂ—ಸುಧಾಅಮೃತಮಪಿ—ನಸಮಾ ॥

ಅರ್ಥ ॥ ಪಾಪಗಳಿಗೆ ತಡೆಕಟ್ಟಿದಂಥಾವುಗಳಾದ ಉಪನಿಷತ್ತುಗಳ ತಾತ್ಪರ್ಯವನ್ನು ಹೇಳಿ ಕೊಡುವಂಥಾವುಗಳಾದ, ಪಠನ ಮಾಡುವವರಿಗೆ ವಿಷ್ಣು ಪ್ರಾಪ್ತಿ ಮಾಡಿಕೊಡುವಂಥಾವುಗಳಾದ ಶಠಾರಿ ಮುನಿಯ ಪ್ರಬಂಧಗಳಿಗೆ ಅಮೃತ ಕೂಡ ಸರಿಯಾಗುವದು.

ಮೂ। ಜನಾನುದ್ದಿಶ್ಯ ॥
ಶ್ಲೋ। ಕಠಿನಶಠನರೇಂದ್ರಸ್ತಾವಕಾನ್ ಶ್ಲೋಕಪಾಠಾನ್ಜಠರಪಿ
ಠರಪೂರ್ತ್ಯೈಗಿರಧ್ವಂಜಾತುಮಾಸಂ ॥ ಉಠತದೃಢತಮಸ್ಕೇಮಾ
ಚಸಂಸಾರಕೂಪೇಪಠತಶಠಜಿದುಕ್ತೀರಶ್ರಮಾನೀತಮುಕ್ತೀಃ
॥ ೨೦೫ ॥

ಟೀಕಾ ॥ ಕಠಿನೇತಿ ॥ ಹೇಜನಾಃ—ಯೂಯಂಜಠರಪಿಠರಸ್ಯ ಉದರಭಾಂಡಸ್ಯಪೂರ್ತ್ಯೈಪೂರಣಾರ್ಥಂ—ಕಠಿನಾನಾಂ ನಿರ್ದಯಾನಾಂ ಶಠಾನಾಂ ವಿಪ್ರಿಯಕಾರಿಣಾಂ ನರೇಂದ್ರಾಣಾಂ ರಾಜ್ಞಾಂ ಸ್ತಾವಕಾನ್ ಸ್ತುತಿಕಾರಿಣಃ—ಅತಏವ ಶ್ಲೋಕಪಾಠಾನ್ ಪದ್ಯಾಧಮಾನ್—ಜಾತುಕದಾಚಿದಪಿ—ಮಾಸಂಗಿರಧ್ವಂ ಮಾಪಠತ—ದೃಢತಮಸ್ಕೇ ಗಾಢಾಜ್ಞಾನೇ ದೃಢತಿಮಿರೇಚ—ಸಂಸಾರಕೂಪೇ—ಮಾಲುಠತ—ಅಶ್ರಮೇಣಾ ನಾಯಾಸೇನ ಆನೀತಮುಕ್ತೀಃ ಪ್ರಾಪಿತಮೋಕ್ಷಾಃ—ಶಠಜಿತಃ ಶಠಕೋಪಸ್ಯ ಉಕ್ತೀಃ ದಿವ್ಯಪ್ರಬಂಧರೂಪಾಃ—ಪಠತ—ರಾಜಸ್ತುತಿಃ ಸಂಸಾರ ಪತನ ಹೇತುಃ ಪ್ರಬಂಧೋ ಮುಕ್ತಿ ಹೇತುರಿತಿ ಹೇತುದ್ವಯೋಪಪಾದನಾತ್ಕಾವ್ಯ ಲಿಂಗದ್ವಯಂ ॥

ಅರ್ಥ ॥ ಜನರನ್ನು ಕರೆದು ( ವಿಶ್ವಾವಸು ಹೇಳುತ್ತಾನೆ )

ಎಲಾ ಜನರುಗಳಿರಾ! ಹೊಟ್ಟೆ ಎಂಬ ಗಡಿಗೆ ತುಂಬಲಿಕ್ಕೆ ಕಲ್ಲಿನ ಹೃದಯವುಳ್ಳಂಥ ಮತ್ತು ಕೇಡುಗಾರರಾದಂಥ ಅರಸುಗಳನ್ನು ಹೊಗಳುವವರ ಪದ್ಯಗಳನ್ನು ಎಂದೆಂದಿಗೂ ಪಾಠ ಮಾಡ ಬೇಡಿರಿ. ಬಲ್ಲ ಕತ್ತಲೆ ಕವಿದ ಸಂಸಾರವೆಂಬ ಭಾವಿಯಲ್ಲಿ ಹೊರಳ ಬ್ಯಾಡಿರಿ. ಸುಲಭವಾಗಿ ಮುಕ್ತಿಯನ್ನು ಕೊಡುವ ಶಠಗೋಪ ಮುನಿಯ ಪ್ರಬಂಧಗಳನ್ನು ಹಾಡಿರಿ.

ಮೂ। ಇತಿಕೃಶಾನುಮಾಮಂತ್ರ್ಯ ॥
ಶ್ಲೋ ॥ ನನುಶಠಕೋಪಾಯತ್ವಂಪ್ರಣತಿಂಪ್ರಾಪ್ತಾಯಭಾವು
ಕೋಪಾಯತ್ವಂ। ವಿಮಲಮತೇಕುರುಕಾಯಾನ್ನಿರಸಿತುಮಂಹೋ
ವಿರಾಜತೇಕುರುಕಾಯಾಂ॥ ೨೦೬ ॥

ಟೀಕಾ ॥ ನನ್ವಿತಿ ॥ ನನುವಿಮಲಮತೇತ್ವಂ—ಕಾಯಾದ್ದೇಹಾತ್—ಅಂಹಃ ನಿರಸಿತುಂ—ಭಾವುಕಃ ಕುಶಲಃ ಉಪಾಯಃ ಸಾಧನಂ ತಸ್ಯಭಾವಸ್ತತ್ವಂ ಪ್ರಾಪ್ತಾಯ—ಸುಲಭಕಾರಣಾಯೇತ್ಯರ್ಥಃ—ಕುರುಕಾನಗರಿ—ವಿರಾಜತೆ ಶಠಕೋಪಾಯ—ಪ್ರಣತಿಂಕುರು ॥

ಅರ್ಥ || ಇಂತೆಂದು ಕೃಶಾನುವನ್ನು ಕರೆದು ( ವಿಶ್ವಾವಸು ಹೇಳುತ್ತಾನೆ. )

ಎಲಾ ಶುದ್ಧ ಮನಸ್ಸುಳ್ಳ ಕೃಶಾನುವೇ ಈ ದೇಹದೊಳಗಿಂದ ಪಾಪವನ್ನು ದೂರಪಡಿಸಲಿಕ್ಕೆ ಸುಲಭ ಉಪಾಯರೂಪನಾದ, ಕುರುಕಾಪುರಿಯಲ್ಲಿ ಉತ್ಕರ್ಷ ಪಡುತ್ತಿರುವ ಶಠಕೋಪ ಮುನಿಯನ್ನು ನಮಸ್ಕಾರ ಮಾಡು.

ಶ್ಲೋ || ಬಕುಳಾಭರಣೀಯಾನಾಂಗಾಥಾನಾಂಸನ್ಮುಖಾಬ್ಜಭರಣೀಯಾನಾಂ। ಹರಿಗೃಹಮಧ್ಯೆತಾರಸ್ವರೇಣಪುನತೆಪ್ರಪಂಚಮಧ್ಯೇತಾರಃ || ೩೦೭ ||

ಟೀಕಾ || ಬಕುಳೇತಿ || ಹರಿಗೃಹಸ್ಯಮಧ್ಯೇ–ತಾರೇಣ ಉಚ್ಚೈಃಸ್ತರೇಣ ಸ್ವರೇಣ ನಾದೇನ–ಉಪಲಕ್ಷಿತಾಃ–ಸತಾಂ ಮುಖಾಬ್ಜೈಃ ಭರ್ತುಂ ಯೋಗ್ಯಾನಾಂ ಭರಣೀಯಾನಾಂ ಪಠನೀಯಾನಾಮಿತ್ಯರ್ಥಃ ಬಕುಳಾ ಭರಣೀಯಾನಾಂ ಶಠಕೋಪಸಂಬಂಧಿನೀನಾಂ ಗಾಥಾನಾಮಧ್ಯೇತಾರಃ ಪಠಿತಾರಃ ಪ್ರಪಂಚಂ ಪುನತೆ ಪವಿತ್ರೀಕುರ್ವಂತಿ ||

ಅರ್ಥ || ಹರಿಮಂದಿರದಲ್ಲಿ ಸಜ್ಜನರ ಮುಖ ಕಮಲಗಳು ತಾರವಾದ ಸ್ವರದಿಂದ ಹಾಡಲಿಕ್ಕೆ ಯೋಗ್ಯವಾದ ಶಠಗೋಪ ಮುನಿಯ ಪ್ರಬಂಧಗಳನ್ನು ಪಠಿಸುವವರು ಸಂಸಾರವನ್ನು ಪವಿತ್ರ ಮಾಡುತ್ತಾರೆ.

ಮೂ || ಸಶ್ಲಾಘಂ || ಶ್ಲೋ || ವಿರಕ್ತೇರಾಸ್ಥಾನೀಮಧುಮಥನಭಕ್ತೇರ್ನಟನಭೂರ್ವಿಮುಕ್ತೇರ್ನಿಶ್ರೇಣೀಸುಕೃತತರುಪಜ್ತೇಃಫಲಮಸೌ। ಪ್ರಪತ್ತೇರುದ್ಯಾನಕ್ಷಿತಿರಕೃತಕೋಕ್ತೇಃಪ್ರಿಯಸಖೀಚಿದಂಕೂರಕ್ಷೋಣೀಬಕುಳಧರವಾಣೀವಿಜಯತೇ || ೩೦೮ ||

ಟೀಕಾ || ವಿರಕ್ತೇರಿತಿ || ವಿರಕ್ತೈರ್ವೈರಾಗ್ಯಸ್ಯ ಆಸ್ಥಾನೀಸಭಾ–ಮಧುಮಥನೇಭಕ್ತೇರ್ನಟನಭೂಃ ನಾಟ್ಯಶಾಲಾ–ವಿಮುಕ್ತೇರ್ಮೋಕ್ಷಸ್ಯ ನಿಶ್ರೇಣೀಆರೋಹಣಪಾರುಯ.ಂತ್ರವಿಶೇಷಃ–ಸುಕೃತಾನಾಂಪುಣ್ಯಾನಾಮೇವ ತರೂಣಾಂ ಪಜ್ತೇಃಫಲಂ–ಪ್ರಪತ್ತೇಃ ಆತ್ಮಾರ್ಪಣಸ್ಯ ಉದ್ಯಾನಕ್ಷಿತಿರುದ್ಯಾನಭೂಮಿಃ–ಅಕೃತಕೋಕ್ತೇರ್ವೇದಸ್ಯ ಪ್ರಿಯಾಸಖೀ– ಚಿತಃಚಿನ್ಮಯಸ್ಯ ಬ್ರಹ್ಮಣಃ ಅಂಕುರಸ್ಯ ಆವಿರ್ಭಾವಸ್ಯ ಕ್ಷೋಣೀಪ್ರದೇಶಃ –ಅಸೌಬಕುಳಧರಸ್ಯ ವಾಣೀಪ್ರಬಂಧಃವಿಜಯತೇ ||

ಅರ್ಥ || ಸ್ತುತಿಪೂರ್ವಕವಾಗಿ, ವೈರಾಗ್ಯ ನೆರದ ಓಲಗವಾಗಿಯೂ ವಿಷ್ಣು ಭಕ್ತಿಯ ನಾಟ್ಯ ಶಾಲೆಯಾಗಿಯೂ ಮುಕ್ತಿಸ್ಥಾನಕ್ಕೇರುವ ನಿಚ್ಚಣಿಕೆಯಾಗಿಯೂ ಪುಣ್ಯವೆಂಬ ಮರಗಳಲ್ಲಿ ಹಣ್ಣಾದ ಫಲವಾಗಿಯೂ ಪ್ರಪತ್ತಿಯೆಂದರೆ ಕಾಯಾವಾಚಾಮನವೊಡನೆ ತನ್ನನ್ನು ತಾನು ದೇವರಿಗೆ ಅರ್ಪಣೆಯಾಗೋಣದರ ಕ್ರೀಡಾವನವಾಗಿಯೂ ವೇದಗಳಿಗೆ ಪ್ರಿಯವಾದ ಗೆಳತಿಯಾಗಿಯೂ ಪ್ರಕಾಶರೂಪವಾದ ಬ್ರಹ್ಮನು ಚಿಗುರಿದ ನೆಲವಾಗಿಯೂ ಇರುವ ಶಠಗೋಪ ಮುನಿಯ ನುಡಿಯು ಲೋಕದಲ್ಲಿ ಉತ್ಕರ್ಷ ಬಡುತ್ತೆ.

